# ಕರ್ನಾಟಕ ವಿಧಾನಮಂಡಲ


**ಕರ್ನಾಟಕ ಶಾಸಕಾಂಗ ಪತ್ರಿಕೆ**

**(ತ್ರೈಮಾಸಿಕ ಪತ್ರಿಕೆ)**

**ಜುಲೈ– ಆಗಸ್ಟ್ – ಸೆಪ್ಟೆಂಬರ್ –2021**

**ಸಂಪುಟ–III ಸಂಖ್ಯೆ –3**



**ಪ್ರಕಟಣೆ:**

**ಸಂಶೋಧನಾ ಮತ್ತು ಉಲ್ಲೇಖನಾ ಶಾಖೆ,**

**ಕರ್ನಾಟಕ ವಿಧಾನ ಸಭೆ ಸಚಿವಾಲಯ, ವಿಧಾನಸೌಧ,**

**ಬೆಂಗಳೂರು – 560 233.**

## ವಿಶೇಷ ಸೂಚನೆ

ಕರ್ನಾಟಕ ಶಾಸಕಾಂಗ ಪತ್ರಿಕೆಯು ಕರ್ನಾಟಕ ವಿಧಾನ ಸಭೆ/ವಿಧಾನ ಪರಿಷತ್ತಿನ ಸದಸ್ಯರುಗಳ ಪರಾಮರ್ಶೆಗಾಗಿ ಪ್ರಕಟಿಸಲಾಗುತ್ತಿದ್ದು, ಇದು ಆಂತರಿಕ ಪ್ರಕಟಣೆಗೆ ಮಾತ್ರ ಸೀಮಿತವಾಗಿರುತ್ತದೆ.

ಈ ಪತ್ರಿಕೆಯಲ್ಲಿ ಅಳವಡಿಸಲಾಗಿರುವ ಮಾಹಿತಿಗಳು ವಿವಿಧ ದಿನ ಪತ್ರಿಕೆಗಳಲ್ಲಿ ಪ್ರಕಟವಾಗಿರುವ ಸುದ್ದಿಗಳ ಆಧಾರಿತವಾಗಿದ್ದು, ಇದರಲ್ಲಿ ನ್ಯೂನತೆ, ವ್ಯತ್ಯಾಸಗಳಿಂದ ಅಥವಾ ನಿಖರತೆಯ ಕೊರತೆಯಿಂದ ಯಾವುದೇ ವ್ಯಕ್ತಿಗೆ ಉಂಟಾಗಬಹುದಾದ ನಷ್ಟ/ಹಾನಿಗೆ ವಿಧಾನ ಸಭಾ ಸಚಿವಾಲಯವು ಯಾವುದೇ ರೀತಿ ಜವಾಬ್ದಾರವಾಗುವುದಿಲ್ಲ.

**ಸೂಚನೆ:–** ಪತ್ರಿಕೆಯು ವಿಧಾನ ಮಂಡಲದ ಅಂತರ್ಜಾಲ **http://kla.kar.nic.in** ನಲ್ಲೂ ಲಭ್ಯವಿದೆ

# ಮುನ್ನುಡಿ

ಕರ್ನಾಟಕ ವಿಧಾನಮಂಡಲದ ಸಂಶೋಧನಾ ಮತ್ತು ಉಲ್ಲೇಖನಾ ಶಾಖೆಯು ಉಭಯ ಸದನಗಳ ಮಾನ್ಯ ಸದಸ್ಯರುಗಳ ಉಪಯೋಗಕ್ಕಾಗಿ ಕರ್ನಾಟಕ ಶಾಸಕಾಂಗ ತ್ರೈಮಾಸಿಕ ಪತ್ರಿಕೆಯ ಸಂಪುಟ – IIIರ ಮೂರನೇ ಸಂಚಿಕೆಯನ್ನು ಪ್ರಕಟಪಡಿಸುತ್ತಿದೆ.

ತ್ರೈಮಾಸಿಕ ಶಾಸಕಾಂಗ ಪತ್ರಿಕೆಯು ಮುಖ್ಯವಾಗಿ ಕರ್ನಾಟಕ ವಿಧಾನಮಂಡಲದ ಎರಡೂ ಸದನಗಳ ಶಾಸಕಾಂಗದ ಸುದ್ದಿಗಳು, ಲೋಕಸಭೆ, ರಾಜ್ಯಸಭೆಗಳ, ಸಂಸದೀಯ ವ್ಯವಹಾರಗಳಿಗೆ ಸಂಬಂಧಿಸಿದ ಪ್ರಮುಖ ಸುದ್ದಿಗಳು, ರಾಜ್ಯಗಳ, ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಹಾಗೂ ಇತರೆ ವಿಷಯಗಳನ್ನೊಳಗೊಂಡಿರುತ್ತದೆ.

ಈ ಸಂಚಿಕೆಯಲ್ಲಿ 2021ನೇ ಸಾಲಿನ ಜುಲೈ, ಆಗಸ್ಟ್ ಮತ್ತು ಸೆಪ್ಟೆಂಬರ್ ತಿಂಗಳ ಅವಧಿಯಲ್ಲಿನ ಪ್ರಮುಖ ಸುದ್ದಿ, ಮಾಧ್ಯಮಗಳಲ್ಲಿ ಪ್ರಕಟವಾದ ದೈನಂದಿನ ಸುದ್ದಿಗಳನ್ನು ಸಂಗ್ರಹಿಸಿ ಪ್ರಕಟಿಸಲಾಗಿದೆ.

ಸಂಶೋಧನಾ ಮತ್ತು ಉಲ್ಲೇಖನಾ ವಿಭಾಗವು ಸಿದ್ಧಪಡಿಸಿ ಹೊರತರುತ್ತಿರುವ ಈ ಪತ್ರಿಕೆಯ ಗುಣಮಟ್ಟವನ್ನು ಉನ್ನತೀಕರಿಸಲು ಹಾಗೂ ಹೆಚ್ಚು ವಿಷಯಾಸಕ್ತವಾಗಿಸಲು ಇದರ ಬೆಳವಣಿಗೆಯ ಸುಧಾರಣೆಗೆ ಮಾನ್ಯ ಸದಸ್ಯರುಗಳಿಂದ ಅಮೂಲ್ಯ ಸಲಹೆ ಮತ್ತು ಸೂಚನೆಗಳನ್ನು ಬರಹ ರೂಪದಲ್ಲಿ ಸ್ವೀಕರಿಸಲು ಸದಾ ಸ್ವಾಗತವಿರುತ್ತದೆ.

**ಎಂ.ಕೆ.ವಿಶಾಲಾಕ್ಷಿ**
ಕಾರ್ಯದರ್ಶಿ(ಪ್ರ),
ಕರ್ನಾಟಕ ವಿಧಾನ ಸಭೆ.

ಬೆಂಗಳೂರು
ದಿನಾಂಕ: 03.12.2021

## ಕರ್ನಾಟಕ ಶಾಸಕಾಂಗ ತ್ರೈಮಾಸಿಕ ಪತ್ರಿಕೆಯ ಸಂಪಾದಕ ವರ್ಗ

### ಕರ್ನಾಟಕ ವಿಧಾನ ಸಭೆ ಸಚಿವಾಲಯ

| | |
|---|---|
| 1. ಶ್ರೀಮತಿ ಎಂ.ಕೆ. ವಿಶಾಲಾಕ್ಷಿ | : ಕಾರ್ಯದರ್ಶಿ (ಪ್ರ) |
| 2. ಶ್ರೀಮತಿ ಎಂ. ಮಂಜುಳ | : ಜಂಟಿ ನಿರ್ದೇಶಕರು |
| 3. ಶ್ರೀಮತಿ ಜಿ. ಮಮತ | : ಸಹಾಯಕ ನಿರ್ದೇಶಕರು |

### ಕರ್ನಾಟಕ ವಿಧಾನ ಪರಿಷತ್ತಿನ ಸಚಿವಾಲಯ

| | |
|---|---|
| 1. ಶ್ರೀಮತಿ ಕೆ. ಆರ್. ಮಹಾಲಕ್ಷ್ಮಿ | : ಕಾರ್ಯದರ್ಶಿ |
| 2. ಶ್ರೀಮತಿ ಎಸ್. ನಿರ್ಮಲ | : ಅಪರ ಕಾರ್ಯದರ್ಶಿ |

# ಕರ್ನಾಟಕ ಶಾಸಕಾಂಗ ಪತ್ರಿಕೆ

## (ತ್ರೈಮಾಸಿಕ ಪತ್ರಿಕೆ)

## ಜುಲೈ– ಆಗಸ್ಟ್ – ಸೆಪ್ಟೆಂಬರ್ – 2021

**ಸಂಪುಟ–II ಸಂಚಿಕೆ – 3**

## ಪರಿವಿಡಿ

## ಭಾಗ–1

## ವಿಧಾನ ಮಂಡಲದ ಸುದ್ದಿಗಳು

ಸೂಚನೆ: – ಇಲ್ಲಿ ಆಯ್ಕೆ ಮಾಡಿರುವ ಲೇಖನಗಳು ಪ್ರಮುಖ ದಿನಪ್ರತಿಕೆಗಳಿಂದ ಆಯ್ದು ಪ್ರಕಟಿಸಲಾಗಿದೆ. ಇಲ್ಲಿನ ಅಭಿಪ್ರಾಯಗಳು ಸಂಪೂರ್ಣ ಲೇಖಕರದ್ದಾಗಿರುತ್ತದೆ.

# ಭಾಗ–1

# ವಿಧಾನಮಂಡಲದ ಸುದ್ದಿಗಳು

## 1. ಬೆಳಗಾವಿಯಲ್ಲಿ ಅಧಿವೇಶನಕ್ಕೆ ಸಭಾಪತಿ ತಾಕೀತು

ಪ್ರಾದೇಶಿಕ ಅಸಮತೋಲನವನ್ನು ಹೋಗಲಾಡಿಸುವ ಉದ್ದೇಶದಿಂದ ಪ್ರತಿ ವರ್ಷವು ಒಂದು ಬಾರಿಯಾದರೂ ವಿಧಾನಮಂಡಲ ಅಧಿವೇಶನವನ್ನು ಬೆಳಗಾವಿಯ ಸುವರ್ಣ ಸೌಧದಲ್ಲಿ ನಡೆಸುವಂತಾಗಬೇಕು ಎಂದು ವಿಧಾನ ಪರಿಷತ್ ಸಭಾಪತಿ ಬಸವರಾಜ ಹೊರಟ್ಟಿಯವರು ಮುಖ್ಯಮಂತ್ರಿಯವರಿಗೆ ಪತ್ರ ಬರೆಯುವ ಮೂಲಕ ತಮ್ಮ ಇಚ್ಛೆ ವ್ಯಕ್ತಪಡಿಸಿದ್ದಾರೆ.

ಕೊರೋನಾ ಸಂಕಷ್ಟದಿಂದಾಗಿ ಇಲ್ಲಿಯವರೆಗೆ ಅಧಿವೇಶನ ಪ್ರಕ್ರಿಯೆ ಆರಂಭಿಸಲಾಗಿಲ್ಲ. ಇದೀಗ ಸೋಂಕು ಇಳಿಮುಖವಾಗಿದ್ದು ಸಂಪೂರ್ಣ ನಿಯಂತ್ರಣಕ್ಕೆ ಬಂದ ಬಳಿಕ ಜುಲೈನಲ್ಲಿ ನಡೆಸುವುದಾದರೆ ವಿಧಾನಮಂಡಲ ಅಧಿವೇಶನವನ್ನು ಬೆಳಗಾವಿಯ ಸುವರ್ಣ ಸೌಧದಲ್ಲಿ ನಡೆಸುವುದು ಸೂಕ್ತ. ಇದು ಬಹುತೇಕ ಜನಪ್ರತಿನಿಧಿಗಳ ಒತ್ತಾಸೆಯೂ ಆಗಿದೆ ಎಂದು ಮೇಲ್ಮನೆ ಸಭಾಪತಿಯವರು ಮುಖ್ಯಮಂತ್ರಿಯವರಿಗೆ ಬರೆದ ಪತ್ರದಲ್ಲಿ ವಿವರಿಸಿದ್ದಾರೆ.

**ಖಾಯಂಗೆ ಆಗ್ರಹ:** ಕಳೆದ 15–20 ವರ್ಷಗಳಿಂದಲೂ ಸೇವೆ ಸಲ್ಲಿಸುತ್ತಿರುವ ರಾಜ್ಯದ ಅತಿಥಿ ಉಪನ್ಯಾಸಕರುಗಳನ್ನು ಸರ್ಕಾರ ಕೂಡಲೇ ಖಾಯಂಗೊಳಿಸಬೇಕು ಎಂದು ಮತ್ತೊಂದೆಡೆ ಉಪ ಮುಖ್ಯಮಂತ್ರಿ ಡಾ.ಅಶ್ವತ್ಥನಾರಾಯಣ ಅವರಿಗೆ ಪತ್ರ ಬರೆಯುವ ಮೂಲಕ ಮೇಲ್ಮನೆ ಸಭಾಪತಿ ಅವರು ಆಗ್ರಹಿಸಿದ್ದಾರೆ.

ಅತಿಥಿ ಉಪನ್ಯಾಸಕರ ಮಧ್ಯಂತರ ಸೇವೆಯನ್ನು ಪರಿಗಣಿಸದೇ ಸರ್ಕಾರದ ಮಾನದಂಡಗಳು ಮತ್ತು ಯುಜಿಸಿ ನಿಯಮಾವಳಿಗಳ ಪ್ರಕಾರ ಇವರ ಸೇವೆಯನ್ನು ಖಾಯಂಗೊಳಿಸಬೇಕು. ಇಲ್ಲದಿದ್ದರೆ, ವಯೋಮಿತಿ ಮೀರುತ್ತಿರುವ ಮತ್ತು ಅಪಾರ ಅನುಭವ ಹೊಂದಿದ ಅತಿಥಿ ಉಪನ್ಯಾಸಕರುಗಳಿಗೆ ಅನ್ಯಾಯ ಎಸಗಿದಂತಾಗುತ್ತದೆ ಎಂದು ಅವರು ಎಚ್ಚರಿಸಿದ್ದಾರೆ.

ಆಧಾರ: ಸಂಯುಕ್ತ ಕರ್ನಾಟಕ, ದಿನಾಂಕ:02.07.2021.

## 2. ಡಾ: ವಿ.ಎಸ್. ಆಚಾರ್ಯ : ಸಭ್ಯತೆಯ ಸಾಕಾರಮೂರ್ತಿ

ಪ್ರಸಕ್ತ ರಾಜಕೀಯ ಸನ್ನಿವೇಶದಲ್ಲಿ ಮುಗ್ಧ ರಾಜಕಾರಣಿ ಎಂಬ ಪದ ಬಳಕೆ ವಿರೋಧಾಭಾಸ ಎನಿಸಬಹುದು. ಒಬ್ಬ ರಾಜಕಾರಣಿ ಮುಗ್ಧರಾಗಿರಲು ಸಾಧ್ಯವೇ ಇಲ್ಲ ಮುಗ್ಧರು ರಾಜಕಾರಣಿ ಆಗಲು ಸಾಧ್ಯವಿಲ್ಲ ಎಂಬ ಭಾವನೆ ಜನರಲ್ಲಿ ಬೇರೂರಿದೆ. ಆದರೆ, ಅಂತಹ ಮುಗ್ಧ ರಾಜಕಾರಣಿಗಳೇ ಇಲ್ಲವೇ, ಇರಲಿಲ್ಲವೆ ಎಂಬ ಪ್ರಶ್ನೆಯೂ ಅಷ್ಟೇ ಸಹಜ. ಅಂತಹ ಮೇರು ವ್ಯಕ್ತಿತ್ವದ ಮುಗ್ಧ ರಾಜಕಾರಣಿಗಳು ಕೆಲವೇ ವರ್ಷಗಳ ಹಿಂದೆ ನಮ್ಮೊಟ್ಟಿಗೆ ಇದ್ದರು. ಅವರು ಬೇರೆ ಯಾರೂ ಅಲ್ಲ ಡಾ:ವೇದವ್ಯಾಸ ಶ್ರೀನಿವಾಸ ಆಚಾರ್ಯ ಅರ್ಥಾತ್ ರಾಷ್ಟ್ರೀಯ ಸ್ವಯಂ ಸೇವಕ ಸಂಘ (ಆರ್‌ಎಸ್‌ಎಸ್) ಮತ್ತು ಭಾರತೀಯ ಜನ ಸಂಘ ಹಾಗೂ ಭಾರತೀಯ ಜನತಾ ಪಾರ್ಟಿಯ ಮೇರು ವ್ಯಕ್ತಿಗಳಲ್ಲಿ ಒಬ್ಬರಾಗಿದ್ದ ಡಾ.ವಿ.ಎಸ್.ಆಚಾರ್ಯ.

ಆಚಾರ್ಯರು ಪವಿತ್ರ ಪುಣ್ಯಭೂಮಿ ಶ್ರೀಕೃಷ್ಣನ ಆಡುಂಬೋಲ ಉಡುಪಿಯಲ್ಲಿ ಹುಟ್ಟಿದ್ದು 1940ರ ಜುಲೈ 6 ರಂದು. ಜೀವನದುದ್ದಕ್ಕೂ ಸತ್ಯ, ನಿಷ್ಠೆ ಧರ್ಮಕ್ಕಾಗಿ ದುಡಿದ ಅವರು ಮಡಿಯುವ ತನಕ ನಿಷ್ಠೆ, ಧ್ಯೇಯ, ಮುಗ್ಧತೆ, ಪಾರದರ್ಶಕತೆ ಮತ್ತು ಕರ್ತವ್ಯ ಪರತೆ ಹಾಗೂ ಪಾವಿತ್ರ್ಯತೆಯನ್ನು ಉಳಿಸಿಕೊಂಡವರು. ಉಡುಪಿಯ ಅಷ್ಟಮಠಗಳ ಯಾವುದಾದರೂ ಒಂದು ಮಠಕ್ಕೆ ಶ್ರೀಗಳಾಗಲು ಸೂಕ್ತ

ವ್ಯಕ್ತಿಯೆಂದರೆ ಡಾ.ವಿ.ಎಸ್.ಆಚಾರ್ಯ ಅವರು ಎಂದು ಅವರ ಒಡನಾಡಿಗಳು ಹೇಳುತ್ತಿದ್ದುದುಂಟು. ಅಂತಹ ಅಪೂರ್ವ ವಿದ್ವತ್ತು, ಆಚಾರ, ವಿಚಾರ ಆಚಾರ್ಯರದ್ದಾಗಿತ್ತು.

ನನ್ನ ಮತ್ತು ಡಾ:ಆಚಾರ್ಯ ಅವರ ಪರಿಚಯ ಸುದೀರ್ಘವಾಗಿತ್ತು. 1985 ರಿಂದಲೂ ನಾನವರನ್ನು ಬಲ್ಲೆ ಅವರ ಆದರ್ಶಗಳಿಗೆ ಮಾರು ಹೋದವರಲ್ಲಿ ನಾನು ಒಬ್ಬ. ನಾನು ಅಖಿಲ ಭಾರತೀಯ ವಿದ್ಯಾರ್ಥಿ ಪರಿಷತ್ತಿನಲ್ಲಿ 1985ರಲ್ಲಿ ಪೂರ್ಣಕಾಲಿಕ ಕಾರ್ಯಕರ್ತನಾಗಿದ್ದಾಗ ಮೊದಲಿಗೆ ಈ ಮೇರು ವ್ಯಕ್ತಿತ್ವದ ಡಾ. ವಿ.ಎಸ್. ಆಚಾರ್ಯರನ್ನು ಖುದ್ದು ಭೇಟಿ ಮಾಡುವ ಅವಕಾಶ ಲಭಿಸಿತ್ತು. ಸದಾ ಹಸನ್ಮುಖಿ, ಸದಾ ಕ್ರಿಯಾಶೀಲರು ಮತ್ತು ಚೈತನ್ಯಶೀಲ ಬುದ್ದಿಜೀವಿ. ಮಿಗಿಲಾಗಿ ಉತ್ಸಾಹದ ಚಿಲುಮೆಯಂತಿದ್ದರು. ನಮ್ಮ ಆಚಾರ್ಯ ಮೃದುಭಾಷಿ, ಸರಳ ಜೀವಿ. ಊಹಾತೀತರಾಗಿದ್ದ ಅವರು ವಿನಯಶೀಲತೆಗೆ ಮತ್ತೊಂದು ಹೆಸರಾಗಿದ್ದರು ಅವರು ಎಂದು ಅಬ್ಬರ ಮಾಡಿದವರಲ್ಲ. ಎಲೆ ಮರೆಕಾಯಿಯಂತೆ ಜನ ಸೇವೆ ಮಾಡುತ್ತಿದ್ದವರು.

ಜನ ನಾಯಕರಾಗಿ ಅವರು ಕಳಂಕವೀರರಾಗಿದ್ದರು. ಯಾರೂ ಅವರ ಕಾರ್ಯವಿಧಾನದ ಬಗ್ಗೆ ಬೊಟ್ಟು ಮಾಡಿತೋರಿಸಿದ್ದಿಲ್ಲ. ಅಷ್ಟು ಅಚ್ಚುಕಟ್ಟಾದ ಪಾರದರ್ಶಕ ಕಾರ್ಯವೈಖರಿ ಅವರದು. ಡಾ.ವಿ.ಎಸ್. ಆಚಾರ್ಯರು ಮೊದಲಿಗೆ ಭಾರತೀಯ ಜನ ಸಂಘವನ್ನು ನಂತರ ಬಿಜೆಪಿಯನ್ನು ರಾಜ್ಯದಲ್ಲಿ ಬಲಿಷ್ಠವಾಗಿ ಕಟ್ಟುವಲ್ಲಿ ಬಹುವಾಗಿ ಶ್ರಮಿಸಿದರು. ತಾಯಿ ಹೃದಯದ ಆಚಾರ್ಯರು ತಮ್ಮ ವೃತ್ತಿ ಬದುಕಿನಲ್ಲೂ ವೈದ್ಯರಾಗಿ ಬಡಜನರ ಕಷ್ಟಕ್ಕೆ ಮಿಡಿಯುತ್ತಿದ್ದರು. ಸಮಾಜದ ಕೆಳ ಹಂತದ ಮತ್ತು ದುರ್ಬಲ ವರ್ಗದ ರೋಗಿಗಳ ಕಣ್ಮಣಿಯಾಗಿದ್ದರು. ಅವರೆಲ್ಲರೂ ಆಚಾರ್ಯರನ್ನು ತಮ್ಮ ಭಾಗದ ದೇವರೆಂದೇ ಕಾಣುತ್ತಿದ್ದರು.

ಆಚಾರ್ಯರು ಹಲವು ಪ್ರಥಮಗಳ ಗರಿಯನ್ನು ತಮ್ಮ ಮಕುಟಕ್ಕೆ ಧರಿಸಿದವರು. ಅವರು ಉಡುಪಿ ಪುರ ಸಭೆ ಅತ್ಯುತ್ತಮ ಆಡಳಿತಕ್ಕಾಗಿ ರಾಷ್ಟ್ರಪತಿಯವರ ಪ್ರಶಸ್ತಿಗೂ ಭಾಜನವಾಗಿತ್ತು. ಮನೆಗಳಿಗೆ ಕೊಳವೆಯ ಮೂಲಕ ನೀರು ಪೂರೈಸಿದ ಪ್ರಥಮ ಪುರಸಭೆ ಉಡುಪಿ ಎಂಬ ಹೆಗ್ಗಳಿಕೆಗೆ ಪಾತ್ರವಾಗಲು ಡಾ:ಆಚಾರ್ಯ ದೂರದರ್ಶಿತ್ವವೇ ಕಾರಣ. ತಲೆಯ ಮೇಲೆ ಮಲ ಹೊರುವ ಅನಿಷ್ಠ ಪದ್ಧತಿಯ ರದ್ಧತಿಗೆ ಹೋರಾಡಿದ ಆಚಾರ್ಯರ ಮಾನವೀಯತೆ ಆದರ್ಶಪ್ರಾಯ.

ಡಂಕೆಲ್ ಕರಡು ಎಂದೇ ಜನಪ್ರಿಯವಾಗಿರುವ ಗ್ಯಾಟ್ (ವ್ಯಾಪಾರ ಮತ್ತು ಸುಂಕಗಳ ಮೇಲಿನ ಸಾಮಾನ್ಯ ಒಪ್ಪಂದ)ಗೆ ಸಂಬಂಧಿಸಿದ ವಿಷಯಗಳಲ್ಲಿ ಕಾರ್ಮಿಕರಿಗೆ ತರಬೇತಿ ನೀಡಲು ನಗರಾಭಿವೃದ್ಧಿ ವ್ಯವಹಾರಗಳು ಮತ್ತು ಆರ್ಥಿಕ ವಿಷಯಗಳಲ್ಲಿ ತಜ್ಞರಾಗಿದ್ದ ಡಾ: ಆಚಾರ್ಯರನ್ನು ಬಿಜೆಪಿಯಿಂದ ಆಯ್ಕೆ ಮಾಡಲಾಗಿತ್ತು. ಜನಸೇವೆಯಿಂದಲೇ ಜನರಿಗೆ ಹತ್ತಿರವಾಗಿದ್ದ ಡಾ: ಆಚಾರ್ಯರು 1983ರಲ್ಲಿ ತಮ್ಮ ತವರೂರಾದ ಉಡುಪಿಯಿಂದಲೇ ಮೊದಲ ಬಾರಿಗೆ ವಿಧಾನಸಭಾ ಚುನಾವಣೆಯಲ್ಲಿ ಜಯ ಸಾಧಿಸಿ, ವಿಧಾನ ಸಭೆ ಪ್ರವೇಶಿಸಿದರು. ಸಾರ್ವಜನಿಕ ಪ್ರಾಮುಖ್ಯತೆಯ ವಿಷಯಗಳ ಕುರಿತು ವಿಧಾನಸಭೆಯಲ್ಲಿ ಅವರು ಮಾಡುತ್ತಿದ್ದ ಭಾಷಣಗಳು ಅವರ ಅಪಾರ ಅನುಭವ ಮತ್ತು ಸಾರ್ವಜನಿಕ ಜೀವನದಲ್ಲಿ ಅವರಿಗಿದ್ದ ಆಳವಾದ ಜ್ಞಾನವನ್ನು ಪ್ರತಿಬಿಂಬಿಸುತ್ತವೆ.

ಡಾ:ಆಚಾರ್ಯ ಅವರು ಕರ್ನಾಟಕ ವಿಧಾನ ಪರಿಷತ್ತಿನ ಸದಸ್ಯರಾಗಿಯೂ ಕಾರ್ಯ ನಿರ್ವಹಿಸಿದ್ದರು. ಸಮಸ್ಯೆಗಳ ಆಳವಾದ ಅಧ್ಯಯನದಿಂದ ಅವರು ಪ್ರತಿಪಾದಿಸುತ್ತಿದ್ದ ಬೌದ್ಧಿಕವಾಗಿ ಉತ್ತೇಜಿಸುವ ಭಾಷಣಗಳ ಮೂಲಕ ಅವರು ಚಿಂತಕರ ಚಾವಡಿಯ ಚರ್ಚೆಯನ್ನು ಶ್ರೀಮಂತಗೊಳಿಸುತ್ತಿದ್ದರು.

2008ರಲ್ಲಿ ಬಿ.ಎಸ್. ಯಡಿಯೂರಪ್ಪ ಅವರ ನೇತೃತ್ವದಲ್ಲಿ ಬಿಜೆಪಿ ಮೊದಲ ಬಾರಿಗೆ ಸ್ವತಂತ್ರವಾಗಿ ಕರ್ನಾಟಕದಲ್ಲಿ ಅಧಿಕಾರಕ್ಕೆ ಬಂದಾಗ ಡಾ: ವಿ.ಎಸ್. ಆಚಾರ್ಯ ಮಹತ್ತರವಾದ ಗೃಹ

ಖಾತೆಯ ಜವಾಬ್ದಾರಿ ಪಡೆದರು. ಸಂಪೂರ್ಣ ವೃತ್ತಿಪರತೆಯಲ್ಲಿ ನಂಬಿಕೆಯಿಟ್ಟಿದ್ದ ಡಾ: ಆಚಾರ್ಯ ಗೃಹ ಇಲಾಖೆಯ ದೈನಂದಿನ ಕಾರ್ಯ ಚಟುವಟಿಕೆಯಲ್ಲಿ ಎಂದಿಗೂ ಹಸ್ತಕ್ಷೇಪ ಮಾಡುತ್ತಿರಲಿಲ್ಲ ಅವರು ಸ್ವಯಂ ಅಧ್ಯಯನಿಗಳಾಗಿದ್ದ ಕಾರಣ ಯಾವುದೇ ಅಧಿಕಾರಿಯ ಮೇಲೆ ಅವಲಂಬಿತರೂ ಆಗಿರಲಿಲ್ಲ.

ಡಾ:ವಿ.ಎಸ್. ಆಚಾರ್ಯ ಅವರಿಗೆ ಸದಾ ಬೆಂಬಲವಾಗಿ ನಿಂತಿದ್ದ ಅವರ ಪತ್ನಿ ಶಾಂತಾ ಆಚಾರ್ಯ ಅವರು ಸಹ ಹಲವು ಸಾಮಾಜಿಕ–ಸಾಂಸ್ಕೃತಿಕ ಆಧ್ಯಾತ್ಮಿಕ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಅವರು ಹಲವು ಶಿಕ್ಷಣ ಸಂಸ್ಥೆಗಳಿಗೆ ಗೌರವ ಮಾರ್ಗದರ್ಶಿಯಾಗಿದ್ದಾರೆ. ಅವರು ಉಚಿತ ಸಾಂಸ್ಕೃತಿಕ ಆಧ್ಯಾತ್ಮಿಕ ಚಿಂತನಾ ತರಗತಿಗಳನ್ನು ನಡೆಸುತ್ತಾರೆ. ಅಲ್ಲಿ ನೈತಿಕ ಮತ್ತು ನೈತಿಕ ಮೌಲ್ಯಗಳನ್ನು ಚಿಕ್ಕ ಮಕ್ಕಳಿಗೆ ಕಲಿಸಲಾಗುತ್ತಿದೆ. ಆ ಮೂಲಕ ಭಾರತೀಯ ಸಂಸ್ಕೃತಿ ಪರಂಪರೆಯನ್ನು ಮುಂದಿನ ಪೀಳಿಗೆಗೂ ತಿಳಿಯಪಡಿಸಲಾಗುತ್ತಿದೆ. ಆಚಾರ್ಯ ಅವರ ಮಕ್ಕಳು ರಾಜಕೀಯದಿಂದ ದೂರವೇ ಉಳಿದು, ತಮ್ಮ ವೃತ್ತಿಯಲ್ಲಿ ನಿರತರಾಗಿದ್ದಾರೆ ಇದು ಆಚಾರ್ಯರ ಸ್ವಾರ್ಥ ರಹಿತ ಬದುಕಿಗೆ ಹಿಡಿದ ಕನ್ನಡಿಯಾಗಿದೆ.

ನಾನು ಕೂಡ ಅವರು ಸಚಿವರಾಗಿದ್ದ ಸಂದರ್ಭದಲ್ಲಿ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವನಾಗಿ ಸಂಪುಟದಲ್ಲಿ ಅವರೊಟ್ಟಿಗೆ ಕಾರ್ಯ ನಿರ್ವಹಿಸಿದ್ದು ನನ್ನ ಸೌಭಾಗ್ಯವೆಂದೇ ಪರಿಭಾವಿಸುತ್ತೇನೆ. ನನಗೆ ಅವರು ಹಲವು ಸಂದರ್ಭಗಳಲ್ಲಿ ಮಾಗದರ್ಶನ ಮಾಡಿದ್ದಾರೆ. ತಮ್ಮ ವಿವೇಚನಾಯುಕ್ತ ನೇರ, ನಿಷ್ಠೂರ ಸಲಹೆ ನೀಡಲು ಎಂದು ಹಿಂಜರಿಯುತ್ತಿರಲಿಲ್ಲ. ಸಂಪುಟದಲ್ಲಿ ಅವರು ಹಿರಿಯ ಸಹೋದರ ಅಥವಾ ಕುಟುಂಬದ ಹಿರಿಯ ಸದಸ್ಯರಂತೆ ಇದ್ದರು. ಅವರ ಸೌಹಾರ್ದಯುತ ಸ್ವಭಾವದಿಂದ ಅವರು ಸಂಪುಟದ ಪ್ರತಿಯೊಬ್ಬ ಸದಸ್ಯರ ಪ್ರೀತಿ ವಾತ್ಸಲ್ಯ ಮತ್ತು ಮೆಚ್ಚುಗೆಗೆ ಪಾತ್ರರಾಗಿದ್ದರು.

ಇಂದು ಡಾ:ವೇದವ್ಯಾಸ ಶ್ರೀನಿವಾಸ ಆಚಾರ್ಯರು ನಮ್ಮೊಂದಿಗಿಲ್ಲ ಆದರೆ ಅವರ ಕಾರ್ಯ ಕೊಡುಗೆ ಸದಾ ಸ್ಮರಣೆಯಲ್ಲಿರುತ್ತದೆ. ಅವರ ಬದುಕೇ ಒಂದು ಆದರ್ಶ. ಅನುಕರಣೀಯ. ಅವರ 81ನೇ ಜನ್ಮ ದಿನದ ಸಂದರ್ಭದಲ್ಲಿ ನಾನು ಆ ಮೇರು ನಾಯಕನಿಗೆ ಈ ಅಕ್ಷರ ಶ್ರದ್ಧಾಂಜಲಿ ಸಲ್ಲಿಸುತ್ತೇನೆ.

**ಲೇಖಕರು: ವಿಶ್ವೇಶ್ವರ ಹೆಗಡೆ, ಕಾಗೇರಿ,**
**ವಿಧಾನಸಭಾ ಸಭಾಧ್ಯಕ್ಷರು**

ಆಧಾರ:ಉದಯವಾಣಿ, ದಿನಾಂಕ:06.07.2021.

## 3. ಕ್ಲಬ್‌ಗಳ ಕುರಿತು ಸಿಎಂಗೆ ಸದನ ಸಮಿತಿ ಮಾಹಿತಿ

ರಾಜ್ಯದಲ್ಲಿರುವ ಕ್ಲಬ್‌ಗಳ ಚಟುವಟಿಕೆ ಕುರಿತು ಪರಿಶೀಲನೆ ನಡೆಸುವ ಸಂಬಂಧ ವಿಧಾನ ಪರಿಷತ್ ಸದಸ್ಯ ಎನ್.ರವಿಕುಮಾರ್ ನೇತೃತ್ವದಲ್ಲಿ ರಚನೆಯಾಗಿರುವ ವಿಶೇಷ ಸದನ ಸಮಿತಿಯ ಸದಸ್ಯರು ಮುಖ್ಯಮಂತ್ರಿಯವರನ್ನು ಭೇಟಿ ಮಾಡಿ ಮಾಹಿತಿ ನೀಡಿದೆ. ಗೃಹ ಕಚೇರಿ ಕೃಷ್ಣಾದಲ್ಲಿ ಮುಖ್ಯಮಂತ್ರಿಗಳನ್ನು ಭೇಟಿ ಮಾಡಿ ಕ್ಲಬ್‌ಗಳ ಚಟುವಟಿಕೆ ಕುರಿತು ಮಾಹಿತಿ ನೀಡಿದರು.

ರಾಜ್ಯದಲ್ಲಿ 800 ಕ್ಲಬ್‌ಗಳಿದ್ದು, 200ಕ್ಕೂ ಹೆಚ್ಚು ಕ್ಲಬ್‌ಗಳು ಬೆಂಗಳೂರಿನಲ್ಲಿವೆ. ಕೆಲವು ಕ್ಲಬ್‌ಗಳು ಬೈಲಾ ನಿಯಮವನ್ನು ಉಲ್ಲಂಘಿಸಿದರೆ, ಇನ್ನು ಕೆಲವು ಮಿತಿ ಮೀರಿದ ಸದಸ್ಯತ್ವ ಶುಲ್ಕ ವಸೂಲಿ ಮಾಡುತ್ತಿವೆ. ಪರವಾನಿಗಿ ಇಲ್ಲದೆಯೂ ಕೆಲವು ಮದ್ಯ ಸರಬರಾಜು ಮಾಡುತ್ತಿವೆ ಎಂಬ ಆರೋಪಗಳು ಕೇಳಿ ಬಂದಿವೆ ಎಂಬ ಮಾಹಿತಿ ನೀಡಲಾಗಿದೆ.

ಆಧಾರ: ಕನ್ನಡ ಪ್ರಭ, ದಿನಾಂಕ:07.07.2021.

## 4. ಬಾಲಬ್ರೂಯಿ ಜಾಗ ಸಂವಿಧಾನ ಕ್ಲಬ್‌ಗೆ ಕೊಡಿ

ಬಾಲಬ್ರೂಯಿ ಅತಿಥಿ ಗೃಹದ ಜಾಗವನ್ನು ಕರ್ನಾಟಕ ವಿಧಾನಮಂಡಲದ ಸಂವಿಧಾನಿಕ ಕ್ಲಬ್‌ಗೆ ಮಂಜೂರು ಮಾಡಲು ಸರ್ಕಾರಕ್ಕೆ ಶಿಫಾರಸ್ಸು ಮಾಡುವಂತೆ ವಿಶೇಷ ಸದನ ಸಮಿತಿ ಸದಸ್ಯರು ವಿರೋಧಪಕ್ಷದ ನಾಯಕ ಸಿದ್ದರಾಮಯ್ಯ ಅವರಿಗೆ ಮನವಿ ಸಲ್ಲಿಸಿದರು. ಕ್ಲಬ್‌ಗಳ ಕಾರ್ಯವೈಖರಿ ಮತ್ತು ಚಟುವಟಿಕೆಗಳನ್ನು ಪರಿಶೀಲಿಸಲು ರಚಿಸಿರುವ ವಿಶೇಷ ಸದನ ಸಮಿತಿ ಅಧ್ಯಕ್ಷರು, ಸದಸ್ಯರು ಸಿದ್ದರಾಮಯ್ಯ ಅವರನ್ನು ಭೇಟಿ ಮಾಡಿ, ಬಾಲಬ್ರೂಯಿ ಅತಿಥಿ ಗೃಹದ ಜಾಗವನ್ನು ಕರ್ನಾಟಕದ ವಿಧಾನಮಂಡಲದ ಸಂವಿಧಾನಿಕ ಕ್ಲಬ್‌ಗೆ ಮಂಜೂರು ಮಾಡಲು ಸರ್ಕಾರಕ್ಕೆ ಶಿಫಾರಸ್ಸು ಮಾಡಲು ಮನವಿ ಸಲ್ಲಿಸಿದರು. ಸಮಿತಿ ಅಧ್ಯಕ್ಷ ಶಾಸಕ ರವಿಕುಮಾರ್ ನೇತೃತ್ವದ ನಿಯೋಗದಲ್ಲಿ ಪರಿಷತ್ ಸದಸ್ಯರಾದ ಕೆ.ಸಿ.ಕೊಂಡಯ್ಯ, ಗೋವಿಂದರಾಜು, ಯು.ಬಿ.ವೆಂಕಟೇಶ, ಪ್ರಕಾಶ್ ರಾಥೋಡ್, ತೇಜಸ್ವಿನಿ, ಭೋಜೇಗೌಡ, ನಂಜೇಗೌಡ ಇದ್ದರು.

ಆಧಾರ: ಕನ್ನಡ ಪ್ರಭ, ದಿನಾಂಕ:07.07.2021.

## 5. ವಿಧಾನಮಂಡಲ ಅಧಿವೇಶನಕ್ಕೆ ಸಜ್ಜಾಗಿ ಸಭಾಧ್ಯಕ್ಷರ ನಿರ್ದೇಶನ

ವಿಧಾನ ಸಭೆಯ ಅಧಿವೇಶನಕ್ಕೆ ತಕ್ಷಣದಿಂದಲೇ ಸಿದ್ಧತೆ ಆರಂಭಿಸುವಂತೆ ವಿಧಾನ ಸಭಾಧ್ಯಕ್ಷರವರು ಅಧಿಕಾರಿಗಳು ಹಾಗೂ ಸಿಬ್ಬಂದಿಗೆ ನಿರ್ದೇಶನ ನೀಡಿದ್ದಾರೆ. ಅಧಿವೇಶನವನ್ನು ಯಾವಾಗ ಮತ್ತು ಎಲ್ಲಿ ನಡೆಸಬೇಕು ಎಂದು ನಿರ್ಧರಿಸುವುದು ಸರ್ಕಾರದ ಪರಮಾಧಿಕಾರವಾಗಿದೆ. ನಾವು ಸಿದ್ಧತೆಗಳನ್ನು ಮಾಡಿಕೊಳ್ಳಬೇಕು ಮತ್ತು ಅಧಿವೇಶನ ಸುಗಮವಾಗಿ ನಡೆಯಲು ಸಜ್ಜಾಗಿದ್ದೇವೆ ಎಂಬುದನ್ನು ಸ್ವಯಂ ಖಾತ್ರಿ ಪಡಿಸಿಕೊಳ್ಳಬೇಕು ಎಂದು ಸೂಚಿಸಿದ್ದಾರೆ. ಕೋವಿಡ್‌ನ ಪ್ರತ್ಯೇಕೀಕರಣ ಮತ್ತು ಲಾಕ್‌ಡೌನ್ ಮನೋಸ್ಥಿತಿಯಿಂದ ಎಲ್ಲ ಅಧಿಕಾರಿಗಳು ಮತ್ತು ಸಿಬ್ಬಂದಿ ಹೊರಬರಬೇಕಾದ ಅಗತ್ಯ ಪ್ರತಿಪಾದಿಸಿದ ಅವರು, ವ್ಯಾಪಕವಾಗಿ ಕರ್ತವ್ಯ ನಿರ್ವಹಣೆ ಮಾಡುವುದರೊಂದಿಗೆ ಈವರೆಗೆ ಅಗಿರುವ ನಷ್ಟವನ್ನು ಸರಿದೂಗಿಸುವಂತೆ ಸಲಹೆ ಮಾಡಿದರು.

ನಾವು ಸಮರೋಪಾದಿಯಲ್ಲಿ ಕರ್ತವ್ಯ ನಿರ್ವಹಿಸಬೇಕಾದ ಅಗತ್ಯವಿದೆ ಮತ್ತು ಹಲವು ತಿಂಗಳುಗಳಿಂದ ಬಾಕಿ ಉಳಿದಿರುವ ಕೆಲಸವನ್ನು ತ್ವರಿತ ವಿಧಾನದ ಮೂಲಕ ಪೂರ್ಣ ಗೊಳಿಸಬೇಕಾಗಿದೆ ಎಂದ ಸ್ಪೀಕರ್, ನಾವೀನ್ಯತೆಯ ಬಗ್ಗೆ ಚಿಂತಿಸುವ ಮತ್ತು ತಂತ್ರಜ್ಞಾನದ ಬಳಕೆಯೊಂದಿಗೆ ಕರ್ನಾಟಕ ವಿಧಾನ ಸಭೆ ಮತ್ತು ಸಚಿವಾಲಯವನ್ನು ಮಾದರಿಯಾಗಿ ಮಾಡಬೇಕಾದ ಜವಾಬ್ದಾರಿ ನಮ್ಮೆಲ್ಲರ ಮೇಲಿದೆ ಎಂದು ಕರೆ ನೀಡಿದ್ದಾರೆ.

ವಿಧಾನ ಸಭೆಯ ಅಧಿವೇಶನವನ್ನು ಯಾವಾಗ ಮತ್ತು ಎಲ್ಲಿ ನಡೆಸಬೇಕೆಂದು ನಿರ್ಧರಿಸುವುದು ಸರ್ಕಾರದ ಪರಮಾಧಿಕಾರವಾಗಿದೆ. ಅಧಿವೇಶನ ಸುಗಮವಾಗಿ ನಡೆಯಲು ನಾವು ಸಿದ್ಧತೆ ಮಾಡಿಕೊಳ್ಳಬೇಕಾಗಿದೆ.

ಆಧಾರ: ಸಂಯುಕ್ತ ಕರ್ನಾಟಕ, ದಿನಾಂಕ:08.07.2021.

## 6. ಹೊರಟ್ಟಿ ಕಾರ್ಯವೈಖರಿಗೆ ಶ್ಲಾಘನೆ

ಕಳೆದ ನಾಲ್ಕು ದಶಕಗಳಿಂದ ಸತತವಾಗಿ 7 ಬಾರಿ ವಿಧಾನ ಪರಿಷತ್ತಿನ ಸದಸ್ಯರಾಗಿ ಪ್ರಸ್ತುತ ವಿಧಾನ ಮಂಡಲದ ಮೇಲ್ಮನೆಯಾಗಿರುವ ವಿಧಾನ ಪರಿಷತ್ತಿನ ಸಾರಥ್ಯ ವಹಿಸಿರುವ ಸಭಾಪತಿ ಬಸವರಾಜ ಹೊರಟ್ಟಿಯವರ ಕಾರ್ಯವೈಖರಿ ಅನುಕರಣೀಯವಾಗಿದೆ ಎಂದು ನಿರ್ಗಮಿತ ರಾಜ್ಯಪಾಲ ವಜುಭಾಯಿ ವಾಲ ಶ್ಲಾಘಿಸಿದ್ದಾರೆ.

ರಾಜ್ಯದ ರಾಜ್ಯಪಾಲರಾಗಿ ಸೇವೆ ಸಲ್ಲಿಸಿ ನಿರ್ಗಮಿಸುತ್ತಿರುವ ವಜುಭಾಯಿ ವಾಲರವರನ್ನು ರಾಜಭವನದಲ್ಲಿಂದು ಭೇಟಿ ಮಾಡಿದ ವಿಧಾನ ಪರಿಷತ್ತಿನ ಸಭಾಪತಿ ಬಸವರಾಜ ಹೊರಟ್ಟಿ ನಿರ್ಗಮಿತ ರಾಜ್ಯಪಾಲರಿಗೆ ಶುಭ ಹಾರೈಸಿದರು. ಈ ಸಂದರ್ಭದಲ್ಲಿ ಸಭಾಪತಿಗಳು ಸದನ ಕಲಾಪ ನಡೆಸುವ ಕಾರ್ಯ ಪದ್ಧತಿಯನ್ನು ಕೊಂಡಾಡಿದ ರಾಜ್ಯಪಾಲರು ನಾಲ್ಕು ದಶಕಗಳ ಸಮಾಜಮುಖಿ ಚಿಂತನೆಗಳು ಮತ್ತು ರಾಜಕೀಯ ಅನುಭವದಿಂದ ವಿಧಾನ ಪರಿಷತ್ತಿನ ಕಲಾಪಗಳು ಅರ್ಥಪೂರ್ಣವಾಗಿ ನಡೆಯುತ್ತಿರುವುದು ನನ್ನ ಗಮನಕ್ಕೆ ಬಂದಿದೆ ಎಂದರು.

ಚಿಂತಕರ ಚಾವಡಿಯಾಗಿರುವ ವಿಧಾನ ಪರಿಷತ್ತಿನಲ್ಲಿ ವರ್ತಮಾನದ ಸಮಸ್ಯೆಗಳ ಕುರಿತು ಚಿಂತನ ಮಂಥನ ನಡೆಯುತ್ತಿರುವುದರ ಜೊತೆಗೆ ಹಲವಾರು ಮೌಲ್ವಿಕ ವಿಚಾರಗಳ ಕುರಿತು ಅರ್ಥಪೂರ್ಣ ಚರ್ಚೆ ನಡೆಸುವ ಮೂಲಕ ಇಡೀ ಸಮಾಜಕ್ಕೆ ಪ್ರಜಾಪ್ರಭುತ್ವದ ಮೌಲ್ಯಗಳ ಸಾರ್ಥಕ್ಯದ ಕುರಿತು ಸ್ಪಷ್ಟ ಸಂದೇಶ ನೀಡುತ್ತಿರುವುದು ಸಂತಸದ ಸಂಗತಿ ಎಂದು ರಾಜ್ಯಪಾಲ ವಜುಬಾಯಿ ವಾಲಾ ನುಡಿದರು. ಹಿರಿಯ ಸದಸ್ಯರ ಅನುಭವ, ವಿಚಾರಧಾರೆ ಹಾಗೂ ಸದನದ ಘನತೆ ಗೌರವ ಹೆಚ್ಚಿಸುವ ನಿಟ್ಟಿನಲ್ಲಿ ಸಭಾಪತಿ ಬಸವರಾಜ ಹೊರಟ್ಟಿ ಅವರು ನಡೆಸುತ್ತಿರುವ ನಿರಂತರ ಪ್ರಯತ್ನ ಎಲ್ಲರಿಗೂ ಮಾದರಿಯಾಗಿದೆ. ಆರು ವರ್ಷ ಹತ್ತು ತಿಂಗಳ ಕಾಲ ಕರ್ನಾಟಕದ ಜನತೆ ತಮಗೆ ನೀಡಿದ ಗೌರವ ಹಾಗೂ ಸಹಕಾರಕ್ಕೆ ರಾಜ್ಯಪಾಲರು ಇದೇ ವೇಳೆ ಕೃತಜ್ಞತೆ ಸಲ್ಲಿಸಿದರು.

ಆಧಾರ: ಸಂಯುಕ್ತ ಕರ್ನಾಟಕ, ದಿನಾಂಕ:09.07.2021.

## 7. Former MLC alleges nepotism in Council staff appointments

Congress leader and former MLC Ramesh Babu demanded a probe by a committee comprising five members of the Legislative Council into alleged irregularities in appointments to the Council Secretariat and alleged illegal salary payment of Rs.48 lakh to the staff.

**Letter to Horatti:** In a letter to Council Chairman Basavaraj Horatti, he alleged that appointments had been made without formal approval of the Finance Department. In a clear case of nepotism, he alleged, Council Secretariat officials had appointed their realtives to various posts by violating rules.

He demanded immediate suspension of officials pending, inquiry by officials would not reveal actual facts in the appointment process, he demanded an inquiry by either a House committee or by the Karnataka Lokayukta.

Courtsey: Times of India Dated:09.07.2021

## 8. ಬೆಳಗಾವಿಯಲ್ಲಿ ಅಧಿವೇಶನಕ್ಕೆ ಒತ್ತಡ

ವಿಧಾನಮಂಡಲದ ಮುಂಗಾರು ಅಧಿವೇಶನ ಕರೆಯುವಂತೆ ಪ್ರತಿಪಕ್ಷಗಳು ಧ್ವನಿ ಎತ್ತಿದ್ದರೆ, ಬೆಳಗಾವಿಯ ಸುವರ್ಣ ಸೌಧದಲ್ಲಿ ನಡೆಯಬೇಕು ಎಂಬ ಒತ್ತಡವೂ ಹೆಚ್ಚತೊಡಗಿದೆ. ಈ ಮಧ್ಯೆ ಜುಲೈ 15 ರಂದು ನಡೆಯಲಿರುವ ಸಂಪುಟ ಸಭೆಯಲ್ಲಿ ಅಧಿವೇಶನದ ವಿಷಯ ಚರ್ಚೆಗೆ ಬರುವ ಸಾಧ್ಯತೆಗಳಿದ್ದು, ನಿರ್ದಿಷ್ಟ ತೀರ್ಮಾನಕ್ಕೆ ಬರುವುದು ಅನುಮಾನ ಎನ್ನಲಾಗುತ್ತಿದೆ.

**ಬೆಳಗಾವಿಗೆ ಹಲವರ ಒಲವು:** ಅತಿವೃಷ್ಟಿ, ಪ್ರವಾಹ, ಕೊರೋನಾ ಸಾಂಕ್ರಾಮಿಕ ರೋಗ ಕಾರಣಕ್ಕೆ ಬೆಳಗಾವಿ ಸುವರ್ಣಸೌಧದಲ್ಲಿ ಅಧಿವೇಶನ ನಡೆದಿಲ್ಲ. ಉತ್ತರ ಕರ್ನಾಟಕದ ಜನರ ಆಶೋತ್ತರಗಳ ಸ್ಪಂದನೆ ಭಾಗವಾಗಿ ಸೌಧ ತಲೆ ಎತ್ತಿದ್ದು, ನೈಜ ಉದ್ದೇಶವೇ ಗೌಣವಾಗುತ್ತಿದೆ ಎಂಬ ಕಳವಳ

ವ್ಯಕ್ತವಾಗುತ್ತಿದೆ. ಈ ಬಾರಿ ಮಳೆಗಾಲದ ಅಧಿವೇಶನವನ್ನು ಬೆಳಗಾವಿಯಲ್ಲೇ ಕರೆಯಬೇಕು ಎಂದು ವಿಧಾನ ಪರಿಷತ್ ಸಭಾಪತಿ ಬಸವರಾಜ ಹೊರಟ್ಟಿ ಸರ್ಕಾರಕ್ಕೆ ಪತ್ರ ಬರೆದಿದ್ದು, ಹಲವು ಶಾಸಕರು ಧ್ವನಿಗೂಡಿಸಿದ್ದಾರೆ. ಪ್ರತಿಪಕ್ಷಗಳು ಕಳೆದ ಅಧಿವೇಶನದಲ್ಲಿ ಈ ಕುರಿತು ಪ್ರಸ್ತಾಪಿಸಿ ಸರ್ಕಾರದ ಗಮನ ಸೆಳೆದಿದ್ದವು.

ಕೊರೋನಾ ಕೆಲಸದಲ್ಲಿ ಆಡಳಿತ ಯಂತ್ರ ಪೂರ್ಣ ತೊಡಗಿಕೊಂಡಿದೆ. ಬೆಳಗಾವಿಯಲ್ಲಿ ಅಧಿವೇಶನಕ್ಕೆ ತಯಾರಿ ಆಗಿಲ್ಲವೆಂದು ರಾಜ್ಯ ಮತ್ತು ಜಿಲ್ಲಾಮಟ್ಟದ ಬಹುತೇಕ ಅಧಿಕಾರಿಗಳು ಹಿಂದೇಟು ಹಾಕುತ್ತಿದ್ದಾರೆ.

ಆಧಾರ: ವಿಜಯವಾಣಿ, ದಿನಾಂಕ:12.07.2021.

## 9. ಪೀಠಾಧಿಕಾರಿಗಳಿಗೆ ಏಕರೂಪದ ಅಧಿಕಾರ: ಶೀಘ್ರದಲ್ಲಿ ಕರಡು ಸಲ್ಲಿಕೆ

ಶಾಸನಸಭೆಗಳ ಪೀಠಾಧಿಕಾರಿಗಳ ಅಧಿಕಾರದಲ್ಲಿ ಏಕರೂಪತೆ ಮತ್ತು ಸ್ಪಷ್ಟತೆ ತರುವುದಕ್ಕೆ ಸಂಬಂಧಿಸಿದಂತೆ ಸಂವಿಧಾನದ 10ನೇ ಪರಿಚ್ಛೇದದ ತಿದ್ದುಪಡಿಯ ಶಿಫಾರಸ್ಸುಗಳ ಕರಡನ್ನು ಶೀಘ್ರದಲ್ಲಿ ಸಲ್ಲಿಸಲಾಗುವುದು ಎಂದು ಕರಡು ರಚನಾ ಸಮಿತಿ ಸದಸ್ಯರಾಗಿರುವ ವಿಧಾನಸಭೆಯ ಸಭಾಧ್ಯಕ್ಷರವರು ತಿಳಿಸಿದ್ದಾರೆ.

ವಿಧಾನಸಭೆಯ ಅಧ್ಯಕ್ಷರ ಸಮಾವೇಶದಲ್ಲಿ ರಾಜಸ್ಥಾನ ವಿಧಾನಸಭೆಯ ಅಧ್ಯಕ್ಷ ಚಂದ್ರ ಪ್ರಕಾಶ್ ಜೋಶಿ ಅಧ್ಯಕ್ಷತೆಯ ಸಮಿತಿ ನೇಮಕ ಮಾಡಲಾಗಿತ್ತು. ವಿಶ್ವೇಶ್ವರ ಹೆಗಡೆ, ಕಾಗೇರಿ, ಒಡಿಶಾ ಮತ್ತು ನಾಗಾಲ್ಯಾಂಡ್ ವಿಧಾನಸಭೆಗಳ ಅಧ್ಯಕ್ಷರು ಸಮಿತಿಯ ಸದಸ್ಯರಾಗಿದ್ದಾರೆ. ವರ್ಚುವಲ್ ಆಗಿ ಸಮಿತಿಯ ಸಭೆ ನಡೆದಿದೆ.

'ಶಾಸನಸಭೆಗಳ ಪೀಠಾಧಿಕಾರಿಗಳ ಅಧಿಕಾರದಲ್ಲಿ ಏಕರೂಪತೆ ಇಲ್ಲದ ಕಾರಣದಿಂದ ನಿರ್ಣಯಗಳು ವಿಭಿನ್ನವಾಗಿರುತ್ತವೆ. ಈ ಕಾರಣದಿಂದಾಗಿ ಗೊಂದಲ ಉಂಟಾಗುತ್ತಿದೆ. ಆದ್ದರಿಂದ ಅಧಿಕಾರದಲ್ಲಿ ಏಕರೂಪತೆ ಮತ್ತು ಸ್ಪಷ್ಟತೆ ತರುವ ನಿಟ್ಟಿನಲ್ಲಿ ಚರ್ಚಿಸಲಾಗುತ್ತಿದೆ ಈವರೆಗೆ ನಡೆದಿರುವ ಚರ್ಚೆಗಳ ಸ್ಫೂರ್ತಿಯ ಆಧಾರದಲ್ಲಿ ಕರಡನ್ನು ಅಂತಿಮಗೊಳಿಸುವಂತೆ ಪ್ರತಿಪಾದಿಸಿದ್ದೇನೆ' ಎಂದು ಸಭಾಧ್ಯಕ್ಷರು ತಿಳಿಸಿದ್ದಾರೆ.

ಚರ್ಚೆ ಅಂತಿಮ ಹಂತದಲ್ಲಿದೆ. ಸಮಿತಿಯ ಮುಂದಿನ ಸಭೆಯ ವೇಳೆಗೆ ಸಂವಿಧಾನದ 10ನೇ ಪರಿಚ್ಛೇದದ ಅಡಿಯಲ್ಲಿ ಶಾಸನಸಭೆಗಳ ಪೀಠಾಧಿಕಾರಿಗಳ ಅಧಿಕಾರಕ್ಕೆ ಸಂಬಂಧಿಸಿದಂತೆ ತರಬೇಕಿರುವ ತಿದ್ದುಪಡಿಗಳ ಕರಡನ್ನು ಸಲ್ಲಿಸಲಾಗುವುದು ಎಂದು ಹೇಳಿದ್ದಾರೆ.

ಆಧಾರ: ಪ್ರಜಾವಾಣಿ, ದಿನಾಂಕ:14.07.2021.

## 10. ಬೆಳಗಾವಿ ಅಧಿವೇಶನಕ್ಕಾಗಿ ಸಿಎಂ ಭೇಟಿ: ಕವಟಗಿಮಠ

ಇಲ್ಲಿನ ಸುವರ್ಣ ವಿಧಾನಸೌಧದಲ್ಲಿ ಈ ಬಾರಿ ವಿಧಾನಮಂಡಲ ಅಧಿವೇಶನ ನಡೆಸುವಂತೆ ಶೀಘ್ರವೇ ಮುಖ್ಯಮಂತ್ರಿಯವರು ಮತ್ತು ಗೃಹ ಸಚಿವ ಬಸವರಾಜ ಬೊಮ್ಮಾಯಿ ಅವರನ್ನು ಭೇಟಿಯಾಗಿ ಮನವಿ ಮಾಡಲಾಗುವುದು ಎಂದು ವಿಧಾನ ಪರಿಷತ್ ಸರ್ಕಾರಿ ಮುಖ್ಯಸಚೇತಕ ಮಹಾಂತೇಶ ಕವಟಗಿಮಠ ತಿಳಿಸಿದರು. ಸುದ್ದಿಗಾರರೊಂದಿಗೆ ಮಾತನಾಡಿ, ಕೋವಿಡ್-19 ಹಾಗೂ ಪ್ರವಾಹದ ಹಿನ್ನೆಲೆಯಲ್ಲಿ ಕಳೆದ ಎರಡ್ಮೂರು ವರ್ಷಗಳಿಂದ ಬೆಳಗಾವಿಯಲ್ಲಿ ವಿಧಾನಮಂಡಲ ಅಧಿವೇಶನ ನಡೆದಿಲ್ಲ. ವಿಧಾನ ಪರಿಷತ್ ಸಭಾಪತಿ ಬಸವರಾಜ್ ಹೊರಟ್ಟಿ ಅವರ ಜೊತೆಗೆ ಮಾತನಾಡಿದ್ದೇನೆ ಎಂದರು.

ಆಧಾರ: ಕನ್ನಡ ಪ್ರಭ, ದಿನಾಂಕ:14.07.2021.

## 11. ಆರ್.ಎಸ್.ಎಸ್. ಕಚೇರಿಗೆ ಹೊರಟ್ಟಿ ಭೇಟಿ

ಉಪ ಮುಖ್ಯಮಂತ್ರಿ ಡಾ.ಸಿ.ಎನ್.ಅಶ್ವತ್ಥನಾರಾಯಣ ಅವರೊಂದಿಗೆ ವಿಧಾನ ಪರಿಷತ್ ಸಭಾಪತಿ ಬಸವರಾಜ ಹೊರಟ್ಟಿ ಆರ್‌ಎಸ್‌ಎಸ್ ಕಚೇರಿಗೆ ಭೇಟಿ ನೀಡಿದ್ದರು.

ಕರ್ನಾಟಕ ಡಿಜಿಟಲ್ ಎಕನಾಮಿ ಮಿಷನ್ (ಕೆಡಿಇಎಂ) ಕೇಂದ್ರ ಉದ್ಘಾಟನೆಗೆ ಮುಂಚೆ ಅವರು ಆರ್‌ಎಸ್‌ಎಸ್ ಕಚೇರಿ ಕೇಶವ ಕುಂಜಕ್ಕೆ ತೆರಳಿದ್ದರು. ಅವರ ಜೊತೆ ಹೊರಟ್ಟಿ ಅವರಿದ್ದರು. ಕೆಲಹೊತ್ತು ಆರ್‌ಎಸ್‌ಎಸ್ ಪ್ರಮುಖ ಶ್ರೀಧರ್ ನಾಡಿಗೇರ್, ಬಿಜೆಪಿ ಮುಖಂಡರ ಜೊತೆ ಚರ್ಚಿಸಿ ಹೊರಟುಹೋದರು.

'ಕರ್ನಾಟಕ ವಿಶ್ವವಿದ್ಯಾಲಯ ಕಾರ್ಯಕ್ರಮ ಮುಗಿಸಿಕೊಂಡು ಡಿಸಿಎಂ ಅಶ್ವತ್ಥನಾರಾಯಣ ಅವರೊಂದಿಗೆ ಊಟಕ್ಕೆ ಹೋಗೋಣ ಎಂದು ಕರೆದರು. ಹಾಗಾಗಿ ಹೋಗಿದ್ದೆ. ಯಾವುದೇ ರಾಜಕೀಯ ಉದ್ದೇಶವಿರಲಿಲ್ಲ' ಎಂದು ಸಭಾಪತಿಯವರು ಪ್ರಜಾವಾಣಿಗೆ ತಿಳಿಸಿದರು.

ಆಧಾರ: ಪ್ರಜಾವಾಣಿ, ದಿನಾಂಕ:14.07.2021.

## 12. ಮಳೆಗಾಲದ ಅಧಿವೇಶನ ಸುವರ್ಣಸೌಧದಲ್ಲಿ

ಉತ್ತರ ಕರ್ನಾಟಕ ಭಾಗದ ಜನರ ಸಮಸ್ಯೆ ಹಾಗೂ ಅಭಿವೃದ್ಧಿ ಕಾಮಗಾರಿಗಳ ಕುರಿತು ಚರ್ಚಿಸಲು ಬೆಳಗಾವಿಯ ಸುವರ್ಣಸೌಧದಲ್ಲಿ ನಡೆಸಲಾಗುತ್ತಿದ್ದ ಅಧಿವೇಶನವನ್ನು ಕಳೆದ ಮೂರು ವರ್ಷಗಳಿಂದ ನಾನಾ ಕಾರಣ ನೀಡಿ ಸ್ಥಗಿತ ಮಾಡಲಾಗಿದೆ.

ಕೋಟ್ಯಂತರ ರೂ, ಖರ್ಚು ಮಾಡಿ ನಿರ್ಮಾಣ ಮಾಡಿರುವ ಸುವರ್ಣಸೌಧದಲ್ಲಿ ಅಧಿವೇಶನ ನಡೆಸದೆ ಕೇವಲ ಕಾರ್ಯಕ್ರಮಗಳಿಗೆ ಮಾತ್ರ ಸೀಮಿತ ಮಾಡಲಾಗಿದೆ. ಬರುವ ಮಳೆಗಾಲದ ಅಧಿವೇಶನವನ್ನು ಬೆಳಗಾವಿಯಲ್ಲಿ ನಡೆಸಬೇಕೆಂಬ ಕೂಗು ಜೋರಾಗಿದೆ.

2018ರಲ್ಲಿ ಕಾಂಗ್ರೇಸ್ ಹಾಗೂ ಜೆಡಿಎಸ್ ನೇತೃತ್ವದಲ್ಲಿ ಹೆಚ್.ಡಿ.ಕುಮಾರಸ್ವಾಮಿ ಅವರ ಸಮ್ಮಿಶ್ರ ಸರ್ಕಾರದ ಸಂದರ್ಭದಲ್ಲಿ ಬೆಳಗಾವಿಯಲ್ಲಿ ಚಳಿಗಾಲದ ಅಧಿವೇಶನ ನಡೆಸಲಾಗಿತ್ತು. ಅದಾದ ನಂತರದಲ್ಲಿ 2019ರಲ್ಲಿ ಉತ್ತರ ಕರ್ನಾಟಕದಲ್ಲಿ ಉಂಟಾದ ಭೀಕರ ಪ್ರವಾಹದ ಹಿನ್ನೆಲೆಯಲ್ಲಿ ಅಧಿವೇಶನ ನಡೆಸದಂತೆ ಮುಖ್ಯಮಂತ್ರಿಯವರ ಸರ್ಕಾರ ನಿರ್ಧಾರ ಮಾಡಿತ್ತು. ಇನ್ನೂ 2020ರಲ್ಲಿ ಕೊರೋನಾ ಮೊದಲನೇ ಅಲೆಯಿಂದ ಅಧಿವೇಶನ ನಡೆಯಲಿಲ್ಲ.

**ಸುವರ್ಣಸೌಧ ಸಭೆಗಳಿಗೆ ಸೀಮಿತ:** ಉತ್ತರ ಕರ್ನಾಟಕ ಭಾಗದ ಸಮಸ್ಯೆ ಆಲಿಸಲು ಹಾಗೂ ಆಡಳಿತಾತ್ಮಕ ದೃಷ್ಟಿಯಿಂದ ಜನರಿಗೆ ಹತ್ತಿರವಾಗಲು ನಿರ್ಮಾಣವಾಗಿರುವ ಬೆಳಗಾವಿ ಸುವರ್ಣಸೌಧ ಕೇವಲ ಸರ್ಕಾರದ ಕಾರ್ಯಗಳ ಉದ್ಘಾಟನೆ ಮತ್ತು ಸಭೆಗಳಿಗೆ ಸೀಮಿತವಾಗಿದೆ. ಇನ್ನೂ ಜಿಲ್ಲಾ ಮಟ್ಟದ ಕಚೇರಿಗಳನ್ನು ಇಲ್ಲಿ ಸ್ಥಳಾಂತರ ಮಾಡಿದ್ದು, ಇದು ಸುವರ್ಣ ಸೌಧವೋ ಅಥವಾ ಜಿಲ್ಲಾಡಳಿತ ಭವನವೋ ಎಂಬ ಅನುಮಾನ ಮೂಡುವುದು ಸಹಜ.

ಬೆಳಗಾವಿಯ ಸುವರ್ಣಸೌಧದಲ್ಲಿ ನಡೆಯುವ ಅಧಿವೇಶನದಿಂದ ರಾಜ್ಯಕ್ಕೆ ನಾನಾ ಬಗೆಯ ಉಪಯೋಗಗಳಿವೆ. ಮೊದಲಿಗೆ ಅನೇಕ ಹಿಂದುಳಿದ ಜಿಲ್ಲೆಗಳಾದ ಕಲಬುರಗಿ, ಬೀದರ್, ರಾಯಚೂರು, ಯಾದಗಿರಿ ಜಯಪುರ ಸೇರಿದಂತೆ ಹಲವು ಜಿಲ್ಲೆಗಳ ಸಮಸ್ಯೆಗಳನ್ನು ಸರ್ಕಾರ ಆಲಿಸುವುದರ ಜೊತೆಗೆ ಪರಿಹಾರ ಕಲ್ಪಿಸುವ ಮಹತ್ವದ ಕೆಲಸ ಮಾಡಬಹುದಾಗಿದೆ.

ಇನ್ನೂ ಬೆಳಗಾವಿ ಗಡಿ ವಿಷಯಕ್ಕೆ ಸಂಬಂಧಿಸಿದಂತೆ ಪದೇಪದೇ ಗಡಿ ಖ್ಯಾತೆ ತೆಗೆಯುವ ಮಹಾರಾಷ್ಟ್ರಕ್ಕೆ ತಕ್ಕ ಉತ್ತರ ನೀಡುವಲ್ಲಿಯೂ ನಮ್ಮ ರಾಜ್ಯ ಸಫಲವಾಗುತ್ತದೆ. ಇನ್ನೂ ಅನೇಕ

ಸಮಸ್ಯೆಗಳಿಗೆ ಪರಿಹಾರ ನೀಡುವ ನಿಟ್ಟಿನಲ್ಲಿ ಅಧಿವೇಶನವನ್ನು ಬೆಳಗಾವಿಯಲ್ಲಿ ನಡೆಸಬೇಕೆಂದು ಅಭಿಪ್ರಾಯ ಪಡೆಯಲಾಗಿದೆ

ಆಧಾರ:ವಿಶ್ವವಾಣಿ, ದಿನಾಂಕ:15.07.2021.

## 13. ಅಧಿವೇಶನ ಕರೆಯಲು ಸಿಎಂ, ಸ್ಪೀಕರ್‌ಗೆ ಸಿದ್ದರಾಮಯ್ಯ ಪತ್ರ

ನಿಯಮಾನುಸಾರ ಜುಲೈನಲ್ಲಿ ಅಧಿವೇಶನ ನಡೆಯಬೇಕಿದ್ದರೂ ಸರ್ಕಾರ ಯಾವುದೇ ಕ್ರಮ ಕೈಗೊಳ್ಳದಿರುವುದು ನಿಯಮ ಬಾಹಿರವೆನಿಸಿದೆ. ಕೂಡಲೇ ವಿಧಾನಮಂಡಲ ಅಧಿವೇಶನ ಕರೆಯಬೇಕು ಎಂದು ಪ್ರತಿಪಕ್ಷ ನಾಯಕ ಸಿದ್ದರಾಮಯ್ಯ ಆಗ್ರಹಿಸಿದ್ದಾರೆ. ಈ ಸಂಬಂಧ ಮುಖ್ಯಮಂತ್ರಿಯವರು ಹಾಗೂ ಸಭಾಧ್ಯಕ್ಷರವರಿಗೆ ಸಿದ್ದರಾಮಯ್ಯ ಪತ್ರ ಬರೆದಿದ್ದಾರೆ. "ರಾಜ್ಯದ ಜನ ತೀವ್ರ ಸಂಕಷ್ಟದಲ್ಲಿದ್ದಾರೆ. ಕೋವಿಡ್ 2ನೇ ಅಲೆಯನ್ನು ರಾಜ್ಯ ಸರ್ಕಾರ ನಿಭಾಯಿಸಿದ ರೀತಿ ಅತ್ಯಂತ ಅರಾಜಕ ಹಾಗೂ ಜನರ ಪಾಲಿಗೆ ಮಾರಣಾಂತಿಕವಾಗಿತ್ತು. ಇದೀಗ 3ನೇ ಅಲೆಯ ಭೀತಿ ಜನರನ್ನು ಕಾಡುತ್ತಿದೆ. ಜನರಿಗೆ ಸಮರ್ಪಕವಾಗಿ ಲಸಿಕೆ ಸಿಗುತ್ತಿಲ್ಲ ಎಂದು ಬೇಸರ ವ್ಯಕ್ತಪಡಿಸಿದ್ದಾರೆ.

ಆಧಾರ: ವಿಜಯ ಕರ್ನಾಟಕ, ದಿನಾಂಕ:15.07.2021.

## 14. ಕನ್ನಡ ಆಡಳಿತ ಭಾಷೆಗೆ ಕದಂಬರು ಕಾರಣ

'ಆಡಳಿತ ಭಾಷೆಯಾಗಿ ಕನ್ನಡ ರೂಪಿಸಿದ ಹಾಗೂ ಅನುಕರಣೀಯ ಮಾದರಿ ಆಡಳಿತ ನೀಡಿದ ಕೀರ್ತಿ ಕದಂಬರಿಗೆ ಸಲ್ಲುತ್ತದೆ' ಎಂದು ಸಭಾಧ್ಯಕ್ಷರವರು ಹೇಳಿದರು.

ಭವತಾರಿಣಿ ಪ್ರಕಾಶನ ಹೊರತಂದಿರುವ ಡಾ.ಎಸ್.ಗುರುಮೂರ್ತಿ ರಚಿತ ಕದಂಬರು ಸಮಗ್ರ ಅವಲೋಕನ' ಎಂಬ ಇತಿಹಾಸ ಗ್ರಂಥವನ್ನು ಬಿಡುಗಡೆ ಮಾಡಿ ಅವರು, ಇತಿಹಾಸ ಹೇಗೆ ಬೇಕಾದರೂ ವಿಶ್ಲೇಷಣೆ ಮಾಡಬಹುದು. ಗುಲಾಮಿತನ ಇತಿಹಾಸವನ್ನು ಬಿಟ್ಟು ಯುವ ಪೀಳಿಗೆಗೆ ನೈಜ ಇತಿಹಾಸವನ್ನು ತಿಳಿಸಬೇಕಾಗಿದೆ. ಶಿಕ್ಷಣ ಸಚಿವನಾಗಿದ್ದ ವೇಳೆ ಸಮಿತಿ ರಚಿಸಿ ಪಠ್ಯಕ್ರಮದಲ್ಲಿ ಬದಲಾವಣೆ ತರಲು ಮುಂದಾದಾಗ ಎಲ್ಲರೂ ಕೇಸರೀಕರಣ ಆರೋಪ ಬಂತು. ಆದರೂ ನನ್ನ ಪ್ರಯತ್ನ ನಾನು ಬಿಡಲಿಲ್ಲ ಎಂದು ಅವರು ಹೇಳಿದರು.

"ಇತಿಹಾಸ ಸದಾ ನಮ್ಮಲ್ಲಿ ಜಾಗೃತವಾಗಿರಬೇಕಾದರೆ ಹೊಸ ಹೊಸ ಪುಸ್ತಕಗಳು ಬರುತ್ತಿರಬೇಕು. ಗುರುಮೂರ್ತಿ ಅವರು ರಸಾಯನಶಾಸ್ತ್ರದ ಪ್ರಾಧ್ಯಾಪಕರಾಗಿದ್ದರೂ ಕನ್ನಡದ ಮೇಲಿನ ಆಸಕ್ತಿ ಎಷ್ಟಿದೆ ಎಂಬುದಕ್ಕೆ ಈ ಪುಸ್ತಕ ಸಾಕ್ಷಿಯಾಗಿದೆ," ಎಂದು ಮೆಚ್ಚುಗೆ ವ್ಯಕ್ತಪಡಿಸಿದರು. ಸಾಹಿತಿ ಪ್ರೊ.ಜಿ.ಅಶ್ವತ್ಥನಾರಾಯಣ ಮಾತನಾಡಿ, "ಇದೊಂದು ವಿಶ್ವಕೋಶ ಮಾದರಿ ಗ್ರಂಥ. ಕದಂಬರ ನೆಲ, ಕಾಲ ಮುಂತಾದವುಗಳನ್ನು ಅಧ್ಯಯನ ಮಾಡಿದ ಕೃತಿ ಇದು. ನಾಡಿನ ಕಲೆ, ಸಾಹಿತ್ಯ ಸಂಸ್ಕೃತಿಯ ಸಾರ ಈ ಕೃತಿಯಲ್ಲಿದೆ," ಎಂದರು.

"ಕದಂಬ ಮರ ಇರುವುದೇ ಬಹುತೇಕರಿಗೆ ತಿಳಿದಿಲ್ಲ. ಇಂದಿಗೂ ಕದಂಬ ಎಂದರೆ, ಈಚಲು ಮರ ಎಂದೇ ಹೇಳಲಾಗುತ್ತದೆ. ಆದರೆ, ಇದು ತಪ್ಪು ಕಲ್ಪನೆ. ಬುದ್ಧನಿಗೆ ಜ್ಞಾನೋದಯವಾಗಿದ್ದೇ ಕದಂಬ ಮರದ ಅಡಿಯಲ್ಲಿ ಎಂಬುದು ವಿಶೇಷ. ಆ ಮಾಹಿತಿ ಈ ಪುಸ್ತಕದಲ್ಲಿ ಲಭ್ಯವಿದೆ" ಎಂದು ಹೇಳಿದರು. ಶಾಸನತಜ್ಞರಾದ ಡಾ.ದೇವರಕೊಂಡಾ ರೆಡ್ಡಿ, ಡಾ.ಆರ್.ಶೇಷಶಾಸ್ತ್ರಿ ಸೇರಿದಂತೆ ಹಲವರು ಉಪಸ್ಥಿತರಿದ್ದರು.

ಆಧಾರ: ವಿಜಯ ಕರ್ನಾಟಕ, ದಿನಾಂಕ:19.07.2021.

**ದಿನಾಂಕ: 18.07.2021 ರಂದು ಸನ್ಮಾನ್ಯ ಸಭಾಧ್ಯಕ್ಷರು ಬೆಂಗಳೂರಿನ ಪ್ರತಿಷ್ಠಿತ ಸಂಸ್ಥೆಯಾದ ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆಯಲ್ಲಿ ಡಾ:ಎಸ್.ಗುರುಮೂರ್ತಿ ಅವರು ರಚಿಸಿರುವ ಶ್ರೀ ಭವತಾರಿಣಿ ಪ್ರಕಾಶನ ವತಿಯಿಂದ ಪ್ರಕಟಿಸಿರುವ "ಕದಂಬರು" ಸಮಗ್ರ ಅವಲೋಕನ ಪುಸ್ತಕವನ್ನು ಲೋಕಾರ್ಪಣೆ ಮಾಡಿ ಶುಭ ಹಾರೈಸಿದ ಸಂದರ್ಭ:**





## 15. ಕಷ್ಟದಲ್ಲಿ ಖಾಸಗಿ ಶಿಕ್ಷಣ ಸಂಸ್ಥೆ

ಖಾಸಗಿ ಶಿಕ್ಷಣ ಸಂಸ್ಥೆಗಳು ಸದ್ಯದ ಪರಿಸ್ಥಿತಿಯಲ್ಲಿ ತೀವ್ರ ಸಂಕಷ್ಟದಲ್ಲಿವೆ. ಇವರುಗಳ ನೆರವಿಗೆ ರಾಜ್ಯ ಸರ್ಕಾರ ಧಾವಿಸಲೇಬೇಕು ಎಂದು ವಿಧಾನಪರಿಷತ್ ಸಭಾಪತಿ ಬಸವರಾಜ್ ಹೊರಟ್ಟಿ ಹೇಳಿದ್ದಾರೆ.

ಖಾಸಗಿ ಶಿಕ್ಷಣ ಸಂಸ್ಥೆಗಳು ಅನುಭವಿಸುತ್ತಿರುವ ಸಂಕಷ್ಟಗಳನ್ನು ಈಗಾಗಲೇ ಮುಖ್ಯಮಂತ್ರಿಗಳು ಹಾಗೂ ಶಿಕ್ಷಣ ಸಚಿವರ ಗಮನಕ್ಕೆ ತಂದು ಚರ್ಚೆ ಮಾಡಿದ್ದೇನೆ. ಕೋವಿಡ್ ಸಂದರ್ಭದಲ್ಲಿ ಖಾಸಗಿ ಶಿಕ್ಷಣ ಸಂಸ್ಥೆಗಳ ಪರಿಸ್ಥಿತಿ ಗಂಭೀರವಾಗಿದೆ. ಸರ್ಕಾರ ನೆರವಿಗೆ ಧಾವಿಸುವವರೆಗೂ ನನ್ನ ಪ್ರಯತ್ನ ಮುಂದುವರಿಯಲಿದೆ ಎಂದು ಭರವಸೆ ನೀಡಿದರು.

ತಾವು ವಿಧಾನ ಪರಿಷತ್ ಸದಸ್ಯರಾಗಿ 41 ವಸಂತ ಪೂರೈಸಿದ ಹಿನ್ನೆಲೆಯಲ್ಲಿ ನಗರದಲ್ಲಿ ಕರ್ನಾಟಕ ರಾಜ್ಯ ಮಾಧ್ಯಮಿಕ ಶಾಲಾ ನೌಕರರ ಸಂಘದ ರಾಜ್ಯ ಘಟಕವು ಏರ್ಪಡಿಸಿದ ಅಭಿನಂದನಾ ಸಮಾರಂಭದಲ್ಲಿ ಸನ್ಮಾನ ಸ್ವೀಕರಿಸಿ ಬಸವರಾಜ್ ಹೊರಟ್ಟಿ ಮಾತನಾಡಿದರು.

ರಾಜ್ಯದಲ್ಲಿ ಯಾವುದೇ ಸರ್ಕಾರಗಳು ಇರಲಿ ಎಷ್ಟು ಸಾಧ್ಯವೋ ಅಷ್ಟು ಖಾಸಗಿ ಶಿಕ್ಷಣ ಸಂಸ್ಥೆಗಳನ್ನು ಮುಚ್ಚಿಸಲು ಪ್ರಯತ್ನ ಮಾಡುತ್ತೇವೆ. ಇದು ಯಾವ ನ್ಯಾಯ, ಸರ್ಕಾರಗಳಿಗೆ ಈ ತರಹದ ಧೋರಣೆ ಸರಿಯೇ ಎಂದು ಹೊರಟ್ಟಿ ಪ್ರಶ್ನಿಸಿದರು. ನಾನು ಶಿಕ್ಷಣ ಸಚಿವನಾಗಿದ್ದಾಗ ನೀಡಿದ ಕೊಡುಗೆಗಳಿಂದ ತಕ್ಕಮಟ್ಟಿಗೆ ಖಾಸಗಿ ಶಿಕ್ಷಣ ಸಂಸ್ಥೆಗಳು ಇಂದು ಉಳಿದಿವೆ ಎಂದು ಭಾವಿಸಿದ್ದೇನೆ ಎಂದು ಹೊರಟ್ಟಿ ಘಟನಾವಳಿಗಳನ್ನು ಮೆಲುಕು ಹಾಕಿದರು.

ಆಧಾರ: ಸಂಯುಕ್ತ ಕರ್ನಾಟಕ, ದಿನಾಂಕ:19.07.2021.

## 16. ಚಾನುಗೆ ಸ್ಪೀಕರ್ ಅಭಿನಂದನೆ

ಟೋಕಿಯೋ ಒಲಿಂಪಿಕ್ಸ್‌ನಲ್ಲಿ ಭಾರ ಎತ್ತುವ ಸ್ಪರ್ಧೆಯಲ್ಲಿ ರಜತ ಪದಕ ಗೆದ್ದ ಮೀರಾಬಾಯಿ ಚಾನು ಅವರನ್ನು ಮುಖ್ಯಮಂತ್ರಿಯವರು ಹಾಗೂ ಸಭಾಧ್ಯಕ್ಷರವರು ಅಭಿನಂದಿಸಿದ್ದಾರೆ. ಬೆಳ್ಳಿಪದಕ ಗೆಲ್ಲುವ ಮೂಲಕ ಮೀರಾ ಬಾಯಿ ಚಾನು ಲಕ್ಷಾಂತರ ಭಾರತೀಯರು ಹೆಮ್ಮೆ ಪಡುವಂತೆ ಮಾಡಿದ್ದಾರೆ ಎಂದು ಉಭಯ ನಾಯಕರು ಶುಭ ಕೋರಿದ್ದಾರೆ. ಮೀರಾ ಬಾಯಿ ಅದ್ಭುತ ಸಂಪ್ರದಾಯಕ್ಕೆ ನಾಂದಿ ಹಾಡಿದ್ದಾರೆ. ಅವರ ಪ್ರದರ್ಶನವು ಇತರ ಕ್ರೀಡಾ ಪಟುಗಳಲ್ಲಿ ಉತ್ಸಾಹ ತುಂಬಿ, ಗೆಲುವಿನ ಮನೋಭಾವ ಮೂಡಿಸುತ್ತದೆ. ಟೋಕಿಯೋ ಒಲಿಂಪಿಕ್ಸ್‌ನಲ್ಲಿ ಭಾರತ ಇನ್ನು ಹಲವು ಪದಕಗಳನ್ನು ಎದುರು ನೋಡುತ್ತಿದ್ದು, ಗೆದ್ದೇ ಗೆಲ್ಲುತ್ತದೆ ಎಂಬ ವಿಶ್ವಾಸ ನನಗಿದೆ ಎಂದು ಸಭಾಧ್ಯಕ್ಷರವರು ತಿಳಿಸಿದ್ದಾರೆ.

ಆಧಾರ: ಉದಯವಾಣಿ, ದಿನಾಂಕ:25.07.2021.

## 17. ರಾಜ್ಯಪಾಲರ ಭೇಟಿಯಾದ ಸ್ಪೀಕರ್

ಮುಖ್ಯಮಂತ್ರಿಯವರ ರಾಜೀನಾಮೆ ದಿನವೇ ಸಿಎಂ ರೇಸ್‌ನಲ್ಲಿ ಹೆಸರು ಕೇಳಿಬರುತ್ತಿರುವ ಸಭಾಧ್ಯಕ್ಷರವರು ರಾಜ್ಯಪಾಲ ಥಾವರ್ ಚಂದ್ ಗೆಹಲೋತ್‌ರನ್ನು ಭೇಟಿಯಾಗಿರುವುದು ಭಾರಿ ಕುತೂಹಲಕ್ಕೆ ಕಾರಣವಾಗಿದೆ.

ಯಡಿಯೂರಪ್ಪ ಅವರು ತಮ್ಮ ರಾಜೀನಾಮೆ ಘೋಷಿಸುವ ಕೆಲ ನಿಮಿಷದ ಮೊದಲು ವಿಧಾನ ಸಭಾಧ್ಯಕ್ಷರವರು ಗೆಹಲೋತ್ ಅವರನ್ನು ಭೇಟಿ ಮಾಡಿದ್ದರು. ರಾಜ್ಯಪಾಲರಾಗಿ ಪ್ರಮಾಣವಚನ ಸ್ವೀಕರಿಸುವ ಸಮಾರಂಭದಲ್ಲಿ ಪಾಲ್ಗೊಳ್ಳಲಾಗದ ಕಾರಣ ರಾಜ್ಯಪಾಲರನ್ನು ವಿಧಾನ ಸಭಾಧ್ಯಕ್ಷರು ಭೇಟಿಯಾಗಿದ್ದರು ಎಂದು ಸಭಾಧ್ಯಕ್ಷರ ಕಾರ್ಯಾಲಯದ ಮೂಲಗಳು ತಿಳಿಸಿವೆ. ಇನ್ನು ರಾಜ್ಯದಲ್ಲಿ ನಡೆಯುತ್ತಿರುವ ರಾಜಕೀಯ ಬೆಳವಣಿಗೆಗೂ ಸಭಾಧ್ಯಕ್ಷರು ರಾಜ್ಯಪಾಲರನ್ನು ಭೇಟಿಯಾಗಿರುವುದಕ್ಕೂ ಸಂಬಂಧವಿಲ್ಲ ಎಂದು ಮೂಲಗಳು ಸ್ಪಷ್ಟಪಡಿಸಿವೆ.

ಈ ಬಗ್ಗೆ ಸಭಾಧ್ಯಕ್ಷರವರು ಮಾತನಾಡಿದ್ದು, ರಾಜ್ಯಪಾಲರನ್ನು ಸೌಜನ್ಯಯುತವಾಗಿ ಭೇಟಿಮಾಡಿದ್ದೇನೆ. ಸರ್ಕಾರ ಎರಡು ವರ್ಷ ಪೂರೈಸಿದೆ. ಕಳೆದ ಎರಡು ವರ್ಷದಲ್ಲಿ ನಡೆದ ಅಧಿವೇಶನದಲ್ಲಿ ಏನೆಲ್ಲಾ ಆಯಿತು. ಯಾವ ವಿಚಾರಗಳನ್ನು ಅಧಿವೇಶನದಲ್ಲಿ ಚರ್ಚೆ ನಡೆಸಿದ್ದೇವೆ. ಯಾವ ರೀತಿಯಾಗಿ ಅಧಿವೇಶನ ನಡೆಯುತ್ತಿದೆ ಎಂಬೆಲ್ಲ ವಿವರವನ್ನು ಅವರಿಗೆ ತಿಳಿಸಿದ್ದೇನೆ.

'ಒನ್ ನೇಷನ್, ಒನ್ ಎಲೆಕ್ಷನ್' ಬಗ್ಗೆ ಚರ್ಚೆಯ ಪ್ರಯತ್ನ ನಡೆಸಿದ್ದೇವೆ. 'ಆತ್ಮಾವಲೋಕನ ಸಭೆ' ಬಗ್ಗೆ ಹೇಳಿದ್ದೇನೆ. ಹೊಸ ರಾಜ್ಯಪಾಲರು ಬಂದ ನಂತರ ಭೇಟಿ ಮಾಡೋದು ಸಹಜ. ನಾನು ಭೇಟಿ ಮಾಡಿದ್ದೇನೆ ಎಂದು ಹೇಳಿದರು.

ಆಧಾರ: ವಿಶ್ವವಾಣಿ, ದಿನಾಂಕ:27.07.2021





**ದಿನಾಂಕ: 10.07.2021 ರಂದು ಸನ್ಮಾನ್ಯ ಸಭಾಧ್ಯಕ್ಷರು ರಾಜ್ಯದ ನೂತನ ರಾಜ್ಯಪಾಲರಾಗಿ ಅಧಿಕಾರ ವಹಿಸಿಕೊಂಡ ಗೌರವಾನ್ವಿತ ರಾಜ್ಯಪಾಲರಾದ ಶ್ರೀ ಥಾವರ್‌ಚಂದ್ ಗೆಹ್ಲೋಟ್‌ರವರನ್ನು ಭೇಟಿಯಾಗಿ ಶುಭ ಹಾರೈಸಿದ ಸಂದರ್ಭ.**

## 18. ಸದನದ ಶಿಸ್ತಿಗೆ ನಿಯಮ ತಿದ್ದುಪಡಿ

ಸದನದಲ್ಲಿ ಸದಸ್ಯರ ನಡವಳಿಕೆ, ಶಿಸ್ತು, ಸಭ್ಯತೆ ಬಗ್ಗೆ ನಿಯಾಮಾವಳಿಗಳಿಗೆ ತಿದ್ದುಪಡಿ ಶಿಫಾರಸ್ಸು ಸಿದ್ಧವಾಗಿದ್ದು, ಮುಂದಿನ ವಿಧಾನಮಂಡಲ ಅಧಿವೇಶನದಲ್ಲಿ ಮಂಡಿಸಲಾಗುವುದು ಎಂದು ವಿಧಾನಸಭಾಧ್ಯಕ್ಷರವರು ಹೇಳಿದರು.

ವಿಧಾನಸಭಾಧ್ಯಕ್ಷರಾಗಿ ಜುಲೈ 31ಕ್ಕೆ 2 ವರ್ಷ ಪೂರ್ಣಗೊಂಡ ಹಿನ್ನೆಲೆಯಲ್ಲಿ ಸಾಧನೆಗಳ ಮಾಹಿತಿಯುಳ್ಳ ಹೊತ್ತಿಗೆಯನ್ನು ವಿಧಾನಸೌಧದಲ್ಲಿ ಬಿಡುಗಡೆಗೊಳಿಸಿ ಅವರು ಮಾತನಾಡಿದರು. "ಹೊಸತನಕ್ಕೆ ಸ್ಪಂದಿಸದ ಅಧಿಕಾರಿಶಾಹಿ ಬ್ರಿಟಿಷ್ ಮನಸ್ಥಿತಿ ಹಾಗೂ ಸರ್ಕಾರ ಹಣಕಾಸಿನ ಲಭ್ಯತೆ ಇಲ್ಲದ ಕಾರಣ 'ಇ–ವಿಧಾನ್' ಯೋಜನೆ 2014ರಿಂದ ತೆವಳುತ್ತಾ ಸಾಗಿದ್ದು, ಪೂರ್ಣವಾಗಿ ಜಾರಿಯಾಗದಿರುವ ಬಗ್ಗೆ ನೋವಿದೆ," ಎಂದು ಅಸಮಾಧಾನ ವ್ಯಕ್ತಪಡಿಸಿದರು.

"ಪಕ್ಷಾಂತರ ನಿಷೇಧ ಕಾಯಿದೆ ಹಾಗೂ ಪೀಠಾಸೀನಾಧಿಕಾರಿಗಳ (ಸ್ಪೀಕರ್ಸ್) ಅಧಿಕಾರ ಬಲವರ್ಧನೆಯ ಸಂವಿಧಾನದ 10ನೇ ಪರಿಚ್ಛೇದದ ತಿದ್ದುಪಡಿ ಕರಡುಗೆ ಸಂಬಂಧಿಸಿದ ಶಿಫಾರಸ್ಸುಗಳಿಗೆ ಅಂತಿಮ ರೂಪ ನೀಡಲಾಗಿದ್ದು, ಲೋಕಸಭಾಧ್ಯಕ್ಷರಿಗೆ ಸಲ್ಲಿಕೆಯಾಗಲಿದೆ," ಎಂದು ಹೇಳಿದರು.

"ಕೋವಿಡ್ ಕಾರಣದಿಂದ ವರ್ಷದಲ್ಲಿ ಕನಿಷ್ಠ 60 ದಿನ ಅಧಿವೇಶನ ನಡೆಸಲು ಸಾಧ್ಯವಾಗುತ್ತಿಲ್ಲ. ಇತ್ತೀಚಿನ ಕೆಲ ಅಹಿತಕರ ಘಟನೆಗಳಿಂದಾಗಿ ಮೇಲ್ಮನೆ ಅಗತ್ಯದ ಬಗ್ಗೆಯೇ ಚರ್ಚೆಯಾಗುತ್ತಿದ್ದು, ಪರಿಷತ್ ಬೇಕು ಎಂಬ ಜನಾಭಿಪ್ರಾಯ ರೂಪುಗೊಳ್ಳುವಂತೆ ಮೇಲ್ಮನೆ ಸದಸ್ಯರೇ ನೋಡಿ ಕೊಳ್ಳಬೇಕು," ಎಂದು ಪ್ರಶ್ನೆಯೊಂದಕ್ಕೆ ಉತ್ತರಿಸಿದರು.

"ಸದನದಲ್ಲಿ ಕ್ರಿಯಾಶೀಲತೆ, ಚರ್ಚೆಗಳಲ್ಲಿ ಸಕ್ರಿಯ ಭಾಗವಹಿಸುವಿಕೆ, ಮೌಲ್ಯಯುತ ವಿಚಾರ ಮಂಡನೆ ಆಧರಿಸಿ 'ಅತ್ಯುತ್ತಮ ಶಾಸಕ' ಪ್ರಶಸ್ತಿ ನೀಡುವುದನ್ನು ಮುಂದಿನ ಅಧಿವೇಶನದಿಂದ ಜಾರಿಗೆ ಬರಲಿದೆ," ಎಂದರು.

**ಸಾಧನೆಯ ವಿವರ:** ಎರಡು ವರ್ಷದಲ್ಲಿ ಒಟ್ಟು 5 ಅಧಿವೇಶನದಲ್ಲಿ 54 ದಿನದಲ್ಲಿ ಕಲಾಪ ನಡೆದಿದೆ. ಮಂಡನೆಯಾದ 98 ವಿಧೇಯಕಗಳಲ್ಲಿ 96 ಚರ್ಚೆಯಾಗಿ ಅಂಗೀಕೃತವಾಗಿವೆ. ಪ್ರಶ್ನೋತ್ತರ ಕಲಾಪದಲ್ಲಿ 825 ಚುಕ್ಕೆ ಗುರುತಿನ ಪ್ರಶ್ನೆಗಳ ಪೈಕಿ 804 ಕ್ಕೆ ಉತ್ತರ, ಲಿಖಿತ ಮೂಲಕ ಉತ್ತರಿಸುವ 10,427 ಪ್ರಶ್ನೆಗಳ ಪೈಕಿ 9,767 ಉತ್ತರವನ್ನು ಸದಸ್ಯರಿಗೆ ಒದಗಿಸಲಾಗಿದೆ. 982 ಗಮನ ಸೆಳೆಯುವ ಸೂಚನೆಗಳಲ್ಲಿ 597ಕ್ಕೆ ಉತ್ತರ ಒದಗಿಸಲಾಗಿದೆ ಎಂದು ವಿವರಿಸಿದರು.

ಆಧಾರ: ವಿಜಯ ಕರ್ನಾಟಕ, ದಿನಾಂಕ:01.08.2021.





**ದಿನಾಂಕ: 31.07.2021 ರಂದು ಸನ್ಮಾನ್ಯ ಸಭಾಧ್ಯಕ್ಷರು ಕರ್ನಾಟಕ ವಿಧಾನಸಭೆಯ ಸಭಾಧ್ಯಕ್ಷರಾಗಿ ಎರಡು ವರ್ಷ ಪೂರೈಸಿದ ಸಂಬಂಧ ವಿಧಾನಸೌಧದ ಸಮ್ಮೇಳನ ಸಭಾಂಗಣದಲ್ಲಿ "ಕರ್ನಾಟಕ ವಿಧಾನ ಸಭೆ ಎರಡು ವರ್ಷದ ಸಾಧನೆಗಳು" ಪುಸ್ತಕವನ್ನು ಬಿಡುಗಡೆಗೊಳಿಸಿ ಪತ್ರಿಕಾಗೋಷ್ಠಿ ನಡೆಸಿದ ಸಂದರ್ಭ:**

## 19. ಕಲಾಪದಲ್ಲಿ ಶೀಟಿ ಚಾಟಿ ಬೀಸಿದ ಸಭಾಪತಿ

ರಾಜ್ಯಸಭೆಯಂಥ ಮಹತ್ವದ ಮಾತಿನ ಮಂಟಪದಲ್ಲಿ ಕುಳಿತು ಕೆಲ ಸದಸ್ಯರು ವಿಶಲ್ ಹೊಡೆದು ಕಲಾಪಕ್ಕೆ ಅಡ್ಡಿಪಡಿಸಿದ ಬಗ್ಗೆ ರಾಜ್ಯಸಭೆಯ ಸಭಾಪತಿಯವರು ಕಠಿಣ ಮಾತುಗಳಲ್ಲಿ ಚಾಟಿ ಬೀಸಿದ್ದಾರೆ. ಅಧಿವೇಶನ ಆರಂಭ ಆದಾಗಿನಿಂದಲೂ ಕಲಾಪ ನಡದೇ ಇಲ್ಲ. ಹೀಗಾದರೆ ಜನರು ನಮ್ಮ ಬಗ್ಗೆ ಏನು ತಿಳಿದಾರು ಎಂಬ ಕನಿಷ್ಠ ಪ್ರಜ್ಞೆ ಇಲ್ಲದೇ ವರ್ತನೆ ಮಾಡಬಾರದು. ನನ್ನ ಮುಂದೆ ಎರಡು ಆಯ್ಕೆಗಳಿದ್ದು ಇದನ್ನು ನಿರ್ಲಕ್ಷ್ಯ ಮಾಡುವುದೇ ಅಥವಾ ಕಠಿಣ ಕ್ರಮ ಜರುಗಿಸುವುದು. ನಾನು ಏನು ಮಾಡಬೇಕು ಎಂಬುದನ್ನು ನಿಮ್ಮ ವರ್ತನೆ ನಿರ್ಧರಿಸಲಿದೆ. ಹಾಗಾಗಿ ಸದಸ್ಯರು ಸದನದ ಒಳಗೆ ಎಚ್ಚರವಾಗಿರಿ ಎಂದು ನಾಯ್ಡು ಎಚ್ಚರಿಸಿದ್ದಾರೆ.

**ಗದ್ದಲದ ಗೂಡು**: ಮುಂಗಾರು ಅಧಿವೇಶನದಲ್ಲಿ ಪ್ರತಿಪಕ್ಷಗಳ ಪ್ರತಿಭಟನೆ, ಗದ್ದಲ ನಿಲ್ಲದ ಕಾರಣ ಲೋಕಸಭೆ ಮತ್ತು ರಾಜ್ಯಸಭೆ ಕಲಾಪವನ್ನು ಮುಂದೂಡಲಾಗಿದೆ. ಪೆಗಾಸಸ್ ವಿವಾದ ಕೃಷಿ ಮಸೂದೆಗಳ ವಿಷಯ ಹಾಗೂ ಬೆಲೆ ಏರಿಕೆಯ ವಿಷಯಗಳಲ್ಲಿ ಪ್ರತಿಪಕ್ಷಗಳು ನಿರಂತರವಾಗಿ ಪ್ರತಿಭಟನೆ ಮುಂದುವರೆಸಿದೆ.

ಸೀಮಿತ ಹೊಣೆಗಾರಿಕೆ ಸಹಭಾಗಿತ್ವ (ತಿದ್ದುಪಡಿ) ಮಸೂದೆ, 2021 ಮತ್ತು ಠೇವಣಿ ವಿಮೆ ಮತ್ತು ಸಾಲ ಖಾತರಿ ನಿಗಮ (ತಿದ್ದುಪಡಿ) ಮಸೂದೆ 2021ಯನ್ನು ಮಂಡಿಸಿ ಧ್ವನಿ ಮತದ ಮೂಲಕ ಅಂಗೀಕರಿಸಲಾಯಿತು. ಈ ನಡುವೆ ಕೃಷಿ ಸಚಿವ ನರೇಂದ್ರ ಸಿಂಗ್ ತೋಮರ ತೆಂಗು ಅಭಿವೃದ್ಧಿ ಮಂಡಳಿ (ತಿದ್ದುಪಡಿ) ಮಸೂದೆ ಪರಿಗಣಿಸುವ ನಿರ್ಣಯವನ್ನು ಮಂಡಿಸಿದ್ದಾರೆ.

ಆಧಾರ:–ಉದಯವಾಣಿ, ದಿನಾಂಕ:31.07.2021

## 20. ಪಕ್ಷಾಂತರ ನಿಷೇಧ ಕಾಯ್ದೆ: ವರದಿ ಶೀಘ್ರ ಸಲ್ಲಿಕೆ

ವಿಧಾನಸಭೆಯಲ್ಲಿ ಕ್ರಿಯಾಶೀಲತೆ ಹಾಗೂ ಕಲಾಪಗಳಿಗೆ ಹಾಜರಿ ಮತ್ತು ಚರ್ಚೆಗಳಲ್ಲಿ ಸಕ್ರಿಯ ಪಾಲ್ಗೊಳ್ಳುವಿಕೆ ಗುರುತಿಸಿ ಪ್ರೋತ್ಸಾಹಿಸಲು 'ಅತ್ಯುತ್ತಮ ಶಾಸಕ ಪ್ರಶಸ್ತಿ ನೀಡಲಾಗುವುದು ಎಂದು ಸಭಾಧ್ಯಕ್ಷರವರು ತಿಳಿಸಿದ್ದಾರೆ.

ಎರಡು ವರ್ಷದ ಸಾಧನೆಯ ಕಿರುಹೊತ್ತಿಗೆ ಬಿಡುಗಡೆ ಮಾಡಿ ಮಾತನಾಡಿ, ಸದನದಲ್ಲಿ ಮೌಲ್ಯಯುತ ಮತ್ತು ಸತ್ವಯುತ ವಿಷಯಗಳ ಮಂಡನೆ ಸೇರಿ ಕ್ರಿಯಾಶೀಲತೆಯಿಂದ ಕೆಲಸ ಮಾಡುವವರಿಗೆ ಅತ್ಯುತ್ತಮ ಶಾಸಕ ಪ್ರಶಸ್ತಿ ನೀಡಲಾಗುವುದು. ಇದಕ್ಕಾಗಿ ಮಾರ್ಗಸೂಚಿ ನಿಗದಿಯಾಗಿದೆ ಎಂದು ಹೇಳಿದರು.

ಮುಂದಿನ ವಿಧಾನಸಭೆ ಅಧಿವೇಶನದಲ್ಲಿ ಈ ಕುರಿತ ಪ್ರಸ್ತಾವನೆ ಮಂಡಿಸಲು ಸಿದ್ಧತೆ ನಡೆದಿದೆ ಎಂದು ತಿಳಿಸಿದ ಅವರು, ಶಾಸಕರನ್ನು ಸಕ್ರಿಯರನ್ನಾಗಿಸಲು ಇದು ಸಹಕಾರಿಯಾಗಿದೆ ಎಂದು ತಿಳಿಸಿದರು.

**ಶೀಘ್ರವೇ ಸಲ್ಲಿಕೆ:** ಪಕ್ಷಾಂತರ ನಿಷೇಧ ಕಾಯ್ದೆ ಹಾಗೂ ಸ್ಪೀಕರ್ ಅಧಿಕಾರ (ಪೀಠಾಸೀನ ಅಧಿಕಾರಿಗಳ) ಬಲವರ್ಧನೆ ಉದ್ದೇಶದ ಸಂವಿಧಾನದ 10ನೇ ಪರಿಚ್ಛೇದ ತಿದ್ದುಪಡಿ ಕರಡು ವರದಿಗೆ ಅಂತಿಮ ಸ್ವರೂಪ ನೀಡಲಾಗಿದ್ದು, ಸದ್ಯದಲ್ಲಿ ಲೋಸಭಾಧ್ಯಕ್ಷರಿಗೆ ಸಲ್ಲಿಕೆಯಾಗುವುದು ಎಂದು ಹೇಳಿದರು.

ಸದನದಲ್ಲಿ ಸದಸ್ಯರ ನಡವಳಿಕೆ, ಶಿಸ್ತು ಮತ್ತು ಸಭ್ಯತೆ ಕುರಿತ ನಿಯಮಾವಳಿಗೆ ತಿದ್ದುಪಡಿ ಶಿಫಾರಸ್ಸು ಸಹ ಸಿದ್ದವಾಗಿದ್ದು ಮುಂದಿನ ಅಧಿವೇಶನದಲ್ಲಿ ಮಂಡಿಸಲಾಗುವುದು ಎಂದು ತಿಳಿಸಿದರು. ನಾಡಿನ ಜನರ ಆಶೋತ್ತರಗಳಿಗೆ ಸದನ ಸ್ಪಂದಿಸಿದ್ದು, ಅನುಭವ ಮಂಟಪ ಮಾದರಿಯಲ್ಲಿ ಚಿಂತನ–ಮಂಥನ, ನಡೆದಾಗ ಮಾತ್ರ ಬೌದ್ಧಿಕ ವಿಕಾಸವಾಗಲಿದೆ. ವರ್ಷದಲ್ಲಿ ಕನಿಷ್ಠ 60 ದಿನಗಳ ಕಾಲ ಅಧಿವೇಶನ ನಡೆಸಬೇಕೆಂಬ ನಿಯಮ ಕೊರೋನಾದಿಂದಾಗಿ ಸಾಧ್ಯವಾಗಿಲ್ಲ ಎಂದು ತಿಳಿಸಿದರು.

ಎರಡು ವರ್ಷಗಳಲ್ಲಿ ಒಟ್ಟು ಐದು ಅಧಿವೇಶನ ನಡೆದು 54 ದಿನಗಳಲ್ಲಿ 272 ಗಂಟೆಗಳ ಕಲಾಪ ನಡೆದಿದೆ. 98 ವಿಧೇಯಕಗಳ ಮಂಡನೆಯಾಗಿ 96 ವಿಧೇಯಕಗಳ ಚರ್ಚೆ ಹಾಗೂ ಅಂಗೀಕಾರವಾಗಿದೆ. ಒಟ್ಟು 173 ಸದಸ್ಯರು ಕಲಾಪಗಳಲ್ಲಿ ಭಾಗಿಯಾಗಿದ್ದಾರೆ. ದೆಹಲಿ ಮೂಲದ ಪಾಲಿಸಿ ರೀಸರ್ಚ್ ಸ್ಟಡೀಸ್ ಸಮೀಕ್ಷೆ ಪ್ರಕಾರ ವಿಧಾನಸಭೆ ಅಧಿವೇಶನ ನಡೆಸಿರುವ ರಾಜ್ಯಗಳಲ್ಲಿ ಕರ್ನಾಟಕ ಅಗ್ರಸ್ಥಾನದಲ್ಲಿದೆ ಎಂದು ತಿಳಿಸಿದರು. ವಿಧಾನಸಭೆ ಕಾರ್ಯದರ್ಶಿ ವಿಶಾಲಾಕ್ಷಿ ಸೇರಿದಂತೆ ಅಧಿಕಾರಿಗಳು ಉಪಸ್ಥಿತರಿದ್ದರು.

ಆಧಾರ: ಉದಯವಾಣಿ, ದಿನಾಂಕ:01.08.2021.

## 21. ಇ–ಕಲಾಪಕ್ಕೆ ಅಧಿಕಾರಿಗಳ ಅಡ್ಡಿ: ಸ್ಪೀಕರ್

ಸಂಪೂರ್ಣ ಕಾಗದರಹಿತವಾಗಿ ವಿಧಾನಮಂಡಲವನ್ನು ನಡೆಸುವ ವ್ಯವಸ್ಥೆಯಾದ ಇ–ವಿಧಾನವನ್ನು ಕೇರಳ, ಅಸ್ಸಾಂ ರಾಜ್ಯಗಳ ವಿಧಾನಸಭೆಗಳು ಅಳವಡಿಸಿಕೊಂಡಿವೆ. ಮಾಹಿತಿ ತಂತ್ರಜ್ಞಾನದಲ್ಲಿ ಮುಂಚೂಣಿಯಲ್ಲಿರುವ ಕರ್ನಾಟಕದಲ್ಲಿ ಈ ವ್ಯವಸ್ಥೆ ಅಳವಡಿಸಲು ಅಧಿಕಾರಶಾಹಿ ಅಡ್ಡಿಯಾಗಿದೆ ಎಂದು ಸಭಾಧ್ಯಕ್ಷರವರು ಬೇಸರಿಸಿದ್ದಾರೆ.

ವಿಧಾನಸೌಧದ ಸಮ್ಮೇಳನ ಸಭಾಂಗಣದಲ್ಲಿ ಏರ್ಪಡಿಸಿದ್ದ ಸಮಾರಂಭದಲ್ಲಿ ವಿಧಾನಸಭೆಯ ಎರಡು ವರ್ಷದ ಸಾಧನೆಯ ಪುಸ್ತಕ ಬಿಡುಗಡೆ ಮಾಡಿ ಮಾತನಾಡಿದ ಅವರು, ಹಣಕಾಸಿನ ಕೊರತೆಯಿಂದ ಇ–ವಿಧಾನ ಅಳವಡಿಕೆ ಸಾಧ್ಯವಾಗಲಿಲ್ಲ. ಮುಂದೆ ಸರ್ಕಾರ ಸಹಕಾರ ನೀಡಿದರೆ ಜಾರಿಗೆ ತರಲಾಗುವುದು ಎಂದು ತಿಳಿಸಿದರು. ರಾಜ್ಯದ ಸಚಿವಾಲಯದಲ್ಲಿ ಇನ್ನು ಬ್ರಿಟಿಷ್ ಆಡಳಿತ ವ್ಯವಸ್ಥೆಯೇ ಮುಂದುವರಿದ್ದಿದು ಇದರ ಕಹಿ ಅನುಭವ ನನಗಾಗಿದೆ ಎಂದು ಅವರು ಅಸಮಾಧಾನ ವ್ಯಕ್ತಪಡಿಸಿದರು.

**ಮಾಧ್ಯಮ ನಿರ್ಬಂಧ ವೈಯುಕ್ತಿಕವಲ್ಲ:** ವಿಧಾನಸಭೆಯಿಂದ ಮಾಧ್ಯಮಗಳನ್ನು ಹೊರಗಿಟ್ಟ ನಿರ್ಧಾರ ವೈಯುಕ್ತಿಕವಾದುದಲ್ಲ. ಅಧಿಕಾರಿಗಳ ವರದಿ ಆಧರಿಸಿ ಲೋಕಸಭಾಧ್ಯಕ್ಷರು ನೀಡಿದ

ಸೂಚನೆಯಂತೆ ಈ ನಿರ್ಧಾರ ಕೈಗೊಳ್ಳಲಾಯಿತು ಎಂದು ಹೇಳಿದರು. ಸದನದಲ್ಲಿ ಅರ್ಥಪೂರ್ಣವಾಗಿ ಚರ್ಚೆ ನಡೆಸುವ ಶಾಸಕರಿಗೆ ಅತ್ಯುತ್ತಮ ಶಾಸಕ ಪ್ರಶಸ್ತಿ ಕೊಡುವ ಚಿಂತನೆ ಇದ್ದು, ಮುಂದಿನ ಅಧಿವೇಶನದಲ್ಲಿ ಇದನ್ನು ಜಾರಿಮಾಡಲಾಗುವುದು. ಸಚಿವಾಲಯದ ಅಧಿಕಾರಿ ಹಾಗೂ ಸಿಬ್ಬಂದಿಗೆ ತರಬೇತಿ ವ್ಯವಸ್ಥೆ ಮಾಡಿದ್ದು, ಕಾರ್ಯದ ವೇಗ ಹೆಚ್ಚಿಸಲಾಗಿದೆ ಎಂದು ವಿವರಿಸಿದರು.

**ಪರಿಷತ್ ಬಗ್ಗೆ ಜನಾಭಿಪ್ರಾಯ ಮೂಡಿಸಲಿ:** ವಿಧಾನ ಪರಿಷತ್‌ಗೆ ಅದರದೇ ಆದ ಇತಿಹಾಸವಿದೆ. ಪರಿಷತ್ ಏಕೆ ಬೇಕು ಎಂಬ ಪ್ರಶ್ನೆ ಉದ್ಭವವಾಗುತ್ತಿದೆ. ಈ ಬಗ್ಗೆ ಪರಿಷತ್ ಸದಸ್ಯರು ಆತ್ಮಾವಲೋಕನ ಮಾಡಬೇಕು. ಪರಿಷತ್ ಬೇಕು ಎಂಬ ಜನಾಭಿಪ್ರಾಯ ಮೂಡಿಸುವ ಹೊಣೆ ಪರಿಷತ್ ಸದಸ್ಯರ ಮೇಲಿದೆ ಎಂದು ಉತ್ತರಿಸಿದರು. ರಾಷ್ಟ್ರ ಮಟ್ಟದ ಸಂಶೋಧನಾ ಸಂಸ್ಥೆ ನೀಡಿರುವ ಸಮೀಕ್ಷಾ ವರದಿಯಲ್ಲಿ ಕರ್ನಾಟಕವು ವಿಧಾನಸಭೆ ಅಧಿವೇಶನ ನಡೆಸಿರುವ ರಾಜ್ಯಗಳಲ್ಲಿಯೇ ಅಗ್ರಸ್ಥಾನದಲ್ಲಿದೆ. ಕೊರೋನಾ ಸಂಕಷ್ಟದ ಸಮಯದಲ್ಲೂ 2020 ರಲ್ಲಿ 31ದಿನ ಅಧಿವೇಶನ ನಡೆಸಿ 61 ವಿಧೇಯಕ ಅಂಗೀಕರಿಸಿರುವುದು ಸಂಸದೀಯ ವ್ಯವಸ್ಥೆಯಲ್ಲಿ ಮೈಲಿಗಲ್ಲಾಗಿದೆ ಎಂದರು.

ಆಧಾರ: ಕನ್ನಡ ಪ್ರಭ, ದಿನಾಂಕ:01.08.2021.

## 22. ಪಿ.ವಿ.ಸಿಂಧುವಿಗೆ ಅಭಿನಂದನೆ

ಟೋಕಿಯೋ ಒಲಿಂಪಿಕ್ಸ್‌ನಲ್ಲಿ ಮಹಿಳಾ ಸಿಂಗಲ್ಸ್ ವಿಭಾಗದಲ್ಲಿ ಕಂಚಿನ ಪದಕ ಗೆದ್ದಿರುವ ಪಿ.ವಿ.ಸಿಂಧು ಅವರನ್ನು ಕರ್ನಾಟಕದ ರಾಜ್ಯಪಾಲ ಥಾವರ್ ಚಂದ್ ಗೆಹಲೋತ್ ಹಾಗೂ ಮುಖ್ಯಮಂತ್ರಿಯವರು, ವಿಧಾನ ಸಭೆ ಸಭಾಧ್ಯಕ್ಷರವರು ಅಭಿನಂದಿಸಿದ್ದಾರೆ.

ಕಂಚಿನ ಪದಕಕ್ಕಾಗಿ ನಡೆದ ಪಂದ್ಯದಲ್ಲಿ ಬ್ಯಾಡ್ಮಿಂಟನ್ ತಾರೆ ಪಿ.ವಿ.ಸಿಂಧು ಅವರು ಚೀನಾದ ಹಿ ಬಿಂಗ್ಜಯಾವೊ ವಿರುದ್ಧ ಗೆಲುವು ಸಾಧಿಸಿದ್ದಾರೆ. ಇದರೊಂದಿಗೆ ಒಲಿಂಪಿಕ್ಸ್‌ನಲ್ಲಿ ಸತತವಾಗಿ ಎರಡನೇ ಬಾರಿ ಪದಕ ಗೆದ್ದು, ಜಾಗತಿಕ ಮಟ್ಟದಲ್ಲಿ ಭಾರತದ ಕೀರ್ತಿ ಹೆಚ್ಚುವಂತೆ ಮಾಡಿರುವುದು ಹೆಮ್ಮೆಯ ಸಂಗತಿಯಾಗಿದೆ ಎಂದು ರಾಜ್ಯಪಾಲರು ಟ್ವೀಟರ್ ಮೂಲಕ ಪಿ.ವಿ.ಸಿಂಧು ಅವರಿಗೆ ಅಭಿನಂದನೆ ತಿಳಿಸಿದ್ದಾರೆ.

**ಸ್ಪೀಕರ್ ಅಭಿನಂದನೆ:** ಟೋಕಿಯೋ ಒಲಿಂಪಿಕ್ಸ್‌ನಲ್ಲಿ ಬ್ಯಾಡ್ಮಿಂಟನ್ ಆಟಗಾರ್ತಿ ಪಿ.ವಿ.ಸಿಂಧು ಕಂಚಿನ ಪದಕ ಗೆಲ್ಲುವ ಮೂಲಕ ಭಾರತ ಹೆಮ್ಮೆ ಪಡುವಂತೆ ಮಾಡಿದ್ದಾರೆ ಎಂದು ಸಭಾಧ್ಯಕ್ಷರವರು ರವರು ತಿಳಿಸಿದ್ದಾರೆ.

**ಹೆಮ್ಮೆಯ ವಿಷಯ:** ಕಂಚಿನ ಪದಕಕ್ಕಾಗಿ ನಡೆದ ಪಂದ್ಯದಲ್ಲಿ ಚೀನಾ ಆಟಗಾರ್ತಿಯನ್ನು ಮಣಿಸಿದ ಪಿ.ವಿ.ಸಿಂಧು ಅವರಿಗೆ ಅಭಿನಂದನೆಗಳು. ಒಲಿಂಪಿಕ್ಸ್‌ನಲ್ಲಿ ವೈಯಕ್ತಿಕವಾಗಿ ಎರಡು ಪದಕ ಗೆದ್ದ ದೇಶದ ಮೊದಲ ಆಟಗಾರ್ತಿ ಸಿಂಧು ಎನ್ನುವುದು ಹೆಮ್ಮೆಯ ವಿಷಯ ಎಂದು ಮುಖ್ಯಮಂತ್ರಿಯವರು ತಿಳಿಸಿದ್ದಾರೆ.

ಆಧಾರ: ಉದಯವಾಣಿ, ದಿನಾಂಕ:02.08.2021.

## 23. ಸದನದ ಕಲಾಪಗಳ ಸಂಸ್ಕೃತಿಯು ಗದ್ದಲದ ಸಂಸ್ಕೃತಿಯತ್ತ...

ಕಳೆದೆರಡು ದಶಕಗಳಿಂದ ಸಂಸತ್ತು ಮತ್ತು ವಿಧಾನಮಂಡಲಗಳ ಚರ್ಚೆಗಳನ್ನು ಗಮನಿಸಿದಲ್ಲಿ ಆಡಳಿತ ಪಕ್ಷದ ಎಲ್ಲಾ ಕ್ರಮಗಳನ್ನು ವಿರೋಧಿಸುವುದೇ ಸರಿಯಾದ ಧೋರಣೆ ಎಂಬ ಭಾವನೆ ಪ್ರತಿಪಕ್ಷಗಳಲ್ಲಿರುವುದು ಕಾಣಿಸುತ್ತದೆ. ಪ್ರತಿಭಟನೆಯ ನೆಪದಲ್ಲಿ ಭಾರತದ ಜನತೆಯ ಆಶೋತ್ತರಗಳನ್ನು, ಸಂಸದೀಯ ಕಲಾಪಗಳ ಮಹತ್ವವನ್ನು, ಪ್ರಜಾಪ್ರಭುತ್ವದ ನಿಲುವುಗಳನ್ನು ಇಂದಿನ ರಾಜಕೀಯ ಪಕ್ಷಗಳು ಬಲಿಕೊಡುತ್ತಿವೆ.

ಪ್ರಜೆಗಳಿಂದ, ಪ್ರಜೆಗಳಿಗಾಗಿ, ಪ್ರಜೆಗಳಿಗೋಸ್ಕರ ಇರುವಂತಹ ಪದ್ಧತಿಯೇ ಪ್ರಜಾಪ್ರಭುತ್ವ. ಇಲ್ಲಿ ಪ್ರಜೆಗಳ ಭಾವನೆ, ಪ್ರಜೆಗಳ ಆಕಾಂಕ್ಷೆ ಮತ್ತು ಆಶೋತ್ತರಗಳ ಉದ್ದೇಶವನ್ನಿಟ್ಟು, ಒಂದು ಸದನದ ಜನಪ್ರತಿನಿಧಿಗಳಾಗಿ ಕರ್ತವ್ಯವನ್ನು ನಿರ್ವಹಿಸುವಂತಹ ವ್ಯವಸ್ಥೆಯೇ ಸಂಸದೀಯ ವ್ಯವಸ್ಥೆ.

ಸಂಸದೀಯ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ರಾಜಕೀಯ ಪಕ್ಷಗಳ ಪಾತ್ರ ಮಹತ್ವದ್ದಾಗಿರುತ್ತದೆ. ರಾಜಕೀಯ ಪಕ್ಷಗಳು ಈ ಸಂಸದೀಯ ವ್ಯವಸ್ಥೆಯ ಬೆನ್ನೆಲುಬು. ಅದರಂತೆ ಭಾರತದ ಸಂವಿಧಾನವು ಚುನಾವಣಾ ಆಯೋಗಕ್ಕೆ ಪ್ರತ್ಯೇಕ ಸ್ಥಾನಮಾನವನ್ನು ನೀಡಿ ದೇಶದಲ್ಲಿ ಮುಕ್ತ ಹಾಗೂ ನ್ಯಾಯೋಚಿತ ಚುನಾವಣೆಯ ಉದ್ದೇಶವನ್ನು ಈಡೇರಿಸಿದೆ. ರಾಷ್ಟ್ರ ಮತ್ತು ಜನರು ಎದುರಿಸುತ್ತಿರುವ ಬಹುರೂಪಿ ಸಮಸ್ಯೆಗಳನ್ನು ನಿಭಾಯಿಸಲು ಸಕ್ರಿಯವಾಗಿ ಶ್ರಮಿಸುವ ವ್ಯವಸ್ಥೆಯೇ ಯಶಸ್ವಿ ಪ್ರಜಾಪ್ರಭುತ್ವ.

ಈ ವ್ಯವಸ್ಥೆಯಲ್ಲಿ ಶಾಸಕಾಂಗವು ಸಾರ್ವಭೌಮ ಮತ್ತು ಸರ್ವೋಚ್ಚ ಅಧಿಕಾರವನ್ನು ಹೊಂದಿದೆ. ಈ ವೇದಿಕೆಗಳು ಜನರ ವಿಶ್ವಾಸವನ್ನು ಗಳಿಸಿಕೊಳ್ಳಬೇಕಾದರೆ ಅವುಗಳು ವ್ಯವಸ್ಥಿತ ರೀತಿಯಲ್ಲಿ ಕಾರ್ಯನಿರ್ವಹಿಸಬೇಕಾದುದು ಅತ್ಯಗತ್ಯ.

ಸಂವಿಧಾನದಲ್ಲಿ ದೇಶದ ಸಂಸತ್ತು ಮತ್ತು ರಾಜ್ಯದ ವಿಧಾನ ಮಂಡಲಗಳಿಗೆ ಅತ್ಯುನ್ನತ ಸ್ಥಾನಮಾನವನ್ನು ನೀಡಿದ್ದು, ಅಲ್ಲಿನ ಸದಸ್ಯರಿಗೆ ಸಂಪೂರ್ಣ ವಾಕ್ ಸ್ವಾತಂತ್ರ್ಯವನ್ನು ಕಲ್ಪಿಸಲಾಗಿದೆ. ಅಂದರೆ ಸದನದ ಕಲಾಪವನ್ನು ಯಾವುದೇ ನ್ಯಾಯಾಲಯದಲ್ಲಿ ಪ್ರಶ್ನಿಸುವಂತಿಲ್ಲ. ಸದನದ ಕಲಾಪಗಳನ್ನು ನಿಯಮಾವಳಿಗಳಂತೆ ನಡೆಸಲು ಸದನದ ಮುಖ್ಯಸ್ಥರಾಗಿ ಸಭಾಧ್ಯಕ್ಷರು ಸ್ವತಂತ್ರ ಹಾಗೂ ನಿಷ್ಪಕ್ಷವಾದ ದೃಷ್ಟಿಕೋನವನ್ನು ಹೊಂದಿರುವಂತೆ ಸಂವಿಧಾನದಲ್ಲಿ ಹಾಗೂ ನಿಯಮಾವಳಿಗಳಲ್ಲಿ ಅವಕಾಶವನ್ನು ಕಲ್ಪಿಸಲಾಗಿದೆ.

ಈ ಸಂಸದೀಯ ವ್ಯವಸ್ಥೆಯಲ್ಲಿ ಪಕ್ಷ ಪದ್ಧತಿಯ ಮೇರೆಗೆ ಆಡಳಿತ ನಡೆಸುವಂತಹ ಆಡಳಿತ ಪಕ್ಷ ಹಾಗೂ ವಿರೋಧ ಪಕ್ಷಗಳಿರುತ್ತವೆ. ಇವುಗಳೆರಡರ ಮುಖ್ಯ ಧ್ಯೇಯ ಕಲ್ಯಾಣ ರಾಜ್ಯವನ್ನು ಸೃಷ್ಟಿಸುವುದೇ ಆಗಿದೆ. ಇವುಗಳು ಒಂದು ವ್ಯವಸ್ಥೆಯ ಎರಡು ಮುಖಗಳಿದ್ದಂತೆ. ಆದರೆ ಕಳೆದೆರಡು ದಶಕಗಳಿಂದ ಸಂಸತ್ತು ಮತ್ತು ವಿಧಾನಮಂಡಲಗಳ ಚರ್ಚೆಗಳನ್ನು ಗಮನಿಸಿದಲ್ಲಿ ಆಡಳಿತ ಪಕ್ಷದ ಎಲ್ಲಾ ಕ್ರಮಗಳನ್ನು ವಿರೋಧಿಸುವುದೇ ಸರಿಯದ ಧೋರಣೆ ಎಂಬ ಭಾವನೆ ಪ್ರತಿಪಕ್ಷಗಳಲ್ಲಿರುವುದು ಕಾಣಿಸುತ್ತದೆ. ಪ್ರತಿಭಟನೆಯ ನೆಪದಲ್ಲಿ ಭಾರತದ ಜನತೆಯ ಆಶೋತ್ತರಗಳನ್ನು, ಸಂಸದೀಯ ಕಲಾಪಗಳ ಮಹತ್ವವನ್ನು, ಪ್ರಜಾಪ್ರಭುತ್ವದ ನಿಲುವುಗಳನ್ನು ಇಂದಿನ ರಾಜಕೀಯ ಪಕ್ಷಗಳು ಬಲಿಕೊಡುತ್ತಿವೆ. ಆಡಳಿತ ಪಕ್ಷವು ತಾನು ಮಾಡಿದ್ದೇ ಸರಿ ಎಂಬ ಧೋರಣೆಯಲ್ಲಿದ್ದರೂ ಅದನ್ನು ಸರಿಪಡಿಸಲು ಸಂಸದೀಯ ಪದ್ಧತಿಯಲ್ಲಿ ಕೆಲವೊಂದು ಮಾರ್ಗೋಪಾಯಗಳನ್ನು ಅಳವಡಿಸಿಕೊಳ್ಳಲಾಗಿದೆ.

ಕಲಾಪ ನಡೆಸಲು ಅವಕಾಶ ನೀಡದಿರುವುದರ ಹಿಂದೆ ಹಲವಾರು ಕಾರಣಗಳಿವೆ. ಅವುಗಳಲ್ಲಿ ಪ್ರಮುಖವಾದವು –

1. ವಿರೋಧ ಪಕ್ಷ ಎಂಬ ಕಾರಣಕ್ಕೋಸ್ಕರ ಹಲವಾರು ಬಾರಿ ಸರ್ಕಾರದ ನಿಲುವು / ನಿರ್ಣಯವನ್ನು ವಿರೋಧಿಸುವಂತಹ ಪ್ರವೃತ್ತಿ.
2. ಸಮಸ್ಯೆಗಳನ್ನು ಸರ್ಕಾರದ ಗಮನಕ್ಕೆ ತರುವ ಸದಾವಕಾಶದಿಂದ ವಂಚಿತರಾಗಿದ್ದೇವೆ ಎನ್ನುವ ಭಾವನೆಯನ್ನು ವಿರೋಧಪಕ್ಷ ಹೊಂದಿರುವುದು.
3. ರಾಜಕೀಯ ಪಕ್ಷಗಳು ತಮ್ಮ ಸದಸ್ಯರನ್ನು ಸದನದ ಶಿಸ್ತು ಹಾಗೂ ಗೌರವಕ್ಕೆ ಧಕ್ಕೆ ಬಾರದಂತೆ ವರ್ತಿಸುವಂತೆ ಮಾಡಲು ವಿಫಲರಾಗಿರುವುದು.
4. ಸದನದ ಕಲಾಪವನ್ನು ಮೊಟಕುಗೊಳಿಸುವ ಸದಸ್ಯರ ವಿರುದ್ಧ ಸಮಯೋಚಿತ ಸೂಕ್ತ ಕ್ರಮಗಳನ್ನು ತೆಗೆದುಕೊಳ್ಳದೇ ಇರುವುದು.
5. ರಾಜಕೀಯ ಪಕ್ಷಗಳು ಆಂತರಿಕವಾಗಿ ತಮ್ಮ ಸದಸ್ಯರಿಗೆ ಸದನದ ನಿಯಮಾವಳಿಗಳನ್ನು ಪಾಲಿಸುವಂತೆ ತರಬೇತಿ ನೀಡದೇ ಇರುವುದು.

6. ಪ್ರತಿಪಕ್ಷವು ಸದನದ ಕಾರ್ಯಕಲಪ ಸಲಹಾ ಸಮಿತಿಯ ಸಭೆಯನ್ನು ಬಹಿಷ್ಕರಿಸುವುದು.

ಸಾಂವಿಧಾನಿಕ ಸಂಸ್ಥೆಗಳು ತಮ್ಮದೇ ಆದ ಪರಂಪರೆ, ಸಂಸ್ಕೃತಿ, ರೀತಿ–ನೀತಿಗಳನ್ನು ಹೊಂದಿವೆ. ಆದರೆ, ಇತ್ತೀಚಿನ ದಿನಗಳಲ್ಲಿ ಈ ಸಂಸ್ಥೆಗಳ ಕಲಾಪಗಳ ಸಂಸ್ಕೃತಿಯು ಗದ್ದಲದ ಸಂಸ್ಕೃತಿಯತ್ತ ಸಾಗುತ್ತಿದೆ. ಆಟದಲ್ಲಿ ಗೆಲ್ಲಲಾರದವನ್ನು ಸುಮ್ಮನೆ ತಕರಾರು ಎತ್ತಿ ಆಟ ನಡೆಯದಂತೆ ಮಾಡುವುದು. ಸರಿಯಲ್ಲ. ಈ ರೀತಿ ಮಾಡುತ್ತಲೇ ಹೋದರೆ ಆಟ ಸುಸೂತ್ರವಾಗಿ ನಡೆಯುವುದೇ ಇಲ್ಲ. ಫಲಿತಾಂಶ ದೊರೆಯುವುದಿಲ್ಲ.

ನೆಹರೂರವರು 'ಸಂಸತ್ತಿನಲ್ಲಿ ಪ್ರಬಲವಾದ ವಿರೋಧ ಪಕ್ಷವಿರಬೇಕು' ಎಂದು ಬಯಸಿದ್ದರು. ಆದರೆ ಕಲಪ ನಡೆಸಲು ಬಿಡಲಾರದಂತಹ ವಿರೋಧ ಪಕ್ಷವನ್ನು ನಿರೀಕ್ಷಿಸಿರಲಿಲ್ಲ. ವಿರೋಧ ಪಕ್ಷಗಳ ಧ್ವನಿ ಎತ್ತರದಲ್ಲಿರಬೇಕು. ಆದರೆ ತಾರ್ಕಿಕ ಚರ್ಚೆಯ ನೆಲೆಗಟ್ಟಿನ ಮೇಲೆ ಆ ಧ್ವನಿ ನಿಂತಿರಬೇಕು. ಸಾರ್ವಜನಿಕ ಹೊಣೆಗಾರಿಕೆ, ಪರಿಣಾಮಕಾರಿ ಚರ್ಚೆ, ಆಡಳಿತ ಪಕ್ಷವನ್ನು ಇಕ್ಕಟ್ಟಿಗೆ ಸಿಲುಕಿಸುವಂತಹ ಸಂವಾದದ ಅಧಿವೇಶನಗಳನ್ನು ಪ್ರಬುದ್ಧ ಜನತೆ ನಿರೀಕ್ಷಿಸುತ್ತಿದ್ದಾರೆ.

'ಆಡಳಿತ ಪಕ್ಷದಿಂದ ಮೌಲ್ಯರಹಿತ ಅಧಿಕಾರ ಬಳಕೆ, ವಿರೋಧ ಪಕ್ಷಗಳ ಸಂಯಮ ರಹಿತ ನಡವಳಿಕೆ ಹಾಗೂ ಸಭಾಧ್ಯಕ್ಷರ ಪಕ್ಷಪಾತಿ ಧೋರಣೆ ಸಂಸತ್ತಿನ ದೋಷಗಳ ಅಂಶಗಳು' ಎಂದು ಅರುಣ್ ಶೌರಿ ಹೇಳಿರುವ ಮಾತಿನಂತೆ 'ವಿರೋಧ ಪಕ್ಷದ ಸಂಯಮರಹಿತ ನಡವಳಿಕ ಮಾತ್ರ ಸಂಸತ್ ಕಲಾಪ ನಡೆಯದಿರಲು ಕಾರಣವಾಗಿದೆ. ವಿರೋಧ ಪಕ್ಷ ಸದನದಿಂದ ಹೊರಹೋಗುವುದು ಕೊನೆಯ ಅಸ್ತ್ರವಾಗಬೇಕು. ಕ್ಷುಲಕ ಕಾರಣಗಳಿಗಾಗಿ ಸದನವನ್ನು ಬಹಿಷ್ಕರಿಸುವುದು, ಶೂನ್ಯವೇಳೆಯ ದುರುಪಯೋಗ, ಅರ್ಥವಿಲ್ಲದ ಗೊತ್ತುವಳಿಗಳ ಮಂಡನೆ ವಿರೋಧ ಪಕ್ಷಗಳ ಸಾಮಾನ್ಯ ನಡೆಯಾಗಿದೆ. ಹಕ್ಕುಚ್ಯುತಿಗಳ ಮಂಡನೆಯೂ ಇದೇ ರೀತಿಯಾಗಿದೆ. ಸಚಿವರು ಉದ್ದೇಶಪೂರ್ವಕವಾಗಿ ಸುಳ್ಳು ಹೇಳಿದರೆ, ಸದನದ ಹಕ್ಕು ಉಲ್ಲಂಘಿಸಿರುವುದು ಸ್ಪಷ್ಟವಾಗಿ ಗೋಚರವಾದರೆ ಹಕ್ಕುಚ್ಯುತಿ ಮಂಡಿಸಬೇಕು. ಸಣ್ಣ ಪುಟ್ಟ ವಿಷಯಗಳಿಗೆಲ್ಲ ಮಂಡಿಸಿದರೆ ಸಾರ್ವಜನಿಕರು ಸದನವನ್ನು ಗಂಭೀರವಾಗಿ ಪರಿಗಣಿಸದಿರಲು ಕಾರಣವಾಗಬಹುದು.

**ಶಾಸನ ಸಭೆಯ ಸುಗಮ ಕಲಾಪಕ್ಕೆ ಈ ಅಂಶಗಳನ್ನು ನೆರವಾಗಬಹುದು:**

1. ಶಾಸನ ಸಭೆಯ ಅಧಿವೇಶನದ ಕಾಲಾವಧಿಯನ್ನು ಹೆಚ್ಚಿಸುವುದು.
2. ಈಗಿರುವ 3 ಅಧಿವೇಶನದ ಪದ್ಧತಿಯನ್ನು 4 ಅಧಿವೇಶನಗಳಾಗಿ ಮಾರ್ಪಡಿಸುವುದು (ಜನವರಿಯಿಂದ ಮಾರ್ಚ್‌ವರೆಗೆ ಬಜೆಟ್ ಅಧಿವೇಶನ, ಏಪ್ರಿಲ್‌ನಿಂದ ಜೂನ್‌ವರೆಗೆ ಬೇಸಿಗೆ ಕಾಲದ ಅಧಿವೇಶನ, ಜುಲೈನಿಂದ ಸೆಪ್ಟೆಂಬರ್‌ವರೆಗೆ ಮುಂಗಾರು ಅಧಿವೇಶನ ಮತ್ತು ಅಕ್ಟೋಬರ್‌ನಿಂದ ಡಿಸೆಂಬರ್‌ವರೆಗೆ ಚಳಿಗಾಲದ ಅಧಿವೇಶನ).
3. ಸದನದ ಕಾರ್ಯಕಲಾಪವನ್ನು ಬಹಿಷ್ಕರಿಸುವ ಹಾಗೂ ಮೊಟಕುಗೊಳಿಸುವ ಸದಸ್ಯರ ವಿರುದ್ಧ ತಕ್ಷಣವೇ ಕಠಿಣ ಕ್ರಮವನ್ನು ಜರುಗಿಸುವುದು.
4. ಕಾರ್ಯಕಲಾಪಗಳ ನಿಯಮಾವಳಿಗಳನ್ನು ಸೂಕ್ತ ತಿದ್ದುಪಡಿ ಮೂಲಕ ಹೆಚ್ಚು ಬಲಪಡಿಸುವುದು.
5. ಪ್ರತಿಪಕ್ಷಗಳು ಪ್ರತಿಪಾದಿಸುವ ವಿಷಯಗಳನ್ನು ಚರ್ಚಿಸುವ ಸಲುವಾಗಿ ಸದನದಲ್ಲಿ ಪ್ರತ್ಯೇಕವಾಗಿ ದಿನ ಹಾಗೂ ಸಮಯವನ್ನು ನಿಗದಿಪಡಿಸುವುದು.

ವಿರೋಧ ಪಕ್ಷಗಳು ಇರುವುದೇ ಟೀಕಿಸಲು ಎಂಬುದನ್ನು ಮರೆತು ಪ್ರಜೆಗಳ ಹಿತ ಕಾಪಾಡುವಲ್ಲಿ ಆಡಳಿತ ಪಕ್ಷಕ್ಕೆ ಸಾಥ್ ನೀಡಬೇಕು. ಹಾಗಾದಾಗ ಮಾತ್ರ ಸುಸೂತ್ರ ಆಡಳಿತ ಹಾಗೂ ಸುಗಮವಾಗಿ ಕಲಾಪ ನಡೆಯುತ್ತದೆ. ಆದರೆ, ಸಂಸತ್ತು ಮತ್ತು ವಿಧಾನ ಮಂಡಲಗಳ ಇತ್ತೀಚಿನ ಕಲಾಪಗಳನ್ನು ಗಮನಿಸಿದಲ್ಲಿ ಯಾವುದೋ ಒಂದೆರಡು ವಿಷಯಗಳನ್ನು ಹಿಡಿದುಕೊಂಡು ಆಡಳಿತ ಪಕ್ಷವನ್ನು

ದುರ್ಬಲಗೊಳಿಸಬಹುದೆಂಬ ನಿಲುವಿನಲ್ಲಿ, ಕಾರ್ಯಕಲಾಪಗಳನ್ನು ಬಹಿಷ್ಕರಿಸುವುದು, ಇಡೀ ಸದನದ ಸದಸ್ಯರುಗಳ ಹಕ್ಕಿಗೆ ಧಕ್ಕೆ ತಂದಂತೆ ಆಗುವುದಿಲ್ಲವೇ? ಆಡಳಿತ / ಪ್ರತಿಪಕ್ಷಗಳು ತಮ್ಮ ಹೊಣೆಗಾರಿಕೆಗಳನ್ನು ಅರಿತು ಸಂಸತ್ತು / ವಿಧಾನ ಮಂಡಲಗಳ ಕಾರ್ಯಕಲಾಪಗಳು ಸಂಸದೀಯ ವ್ಯವಸ್ಥೆಯ ಧ್ಯೇಯೋದ್ದೇಶಗಳಿಗೆ ಅನುಗುಣವಾಗಿ ನಡೆಯುವಂತೆ ಮಾಡಬೇಕು. ಈ ದಿಸೆಯಲ್ಲಿ ಜನಪ್ರತಿನಿಧಿಗಳೆಲ್ಲರೂ ತಮ್ಮ ತಮ್ಮ ನಡೆಯನ್ನು ಪರಿಶೀಲಿಸಿಕೊಳ್ಳುವ ಅಗತ್ಯವಿದೆ. ಅದೇ ರೀತಿ ಎಲ್ಲಾ ರಾಜಕೀಯ ಪಕ್ಷಗಳು ತಮ್ಮ ಪಕ್ಷದ ಅಭ್ಯರ್ಥಿಗಳನ್ನು ಆಯ್ಕೆ ಮಾಡುವ ಹಂತದಿಂದ ಹಿಡಿದು ಶಾಸಕಾಂಗಕ್ಕೆ ಆಯ್ಕೆಯಾದ ಮೇಲೂ ರಾಜಕೀಯ ಶಿಕ್ಷಣ, ಸದನದಲ್ಲಿ ನಡವಳಿಕೆ, ಪ್ರಜಾಪ್ರಭುತ್ವದ ಮೌಲ್ಯಗಳು ಮತ್ತು ಅವರ ನೈತಿಕ ಬೆಳವಣಿಗೆಗೆ ಮಹತ್ವ ನೀಡುವಂತಹ ವ್ಯವಸ್ಥೆಯನ್ನು ಜಾರಿಗೆ ತರುವಲ್ಲಿ ಗುರುತರವಾದ ಪಾತ್ರವಹಿಸಬೇಕು. ಈ ದಿಸೆಯಲ್ಲಿ ತ್ವರಿತ ಕ್ರಮ ಅಗತ್ಯವಿದೆ ಎನ್ನುವುದು ನನ್ನ ಬಲವಾದ ಒತ್ತಾಯ.

**ಲೇಖಕರು:ವಿಶ್ವೇಶ್ವರ ಹೆಗಡೆ, ಕಾಗೇರಿ,**

**ವಿಧಾನಸಭಾ ಸಭಾಧ್ಯಕ್ಷರು,**

ಆಧಾರ: ಪ್ರಜಾವಾಣಿ, ದಿನಾಂಕ: 07.08.2021

## 24. ಸಂಯುಕ್ತ ಕರ್ನಾಟಕ ಪತ್ರಿಕಾ ಕಚೇರಿಗೆ ಸಭಾಪತಿ ಹೊರಟ್ಟಿ ಭೇಟಿ

ಸಂಯುಕ್ತ ಕರ್ನಾಟಕ ನಾಡಿನ ಪ್ರಗತಿ ಹಾಗೂ ಬದುಕಿನ ಮೌಲ್ಯಗಳಿಗೆ ನೀಡುತ್ತಿರುವ ಕೊಡುಗೆ ಅಪಾರ ಎಂದು ಸಭಾಪತಿ ಬಸವರಾಜ ಹೊರಟ್ಟಿ ಹೇಳಿದರು.

ಪತ್ರಿಕಾ ಕಾರ್ಯಾಲಯಕ್ಕೆ ಭೇಟಿ ನೀಡಿದ್ದ ಅವರು ಸದಾ ಜನಪರವಾಗಿ ಯೋಚಿಸುವ ಕನ್ನಡ ಪತ್ರಿಕೋದ್ಯಮದ ಹಿರಿಯಣ್ಣನಾದ ಪತ್ರಿಕೆ ಸಮಾಜದ ಆರೋಗ್ಯಕ್ಕಾಗಿ ಶ್ರಮಿಸುತ್ತಿದೆ ಎಂದು ಮೆಚ್ಚುಗೆ ವ್ಯಕ್ತಪಡಿಸಿದರು. ಸಭಾಪತಿಗಳನ್ನು ಸ್ವಾಗತಿಸಿದ ಲೋಕ ಶಿಕ್ಷಣ ಟ್ರಸ್ಟ್ ಧರ್ಮದರ್ಶಿ ಯು.ಬಿ. ವೆಂಕಟೇಶ್, ಪತ್ರಿಕಾ ಬಳಗದ ಪ್ರಕಟಣೆಗಳನ್ನು ನೀಡಿ ಗೌರವಿಸಿದರು. ಈ ಸಂದರ್ಭದಲ್ಲಿ ಹಿರಿಯ ಛಾಯಾಗ್ರಾಹಕ ಶಶಿ ಸಾಲಿ ಉಪಸ್ಥಿತರಿದ್ದರು.

ಆಧಾರ: ಸಂಯುಕ್ತ ಕರ್ನಾಟಕ, ದಿನಾಂಕ:08.08.2021



**ದಿನಾಂಕ: 07.08.2021 ರಂದು ಕರ್ನಾಟಕ ವಿಧಾನ ಪರಿಷತ್ತಿನ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರು ಇಂದು ಹುಬ್ಬಳ್ಳಿಯ ಸಂಯುಕ್ತ ಕರ್ನಾಟಕ ಪತ್ರಿಕಾ ಕಾರ್ಯಾಲಯಕ್ಕೆ ಭೇಟಿ ನೀಡಿದ್ದರು. ಈ ಸಂದರ್ಭದಲ್ಲಿ ವಿಧಾನ ಪರಿಷತ್ತಿನ ಹಿರಿಯ ಸದಸ್ಯರಾದ ಶ್ರೀ ಯು.ಬಿ ವೆಂಕಟೇಶ್ ರವರು ಹೂ ಗುಚ್ಚ ನೀಡಿ ಸ್ವಾಗತಿಸಿದರು.**

## 25. ನನ್ನ ಜಿಲ್ಲೆಗೂ ಒಲಿಂಪಿಕ್ ಕೀರ್ತಿ: ಸಭಾಧ್ಯಕ್ಷ ಕಾಗೇರಿ

ಒಲಿಂಪಿಕ್ಸ್‌ನಲ್ಲಿ ಚಿನ್ನದ ಪದಕ ಪಡೆದ ನೀರಜ್ ಚೋಪ್ರಾ ಅವರ ತರಬೇತುದಾರ ಕರ್ನಾಟಕದ ಕಾಶಿನಾಥ್ ನಾಯಕ್ ಅವರಿಗೆ ರೂ.10 ಲಕ್ಷ ನಗದು ಬಹುಮಾನ ಘೋಷಿಸಿರುವ ಸರ್ಕಾರದ ನಿರ್ಧಾರಕ್ಕೆ ವಿಧಾನ ಸಭಾಧ್ಯಕ್ಷರು ಮೆಚ್ಚುಗೆ ಸೂಚಿಸಿದ್ದಾರೆ.

ಈ ಕುರಿತು ಪತ್ರಿಕಾ ಪ್ರಕಟಣೆ ಹೊರಡಿಸಿರುವ ಅವರು ಸ್ವರ್ಣ ಇತಿಹಾಸ ಬರೆದ ಕ್ರೀಡಾಪಟುವಿನ ತರಬೇತುದಾರರಿಗೆ ನಗದು ಬಹುಮಾನ ಘೋಷಿಸುವುದು ಉದಾತ್ತ, ಪ್ರೋತ್ಸಾಹದಾಯಕ ಮತ್ತು ಪ್ರೇರಣಾತ್ಮಕವಾಗಿದೆ. ಇದು ಸರ್ಕಾರದ ಕಡೆಯಿಂದ ಉತ್ತೇಜನವಾಗಿದೆ ತರಬೇತುದಾರರುಗಳ ಆತ್ಮವಿಶ್ವಾಸವನ್ನು ಹೆಚ್ಚಿಸುವಲ್ಲಿ ಮತ್ತು ಅವರ ಸಂಪೂರ್ಣ ಸಾಮರ್ಥ್ಯವನ್ನು ಧಾರೆ ಎರೆಯಲು ಅವರನ್ನು ಪ್ರೇರೇಪಿಸುವಲ್ಲಿ ಬಹು ದೂರ ಸಾಗುತ್ತದೆ ಎಂದು ತಿಳಿಸಿದ್ದಾರೆ. ಕಾಶಿನಾಥ್ ಅವರು ತಮ್ಮ ತವರು ಶಿರಸಿಯವರು ಎಂಬುದನ್ನು ವಿಶ್ವೇಶ್ವರ ಹೆಗಡೆ, ಕಾಗೇರಿ ಹೆಮ್ಮೆಯಿಂದ ಸ್ಮರಿಸಿದ್ದಾರೆ. ಒಲಿಂಪಿಕ್‌ನಲ್ಲಿ ಚಿನ್ನದ ಪದಕ ವಿಜೇತ ಚೋಪ್ರಾಗೆ ನನ್ನ ಊರಿನವರು ತರಬೇತುದಾರರಾಗಿದ್ದಾರೆಂಬ ಹೆಮ್ಮೆ ನನಗಿದೆ. ನಾನು ಕೂಡ ಕರ್ನಾಟಕ ರಾಜ್ಯದ ಸಮಸ್ತ ಜನತೆಯ ಆದರಲ್ಲೂ ಉತ್ತರ ಕನ್ನಡ ಜಿಲ್ಲೆಯ ಲಕ್ಷಾಂತರ ಜನರ ಜೊತೆಗೆ ಆತ್ಯಂತ ಆನಂದ ಅನುಭವಿಸಿದ್ದೇನೆಂದು ಸಭಾಧ್ಯಕ್ಷರು ತಿಳಿಸಿದರು.

ಆಧಾರ: ಉದಯವಾಣಿ, ದಿನಾಂಕ:09.08.2021

## 26. ವಿಧಾನ ಪರಿಷತ್ ಮುಖ್ಯ ಸಚೇತಕರಾಗಿ ಕವಟಗಿಮಠ ಮಹಾಂತೇಶ ನೇಮಕ

ವಿಧಾನ ಪರಿಷತ್ ಸದಸ್ಯರಾದ ಕವಟಗಿಮಠ ಮಹಾಂತೇಶ್ ಮಲ್ಲಿಕಾರ್ಜುನ ಅವರನ್ನು ವಿಧಾನ ಪರಿಷತ್‌ನ ಸರ್ಕಾರಿ ಮುಖ್ಯ ಸಚೇತಕರನ್ನಾಗಿ ಜುಲೈ-27 ರಿಂದಲೇ ಪೂರ್ವಾನ್ವಯವಾಗುವಂತೆ ನೇಮಕ ಮಾಡಿ ಪರಿಷತ್ ಕಾರ್ಯದರ್ಶಿ ಕೆ.ಆರ್.ಮಹಾಲಕ್ಷ್ಮಿ ಆದೇಶ ಹೊರಡಿಸಿದ್ದಾರೆ.

ಆಧಾರ: ವಿಜಯವಾಣಿ, ದಿನಾಂಕ:12.08.2021




**ದಿನಾಂಕ: 12.08.2021 ರಂದು ಕರ್ನಾಟಕ ವಿಧಾನಪರಿಷತ್ತಿನ ಸರ್ಕಾರಿ ಮುಖ್ಯ ಸಚೇತಕರಾಗಿ ಮತ್ತೊಮ್ಮೆ ನೇಮಕಗೊಂಡ ಶ್ರೀ ಮಹಾಂತೇಶ ಕವಟಗಿ ಮಲ್ಲಿಕಾರ್ಜುನ ರವರು ಇಂದು ಕರ್ನಾಟಕ ವಿಧಾನ ಪರಿಷತ್ತಿನ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರನ್ನು ಭೇಟಿ ಮಾಡಿದರು. ಈ ಸಂದರ್ಭದಲ್ಲಿ ಮಾನ್ಯ ಸಭಾಪತಿಯವರು ಹೂಗುಚ್ಛ ನೀಡಿ ಶುಭಾಶಯ ಕೋರಿದರು.**

## 27. ಜನಪ್ರಿಯತೆಗಿಂತ ಜನೋಪಯೋಗಿ ಆಡಳಿತ ಮುಖ್ಯ

ಜನಪ್ರಿಯವಾಗುವುದು ಸುಲಭ, ಜನಪ್ರಿಯವಾಗುವುದಕ್ಕಿಂತ ಜನೋಪಯೋಗಿ ಆಗುವುದು ಬಹಳ ಮುಖ್ಯ. ಜನೋಪಯೋಗಿ ಆಡಳಿತವನ್ನು ನಾನು ನೀಡಲಿದ್ದೇವೆ ಎಂದು ಮುಖ್ಯಮಂತ್ರಿಯವರು ತಿಳಿಸಿದರು.

ವಿಧಾನಮಂಡಲದ ವತಿಯಿಂದ ವಿಧಾನಸೌಧದ ಬ್ಯಾಂಕ್ವೆಟ್ ಹಾಲ್‌ನಲ್ಲಿ ನಡೆದ ಸ್ವಾತಂತ್ರ್ಯೋತ್ಸವದ ಅಮೃತ ಮಹೋತ್ಸವ ಕಾರ್ಯಕ್ರಮದಲ್ಲಿ ಪಾಲ್ಗೊಂಡು ಮಾತನಾಡಿದರು. ದೇಶಕ್ಕೆ ಸ್ವಾತಂತ್ರ್ಯ ದೊರೆತು 75 ವರ್ಷಗಳಾಗಿವೆ. ದೇಶವೊಂದಕ್ಕೆ 75 ವರ್ಷವೆಂದರೆ ಬಾಲ್ಯವನ್ನು ಮುಗಿಸಿ ಯೌವ್ವನಕ್ಕೆ ಕಾಲಿರಿಸಿದಂತೆ, ಯೌವ್ವನದ ನವ ಚೇತನ, ಹೊಸ ಆಸೆಗಳು ತುಡಿತ, ಕನಸು, ಸಾಧಿಸುವ ಹಂಬಲವಿರುವ ಘಟ್ಟಕ್ಕೆ ದೇಶ ತಲುಪಿದೆ. ಸ್ವಾತಂತ್ರ್ಯ ಮನುಷ್ಯನ ಸಹಜ ಗುಣಧರ್ಮ.

ಬ್ರಿಟಿಷರು ಅಂದು ಅಂಥ ಪ್ರಮುಖ ಗುಣಧರ್ಮವನ್ನು ಹತ್ತಿಕ್ಕಿದ್ದರು ಎಂದರೆ ಸ್ವಾತಂತ್ರ್ಯ ಪೂರ್ವದ ದೇಶ ಹೇಗಿತ್ತು ಎಂದು ಆಲೋಚಿಸಬೇಕು. ಸ್ವಾತಂತ್ರ್ಯ ಹೋರಾಟಕ್ಕೆ ಧಾರ್ಮಿಕ ಚಳುವಳಿಯ ಹಿನ್ನೆಲೆ ಇದೆ. ಆರವಿಂದರು, ಗೋಪಾಲ ಕೃಷ್ಣ ಗೋಖಲೆ, ಲೋಕಮಾನ್ಯ ತಿಲಕ್, ವೀರ ಸಾವರ್ಕರ್ ಮುಂತಾದವರು ಹೋರಾಟಕ್ಕೆ ಸಾತ್ವಿಕ ಚಿಂತನೆ ನೀಡಿದರೆ ಗಾಂಧೀಜಿ ಅಹಿಂಸೆ ಮತ್ತು ಸತ್ಯ ಎಂಬ ಎರಡು ಆಸ್ತ್ರಗಳನ್ನು ನೀಡಿದರು. ಸಾತ್ವಿಕತೆ, ಕಾರ್ಯಾಚರಣೆ, ಸತ್ಯ ಅಹಿಂಸೆಗಳು ನಮಗೆ ಸ್ವಾತಂತ್ರ್ಯ ತಂದುಕೊಟ್ಟಿವೆ ಎಂದು ತಿಳಿಸಿದರು.

ದೇಶದ ಪ್ರಗತಿಯಲ್ಲಿ ಕರ್ನಾಟಕದ ಪಾಲು ದೊಡ್ಡದಿದೆ. ಕರ್ನಾಟಕ ವಿಧಾನಮಂಡಲ ಹಲವಾರು ದಶಕಗಳಿಂದ ರಾಜ್ಯದಲ್ಲಿ ಬೆಳವಣಿಗೆ ಮತ್ತು ಬದಲಾವಣೆ ತಂದಿದೆ. ವಿಧಾನಸೌಧ ಪ್ರಜಾಪ್ರಭುತ್ವದ ದೇವಾಲಯ ಸಂವಿಧಾನ ಈ ದೇವಾಲಯಕ್ಕೆ ಭಗವದ್ಗೀತೆ ಇದ್ದಂತೆ. ವಿಧಾನಸಭೆಯ ಪರಂಪರೆ, ಸಂವಿಧಾನ ಬದ್ಧ ಆಡಳಿತವನ್ನು ನಾವು ಕಾಪಾಡಿಕೊಂಡು ಹೋಗಬೇಕಿದೆ ಎಂದು ಹೇಳಿದರು. ನಾಡಿನ ಅನೇಕ ಪ್ರಮುಖರು ಸಾಮಾಜಿಕ ಸಮಾನತೆ ಸುಭಿಕ್ಷತೆ ಚರಿತ್ರಾರ್ಹ ತೀರ್ಪುಗಳನ್ನು ಹಾಗೂ ಆಚಾರವಂತ ನಿರ್ದೇಶನಗಳನ್ನು ನೀಡಿದ್ದಾರೆ. ಪ್ರೇರಣಾದಾಯಕ ಇತಿಹಾಸ ನಮ್ಮದು ನನ್ನ ಆಡಳಿತ ಜನಪರ, ಜನರಿಗೋಸ್ಕರ, ದಕ್ಷ ಹಾಗೂ ಪಾರದರ್ಶಕವಾಗಿರುತ್ತದೆ. ಬದಲಾವಣೆಯ ಪರ್ವ ಇದು. ನಾಡನ್ನು ಶ್ರೇಷ್ಠ ರಾಜ್ಯವನ್ನಾಗಿಸೋಣ. ಈ ನಿಟ್ಟಿನಲ್ಲಿ ಸಿದ್ಧತೆಗಳಾಗುತ್ತಿವೆ. ಇಂದು ಘೋಷಣೆಯಾಗಿರುವ ಕಾರ್ಯಕ್ರಮಗಳನ್ನು ಅನುಷ್ಠಾನಕ್ಕೆ ತರೋಣ ಎಂದರು.

ಆಧಾರ: ಸಂಯುಕ್ತ ಕರ್ನಾಟಕ, ದಿನಾಂಕ:16.08.2021

ದಿನಾಂಕ: 15.08.2021ರಂದು 75ನೇ ಸ್ವಾತಂತ್ರ್ಯ ಅಮೃತ ಮಹೋತ್ಸವ ಆಚರಣೆ ನಿಮಿತ್ತ ಸನ್ಮಾನ್ಯ ಸಭಾಪತಿಗಳಾದ ಶ್ರೀ ಬಸವರಾಜ್ ಹೊರಟ್ಟಿರವರು ಹಾಗೂ ಸನ್ಮಾನ್ಯ ಸಭಾಧ್ಯಕ್ಷರು ವಿಧಾನಸೌಧದ ಮುಂಬಾಗದಲ್ಲಿ ಧ್ವಜಾರೋಹಣವನ್ನು ನೆರವೇರಿಸಿ ನಂತರ ಬ್ಯಾಂಕ್ವೆಟ್ ಹಾಲ್‌ನಲ್ಲಿ ಹಮ್ಮಿಕೊಂಡಿದ್ದ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಭಾಗವಹಿಸಿದರು. ಈ ಸಂದರ್ಭದಲ್ಲಿ ಸನ್ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ ಬಸವರಾಜ್ ಬೊಮ್ಮಾಯಿರವರು ಹಾಗೂ ಉಪನ್ಯಾಸಕರಾದ ಡಾ: ಬಿ.ವಿ.ವಸಂತಕುಮಾರ್ ಅವರು ಉಪಸ್ಥಿತರಿದ್ದರು.





## 28. ಸಂಸದೀಯ ವ್ಯವಸ್ಥೆಯ ಮೌಲ್ಯ ಕುಸಿತ

ಇತ್ತೀಚಿನ ದಿನಗಳಲ್ಲಿ ಸಂಸದೀಯ ವ್ಯವಸ್ಥೆ ಮೌಲ್ಯಗಳನ್ನು ಕಳೆದುಕೊಳುತ್ತಿದೆ ಎನ್ನುವ ಅಪಸ್ವರಗಳು ಕೇಳಿಬರುತ್ತಿರುವುದು ವಿಷಾದನೀಯವಾಗಿದೆ. ಈ ನಿಟ್ಟಿನಲ್ಲಿ ಎಲ್ಲ ಜನಪ್ರತಿನಿಧಿಗಳು ರಾಜಕೀಯ ಪಕ್ಷಗಳು ಆತ್ಮಾವಲೋಕನ ಮಾಡಿಕೊಳ್ಳುವ ಅವಶ್ಯಕತೆ ಇದೆ. ನಮ್ಮ ಸದನಗಳು ಮಾತಿನ ಮನೆಗಿಂತ ಗರಡಿ ಮನೆಗಳಾಗಿ ಪರಿವರ್ತನೆಯಾಗುತ್ತಿವೆ ಎನ್ನುವ ಸಾರ್ವಜನಿಕರ ಅಭಿಪ್ರಾಯ ಕುರಿತು ಬಹಳ ಗಂಭೀರವಾಗಿ ಚಿಂತನೆ ನಡೆಸುವ ಅವಶ್ಯಕತೆ ಇದೆ ಎಂದು ವಿಧಾನ ಪರಿಷತ್ ಸಭಾಪತಿಯವರು ಹೇಳಿದರು.

ವಿಧಾನಮಂಡಲದ ವತಿಯಿಂದ ವಿಧಾನಸೌಧದ ಬ್ಯಾಂಕ್ವೆಟ್ ಹಾಲ್‌ನಲ್ಲಿ ನಡೆದ ಸ್ವಾತಂತ್ರ್ಯೋತ್ಸವದ ಅಮೃತಮಹೋತ್ಸವ ಕಾರ್ಯಕ್ರಮದಲ್ಲಿ ಪಾಲ್ಗೊಂಡು ಮಾತನಾಡಿದರು. ನೈತಿಕತೆ, ತತ್ವ ಸಿದ್ಧಾಂತಗಳು, ಮಾನವೀಯ ಮೌಲ್ಯಗಳು ಮರೆಯಾಗುತ್ತಿವೆ ಎನ್ನುವ ಕಳವಳದ ಕುರಿತು ಚಿಂತನೆ ಮಾಡಿ ಮೌಲ್ಯಗಳ ಮರುಸ್ಥಾಪನೆ ಬಗ್ಗೆ ನಾವೆಲ್ಲರೂ ಗಂಭೀರವಾಗಿ ಚಿಂತಿಸುವ ಅವಶ್ಯಕತೆ ಇದೆ ಎಂದು ನಾನು ಭಾವಿಸುತ್ತೇನೆ ಎಂದು ಹೇಳಿದರು.

ಸಂಸದೀಯ ಪ್ರಜಾತಂತ್ರ ವ್ಯವಸ್ಥೆಯ ಘನತೆ, ಗೌರವ ಎತ್ತಿ ಹಿಡಿಯುವ ನಿಟ್ಟಿನಲ್ಲಿ ಎಲ್ಲ ಹಂತದ ಜನಪ್ರತಿನಿಧಿಗಳು, ಸಮಾಜ ಸೇವಕರು ಚಿಂತನೆ ನಡೆಸುವ ಮೂಲಕ ಸಂಸದೀಯ ವ್ಯವಸ್ಥೆಯಲ್ಲಿ ಸತ್ಸಂಪ್ರದಾಯ ಬೆಳೆಸುವತ್ತ ಗಮನಹರಿಸಬೇಕಿದೆ. ರಾಜಕಾರಣದಲ್ಲಿ ಹೆಚ್ಚಾಗುತ್ತಿರುವ ಅಪರಾಧೀಕರಣಕ್ಕೆ ಇತಿಶ್ರೀ ಹಾಡುವ ಮೂಲಕ ಮುಂದಿನ ಪೀಳಿಗೆಯಲ್ಲಿ ರಾಜಕೀಯ, ನೈತಿಕತೆ ಹಾಗೂ ಸಾಮಾಜಿಕ, ಮೌಲ್ಯಗಳನ್ನು ಬಿತ್ತುವ ಮೂಲಕ ಭಾರತೀಯ ಪ್ರಜಾಪ್ರಭುತ್ವ ವ್ಯವಸ್ಥೆಯ ಪ್ರತಿಷ್ಠೆಯನ್ನು ಎತ್ತಿ ಹಿಡಿಯುವ ಸಂಕಲ್ಪವನ್ನು ನಾವೆಲ್ಲರೂ ಇಂದು ಮಾಡಬೇಕಿದೆ ಎಂದು ಪ್ರತಿಪಾದಿಸಿದರು.

ಜಾಗತಿಕ ಮಹಾ ಮಾರಿಯಾಗಿರುವ ಕೊರೋನಾ ವಿರುದ್ಧ ಸೆಣಸಾಟದಲ್ಲಿ ಭಾರತದ ಪಾತ್ರ, ಜಗತ್ತಿನ ಪ್ರಮುಖ ರಾಷ್ಟ್ರಗಳ ಶ್ಲಾಘನೆಗೆ ಪಾತ್ರವಾಗಿದೆ. ಈಗ ಕೊರೋನಾದ ಮೂರನೆಯ ಅಲೆಯ ಭೀತಿಯಲ್ಲಿ ನಾವಿದ್ದು, ಅದಕ್ಕಾಗಿ ಅಗತ್ಯ ಮುನ್ನೆಚ್ಚರಿಕೆ ಕ್ರಮ, ಸಾಮಾಜಿಕ ಅಂತರ ಮತ್ತಿತರ ಎಚ್ಚರಿಕೆ ಕ್ರಮಗಳ ಪಾಲನೆಯೊಂದಿಗೆ ಕೋವಿಡ್ ವಿರುದ್ಧ ಯಶಸ್ವಿ ಹೋರಾಟ ನಡೆಸುವಲ್ಲಿ ರಾಜ್ಯದ ಎಲ್ಲ ಜನತೆಯೂ ಸರ್ಕಾರಕ್ಕೆ ಸಹಕಾರ ನೀಡಬೇಕು ಎಂದು ನಾನು ವಿಧಾನ ಪರಿಷತ್ತಿನ ಸಭಾಪತಿಯಾಗಿ ಇಡೀ ರಾಜ್ಯದ ಜನತೆಯಲ್ಲಿ ಮನವಿ ಮಾಡುತ್ತೇನೆ.

ರಾಜ್ಯದಲ್ಲಿ ಅತಿವೃಷ್ಟಿ ಹಾಗೂ ಪ್ರವಾಹ ಪರಿಸ್ಥಿತಿಯಂತಹ ಸವಾಲುಗಳ ಸಮರ್ಪಕ ನಿರ್ವಹಣೆಯೊಂದಿಗೆ ಜನಸಾಮಾನ್ಯರ ಕಲ್ಯಾಣಕ್ಕಾಗಿ ರಾಜ್ಯ ಹಾಗೂ ಕೇಂದ್ರ ಸರ್ಕಾರಗಳು ಕೈಗೊಂಡಿರುವ ಅಭಿವೃದ್ಧಿ ಕಾರ್ಯಗಳಿಗೆ ರಾಜ್ಯದ ಜನತೆ ಸ್ಪಂದಿಸಬೇಕು ಹಾಗೂ ಸರ್ಕಾರದ ಯೋಜನೆಗಳ ಲಾಭ ಬಡವರು ಮತ್ತು ಅರ್ಹರಿಗೆ ತಲುಪಿಸುವಲ್ಲಿ ಪ್ರತಿಯೊಬ್ಬರ ಸಹಕಾರ ಅಗತ್ಯವಾಗಿದೆ ಎಂದು ಹೇಳಬಯಸುತ್ತೇನೆ. ಸ್ವಾತಂತ್ರ್ಯ ಅಮೃತ ಮಹೋತ್ಸವದ ಈ ಸಂದರ್ಭದಲ್ಲಿ ನಾವೆಲ್ಲರೂ ದೇಶದ ಬಗ್ಗೆ ನಮ್ಮ ರಾಜ್ಯದ ಬಗ್ಗೆ ಅಭಿಮಾನ ಹೊಂದಿ ನಮ್ಮ ಪಾಲಿನ ಕರ್ತವ್ಯವನ್ನು ಪ್ರಾಮಾಣಿಕವಾಗಿ ನಿಭಾಯಿಸುತ್ತ ದೇಶಕ್ಕಾಗಿ ಹಾಗೂ ಸಮಾಜಕ್ಕಾಗಿ ಏನನ್ನಾದರೂ ಕೊಡುಗೆಯನ್ನು ನೀಡಬೇಕೆನ್ನುವ ದೃಢ ಸಂಕಲ್ಪ ಮಾಡುವುದಿಲ್ಲವೋ ಅಲ್ಲಿಯವರೆಗೆ ದೇಶ ಎಲ್ಲ ರಂಗಗಳಲ್ಲೂ ಪ್ರಗತಿ ಹೊಂದುವುದು ಕಷ್ಟಸಾಧ್ಯ. ರಾಷ್ಟ್ರ ನಿರ್ಮಾಣ ಕಾರ್ಯದಲ್ಲಿ ನಾವೆಲ್ಲರೂ ಪಾಲ್ಗೊಳ್ಳುವ ಮೂಲಕ ಬಲಿಷ್ಠ ಭಾರತ ನಿರ್ಮಾಣ ಮಾಡೋಣ ಎಂದು ಹೇಳಿದರು.

ಸ್ವಾತಂತ್ರ್ಯ ಬಳುವಳಿಯಾಗಿ ಬಂದುದ್ದಲ್ಲ. ತ್ಯಾಗ ಬಲಿದಾನಗಳ ಮೂಲಕ ಬಂದಿದೆ. ಸ್ವಾತಂತ್ರ್ಯದ ಸದ್ಬಳಕೆಯಾಗುವಂತೆ ನೋಡಿಕೊಳ್ಳುವುದು ನಮ್ಮೆಲ್ಲರ ಕರ್ತವ್ಯ. ಸ್ವಾತಂತ್ರ್ಯ ಹೋರಾಟವೆಂದರೆ ಕೇವಲ ಬ್ರಿಟೀಷರ ವಿರುದ್ಧ ಹೋರಾಟವಲ್ಲ. ನಮ್ಮ ದೇಶದ ಮೇಲೆ ದಾಳಿ ಮಾಡಿದ ಡಚ್ಚರು, ಗ್ರೀಕರು ಹಾಗೂ ಮೊಘಲರು ಸೇರಿದಂತೆ ಪರಕೀಯರ ದಾಳಿಯ ಸಂದರ್ಭದಲ್ಲಿ ನಡೆದ ಸ್ವಾತಂತ್ರ್ಯ ಹೋರಾಟವನ್ನು ನಾವು ಇಂದು ಸ್ಮರಿಸಿಕೊಳ್ಳಲೇಬೇಕಾಗಿದೆ ಎಂದು ಹೇಳಿದರು. ಜಗತ್ತಿನಲ್ಲಿ ನಾವು ಯಾರಿಗೂ ಕಡಿಮೆ ಇಲ್ಲ. ಎಲ್ಲ ರಂಗಗಳಲ್ಲೂ ನಾವು ಪ್ರಗತಿ ಹೊಂದಿದ್ದೇವೆ. ಮಹಾಮಾರಿ ಕೊರೋನಾ ನಿಯಂತ್ರಿಸಲು ಲಸಿಕೆಯನ್ನು ಕಂಡು ಹಿಡಿದಿರುವ ಹೆಗ್ಗಳಿಕೆ ಕೂಡ ನಮ್ಮ ದೇಶದ್ದು ಎಂದು ಹೇಳಿದರು.

ವಿಧಾನಮಂಡಲದ ವತಿಯಿಂದ ವಿಧಾನಸೌಧದಲ್ಲಿ ಆಚರಿಸುತ್ತಿರುವ 75ನೇ ಸ್ವಾತಂತ್ರ್ಯೋತ್ಸವ ಕಾರ್ಯಕ್ರಮದ ಸಮಾರಂಭವು ಇತಿಹಾಸದ ಪುಟದಲ್ಲಿ ದಾಖಲಾಗುತ್ತದೆ ಎಂದು ಸಭಾಧ್ಯಕ್ಷರು ಇದೇ ಸಂದರ್ಭದಲ್ಲಿ ಅಭಿಪ್ರಾಯಪಟ್ಟರು.

ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಪಾಲ್ಗೊಂಡಿದ್ದರು. ಕರ್ನಾಟಕ ಸಾಹಿತ್ಯ ಅಕಾಡೆಮಿ ಅಧ್ಯಕ್ಷ ಡಾ:ಬಿ.ವಿ. ವಸಂತಕುಮಾರ್ ವಿಶೇಷ ಉಪನ್ಯಾಸ ನೀಡಿದರು. ಇದೇ ಸಂದರ್ಭದಲ್ಲಿ ದೇಶಭಕ್ತಿ ಗೀತೆಗಳು ಸ್ವಾತಂತ್ರ್ಯ ಕುರಿತ ಗೀಗೀ ಪದ ಹಾಗೂ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಏರ್ಪಡಿಸಲಾಗಿತ್ತು. ವಿಧಾನಸಭೆ ಕಾರ್ಯದರ್ಶಿ ವಿಶಾಲಾಕ್ಷಿ ಸ್ವಾಗತಿಸಿದರೆ, ವಿಧಾನ ಪರಿಷತ್ ಕಾರ್ಯದರ್ಶಿ ಮಹಾಲಕ್ಷ್ಮಿ ವಂದಿಸಿದರು. ವಿಧಾನ ಸಭೆ ಮತ್ತು ವಿಧಾನ ಪರಿಷತ್ತಿನ ಹಿರಿಯ ಅಧಿಕಾರಿಗಳು, ಸಿಬ್ಬಂದಿ ಉಪಸ್ಥಿತರಿದ್ದರು.

ಆಧಾರ: ಸಂಯುಕ್ತ ಕರ್ನಾಟಕ, ದಿನಾಂಕ:16.08.2021

ವಿಧಾನಸೌಧದ ಮುಂಭಾಗದಲ್ಲಿ ಕರ್ನಾಟಕ ವಿಧಾನ ಮಂಡಲದ ವತಿಯಿಂದ ಆಚರಿಸಿದ 75ನೇ ಭಾರತದ ಸ್ವಾತಂತ್ರ್ಯೋತ್ಸವದ ಅಮೃತ ಮಹೋತ್ಸವ ಕಾರ್ಯಕ್ರಮದಲ್ಲಿ ರಾಷ್ಟ್ರಧ್ವಜಾರೋಹಣ ಬಳಿಕ ಕರ್ನಾಟಕದ ವಿಧಾನ ಪರಿಷತ್ತಿನ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರು ಹಾಗೂ ಕರ್ನಾಟಕ ವಿಧಾನ ಸಭಾಧ್ಯಕ್ಷರಾದ ಶ್ರೀ ವಿಶ್ವೇಶ್ವರ ಹೆಗಡೆ ಕಾಗೇರಿ ರವರು ರಾಷ್ಟ್ರಪಿತ ಮಹಾತ್ಮ ಗಾಂಧೀಜಿಯವರ ಭಾವಚಿತ್ರಕ್ಕೆ ಪುಷ್ಪನಮನ ಸಲ್ಲಿಸಿದರು.



ವಿಧಾನಸೌಧದ ಬ್ಯಾಂಕ್ವೆಟ್ ಹಾಲ್‌ನಲ್ಲಿ ಕರ್ನಾಟಕ ವಿಧಾನ ಮಂಡಲದ ವತಿಯಿಂದ ಆಚರಿಸಿದ 75ನೇ ಭಾರತದ ಸ್ವಾತಂತ್ರ್ಯೋತ್ಸವದ ಅಮೃತ ಮಹೋತ್ಸವ ಕಾರ್ಯಕ್ರಮಕ್ಕೆ ಕರ್ನಾಟಕ ಸರ್ಕಾರದ ಮುಖ್ಯಮಂತ್ರಿ ಶ್ರೀ ಬಸವರಾಜ ಬೊಮ್ಮಾಯಿಯವರನ್ನು ವಿಧಾನ ಪರಿಷತ್ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರು ಹಾಗೂ ವಿಧಾನಸಭಾಧ್ಯಕ್ಷರಾದ ಶ್ರೀ ವಿಶ್ವೇಶ್ವರ ಹೆಗಡೆ ಕಾಗೇರಿ ರವರು ಆತ್ಮೀಯವಾಗಿ ಬರಮಾಡಿಕೊಂಡು ಸ್ವಾಗತಿಸಿದರು. ಈ ಸಂದರ್ಭದಲ್ಲಿ ವಿಧಾನಪರಿಷತ್ತಿನ ಕಾರ್ಯದರ್ಶಿ ಶ್ರೀಮತಿ ಕೆ.ಆರ್ ಮಹಾಲಕ್ಷ್ಮೀ ರವರು ಹಾಗೂ ವಿಧಾನಸಭೆಯ ಕಾರ್ಯದರ್ಶಿ ಶ್ರೀಮತಿ ಎಂ.ಕೆ ವಿಶಾಲಾಕ್ಷಿ ರವರು ಮತ್ತು ವಿಧಾನಪರಿಷತ್ತಿನ/ಸಭೆಯ ನೌಕರ ಸಿಬ್ಬಂದಿವರ್ಗದವರು ಉಪಸ್ಥಿತರಿದ್ದರು.



**ದಿನಾಂಕ: 15.08.2021 ರಂದು ಕರ್ನಾಟಕ ವಿಧಾನ ಮಂಡಲದ ವತಿಯಿಂದ ವಿಧಾನಸೌಧದ ಬ್ಯಾಂಕ್ವೆಟ್ ಹಾಲ್‌ನಲ್ಲಿ ಹಮ್ಮಿಕೊಂಡಿದ್ದ 75ನೇ ಭಾರತದ ಸ್ವಾತಂತ್ರ್ಯೋತ್ಸವದ ಅಮೃತಮಹೋತ್ಸವದ ಕಾರ್ಯಕ್ರಮದಲ್ಲಿ ವಿಧಾನಪರಿಷತ್ತಿನ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರು ವಿಧಾನಸಭಾಧ್ಯಕ್ಷರಾದ ಶ್ರೀ ವಿಶ್ವೇಶ್ವರ ಹೆಗಡೆ ಕಾಗೇರಿರವರೊಂದಿಗೆ ದೀರ್ಘ ಸಮಾಲೋಚನೆಯಲ್ಲಿ ತೊಡಗಿರುವುದು.**





## 29. ಸದಸ್ಯರಲ್ಲಿ ಶಿಸ್ತು ಬೆಳೆಸುವುದು ಆಯಾ ಪಕ್ಷಗಳ ಜವಾಬ್ದಾರಿ

ತನ್ನ ಸದಸ್ಯರಲ್ಲಿ ಶಿಸ್ತು ಮತ್ತು ಉತ್ತಮ ನಡವಳಿಕೆ ಬೆಳೆಸುವ ಜವಾಬ್ದಾರಿ ಆಯಾ ರಾಜಕೀಯ ಪಕ್ಷಗಳದ್ದು ಎಂಬ ಅಭಿಪ್ರಾಯ ವಿಧಾನಸಭೆ ಸಭಾಧ್ಯಕ್ಷರ ನೇತೃತ್ವದಲ್ಲಿ ನಡೆದ ವಿವಿಧ ರಾಜಕೀಯ ಪಕ್ಷಗಳ ಹಿರಿಯ ಮುಖಂಡರ ಸಭೆಯಲ್ಲಿ ವ್ಯಕ್ತವಾಗಿದೆ.

ಕುಸಿಯುತ್ತಿರುವ ಸಂಸದೀಯ ಮೌಲ್ಯಗಳನ್ನು ತಡೆಯಲು ಮಾರ್ಗೋಪಾಯಗಳನ್ನು ಹುಡುಕುವ ನಿಟ್ಟಿನಲ್ಲಿ ಸಭಾಧ್ಯಕ್ಷರು ಆತ್ಮಾವಲೋಕನ ಸಭೆ ಕರೆದಿದ್ದರು. ಸಂಸದೀಯ ಮೌಲ್ಯವನ್ನು ಎತ್ತಿ ಹಿಡಿಯುವ ನಿಟ್ಟಿನಲ್ಲಿ ನಡೆದ ಎರಡನೇ ಆತ್ಮಾವಲೋಕನ ಸಭೆ ಇದಾಗಿತ್ತು. ಈ ಮುನ್ನ ಕಳೆದ ಫೆಬ್ರವರಿಯಲ್ಲಿ ಮೊದಲ ಸಭೆ ನಡೆದಿತ್ತು.

ವಿಧಾನ ಸಭೆಯಲ್ಲಿ ಗದ್ದಲವನ್ನು ಸೃಷ್ಟಿಸುವ, ಅಸಭ್ಯವಾಗಿ ವರ್ತಿಸುವ ಮತ್ತು ಅಶಿಸ್ತು ಪ್ರದರ್ಶಿಸುವ ಸದಸ್ಯರಿಗೆ ಕಠಿಣ ಶಿಕ್ಷೆಯಾಗಬೇಕು. ಅದು ಪ್ರಬಲ ಪ್ರತಿರೋಧವಾಗಿ ಕಾರ್ಯ ನಿರ್ವಹಿಸುತ್ತದೆ. ವಿಧಾನಮಂಡಲ ಅಧಿವೇಶನಕ್ಕೆ ಹಾಜರಾಗುವ ಮುನ್ನ ತಮ್ಮ ಸದಸ್ಯರಿಗೆ ಶಿಸ್ತು, ಉತ್ತಮ ಮತ್ತು ಘನತೆಯ ನಡವಳಿಕೆಯನ್ನು ಬೆಳೆಸುವುದು ರಾಜಕೀಯ ಪಕ್ಷಗಳ ಕರ್ತವ್ಯ ಮತ್ತು ಜವಾಬ್ದಾರಿಯಾಗಿದೆ ಎಂದು ಮುಖಂಡರು ಸರ್ವಾನುಮತದ ಅಭಿಪ್ರಾಯ ವ್ಯಕ್ತಪಡಿಸಿದರು.

ಸದನದಲ್ಲಿ ಗದ್ದಲ ಸೃಷ್ಟಿಸುವ ಅಶಿಸ್ತಿನಿಂದ ವರ್ತಿಸುವ ಸದಸ್ಯರನ್ನು ಅಧಿವೇಶನದ ಉಳಿದ ಅವಧಿಗೆ ಬಹಿಷ್ಕರಿಸಬೇಕು. ಗೌರವವಿಲ್ಲದ ಮತ್ತು ಸ್ವೀಕಾರಾರ್ಹವಲ್ಲದ ನಡವಳಿಕೆಯ ಶಾಸಕಾಂಗದ ಘನತೆಯನ್ನು ತಗ್ಗಿಸುತ್ತದೆ ಮತ್ತು ಶಾಸಕಾಂಗದ ಪ್ರತಿಷ್ಠೆಯನ್ನು ಹಾಳು ಮಾಡುತ್ತದೆ.

ಶಾಸಕಾಂಗದ ಘನತೆಯನ್ನು ಮರುಸ್ಥಾಪಿಸಲು ಬಲವಾದ ಕ್ರಮವನ್ನು ಕೈಗೊಳ್ಳಬೇಕು. ಅಗತ್ಯವಿದ್ದರೆ ನಿಯಮಗಳಿಗೆ ಸೂಕ್ತ ತಿದ್ದುಪಡಿ ಮಾಡಬೇಕು ಎಂದು ನಾಯಕರು ಅಭಿಪ್ರಾಯಪಟ್ಟರು.

ಆತ್ಮಾವಲೋಕನ ಸಭೆಯಲ್ಲಿ ವಿಧಾನ ಪರಿಷತ್ತಿನ ಮಾಜಿ ಸಭಾಪತಿಗಳಾದ ಡಿ.ಹೆಚ್.ಶಂಕರಮೂರ್ತಿ, ವಿ.ಆರ್. ಸುದರ್ಶನ, ವಿಧಾನಸಭೆಯ ಮಾಜಿ ಸಭಾಧ್ಯಕ್ಷರಾದ ಕೆ.ಜಿ.ಬೋಪಯ್ಯ, ಮಾಜಿ ಸಚಿವರಾದ ಪಿ.ಜಿ.ಆರ್.ಸಿಂಧ್ಯಾ, ಎಸ್. ಸುರೇಶ್ ಕುಮಾರ್, ಶಾಸಕರಾದ ಎ.ಟಿ.ರಾಮಸ್ವಾಮಿ. ಹೆಚ್. ಕೆ. ಕುಮಾರಸ್ವಾಮಿ ಪಾಲ್ಗೊಂಡಿದ್ದರು.

ಆಧಾರ: ಕನ್ನಡ ಪ್ರಭಾ ದಿನಾಂಕ:26.08.2021

## 30. ಬ್ಯಾಕ್ವೆಂಟ್ ಹಾಲ್‌ನಲ್ಲಿ ಮಾಜಿ ಸಿ.ಎಂ.ಗಳ ಭಾವಚಿತ್ರ: ಹೊರಟ್ಟಿ

ರಾಜ್ಯದ ಅಭಿವೃದ್ಧಿಗೆ ಬಹುವಾಗಿ ಶ್ರಮಿಸಿದ ಮಾಜಿ ಮುಖ್ಯಮಂತ್ರಿಗಳ ಭಾವಚಿತ್ರಗಳನ್ನು ಬ್ಯಾಂಕ್ವೆಟ್ ಹಾಲ್‌ನಲ್ಲಿ ಹಾಕಿ ಅವರಿಗೆ ಗೌರವ ಸಲ್ಲಿಸುವ ಕೆಲಸ ಮಾಡಬೇಕು ಎಂದು ವಿಧಾನ ಪರಿಷತ್ತಿನ ಸಭಾಪತಿಯವರು ಮುಖ್ಯಮಂತ್ರಿಗೆ ಮನವಿ ಮಾಡಿದ್ದಾರೆ.

ಈ ಬಗ್ಗೆ ಮುಖ್ಯಮಂತ್ರಿಯವರಿಗೆ ಪತ್ರ ಬರೆದಿರುವ ಸಭಾಪತಿಯವರು ಮಾಜಿ ಮುಖ್ಯಮಂತ್ರಿಗಳ ಜನ್ಮ ದಿನ ಹಾಗೂ ನಿಧನರಾದ ದಿನಗಳಲ್ಲಿ ಅವರ ಪ್ರತಿಮೆಗಳು ಇಲ್ಲದ ಕಾರಣ, ಯಾವುದೇ ರೀತಿಯ ಗೌರವ ಸಲ್ಲಿಸುವಂತಹ ವ್ಯವಸ್ಥೆಗಳಿರುವುದಿಲ್ಲ. ಕಡಿದಾಳ ಮಂಜಪ್ಪ, ಎಸ್.ಆರ್.ಕಂಠಿ, ಬಿಡಿ.ಜತ್ತಿ, ಆರ್.ಗುಂಡೂರಾವ್, ವಿರೇಂದ್ರ ಪಾಟೀಲ, ಎಸ್.ಬಂಗಾರಪ್ಪ, ರಾಮಕೃಷ್ಣ ಹೆಗಡೆ. ಎಸ್.ಆರ್.ಬೊಮ್ಮಾಯಿ, ಜೆ.ಹೆಚ್.ಪಟೇಲ್ ಅವರಿಗೆ ಇಂತಹ ಗೌರವಗಳು ಸಿಗುತ್ತಿಲ್ಲ ಎಂದು ಹೇಳಿದ್ದಾರೆ.

ದಿವಂಗತರಾಗಿರುವ ಎಲ್ಲ ಮಾಜಿ ಮುಖ್ಯಮಂತ್ರಿಗಳಿಗೂ ಸಮಾನ ಗೌರವ ನೀಡುವ ಉದ್ದೇಶದಿಂದ ಬ್ಯಾಂಕ್ವೆಟ್ ಹಾಲ್‌ನಲ್ಲಿ ಅವರೆಲ್ಲರ ಪೂರ್ಣ ಪ್ರಮಾಣದ ಭಾವಚಿತ್ರಗಳನ್ನು ಅವರ ಅಧಿಕಾರದ ಅವಧಿ ನಮೂದಿಸಿ, ಗೌರವ ಸಲ್ಲಿಸುವ ಕೆಲಸ ಮಾಡಬೇಕು. ಇದೇ 9 ರಂದು ರಾಮಕೃಷ್ಣ ಹೆಗಡೆಯವರ ಹುಟ್ಟುಹಬ್ಬದ ದಿನದಂದು ಈ ಯೋಜನೆಗೆ ನಾಂದಿ ಹಾಡಲಿ ಎಂದು ಅವರು ಪತ್ರದಲ್ಲಿ ವಿನಂತಿಸಿದ್ದಾರೆ.

ಆಧಾರ: ಪ್ರಜಾವಾಣಿ, ದಿನಾಂಕ:26.08.2021

## 31. ಸೆಪ್ಟೆಂಬರ್ 13 ರಿಂದ ಅಧಿವೇಶನ

ವಿಧಾನಸಭೆ ಅಧಿವೇಶನದ ದಿನಾಂಕ ಮತ್ತು ಸಮಯ ನಿಗದಿ ಮಾಡಿ ಕರ್ನಾಟಕ ವಿಧಾನ ಸಭೆ ಪ್ರಕಟಣೆ ಹೊರಡಿಸಿದೆ. ಸೆಪ್ಟೆಂಬರ್ 13 ರಿಂದ ಅಧಿವೇಶನ ಆರಂಭವಾಗಲಿದ್ದು, 24ರವರೆಗೆ ನಡೆಯಲಿದೆ. ಸೆಪ್ಟೆಂಬರ್ 18ರಂದು ಕಾರ್ಯಕಲಾಪ ಇರುವುದಿಲ್ಲ. ಸೆಪ್ಟೆಂಬರ್ 19 ಸಾರ್ವತ್ರಿಕ ರಜಾ ದಿನವಾಗಿದ್ದು ಅಂದು ಕೂಡ ಕಲಾಪ ನಡೆಯುವುದಿಲ್ಲ. ರಾಜ್ಯಪಾಲರ ಆದೇಶದನ್ವಯ ಈ ಅಧಿವೇಶನ ನಡೆಯಲಿದೆ ಎಂದು ವಿಧಾನಸಭೆ ಕಾರ್ಯದರ್ಶಿ ಎಂ.ಕೆ. ವಿಶಾಲಾಕ್ಷಿ ತಿಳಿಸಿದ್ದಾರೆ.

ಆಧಾರ: ವಿಜಯವಾಣಿ, ದಿನಾಂಕ:27.08.2021

## 32. ರಜೆ ಪಡೆಯದೆ ಅಧಿವೇಶನಕ್ಕೆ ಹಾಜರಾಗಿ ಯಶಸ್ವಿಗೊಳಿಸಿ

ಸೆಪ್ಟೆಂಬರ್ 13 ರಿಂದ 24ರ ತನಕ ನಡೆಯುವ ವಿಧಾನಸಭಾ ಅಧಿವೇಶನದಲ್ಲಿ ಸಚಿವರು, ಅಧಿಕಾರಿಗಳು, ಶಾಸಕರು ರಜೆ ಪಡೆಯದೆ ಪೂರ್ಣಪ್ರಮಾಣದಲ್ಲಿ ಪಾಲ್ಗೊಂಡು ಅಧಿವೇಶನವನ್ನು ಯಶಸ್ವಿಗೊಳಿಸುವಂತೆ ಸಭಾಧ್ಯಕ್ಷರು ಹೇಳಿದ್ದಾರೆ. ಆರು ತಿಂಗಳ ನಂತರ ನಡೆಯುವ ಹತ್ತು ದಿನಗಳ ಅಧಿವೇಶನದಲ್ಲಿ ಎಲ್ಲಾ ಸಚಿವರು ಹಾಗೂ ಶಾಸಕರುಗಳು ಕಡ್ಡಾಯವಾಗಿ ಹಾಜರಿರುವಂತೆ ಪತ್ರ ಬರೆಯಲಾಗಿದೆ. ಯಾರೂ ರಜೆ ಕೇಳಬಾರದು ಎಂದರು. ಸಭಾಧ್ಯಕ್ಷನಾಗಿ ಕೋರಂ ಕೊರತೆಯಿಂದ ಆಗುವ ಸಮಸ್ಯೆ ಏನೆಂದು ನನಗೆ ತಿಳಿದಿದೆ. ಕೋರಂ ಸಮಸ್ಯೆಯಾಗದಂತೆ ಅಧಿವೇಶನ ನಡೆಯಬೇಕು. ಈ ದಿಸೆಯಲ್ಲಿ ಹಾಜರಾತಿ ಅತಿಮುಖ್ಯ, ಸಂಸದೀಯ ವ್ಯವಸ್ಥೆಗೆ ಲೋಪವಾಗದಂತೆ ನಮ್ಮ ನಡವಳಿಕೆ ಇರಬೇಕಾಗಿದೆ. ಇತ್ತೀಚಿಗಿನ ದಿನಗಳಲ್ಲಿ ಸದನದಲ್ಲಿ ನಡೆಯುವ ಕೆಲ ಘಟನಾವಳಿಗಳಿಂದ ಜನತೆ ವ್ಯವಸ್ಥೆಯ ಕುರಿತು ಬೇಸರದಿಂದ ಮಾತನಾಡುವಂತಾಗಿದೆ. ಜನಪ್ರತಿನಿಧಿಗಳು ಸದನದ ಶಿಸ್ತನ್ನು ಮೀರದೆ ಸ್ವಯಂ ಶಿಸ್ತನ್ನು ರೂಢಿಸಿಕೊಳ್ಳಬೇಕೆಂದರು. ಮೈಸೂರಿನಲ್ಲಿ ನಡೆದ ಅತ್ಯಾಚಾರ ಘಟನೆಯನ್ನು ಸರ್ಕಾರ ಗಂಭೀರವಾಗಿ ತೆಗೆದುಕೊಂಡಿದ್ದು ಜನರ ಅಪೇಕ್ಷೆಯಂತೆ ಕಾರ್ಯನಿರ್ವಹಿಸುವ ನಂಬಿಕೆ ಇದೆ ಎಂದರು. ಇದೊಂದು ತಲೆ ತಗ್ಗಿಸುವಂತಹ ಘಟನೆ ಎಂದರು.

ಅನಿರೀಕ್ಷಿತ ಪರಿಸ್ಥಿತಿಯನ್ನು ನಿರ್ಮಿಸಿರುವ ಕೋವಿಡ್‌ನ್ನು ನಿಭಾಯಿಸುವ ನಿಟ್ಟಿನಲ್ಲಿ ಕೇಂದ್ರ ಮತ್ತು ರಾಜ್ಯ ಸರ್ಕಾರ ಜನಪರ ನಿಲುವು ತೆಗೆದುಕೊಂಡಿದೆ. ಕಠಿಣ ಪರಿಸ್ಥಿತಿಯಲ್ಲಿ ಜನರು ಉತ್ತಮವಾಗಿ ಸ್ಪಂದಿಸಿದ್ದಾರೆ ಎಂದರು.

ಆಧಾರ: ಸಂಯುಕ್ತ ಕರ್ನಾಟಕ, ದಿನಾಂಕ:28.08.2021

## 33. ಖರ್ಚಾಗದ ರೂ.100 ಕೋಟಿ ಶಾಸಕರ ನಿಧಿ

ಶಾಸಕರ ಕ್ಷೇತ್ರದ ಅಭಿವೃದ್ಧಿ ದೃಷ್ಟಿಯಿಂದ ಪ್ರತಿವರ್ಷ ನೀಡುವ ತಲಾ ರೂ.2 ಕೋಟಿ ಅನುದಾನ ಖರ್ಚಾಗದೇ ಹಾಗೆಯೇ ಉಳಿದುಕೊಂಡಿದ್ದು, ಇದನ್ನು ತ್ವರಿತವಾಗಿ ಸದ್ಬಳಕೆ ಮಾಡುವ ನಿಟ್ಟನಲ್ಲಿ ಪ್ರಯತ್ನ ಮಾಡಲಾಗುತ್ತಿದೆ ಎಂದು ಸಭಾಧ್ಯಕ್ಷರು ತಿಳಿಸಿದ್ದರು.

ಶಾಸಕರ ಪ್ರದೇಶಾಭಿವೃದ್ಧಿ ನಿಧಿಯ ಮಂಜೂರಾತಿ ಮತ್ತು ಅದರ ಪ್ರಗತಿ ಕುರಿತಂತೆ ಸಚಿವರು, ಶಾಸಕರು ಹಾಗೂ ಅಧಿಕಾರಿಗಳ ಸಭೆ ನಡೆಸಿದ ಬಳಿಕ ಸುದ್ದಿಗೋಷ್ಠಿಯಲ್ಲಿ ಮಾತನಾಡಿದರು. ವಾರ್ಷಿಕವಾಗಿ ನೀಡಲಾಗುವ ಶಾಸಕರ ನಿಧಿಯಲ್ಲಿ ರಾಜ್ಯದಲ್ಲಿ ಅಂದಾಜು ರೂ.1 ಸಾವಿರ ಕೋಟಿ ವಿವಿಧ ಜಿಲ್ಲೆಗಳ ಜಿಲ್ಲಾಧಿಕಾರಿ ಖಾತೆಗಳಲ್ಲಿ ಉಳಿದುಕೊಂಡಿದೆ.

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ರೂ.23 ಕೋಟಿ ಶಾಸಕರ ನಿಧಿ ಬಳಕೆಯಾಗದೆ ಉಳಿದುಕೊಂಡಿದೆ. ಆಡಳಿತಾತ್ಮಕ ಹಾಗೂ ತಾಂತ್ರಿಕ ಕಾರಣಗಳಿಂದ ಹೀಗಾಗುತ್ತಿದೆ ಎಂಬ ಮಾಹಿತಿಯೂ ಇದೆ. ಜಿಲ್ಲಾಧಿಕಾರಿ ಮಟ್ಟದಲ್ಲಿ ಈ ಬಗ್ಗೆ ಒಂದು ವಾರದಲ್ಲಿ ಸಮಗ್ರ ಸಭೆ ನಡೆಸಿ ವರದಿ ಸಲ್ಲಿಸಲು ಸೂಚನೆ ನೀಡಲಾಗಿದೆ ಎಂದರು.

ಶಾಸಕರ ನಿಧಿ ಬಿಡುಗಡೆಯಾಗುವಲ್ಲಿ ವಿಳಂಬ ಒಂದು ಕಡೆಯಾದರೆ, ಬಿಡುಗಡೆಯಾದ ನಿಧಿಯನ್ನು ಸಮರ್ಪಕವಾಗಿ ಬಳಕೆ ಮಾಡುವಲ್ಲಿಯೂ ತಾಂತ್ರಿಕ ಕಾರಣ ಸೇರಿದಂತೆ ಹಲವಾರು ಸಮಸ್ಯೆಗಳಿರುವುದು ಗಮನಕ್ಕೆ ಬಂದಿದೆ. ಈ ಎಲ್ಲ ಸಮಸ್ಯೆ ಬಗೆಹರಿಸಿಕೊಂಡು ಶಾಸಕರ ಮಟ್ಟದಲ್ಲಿ 15 ದಿನಗಳಿಗೊಮ್ಮೆ ಸಭೆ ನಡೆಸಿ ವರದಿ ನೀಡುವ ಮೂಲಕ ವ್ಯವಸ್ಥಿತವಾಗಿ ಮಾಡಲು ಸೂಚನೆ ನೀಡಲಾಗಿದೆ ಎಂದು ಹೇಳಿದರು.

ಆಧಾರ: ವಿಜಯ ಕರ್ನಾಟಕ, ದಿನಾಂಕ:28.08.2021

## 34. ನನ್ನ ರಾಜಕೀಯ ಜೀವನದ ಗಾಡ್‌ಫಾದರ್

ರಾಮಕೃಷ್ಣ ಹೆಗಡೆ ಅವರು ರಾಷ್ಟ್ರದಲ್ಲಿ ಪ್ರಬುದ್ಧ ವಿಚಾರವಂತ ರಾಜಕಾರಣಿಗಳ ಸ್ಥಾನದಲ್ಲಿ ಅಗ್ರಮಾನ್ಯ. ಆಕರ್ಷಕ ಮುಗುಳ್ನಗೆ, ಸರಳ ನಡವಳಿಕೆಯ ಸಮಯ ಪ್ರಜ್ಞೆಯುಳ್ಳ ಸೂಕ್ಷ್ಮ ಸಂವೇದಿನಾಯಕ. ರಾಜ್ಯ ಕಂಡ ಸಮರ್ಥ ಸಿ.ಎಂ. ಕರ್ನಾಟಕ ರಾಜಕಾರಣದಲ್ಲಿ ಚಿರಸ್ಥಾಯಿ ಮತ್ತು ದೊಡ್ಡ ವ್ಯಕ್ತಿತ್ವ ಎಂದು ವಿಧಾನ ಪರಿಷತ್ ಸಭಾಪತಿ ಬಸವರಾಜ ಹೊರಟ್ಟಿ ಅವರು ಹೇಳಿದ್ದಾರೆ.

ಮೌಲ್ಯಾಧಾರಿತ ರಾಜಕಾರಣಿ ಎಂಬ ಪದ ಹುಟ್ಟಿದ್ದೇ ಇವರಿಂದ ಅಂದರೆ ಅತಿಶಯೋಕ್ತಿ ಎನಿಸದು. ನಾನು ಕಾಲೇಜಿನ ವಿದ್ಯಾರ್ಥಿಯಾಗಿದ್ದ ಸಮಯದಲ್ಲಿ ಪರಿಚಯ ಆಗಿದ್ದರು. ವಿಶೇಷ ಅತಿಥಿಯಾಗಿ ಅವರನ್ನು ನಮ್ಮ ಕಾಲೇಜಿಗೆ ಕರೆಯಿಸಲಾಗುತ್ತಿತ್ತು. ನಾನು ಎಂಎಲ್‌ಸಿ ಆದಾಗ ರಾಜ್ಯಸಭಾ ಸದಸ್ಯರು ಆಗಿದ್ದರು. 1983ರಲ್ಲಿ ಮುಖ್ಯಮಂತ್ರಿ ಆಗಿದ್ದರು. ನಮ್ಮನ್ನು ಜನತಾದಳದ ಕೋರ್ ಕಮಿಟಿ ಸದಸ್ಯರು ಮಾಡಿದ್ದರು. ಅವರು ನಮಗೆ ಗಾಡ್ ಫಾದರ್ ಥರ ಇದ್ದರು. ಅವರು ಮುಖ್ಯಮಂತ್ರಿ ಆದಾಗ ಕೌನ್ಸಿಲ್‌ನಲ್ಲಿ ಬಹುಮತ ಇಲ್ಲದಿದ್ದಾಗ ಸಹಕಾರ ನೀಡಿದ್ದೆವು. ಕುಟುಂಬದ ಸದಸ್ಯರಾಗಿ ಅವರ ಜೊತೆ ಕೆಲಸ ಮಾಡಿದ್ದೇವೆ. ಪ್ರತಿಯೊಂದು ಹಂತದಲ್ಲೂ ವೈಯಕ್ತಿಕ ಸಂಬಂಧ ಇತ್ತು. ಪಕ್ಷ ಬಿಟ್ಟು ಹೋದಾಗ ನವ ನಿರ್ಮಾಣ ವೇದಿಕೆ ಮಾಡಿದಾಗ ನಾನು ಮೊದಲು ಅವರ ಜೊತೆ ಹೋಗಿದ್ದೆ. ಕೊನೆಯ ತನಕ ಅವರ ಜೊತೆ ಇರುತ್ತಿದ್ದೆ. ಅವರು ಮುಖ್ಯಮಂತ್ರಿ ಆಗಿದ್ದಾಗ ನನಗೆ ರಾಜಕೀಯ ಪದ್ಧತಿಗಳನ್ನು ಕಲಿಸಿದ್ದರು. ಅವರ ಆಡಳಿತದಲ್ಲಿ ಶಾಸಕರ ದಿನಾಚರಣೆ ಆಚರಣೆಗೆ ತಂದರು. 1984ರಲ್ಲಿ ಗಂಗಾಧರ್ ಗೌಡ ಶಾಸಕರಾಗಿದ್ದರು. ನಾನು ಒಂದು ಟೀ ಶರ್ಟ್ ತೆಗೆದುಕೊಂಡಿದ್ದೆ. ಗಂಗಾಧರ್ ಗೌಡರು ಎಲ್ಲಿ ತಂದೆ ಈ ಟೀ ಶರ್ಟ್ ಅಂದರು. ಆಗ ನಾನು ಎಂ.ಜಿ. ರಸ್ತೆಯಲ್ಲಿ ಎಂದೆ. ಅವರಿಗೂ ತೆಗೆದುಕೊಳ್ಳಲು ಕರೆದೊಯ್ದರು. ನಾನು ಅದೇ ಟೀ ಶರ್ಟ್ ಹಾಕಿಕೊಂಡು ವಿಧಾನಸೌಧಕ್ಕೆ ಹೋದಾಗ, ರಾಮಕೃಷ್ಣ ಹೆಗಡೆ ಯಾರು ನೀನು ಅಂದರು. ಆಗ ನಾನು ಯಾಕೆ ಸರ್ ಈ ಥರ ಕೇಳಿದ್ರಿ ಎಂದು ಗಾಬರಿಯಾಗಿ ಕೇಳಿದೆ. ಇದು ವಿಧಾನಸೌಧ, ದೇವಸ್ಥಾನ ಇದ್ದಂಗೆ ಅಂದು ಅವರ ಪಿಎಯನ್ನು ಕಳುಹಿಸಿ ಅವೆನ್ಯೂ ರಸ್ತೆಯಲ್ಲಿ ಖಾದಿ ಗ್ರಾಮೋದ್ಯೋಗ ಕೇಂದ್ರಕ್ಕೆ ಹೋಗಿ ಆರು ಶರ್ಟ್ ಪ್ಯಾಂಟು ಕೊಡಿಸಿದರು.

ಊಟಕ್ಕೆ ತಮ್ಮ ತೋಟಕ್ಕೆ ಬರುತ್ತಿದ್ದರು. ಮುಖ್ಯಮಂತ್ರಿ ಆಗಿದ್ದಾಗ ನಮ್ಮ ಮನೆಗೆ ಬಂದರು. ಆಗ ನಮ್ಮ ತಾಯಿ ಚಪ್ಪಲಿ ಹೊರಗೆ ಬಿಟ್ಟು ಬಾ ಅಂದರು. ಮತ್ತೆ ವಾಪಸ್ ಹೋಗಿ ಚಪ್ಪಲಿ ಹೊರಗೆ ಬಿಟ್ಟರು. ಅವರ ದೊಡ್ಡತನಕ್ಕೆ ಬೆಲೆ ಕೊಡಬೇಕಿದೆ. ಅವರಿಗೆ ಜಾತಿ ಇರಲಿಲ್ಲ. ಸದನದಲ್ಲಿ ಧ್ವನಿ ಎತ್ತುವವರ ಪರ ಇದ್ದರು. ಅವರ ಆಡಳಿತದಲ್ಲಿ ಭ್ರಷ್ಟಾಚಾರ ಕಡಿಮೆ ಇರುತ್ತಿತ್ತು. ಆಡಳಿತದಲ್ಲಿ ಉತ್ತಮ ಕೆಲಸಗಳು ಆಗುತ್ತಿದ್ದವು ಎಂದು ಸಭಾವತಿ ತಿಳಿಸಿದರು.

ಆಧಾರ: ವಿಶ್ವವಾಣಿ ದಿನಾಂಕ:29.08.2021

## 35. ಹೊಸ ಶಿಕ್ಷಣ ನೀತಿ ಸರಿಯಲ್ಲ

ಸರ್ಕಾರ ಬದಲಾದಂತೆ ಶಿಕ್ಷಣ ನೀತಿ ಬದಲಾಯಿಸುವುದು ಸರಿಯಲ್ಲ. ಈಗಿನ ಹೊಸ ಶಿಕ್ಷಣ ನೀತಿ ಪರಿಪೂರ್ಣತೆಯಿಂದ ಕೂಡಿಲ್ಲ ಎಂದು ವಿಧಾನ ಪರಿಷತ್ ಸಭಾಪತಿಯವರು ಹೇಳಿದರು.

ಸುದ್ದಿಗಾರರೊಂದಿಗೆ ಮಾತನಾಡಿ ನಾನು ಹಲವಾರು ದೇಶ ತಿರುಗಿದ್ದೇನೆ. ಅಲ್ಲಿ ಸರ್ಕಾರ ಬದಲಾದಂತೆ ಶಿಕ್ಷಣ ನೀತಿಗಳು ಬದಲಾಗುವುದಿಲ್ಲ. ನಮ್ಮ ದೇಶದಲ್ಲಿ ಮೂರು ಹಂತದ ಶಿಕ್ಷಣವೇ ಉತ್ತಮವಾಗಿತ್ತು. ಆದ್ದರಿಂದ ಹಿಂದಿನ ಶಿಕ್ಷಣ ಪದ್ಧತಿಯೇ ಸೂಕ್ತವಾಗಿದೆ. ಹೊಸ ಶಿಕ್ಷಣ ನೀತಿಯ ವರದಿ ವಿಸ್ತೃತವಾಗಿ ಅಧ್ಯಯನ ಮಾಡಿ ಕೆಲವೊಂದು ಬದಲಾವಣೆ ಮಾಡಬೇಕು. ಹೊಸ ರಾಷ್ಟ್ರೀಯ ಶಿಕ್ಷಣ ನೀತಿ ಸರಿಯಿಲ್ಲ ಎಂದರು. ಕೊರೋನಾದಿಂದ ಬಂದ್ ಆಗಿದ್ದ ಶಾಲೆ ಪುನಾರಂಭಿಸುವುದು ಸೂಕ್ತ. ಜಿಲ್ಲಾಧಿಕಾರಿ ನೇತೃತ್ವದ ಸಮಿತಿ ರಚಿಸಿ ಮಕ್ಕಳ ಆರೋಗ್ಯದ ಬಗ್ಗೆ ಜವಾಬ್ದಾರಿ ತೆಗೆದುಕೊಳ್ಳಬೇಕು. ಶಾಲೆಗಳನ್ನು ಪ್ರಾರಂಭಿಸುವಂತೆ ಮೊದಲೇ ಹೇಳಿದ್ದೇನೆ. ಕೊರೋನಾದಿಂದ ಶಾಲೆಗಳು ಬಂದ್ ಆದಾಗ ಮಕ್ಕಳು ಮತ್ತು ಶಿಕ್ಷಕರ ಸಂಬಂಧ ಕಡಿತವಾಗಿದೆ. ಹೊಸ ಶಿಕ್ಷಣ ಸಚಿವರು ಕೂಡ ಬಂದು ಭೇಟಿಯಾಗಿ ಚರ್ಚಿಸಿದ್ದರು. ಆಗಲೂ ಶಾಲೆ ಆರಂಭಿಸುವಂತೆ ಹೇಳಿದ್ದೇನೆ. ಜಿಲ್ಲಾಧಿಕಾರಿ ನೇತೃತ್ವದಲ್ಲಿ ಶಾಲೆಗಳ ಆರಂಭದ ಬಗ್ಗೆ ಸಮಿತಿ ರಚನೆ ಮಾಡಬೇಕು. ಒಟ್ಟಿನಲ್ಲಿ ಶಾಲೆ ಆರಂಭ ಮಾಡುವುದು ಸೂಕ್ತ ಎಂದರು.

ಆಧಾರ: ಉದಯವಾಣಿ, ದಿನಾಂಕ:31.08.2021

## 36. ಶಾಲಾ ಮಕ್ಕಳ ಆರೋಗ್ಯಕ್ಕೆ ಡಿಸಿ ನೇತೃತ್ವದಲ್ಲಿ ಸಮಿತಿ ರಚಿಸಿ

ಕೊರೋನಾದಿಂದ ಶಾಲೆಗಳು ಬಂದ್ ಆಗಿ ಮಕ್ಕಳು ಮತ್ತು ಶಿಕ್ಷಕರ ಸಂಬಂಧ ಕಡಿತವಾಗಿದೆ. ಕಾರಣ ಸರ್ಕಾರ ಶಾಲೆಗಳನ್ನು ಪುನಾರಂಭಿಸಬೇಕು. ಜಿಲ್ಲಾಧಿಕಾರಿಗಳ ನೇತೃತ್ವದ ಸಮಿತಿ ರಚನೆ ಮಾಡಿ ಮಕ್ಕಳ ಆರೋಗ್ಯದ ಬಗ್ಗೆ ಜವಾಬ್ದಾರಿ ತೆಗೆದುಕೊಳ್ಳಬೇಕು ಎಂದು ವಿಧಾನ ಪರಿಷತ್ತಿನ ಸಭಾಪತಿಯವರು ಸಲಹೆ ನೀಡಿದರು.

ಶಾಲೆಗಳನ್ನು ಪ್ರಾರಂಭ ಮಾಡುವಂತೆ ಮೊದಲೇ ಹೇಳಿದ್ದೇನೆ. ವಿದ್ಯಾರ್ಥಿಗಳು ಮತ್ತು ಶಾಲೆಯ ಸಂಬಂಧ ತಪ್ಪಬಾರದು. ಅದಕ್ಕಾಗಿ ವಿದ್ಯಾಗಮ ಯೋಜನೆ ಕೂಡ ಬೇಡ ಎಂದು ಹೇಳಿದ್ದೆ. 10 ಮಕ್ಕಳನ್ನು ಕೂರಿಸಿ ಪಾಠ ಮಾಡುವಂತೆ ಹೇಳಿದ್ದೆ. ಹೊಸ ಶಿಕ್ಷಣ ಸಚಿವರು ಕೂಡ ಬಂದು ಭೇಟಿಯಾಗಿ ಚರ್ಚಿಸಿದ್ದರು. ಈಗಲೂ ಶಾಲೆ ಆರಂಭಿಸುವಂತೆ ಹೇಳಿದ್ದೇನೆ. ಜಿಲ್ಲಾಧಿಕಾರಿ ನೇತೃತ್ವದಲ್ಲಿ ಶಾಲೆಗಳ ಆರಂಭದ ಬಗ್ಗೆ ಸಮಿತಿ ರಚನೆ ಮಾಡಬೇಕು. ಮಕ್ಕಳಿಗೆ ಏನಾದರೂ ಆದರೆ ಈ ಸಮಿತಿ ಜವಾಬ್ದಾರಿ ತೆಗೆದುಕೊಳ್ಳಬೇಕು. ಜೊತೆಗೆ ಪಾಲಕರೂ ಕೂಡ ಮಕ್ಕಳ ಬಗ್ಗೆ ಜವಾಬ್ದಾರಿ ವಹಿಸಬೇಕು. ಒಟ್ಟಿನಲ್ಲಿ ಶಾಲೆ ಆರಂಭ ಮಾಡುವುದು ಶೂಕ್ತ ಎಂದರು.

**ಹೊಸ ಶಿಕ್ಷಣ ನೀತಿ ಸರಿ ಇಲ್ಲ:** ಸರ್ಕಾರ ಬದಲಾದಂತೆ ಶಿಕ್ಷಣ ನೀತಿ ಬದಲಾಯಿಸುವುದು ಸರಿಯಲ್ಲ. ಈಗಿನ ಹೊಸ ಶಿಕ್ಷಣ ನೀತಿ ಸರಿಯಿಲ್ಲ. ಹಿಂದಿನ ಶಿಕ್ಷಣ ನೀತಿಯೆ ಸರಿ ಇತ್ತು. ವರದಿಯನ್ನು ವಿಸ್ತೃತವಾಗಿ ಅಧ್ಯಯನ ಮಾಡಿ ಕೆಲವೊಂದು ಬದಲಾವಣೆಗಳನ್ನು ಮಾಡಬೇಕು.

ಆಧಾರ: ಸಂಯುಕ್ತ ಕರ್ನಾಟಕ, ದಿನಾಂಕ:31.08.2021

## 37. ಕಲಾಪದಲ್ಲಿ ಸಚಿವರ ಕಡ್ಡಾಯ ಹಾಜರಾತಿ: ಕಾಗೇರಿ ಪತ್ರ

ಸೆಪ್ಟೆಂಬರ್ 13 ರಿಂದ ನಡೆಯುವ ವಿಧಾನಸಭೆ ಅಧಿವೇಶನದ ಕಲಾಪಗಳಲ್ಲಿ ಎಲ್ಲ ಸಚಿವರು ಹಾಜರಿರಬೇಕೆಂದು ವಿಧಾನ ಸಭಾಧ್ಯಕ್ಷರವರು ಸಂಸದೀಯ ವ್ಯವಹಾರಗಳ ಸಚಿವರಿಗೆ ಪ್ರತ್ಯೇಕ ಪತ್ರ ಬರೆದಿದ್ದಾರೆ.

ಈ ಸಂಬಂಧ ಎಲ್ಲ ಸಚಿವರಿಗೂ ಅಗತ್ಯ ಸೂಚನೆಗಳನ್ನು ನೀಡಬೇಕು. ತಾವು ಪ್ರತಿನಿಧಿಸುವ ವಿಧಾನಸಭಾ ಕ್ಷೇತ್ರಗಳಿಗೆ ಸಂಬಂಧಿಸಿದಂತೆ ಸಚಿವರು ಕಲಾಪದಲ್ಲಿ ಹಾಜರಾಗುವ ಸಂಬಂಧ ವಿನಾಯಿತಿ ಕೋರುವುದು ಸಾಮಾನ್ಯವಾಗಿದೆ ಎಂದು ಮುಖ್ಯಮಂತ್ರಿ ಹಾಗೂ ಕಾನೂನು ಸಚಿವರಿಗೆ ತಿಳಿಸಿದ್ದಾರೆ.

ಸಾರ್ವಜನಿಕ ಮಹತ್ವದ ವಿಚಾರಗಳ ಬಗ್ಗೆ ಸದಸ್ಯರು ಕೇಳುವ ಪ್ರಶ್ನೆಗಳಿಗೆ ಸಂಬಂಧಿತ ಸಚಿವರು ಉತ್ತರ ನೀಡಬೇಕಾಗುತ್ತದೆ. ಸಚಿವರು ಚರ್ಚೆಯ ವೇಳೆ ಸದನದಲ್ಲಿ ಗೈರಾಗುವುದು ಸರಿಯಲ್ಲ. ಸಚಿವರ ಅನುಪಸ್ಥಿತಿ, ಆಡಳಿತ ಪಕ್ಷದಿಂದ ಉತ್ತರ ಪಡೆಯುವ ಸದಸ್ಯರ ಅವಕಾಶವನ್ನು ವಂಚಿಸುತ್ತದೆ. ಈ ಹಿನ್ನೆಲೆಯಲ್ಲಿ ಸಚಿವರು ಸದನದಲ್ಲಿ ಹಾಜರಿರುವುದನ್ನು ಖಾತ್ರಿಪಡಿಸಿಕೊಳ್ಳಬೇಕೆಂದು ಸಭಾಧ್ಯಕ್ಷರು ತಿಳಿಸಿರುತ್ತಾರೆ.

ಇದೇ ಸ್ವರೂಪದ ಪತ್ರವನ್ನು ಎಲ್ಲ ಸಚಿವರಿಗೂ ವ್ಯಕ್ತಿಗತವಾಗಿ ಕಳುಹಿಸಿರುವ ಸಭಾಧ್ಯಕ್ಷರು ಸದನದ ಕಾರ್ಯಕಲಾಪದಲ್ಲಿ ಪಾಲ್ಗೊಳ್ಳುವಂತೆ ಮತ್ತು ಕ್ಷೇತ್ರಗಳ ಅಧಿಕೃತ ಕಾರ್ಯಕ್ರಮಗಳನ್ನು ಉಲ್ಲೇಖಿಸಿ ಕಲಾಪದಿಂದ ವಿನಾಯಿತಿ ಕೋರದಂತೆಯೂ ಸೂಚಿಸಿದ್ದಾರೆ.

ಆಧಾರ:ಪ್ರಜಾವಾಣಿ, ದಿನಾಂಕ:01.09.2021

## 38. ಆರೋಗ್ಯ ಇಲಾಖೆ ಉತ್ತರಕ್ಕೆ ಲೆಕ್ಕಪತ್ರ ಸಮಿತಿ ಆಕ್ರೋಶ

ಕೊರೋನಾ ಸಂದರ್ಭದ ಖರೀದಿಗೆ ಸಂಬಂಧಿಸಿದಂತೆ ಆರೋಗ್ಯ ಇಲಾಖೆ ನೀಡಿರುವ ವರದಿಗೆ ಆಕ್ರೋಶ ವ್ಯಕ್ತಪಡಿಸಿರುವ ಸಾರ್ವಜನಿಕ ಲೆಕ್ಕಪತ್ರ ಸಮಿತಿ ದೂರುಗಳನ್ನು ಆಧರಿಸಿಯೇ ಸ್ಪೀಕರ್‌ಗೆ ವರದಿ ಸಲ್ಲಿಸಲು ತೀರ್ಮಾನಿಸಿದೆ.

ಶಾಸಕ ರಾಮಲಿಂಗಾರೆಡ್ಡಿ ಅಧ್ಯಕ್ಷತೆಯಲ್ಲಿ ಸಭೆ ನಡೆಸಿದ ಸಮಿತಿ ಆರೋಗ್ಯ ಇಲಾಖೆ ನೀಡಿರುವ ಉತ್ತರಗಳ ಪರಾಮರ್ಶೆ ಮಾಡಿತು. ಸರಿಯಾದ ಉತ್ತರಗಳನ್ನೇ ನೀಡದೆ ಕಾಟಾಚಾರಕ್ಕೆ ನೀಡಿರುವ ಉತ್ತರಗಳನ್ನು ಮತ್ತೊಮ್ಮೆ ತಿರಸ್ಕರಿಸಿತು.

ಆರೋಗ್ಯ ಇಲಾಖೆಗೆ ಸಮಿತಿಯು 21 ಪ್ರಶ್ನೆಗಳನ್ನು ಕೇಳಿ 3 ವಾರಗಳ ಗಡುವು ನೀಡಿತ್ತು. ಆದರೆ ಉತ್ತರ ಸರಿ ಇರದ ಹಿನ್ನೆಲೆಯಲ್ಲಿ ತಿರಸ್ಕರಿಸಿ ಮತ್ತೆ ಒಂದು ವಾರ ಕಾಲಾವಕಾಶ ನೀಡಿತ್ತು. ಆದರೂ ಆರೋಗ್ಯ ಇಲಾಖೆ ಸರಿಯಾದ ಉತ್ತರಗಳನ್ನು ನೀಡಿಲ್ಲವೆಂದು ಸಭೆಯಲ್ಲಿ ತಿರಸ್ಕರಿಸಲಾಯಿತು.

**ದೂರುಗಳ ಆಧಾರದಲ್ಲಿ ವರದಿ:** ಆರೋಗ್ಯ ಇಲಾಖೆ ಸಾರ್ವಜನಿಕ ಲೆಕ್ಕಪತ್ರ ಸಮಿತಿಯನ್ನು ಗಂಭೀರವಾಗಿ ಪರಿಗಣಿಸದ ಹಿನ್ನೆಲೆಯಲ್ಲಿ ಸಮಿತಿಗೆ ಬಂದಿರುವ ದೂರುಗಳನ್ನೇ ಆಧರಿಸಿ ವರದಿಯನ್ನು ಸಿದ್ಧಪಡಿಸಲು ನಿರ್ಧರಿಸಲಾಯಿತು. ಆ ವರದಿಯನ್ನು ಮುಂದಿನ ಸಮಿತಿಯ ಸಭೆಯಲ್ಲಿ ಮಂಡಿಸಿ ಒಪ್ಪಿಗೆ ಪಡೆದು ಸಭಾಧ್ಯಕ್ಷರು ಮತ್ತು ಸಭಾಪತಿ ಅವರಿಗೆ ಸಲ್ಲಿಸಲು ತೀರ್ಮಾನಿಸಲಾಯಿತು.

ಸಭೆ ನಡೆಯುವ ಸಂದರ್ಭದಲ್ಲಿ ಕೆಲವು ಅಂಕಿ–ಅಂಶಗಳನ್ನು ಆರೋಗ್ಯ ಇಲಾಖೆ ಸಿಬ್ಬಂದಿ ನೀಡಿದರಾದರೂ ಸಮಿತಿ ಒಪ್ಪಲಿಲ್ಲ.

ಆಧಾರ:ವಿಜಯವಾಣಿ, ದಿನಾಂಕ:01.09.2021

## 39. ಶಾಲಾ ಕಾಲೇಜು ಕಟ್ಟಡ ಸುರಕ್ಷತೆಗೆ ಶಿಫಾರಸ್ಸು

ಸರ್ಕಾರಿ ಶಾಲಾ ಕಾಲೇಜುಗಳಲ್ಲಿ ಕಡ್ಡಾಯವಾಗಿ ಅಗ್ನಿ ಸುರಕ್ಷತಾ ನಿಯಮ ಪಾಲನೆ, ಖಾಸಗಿ, ಅನುದಾನಿತ ಶಾಲೆಗಳಿಗೆ ಅಗ್ನಿ ನಿರಾಕ್ಷೇಪಣಾ ಪತ್ರ (ಎನ್‌ಒಸಿ) ಹಾಗೂ ಶಾಲಾ ಕಟ್ಟಡ ಸ್ಥಿರತೆ ಪ್ರಮಾಣ ಪತ್ರ ನೀಡುವ ಅಧಿಕಾರವನ್ನು ವಿಕೇಂದ್ರೀಕರಣಗೊಳಿಸಬೇಕು, ನೆಲ ಮಹಡಿ ಮಾತ್ರ ಇರುವ ಶಾಲೆಗಳಿಗೆ ಎನ್‌ಒಸಿಯಿಂದಲೇ ವಿನಾಯಿತಿ ನೀಡಬೇಕು ಎಂಬುದು ಸೇರಿ ಹಲವು ಶಿಫಾರಸ್ಸುಗಳೊಂದಿಗೆ ವಿಧಾನ ಪರಿಷತ್ ಸದಸ್ಯರ ಸಮಿತಿ ಸರ್ಕಾರಕ್ಕೆ ವರದಿ ಸಲ್ಲಿಸಿದೆ.

ರಾಜ್ಯದ ಖಾಸಗಿ ಅನುದಾನಿತ ಅಥವಾ ಅನುದಾನ ರಹಿತ ಪ್ರಾಥಮಿಕ, ಪ್ರೌಢ ಶಾಲೆ ಮತ್ತು ಪದವಿಪೂರ್ವ ಕಾಲೇಜುಗಳಲ್ಲಿ ಹೊಸ ಭಾಷೆ, ಸಂಯೋಜನೆ ಹಾಗೂ ಹೆಚ್ಚುವರಿ ವಿಭಾಗಗಳಿಗೆ ಅನುಮತಿಸುವ ಸಂದರ್ಭದಲ್ಲಿ ಕಟ್ಟಡ ಸುರಕ್ಷತಾ ಪ್ರಮಾಣಪತ್ರದ ಅಗತ್ಯತೆಯ ಕುರಿತಂತೆ ಪರಿಶೀಲನೆ ನಡೆಸಲು ರಚಿಸಿದ್ದ ವಿಧಾನ ಪರಿಷತ್ ಸದಸ್ಯ ಎಸ್.ವಿ.ಸಂಕನೂರು ಅವರ ಅಧ್ಯಕ್ಷತೆಯ ಸಮಿತಿಯು ವಿಧಾನ ಸೌಧದಲ್ಲಿ ಶಿಕ್ಷಣ ಹಾಗೂ ಸಕಾಲ ಸಚಿವರಿಗೆ ವರದಿ ಸಲ್ಲಿಸಿದೆ.

ವರದಿ ಸ್ವೀಕರಿಸಿ ಮಾತನಾಡಿದ ಸಚಿವರು ವರದಿಯ ಅನುಷ್ಠಾನಕ್ಕೆ ಸಂಬಂಧಿಸಿದಂತೆ ಅಧಿಕಾರಿಗಳ ಜೊತೆ ಚರ್ಚಿಸಲಾಗುತ್ತದೆ. ಈ ಸಂಬಂಧ ಅಧಿಕಾರಿಗಳು ನೀಡಿರುವ ವರದಿಯನ್ನು ಅವಲೋಕಿಸಲಾಗುತ್ತದೆ. ಜೊತೆಗೆ ಸರ್ಕಾರಿ ಶಾಲೆಗಳಲ್ಲೂ ಕಟ್ಟಡ ಸುರಕ್ಷತೆಯ ಬಗ್ಗೆ ವಿಶೇಷ ಗಮನ ಹರಿಸಲಿದ್ದೇವೆ ಎಂದು ಹೇಳಿದರು.

ಸಮಿತಿಯ ಅಧ್ಯಕ್ಷ ಎಸ್.ವಿ.ಸಂಕನೂರ್ ಮಾತನಾಡಿ, ಶಾಲಾ ಕಟ್ಟಡ ಸುರಕ್ಷತೆ ಪ್ರಮಾಣ ಪತ್ರದ ಬಗ್ಗೆ 17 ಸದಸ್ಯರ ಪರಿಶೀಲನಾ ಸಮಿತಿ ರಚಿಸಲಾಗಿತ್ತು. ಐದು ತಿಂಗಳ ಅವಧಿಯಲ್ಲಿ ಅಧ್ಯಯನ ನಡೆಸಿ ವರದಿ ಸಲ್ಲಿಸಿದ್ದೇವೆ. 2004ರಲ್ಲಿ ತಮಿಳುನಾಡಿನ ಕುಂಭಕೋಣಂನ ಶಾಲೆಯೊಳಗೆ ಅಗ್ನಿ ಅವಘಡ ಸಂಭವಿಸಿ, 94 ಮಕ್ಕಳು ಸಜೀವವಾಗಿ ದಹನವಾಗಿದ್ದರು. ಬಳಿಕ ಸುಪ್ರೀಂಕೋರ್ಟ್‌ನಲ್ಲಿ ಪ್ರಕರಣ ದಾಖಲಾಗಿ ಈ ಸಂಬಂಧ ಮಾರ್ಗಸೂಚಿ ಸಿದ್ದಪಡಿಸುವಂತೆ ನ್ಯಾಯಾಲಯ ಸೂಚಿಸಿತ್ತು. ಅದರಂತೆ ಎನ್‌ಬಿಸಿ ನಿಯಮಗಳಿಗೆ ಯಾವುದೇ ಲೋಪ ಆಗದಂತೆ ವರದಿ ಸಿದ್ಧಪಡಿಸಿದ್ದೇವೆ. ಶಾಲಾ ಕಟ್ಟಡ ಸುರಕ್ಷತೆ ಸಂಬಂಧ 14 ಶಿಫಾರಸ್ಸುಗಳನ್ನು ನೀಡಿದ್ದೇವೆ ಎಂದರು.

ವಿಧಾನ ಪರಿಷತ್ ಸದಸ್ಯರಾದ ಅರುಣ ಶಹಾಪುರ, ಡಾ:ವೈ.ಎ.ನಾರಾಯಣಸ್ವಾಮಿ, ಭೋಜೇಗೌಡ, ಶ್ರೀಕಂಠೇಗೌಡ, ಗೋವಿಂದರಾಜು ಇದ್ದರು.

**ಪ್ರಮುಖ ಶಿಫಾರಸ್ಸುಗಳು**: 15 ಮೀಟರ್‌ಗಿಂತ ಎತ್ತರ ಇರುವ ಶಾಲೆಗಳ ಕಟ್ಟಡದ ಅಗ್ನಿ ಸುರಕ್ಷತಾ ಎನ್‌ಒಸಿ ನೀಡುವ ಅಧಿಕಾರ ಆಯಾ ಜಿಲ್ಲಾಧಿಕಾರಿಗಳಿಗೆ ನೀಡಬೇಕು. ನೆಲಮಹಡಿ ಮಾತ್ರ ಇರುವ ಶಾಲೆಗಳಿಗೆ ಅಗ್ನಿ ಸುರಕ್ಷತಾ ಎನ್‌ಒಸಿಯಿಂದ ವಿನಾಯಿತಿ ನೀಡಬೇಕು. ನೆಲಮಹಡಿ ಇರುವ ಶಾಲೆಗಳ ನೀರಿನ ಟ್ಯಾಂಕರ್ ಸಾಮರ್ಥ್ಯ 10 ಸಾವಿರ ಲೀಟರ್‌ನಿಂದ 5 ಸಾವಿರ ಲೀಟರ್‌ಗೆ ಇಳಿಸಬೇಕು. ಶಾಲಾ ಕಟ್ಟಡ ಸ್ಥಿರತೆ ಪ್ರಮಾಣ ಪತ್ರ ನೀಡುವ ಅಧಿಕಾರವನ್ನು ಕಾರ್ಯನಿರ್ವಾಹಕ ಅಭಿಯಂತರರಿಗೆ ನೀಡಬೇಕು. ಕಟ್ಟಡ ಸುರಕ್ಷತಾ ಪ್ರಮಾಣ ಪತ್ರ ನವೀಕರಣ ಅವಧಿಯನ್ನು 5 ವರ್ಷದಿಂದ 10 ವರ್ಷಕ್ಕೆ ಏರಿಸಬೇಕು. ಶಾಲಾ ಕಾಲೇಜುಗಳ ಮಾನ್ಯತೆ ನವೀಕರಣ ಮೂರು ತಿಂಗಳಲ್ಲಿ ಮುಗಿಸಬೇಕು. ಸರ್ಕಾರಿ ಶಾಲಾ ಕಾಲೇಜುಗಳಲ್ಲೂ ಕಡ್ಡಾಯವಾಗಿ ಅಗ್ನಿ ಸುರಕ್ಷತಾ ನಿಯಮ ಪಾಲಿಸಬೇಕು. ಅಗ್ನಿ ಸುರಕ್ಷತಾ ಪ್ರಮಾಣ ಪತ್ರದ ಶುಲ್ಕವನ್ನು 20 ಸಾವಿರದಿಂದ 5 ಸಾವಿರಕ್ಕೆ ಇಳಿಸಬೇಕು. 2017–18ರ ಸಾಲಿನ ಪೂರ್ವದಲ್ಲಿ ಆರಂಭವಾದ ಹಾಗೂ ನಂತರದಲ್ಲಿ ಆರಂಭವಾದ ಶಾಲಾ ಕಾಲೇಜುಗಳ ಮಕ್ಕಳ ಸುರಕ್ಷತೆ ಕುರಿತು ಪಾಲಿಸಬೇಕಾದ ನಿಯಮಗಳ ಬಗ್ಗೆ ಪ್ರತ್ಯೇಕ ಕಿರು ಪುಸ್ತಕ ಬಿಡುಗಡೆ ಮಾಡಬೇಕು. ಮಕ್ಕಳ

ಸುರಕ್ಷತೆ ಕುರಿತು ಸಮಸ್ಯೆ/ದೂರುಗಳಿದ್ದಲ್ಲಿ ಅದರ ನಿರ್ವಹಣೆಗೆ ಎಲ್ಲ ಇಲಾಖೆಗಳ ಅಧಿಕಾರಿಗಳನ್ನು ಒಳಗೊಂಡ ರಾಜ್ಯಮಟ್ಟದ ಹಾಗೂ ಜಿಲ್ಲಾಮಟ್ಟದ ನಿರ್ವಹಣಾ ಸಮಿತಿಯನ್ನು ಪ್ರತ್ಯೇಕವಾಗಿ ರಚಿಸಬೇಕು.

ಆಧಾರ:ಉದಯವಾಣಿ, ದಿನಾಂಕ:02.09.2021

## 40. ಎಲ್ಎಡಿಗೆ ರೂ.600 ಕೋಟಿ ಬಿಡುಗಡೆ

ವಿಧಾನ ಪರಿಷತ್ತಿನ ಇತಿಹಾಸದಲ್ಲಿಯೇ ಪ್ರಥಮ ಬಾರಿಗೆ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಯಡಿ ರೂ.600 ಕೋಟಿ ಅನುದಾನ ಬಿಡುಗಡೆ ಮಾಡಲಾಗಿದೆ ಎಂದು ಸಭಾಪತಿ ತಿಳಿಸಿದ್ದಾರೆ.

ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ (ಎಲ್ಎಡಿ) ಅನುದಾನ ಕಡಿತ ಮತ್ತು ಬಯಲುಸೀಮೆ ವ್ಯಾಪ್ತಿಯ ವಿಧಾನಸಭಾ ಕ್ಷೇತ್ರಗಳ ಅಭಿವೃದ್ಧಿಗೆ ಘೋಷಿಸಿದ್ದ ಅನುದಾನ ಬಿಡುಗಡೆಯಾಗದಿರುವ ಕುರಿತು ರಚಿಸಲಾಗಿದ್ದ ಐವರು ಸದಸ್ಯರ ಸಮಿತಿಯ ಅಂತಿಮ ಸಭೆಯ ಅಧ್ಯಕ್ಷತೆ ವಹಿಸಿ ಮಾತನಾಡಿದರು. ಆರ್ಥಿಕ ಹಾಗೂ ಯೋಜನಾ ಇಲಾಖೆ ಅಧಿಕಾರಿಗಳೊಂದಿಗೆ ಚರ್ಚಿಸಿ ಅನುದಾನ ಬಿಡುಗಡೆಗೆ ಇದ್ದ ಆತಂಕಗಳ ನಿವಾರಣೆಗೆ ಸೂಕ್ತ ಕ್ರಮ ಕೈಗೊಳ್ಳುವ ನಿಟ್ಟಿನಲ್ಲಿ ಎರಡು ಸಭೆಗಳು ಯಶಸ್ವಿಯಾಗಿದೆ ಎಂದು ಹರ್ಷ ವ್ಯಕ್ತಪಡಿಸಿದರು.

2021–22ನೇ ಸಾಲಿನ ಮೊದಲ ಕಂತು ಸುಮಾರು ರೂ.150 ಕೋಟಿ ಈಗಾಗಲೇ ಬಿಡುಗಡೆಯಾಗಿದ್ದು, ಜಿಲ್ಲಾಧಿಕಾರಿಗಳ ಖಾತೆಗೆ ಜಮೆಯಾಗಿದೆ. 2018–19, 2019–20 ಹಾಗೂ 2020–21ನೇ ಸಾಲಿಗೆ ರೂ.1 ಕೋಟಿ ಅನುದಾನ ಬದಲು ರೂ.2 ಕೋಟಿ ಅನುದಾನ ಮಂಜೂರು ಮಾಡುವ ಬಗ್ಗೆ ಸೂಚಿಸಲಾಯಿತು. ಅದರಂತೆ ಕೂಡಲೇ ಎಲ್ಲಾ ಶಾಸಕರಿಗೆ 2021–22ನೇ ಸಾಲಿಗೆ ಕ್ರಿಯಾ ಯೋಜನೆ ರೂಪಿಸಲು ಅನುಮತಿ ನೀಡಿ ಎಲ್ಲ ಜಿಲ್ಲಾಧಿಕಾರಿಗಳು ರೂ.2ಕೋಟಿಗಳಿಗೆ ಕ್ರಿಯಾ ಯೋಜನೆ ರೂಪಿಸಲು ಅನುಮೋದನೆ ನೀಡಲಾಯಿತು.

ಮಾರ್ಗಸೂಚಿಗಳ ಪ್ರಕಾರ ಪ್ರತಿ ವರ್ಷ ಜೂನ್ ಅಂತ್ಯದೊಳಗಾಗಿ ಕ್ರಿಯಾ ಯೋಜನೆ ಅಂತಿಮಗೊಳಿಸಿ ಕಾಮಗಾರಿಗಳ ಪ್ರಗತಿಗೆ ಅನುಗುಣವಾಗಿ ಅನುದಾನ ಬಿಡುಗಡೆ ಮಾಡುವ ಕುರಿತು ಒಪ್ಪಿಗೆ ಸೂಚಿಸಲಾಗಿದೆ ಎಂದರು. ವಿಧಾನ ಪರಿಷತ್ತಿನ ಸದಸ್ಯ ಕೆ.ಸಿ.ಕೊಂಡಯ್ಯ, ಹನುಮಂತ ನಿರಾಣಿ ಹಾಗೂ ಅಪ್ಪಾಜಿಗೌಡ ಸರ್ಕಾರಕ್ಕೆ ಧನ್ಯವಾದ ಸಲ್ಲಿಸಿದರು.

**ಮನೆಗಾಗಿ ಭಿಕ್ಷೆ ಬೇಡೆನು:** ತಮಗೆ ನಿವಾಸ ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಪದೇಪದೇ ಪತ್ರ ಬರೆದು ಭಿಕ್ಷೆ ಬೇಡುವುದು ಸಾಧ್ಯವಿಲ್ಲ. ಸಭಾಪತಿಯೆಂಬ ಸಾಂವಿಧಾನಿಕ ಹುದ್ದೆಯ ಘನತೆ–ಗೌರವ ಉಳಿಸುವುದು ಅಷ್ಟೇ ಮುಖ್ಯವಾಗಿದೆ ಎಂದು ಸಭಾಪತಿ ಕಿಡಿಕಾರಿದ್ದಾರೆ.

ಆಧಾರ:ವಿಜಯವಾಣಿ, ದಿನಾಂಕ:05.09.2021

## 41. ಉತ್ತಮ ಶಾಸಕ ಪ್ರಶಸ್ತಿ 24ಕ್ಕೆ ಪ್ರದಾನ

ಈ ಸಲದ ಅಧಿವೇಶನದಲ್ಲಿ ಮೊದಲ ಬಾರಿಗೆ ಅತ್ಯುತ್ತಮ ಶಾಸಕ ಪ್ರಶಸ್ತಿಯನ್ನು ಪ್ರದಾನ ಮಾಡಲಾಗುವುದು ಹಾಗೂ ಕಲಾಪದ ಕೊನೆಯ ದಿನ ಲೋಕಸಭಾ ಸ್ಪೀಕರ್ ಅವರು ಜಂಟಿ ಅಧಿವೇಶನದಲ್ಲಿ ಮಾತನಾಡಲಿದ್ದಾರೆಂದು ಸಭಾಧ್ಯಕ್ಷರು ತಿಳಿಸಿರುತ್ತಾರೆ.

ವಿಧಾನಸೌಧದಲ್ಲಿ ಪತ್ರಿಕಾಗೋಷ್ಠಿಯಲ್ಲಿ ಮಾತನಾಡಿ ಸೆಪ್ಟೆಂಬರ್ 13 ರಿಂದ 24ರವರೆಗೆ ಅಧಿವೇಶನ ನಡೆಯಲಿದೆ. ಹಿಂದಿನ 4 ಮತ್ತು 18 ಹೊಸ ವಿಧೇಯಕ ಮಂಡನೆಯಾಗಲಿದ್ದು, ವಿಧಾನಸಭೆಯ ವೆಬ್‌ಸೈಟ್‌ನಲ್ಲಿ ಚುಕ್ಕೆ ಗುರುತಿನ ಹಾಗೂ ಚುಕ್ಕೆ ಗುರುತಿಲ್ಲದ ಪ್ರಶ್ನೋತ್ತರ ವಿವರ ಅಪ್‌ಲೋಡ್ ಆಗಲಿದ್ದು, ಸಾರ್ವಜನಿಕರಿಗೂ ಲಭ್ಯವಾಗಲಿವೆ ಎಂದು ತಿಳಿಸಿದರು.

ಅತ್ಯುತ್ತಮ ಶಾಸಕ ಪ್ರಶಸ್ತಿಗೆ ಆಯ್ಕೆ ಸಮಿತಿ ರಚಿಸಲಾಗಿದ್ದು, ಮುಖ್ಯಮಂತ್ರಿಗಳು, ಪ್ರತಿಪಕ್ಷಗಳ ನಾಯಕರು ಸೇರಿದಂತೆ ಇತರೆ ಪ್ರಮುಖರಿರುತ್ತಾರೆ. ರಾಜ್ಯಪಾಲರ ಜಂಟಿ ಅಧಿವೇಶನ ಭಾಷಣದಿಂದ ಒಂದು ವರ್ಷದಲ್ಲಿ ನಡೆಯುವ ಅಧಿವೇಶನದಲ್ಲಿ ಶಾಸಕರ ಪಾಲ್ಗೊಳ್ಳುವಿಕೆ, ಚರ್ಚೆ, ಇನ್ನಿತರ ಅಂಶ ಗುರುತಿಸಲಾಗುತ್ತಿದೆ. ಸೆಪ್ಟೆಂಬರ್ 24 ರಂದು ಪ್ರಶಸ್ತಿ ಪ್ರದಾನ ಮಾಡಲಾಗುವುದು. ಕಲಾಪದಲ್ಲಿ ಎಲ್ಲ ಸಚಿವರು, ಸದಸ್ಯರು, ಇತರೆ ಕೆಲಸ ಕಾರ್ಯಗಳ ನೆಪದಲ್ಲಿ ಗೈರಾಗದಂತೆ ಪತ್ರಮುಖೇನ ಮನವಿ ಮಾಡಲಾಗಿದೆ ಎಂದು ತಿಳಿಸಿದರು.

**ವೀಕ್ಷಣೆಗೆ ಅವಕಾಶ**: ಕೋವಿಡ್ ಹಿನ್ನೆಲೆಯಲ್ಲಿ ನಿರ್ಬಂಧ ಹಾಕಿದ್ದ ಕಲಾಪ ವೀಕ್ಷಣೆಯನ್ನು ಈ ಸಲ ಸಾರ್ವಜನಿಕರಿಗೆ ಅವಕಾಶ ಕಲ್ಪಿಸಲಾಗಿದೆ. ಶಾಲಾ ಮಕ್ಕಳಿಗೆ ಇಲ್ಲ ಎಂದು ಹೇಳಿದರು.

**ವಸತಿ ಸಮಸ್ಯೆ:** ಸಚಿವರು ಹಾಗೂ ಸಾಂವಿಧಾನಿಕ ಹುದ್ದೆ ಅಲಂಕರಿಸಿರುವ ಸಭಾಪತಿ, ವಿಧಾನಸಭಾಧ್ಯಕ್ಷರಿಗೂ ವಸತಿ ಗೃಹದ ಕೊರತೆ ಕಾಡುತ್ತಿದೆ. ಈಗಿರುವ ವಸತಿಗೃಹಗಳನ್ನು ನಿರ್ದಿಷ್ಟವಾಗಿ ಜವಾಬ್ದಾರಿ ಅನುಸಾರ ಹಂಚಿಕೆ ಮಾಡಿದರೆ ಸಮಸ್ಯೆ ಪರಿಹಾರವಾಗಲಿದೆ. ವಾಸ್ತು ಇತರೆ ಸಮಸ್ಯೆಗಳಿಗೆ ತಲೆ ಕೆಡಿಸಿಕೊಳ್ಳುವುದು ತಪ್ಪಲಿದೆ. ಈ ಬಗ್ಗೆ ಮುಖ್ಯಮಂತ್ರಿಗಳ ಗಮನಕ್ಕೆ ತರಲಾಗಿದೆ ಎಂದು ತಿಳಿಸಿದರು. ವಿಧಾನಸಭೆ ಕಾರ್ಯದರ್ಶಿ ಶ್ರೀಮತಿ ಎಂ.ಕೆ.ವಿಶಾಲಾಕ್ಷಿ ಉಪಸ್ಥಿತರಿದ್ದರು.

ಆಧಾರ:ವಿಜಯ ಕರ್ನಾಟಕ, ದಿನಾಂಕ:09.09.2021

## 42. ಸುಗಮ ಕಲಾಪಕ್ಕೆ ಕಾರ್ಯತಂತ್ರ

ರಾಜ್ಯ ವಿಧಾನಮಂಡಲದ ಅಧಿವೇಶನ ಸುಗಮವಾಗಿ ನಡೆಯುವ ನಿಟ್ಟಿನಲ್ಲಿ ಕೆಲವು ಅಗತ್ಯ ಕ್ರಮ ನಿಯಮ ರೂಪಿಸುವ ಸಂಬಂಧ ನಿರೂಪಣಾ ಸಮಿತಿ ರಚಿಸಲಾಗಿದೆ ಎಂದು ವಿಧಾನಸಭಾಧ್ಯಕ್ಷರು ತಿಳಿಸಿದ್ದಾರೆ.

ಸೆಪ್ಟೆಂಬರ್ 13 ರಿಂದ 24 ರವರೆಗೆ 10 ದಿನಗಳ ಕಾಲ ನಡೆಯಲಿರುವ ವಿಧಾನಮಂಡಲದ ಅಧಿವೇಶನದ ಬಗ್ಗೆ ಸುದ್ದಿಗೋಷ್ಠಿಯಲ್ಲಿ ಮಾಹಿತಿ ಒದಗಿಸಿದ ಅವರು, ಕಲಾಪ ಸುಗಮವಾಗಿ ನಡೆಯಲು ನಿಯಮಗಳ ಅಗತ್ಯವಿದೆ. ಆ ಕೆಲಸವನ್ನು ಸಮಿತಿ ಮಾಡಲಿದೆ. ಮುಖ್ಯಮಂತ್ರಿ, ವಿಪಕ್ಷನಾಯಕರ ಸಹಿತ ಹಿರಿಯರು ಸಮಿತಿಯಲ್ಲಿರುತ್ತಾರೆ ಎಂದು ಸಭಾಧ್ಯಕ್ಷರು ಹೇಳಿದರು.

ಕೋವಿಡ್ ಮಾರ್ಗಸೂಚಿ ಅನುಸರಿಸಿಯೇ ನಡೆಯುವ ಈ ಅಧಿವೇಶನದಲ್ಲಿ ಒಟ್ಟು 18 ವಿಧೇಯಕಗಳ ಮಂಡನೆ, ಚರ್ಚೆ, ಅಂಗೀಕಾರ ಆಗಲಿದೆ ಎಂದರು.

ಸರ್ಕಾರ ಸುಗ್ರೀವಾಜ್ಞೆಗೆ ಹೊರಡಿಸಿರುವ ನಾಲ್ಕು ಮಸೂದೆಗಳು ಮಂಡನೆಯಾಗಲಿವೆ. ಆರು ತಿಂಗಳ ಬಳಿಕ ಸೇರುತ್ತಿರುವ ಈ ಅಧಿವೇಶನದಲ್ಲಿ ಕಡ್ಡಾಯವಾಗಿ ಪಾಲ್ಗೊಳ್ಳಲು ಸಚಿವರು, ಶಾಸಕರು, ಅಧಿಕಾರಿಗಳಿಗೆ ಪತ್ರ ಮುಖೇನ ಸೂಚಿಸಲಾಗಿದೆ. ಯಾರೂ ನೆಪಹೇಳಿ ಗೈರಾಗುವಂತಿಲ್ಲ ಎಂದು ಸಭಾಧ್ಯಕ್ಷರು ವಿವರಿಸಿದರು.

ಕಲಾಪಗಳಲ್ಲಿ ಗದ್ದಲ, ಅಹಿತಕರ ಘಟನೆಗಳ ಹಿನ್ನೆಲೆಯಲ್ಲಿ ಸಂಸದೀಯ ಮೌಲ್ಯಗಳ ಸಂರಕ್ಷಣೆ ಬಗ್ಗೆ ಸೆಪ್ಟೆಂಬರ್ 24ರ ಅಧಿವೇಶನದ ಕೊನೆಯ ಅರ್ಧದಿನ ವಿಶೇಷ ಜಂಟಿ ಅಧಿವೇಶನಕ್ಕೆ ನಿರ್ಧರಿಸಲಾಗಿದೆ. ಲೋಕಸಭಾಧ್ಯಕ್ಷರನ್ನು ಆಹ್ವಾನಿಸಲಾಗುತ್ತಿದ್ದು, ಹಲವು ಹಿರಿಯ ಸಂಸದೀಯ ಪಟುಗಳು ಭಾಷಣ ಮಾಡಲಿದ್ದಾರೆ. ಈ ಬಾರಿ ಸಾರ್ವಜನಿಕರ ಪ್ರವೇಶಕ್ಕೆ ಅವಕಾಶವಿದೆ. ಆದರೆ ವಿದ್ಯಾರ್ಥಿಗಳ ಪಾಲ್ಗೊಳ್ಳುವಿಕೆ ಬೇಡ ಎಂದು ಮನವಿ ಮಾಡಿದರು.

ಆನ್‌ಲೈನ್ ನಿಷೇಧಕ್ಕೆ ಸಂಬಂಧಿಸಿದಂತೆ ಕರ್ನಾಟಕ ಪೊಲೀಸ್ ಕಾಯಿದೆ ತಿದ್ದುಪಡಿ ಸೇರಿದಂತೆ ಹಲವು ಪ್ರಮುಖ ವಿಧೇಯಕಗಳು ಅಧಿವೇಶನದಲ್ಲಿ ಮಂಡನೆಯಾಗಲಿವೆ.

ಪಾರದರ್ಶಕ ಕಾರ್ಯನಿರ್ವಹಣೆಗಾಗಿ ಇದೇ ಮೊದಲ ಬಾರಿಗೆ ವಿಧಾನಸಭೆಯ ವೆಬ್‌ಸೈಟ್ ರಚಿಸಲಾಗಿದ್ದು ಕಲಾಪದ ಮಾಹಿತಿಗಳು ಅಧಿಕಾರಿಗಳು, ಪತ್ರಕರ್ತರು ಹಾಗೂ ಸಾರ್ವಜನಿಕರಿಗೆ ಲಭ್ಯವಾಗಲಿದೆ ಎಂದು ಸಭಾಧ್ಯಕ್ಷರು ವಿವರಿಸಿದರು.

ಪ್ರತಿ ವರ್ಷ ಒಬ್ಬರಿಗೆ ಅತ್ಯುತ್ತಮ ಶಾಸಕ ಪ್ರಶಸ್ತಿ ನೀಡಲು ನಿರ್ಧರಿಸಿದ್ದು ಇದಕ್ಕೆಂದೇ ಒಂದು ಸಮಿತಿ ರಚಿಸಲಾಗಿದೆ. ಆಯ್ಕೆಯಾಗುವ ಶಾಸಕರಿಗೆ ಇದೇ ಅಧಿವೇಶನದಲ್ಲಿ ಪ್ರಶಸ್ತಿ ಪ್ರದಾನ ಮಾಡಲಾಗುವುದು ಎಂದು ಸಭಾಧ್ಯಕ್ಷರು ತಿಳಿಸಿದರು.

ಆಧಾರ:ವಿಜಯ ಕರ್ನಾಟಕ, ದಿನಾಂಕ:09.09.2021

## 43. ಮುಂಗಾರು ಅಧಿವೇಶನಕ್ಕೆ ಸಕಲ ಸಿದ್ಧತೆ

ವಿಧಾನಮಂಡಲದ ಮುಂಗಾರು ಅಧಿವೇಶನಕ್ಕೆ ವೇದಿಕೆ ಸಜ್ಜಾಗಿದ್ದು, ನೂತನ ಮುಖ್ಯಮಂತ್ರಿಯವರು ಮೊದಲ ಬಾರಿಗೆ ಅಧಿವೇಶನ ಎದುರಿಸಲಿದ್ದಾರೆ. ಕೊರೋನಾ ಕರಿಛಾಯೆ ಮಧ್ಯೆ ಅಧಿವೇಶನ ನಡೆಯುತ್ತಿರುವ ಹಿನ್ನೆಲೆಯಲ್ಲಿ ಪ್ರಮಾಣಿತ ಕಾರ್ಯಾಚರಣೆ ವಿಧಾನ (ಎಸ್‌ಒಪಿ) ಪಾಲನೆ ಕಡ್ಡಾಯಗೊಳಿಸಲಾಗಿದೆ. ಎರಡು ವರ್ಷಗಳ ಬಳಿಕ ಅಧಿವೇಶನ ಕಲಾಪ ವೀಕ್ಷಿಸಲು ಸಾರ್ವಜನಿಕರಿಗೆ ಅವಕಾಶ ಕಲ್ಪಿಸಲಾಗಿದೆ.

ವಿಧಾನಸೌಧದ ಸಮಿತಿ ಕೊಠಡಿಯಲ್ಲಿ ಕರೆದಿದ್ದ ಸುದ್ದಿಗೋಷ್ಠಿಯಲ್ಲಿ ವಿಧಾನ ಸಭಾಧ್ಯಕ್ಷರು ಸಿದ್ಧತೆ ಹಾಗೂ ಕಾರ್ಯ-ಕಲಾಪಗಳ ಮಾಹಿತಿ ನೀಡಿದರು. ಸೆಪ್ಟೆಂಬರ್ 13 ರಿಂದ 24ರ ವರೆಗೆ 10 ದಿನಗಳ ಕಾಲ ಅಧಿವೇಶನ ನಡೆಯಲಿದೆ. 18 ವಿಧೇಯಕಗಳು ಮಂಡನೆಯಾಗಲಿದ್ದು, ಬಾಕಿಯಿರುವ ನಾಲ್ಕು ಮಸೂದೆಗಳ ಪ್ರತಿ ಒದಗಿಸಲು ಕಾರ್ಯದರ್ಶಿಗೆ ಸೂಚಿಸಲಾಗಿದೆ.

ಸದನದ ಘನತೆ-ಗಾಂಭೀರ್ಯ, ಮೌಲ್ಯ, ಪಾವಿತ್ರ್ಯತೆ ಹಾಗೂ ಉತ್ತರದಾಯಿತ್ವ ಎತ್ತಿ ಹಿಡಿಯಲೆಂದು ಪ್ರಾರಂಭಿಸಿರುವ ಸಂಸದೀಯ ಮೌಲ್ಯಗಳ ಕುರಿತ ಚರ್ಚೆಯನ್ನು ಈ ಅಧಿವೇಶನದಲ್ಲೂ ಮುಂದುವರಿಸುವ ಇರಾದೆಯಿದೆ. ಅಧಿವೇಶನದ ಕೊನೆಯ ದಿನ (ಸೆಪ್ಟೆಂಬರ್ 24) ಮಧ್ಯಾಹ್ನದ ಭೋಜನ ವಿರಾಮದ ಬಳಿಕ ಲೋಕಸಭಾ ಸ್ಪೀಕರ್ ಅವರು ಸಂಸದೀಯ ಮೌಲ್ಯಗಳ ಕುರಿತು ಭಾಷಣ ಮಾಡಲಿದ್ದಾರೆ. ಮುಖ್ಯಮಂತ್ರಿ ಬಳಿ ಈ ವಿಷಯ ಪ್ರಸ್ತಾಪಿಸಿ, ಜಂಟಿ ಅಧಿವೇಶನಕ್ಕೆ ಅವಕಾಶ ಕಲ್ಪಿಸಬೇಕೆಂದು ಮನವಿ ಮಾಡಿರುವೆ. ಸೆಪ್ಟೆಂಬರ್ 13ರಂದು ಕಲಾಪ ಸಲಹಾ ಸಮಿತಿ ಸಭೆಯಲ್ಲೂ ಚರ್ಚಿಸುವೆ ಎಂದು ಸಭಾಧ್ಯಕ್ಷರು ಹೇಳಿದರು.

**ಅತ್ಯುತ್ತಮ ಶಾಸಕರಿಗೆ ಪ್ರಶಸ್ತಿ:** ಈಗಾಗಲೇ ತೀರ್ಮಾನಿಸಿದಂತೆ ಅಧಿವೇಶನದ ಕೊನೆ ದಿನ ಒಬ್ಬರಿಗೆ ಅತ್ಯುತ್ತಮ ಶಾಸಕ ಪ್ರಶಸ್ತಿ ಪ್ರದಾನ ಮಾಡಲಾಗುವುದು. ಇದಕ್ಕಾಗಿ ಮುಖ್ಯಮಂತ್ರಿ ಪ್ರತಿಪಕ್ಷದವರನ್ನು ಒಳಗೊಂಡ ಸಮಿತಿ ರಚಿಸಲಾಗಿದ್ದು, ಇನ್ನು ಮುಂದೆ ಪ್ರತಿ ವರ್ಷ ಒಬ್ಬ ಶಾಸಕರಿಗೆ ಈ ಪ್ರಶಸ್ತಿ ಕೊಡಮಾಡಲಾಗುತ್ತದೆ. ನಿಯಮಾವಳಿಗೆ ತಿದ್ದುಪಡಿ ತಂದು, ವಿಧಾನಸಭೆಯಲ್ಲಿ ನೀತಿ-ನಿರೂಪಣಾ ಸಮಿತಿ ರಚನೆಗೆ ಅಗತ್ಯ ತಯಾರಿ ಮಾಡಿಕೊಂಡಿದ್ದು, ಕಾನ್ಸಿಟ್ಯೂಷನ್ ಕ್ಲಬ್ ರಚನೆ ಪ್ರಯತ್ನಿಸಲಾಗಿದೆ ಎಂದರು.

ಆಧಾರ:ವಿಜಯವಾಣಿ, ದಿನಾಂಕ:09.09.2021

## 44. ಸದನಕ್ಕೆ ಗೈರಾಗಬೇಡಿ: ಶಾಸಕರಿಗೆ ಸ್ಪೀಕರ್ ಮನವಿ

ಮುಂಗಾರು ಅಧಿವೇಶನಕ್ಕೆ ಪ್ರತಿಯೊಬ್ಬ ಶಾಸಕರು ಹಾಜರಾಗಬೇಕು ಎಂದು ಮನವಿ ಮಾಡಿರುವ ವಿಧಾನ ಸಭಾಧ್ಯಕ್ಷರು, ಈ ಬಾರಿ 18 ಬಿಲ್‌ಗಳು ಮಂಡನೆಯಾಗಲಿದೆ ಎಂದು ತಿಳಿಸಿದರು.

ಸುದ್ದಿಗೋಷ್ಠಿಯಲ್ಲಿ ಮಾತನಾಡಿದ ಅವರು, 15ನೇ ವಿಧಾನಸಭೆಯ 10ನೇ ಅಧಿವೇಶನ ಸೆಪ್ಟೆಂಬರ್ 13 ರಿಂದ 24ರ ವರೆಗೆ ನಡೆಯಲಿದ್ದು, ಕಲಾಪ ನಡೆಯುವ ವೇಳೆ ಮುಖ್ಯಮಂತ್ರಿ ಒಳಗೊಂಡಂತೆ ಎಲ್ಲ ಸಚಿವರು, ಶಾಸಕರು ಕಡ್ಡಾಯವಾಗಿ ಹಾಜರಿರಬೇಕೆಂದು ಮನವಿ ಮಾಡಿದ್ದಾರೆ.

ಸೆಪ್ಟೆಂಬರ್ 13 ರಿಂದ 10 ದಿನಗಳ ಕಾಲ ನಡೆಯಲಿರುವ ಅಧಿವೇಶನ ಯಶಸ್ವಿಯಾಗಿ ನಡೆಯಲು ಆಡಳಿತ ಹಾಗೂ ಪ್ರತಿಪಕ್ಷದವರ ಸಹಕಾರ ಕೋರುತ್ತೇನೆ ಎಂದರು. ಅಧಿವೇಶನದಲ್ಲಿ ಇದುವರೆಗೂ 18 ಬಿಲ್‌ಗಳು ಬಂದಿವೆ. ಅದರಲ್ಲಿ ನಾಲ್ಕು ಪೆಂಡಿಂಗ್ ಇರುವ ಬಿಲ್ ಇವೆ. ಕಾರ್ಯದರ್ಶಿಗಳಿಗೆ ಪತ್ರ ಬರೆದು ಬಿಲ್ ಕಾಪಿ ಕೊಡಲು ಹೇಳಿದ್ದೇನೆ. ನಂತರ ಬರುವ ಬಿಲ್‌ಗಳ ಬಗ್ಗೆ ಏನು ಮಾಡಬೇಕೆಂದು ಸಂಬಂಧಿಸಿದವರ ಜೊತೆ ಚರ್ಚಿಸುತ್ತೇನೆ ಎಂದು ತಿಳಿಸಿದರು.

**ಯಾರೂ ಗೈರಾಗಬಾರದು**: ಅಧಿವೇಶನ 10 ದಿನ ಇರಲಿದೆ. ಬಜೆಟ್ ಅಧೀವೇಶನದ ಬಳಿಕ ನಡೆಯುತ್ತಿದೆ. ಸದನವನ್ನು ಗಂಭೀರವಾಗಿ ನಡೆಸಲು ನಿರ್ಧರಿಸಿದ್ದು, ಸಿಎಂ, ಪ್ರತಿಪಕ್ಷ ನಾಯಕರು ಹಾಗೂ ಎಲ್ಲ ಶಾಸಕರಿಗೆ ಮನವಿ ಮಾಡಿದ್ದೇನೆ. ಯಾರು ಗೈರಾಗದೇ ಕಡ್ಡಾಯವಾಗಿ ಭಾಗಿಯಾಗಬೇಕು. ಜನಪ್ರತಿನಿಧಿಗಳು ಸ್ವಯಂ ಪ್ರೇರಿತವಾಗಿ ಜವಾಬ್ದಾರಿ ಸ್ವೀಕರಿಸಬೇಕು. ಕೊರತೆ, ಪ್ರಶ್ನೆ ಕೇಳಲು ಸದಸ್ಯರಿಲ್ಲ, ಉತ್ತರ ನೀಡಲು ಸಚಿವರಿಲ್ಲ ಅನ್ನುವಂತಾಗಬಾರದು ಎಂದು ಹೇಳಿದರು.

ಈ ಸಂಬಂಧ ಈಗಾಗಲೇ ಸರ್ಕಾರಕ್ಕೂ ಮನವಿ ಮಾಡಲಾಗಿದೆ. ಸರ್ಕಾರ ಸ್ಪಂದಿಸಲಿದೆ ಎನ್ನುವ ವಿಶ್ವಾಸವಿದೆ. ಈ ಬಾರಿ ನಮ್ಮ ವೆಬ್‌ಸೈಟ್‌ನಲ್ಲಿ ಚುಕ್ಕಿ ಗುರುತಿನ ಪ್ರಶ್ನೆ ಮತ್ತು ಇತರೆ ಪ್ರಶ್ನೆಗಳನ್ನು ಅಪ್‌ಲೋಡ್ ಮಾಡಲಾಗುವುದು. ಸಾರ್ವಜನಿಕರ ಸೇವೆಗೂ ಲಭ್ಯವಿರಲಿವೆ ಎಂದು ವಿವರಿಸಿದರು.

**ಅಧ್ಯಾದೇಶಗಳು:**

- ರಾಜ್ಯ ಸಿವಿಲ್ ಸೇವೆಗಳು (ಶಿಕ್ಷಕರ ವರ್ಗಾವಣೆ ನಿಯಂತ್ರಣ ) (ತಿದ್ದುಪಡಿ)
- ಕರ್ನಾಟಕ ಸಾದಿಲ್ವಾರು ನಿಧಿ (ತಿದ್ದುಪಡಿ) ಅಧ್ಯಾದೇಶ
- ಕರ್ನಾಟಕ ಪಟ್ಟಣ ಮತ್ತು ಗ್ರಾಮಾಂತರ ಯೋಜನೆ (ತಿದ್ದುಪಡಿ), 2021
- ಕರ್ನಾಟಕ ಪಟ್ಟಣ ಮತ್ತು ಗ್ರಾಮಾಂತರ ಯೋಜನೆ (2ನೇ ತಿದ್ದುಪಡಿ)

**ಅಂಗೀಕಾರಕ್ಕೆ ಬಾಕಿ ಇರುವ ವಿಧೇಯಕಗಳು:**

- ಕರ್ನಾಟಕ ಅನುಸೂಚಿತ ಜಾತಿಗಳು, ಅನುಸೂಚಿತ ಬುಡಕಟ್ಟುಗಳು ಮತ್ತು ಇತರ ಹಿಂದುಳಿದ ವರ್ಗಗಳ (ನೇಮಕಾತಿ ಮುಂತಾದವುಗಳು, ಮೀಸಲಾತಿ) (ತಿದ್ದುಪಡಿ) ವಿಧೇಯಕ
- ಕರ್ನಾಟಕ ಲೋಕಾಯುಕ್ತ (ಮೂರನೇ ತಿದ್ದುಪಡಿ) ವಿಧೇಯಕ
- ಕರ್ನಾಟಕ ಸೌಹಾರ್ದ ಸಹಕಾರಿ (ತಿದ್ದುಪಡಿ) ವಿಧೇಯಕ

**ಈ ಬಾರಿ ಇರುವ ಬಿಲ್‌ಗಳು:**

- ಬೆಂಗಳೂರು ನೀರು ಸರಬರಾಜು ಮತ್ತು ಗ್ರಾಮಸಾರ ಚರಂಡಿ ವ್ಯವಸ್ಥೆ (ತಿದ್ದುಪಡಿ) ವಿಧೇಯಕ, 2021

- ಕಳ್ಳಬಟ್ಟಿ ವ್ಯಾಪಾರಿಗಳ, ಮಾದಕ ವಸ್ತು, ಅಪರಾಧಿಗಳ, ಜೂಜುಕೋರರ, ಗೂಂಡಾಗಳ, ಅನೈತಿಕ ವ್ಯವಹಾರ ಅಪರಾಧಿಗಳ, ಕೊಳಚೆ ಪ್ರದೇಶಗಳನ್ನು ಕಬಳಿಸುವವರ ಹಾಗೂ ದೃಶ್ಯ ಅಥವಾ ಧ್ವನಿ (ವಿಡಿಯೋ ಅಥವಾ ಆಡಿಯೋ) ಕಳ್ಳಮುದ್ರಕರ ಚಟುವಟಿಕೆಗಳ ಪ್ರತಿಬಂಧಕ (ತಿದ್ದುಪಡಿ) ವಿಧೇಯಕ, 2021
- ಬಂಧಿಗಳ ಗುರುತಿಸುವಿಕೆ (ಕರ್ನಾಟಕ ತಿದ್ದುಪಡಿ) ವಿಧೇಯಕ, 2021
- ದಂಡ ಪ್ರಕ್ರಿಯಾ ಸಂಹಿತೆ (ಕರ್ನಾಟಕ ತಿದ್ದುಪಡಿ) ವಿಧೇಯಕ, 2021
- ಕರ್ನಾಟಕ ಬಂಧೀಖಾನೆ ಅಭಿವೃದ್ಧಿ ಮಂಡಳಿ ವಿಧೇಯಕ, 2021
- ಕರ್ನಾಟಕ ಕೃಷಿ ಸಂಬಂಧಿ ಕೀಟಗಳು ಮತ್ತು ರೋಗಗಳ (ತಿದ್ದುಪಡಿ) ವಿಧೇಯಕ, 2021
- ಕರ್ನಾಟಕ ಸ್ಟಾಂಪು (ತಿದ್ದುಪಡಿ) ವಿಧೇಯಕ, 2021
- ಕರ್ನಾಟಕ ಖಾದಿ ಮತ್ತು ಗ್ರಾಮೋದ್ಯೋಗಗಳ (ತಿದ್ದುಪಡಿ) ವಿಧೇಯಕ, 2021
- ಕರ್ನಾಟಕ ಪೌರಸಭೆಗಳು ಮತ್ತು ಕೆಲವು ಇತರ ಕಾನೂನು (ಎರಡನೇ ತಿದ್ದುಪಡಿ) ವಿಧೇಯಕ, 2021
- ಕರ್ನಾಟಕ ಸ್ಥಳೀಯ ನಿಧಿ ಪ್ರಾಧಿಕಾರಗಳ ಆರ್ಥಿಕ ಹೊಣೆಗಾರಿಕೆ (ತಿದ್ದುಪಡಿ) ವಿಧೇಯಕ, 2021

ಆಧಾರ:ವಿಜಯ ಕರ್ನಾಟಕ, ದಿನಾಂಕ:09.09.2021

## 45. ಕಲಾಪ ನಿಯಂತ್ರಣಕ್ಕೆ ನೀತಿ ನಿರೂಪಣಾ ಸಮಿತಿ: ಕಾಗೇರಿ

ವಿಧಾನಸಭೆಯ ಕಲಾಪವನ್ನು ಸುಗಮವಾಗಿ ನಡೆಸುವುದಕ್ಕೆ ಪೂರಕವಾಗಿ ನೀತಿ ನಿರೂಪಣಾ ಸಮಿತಿಯನ್ನು ರಚಿಸಲಾಗುವುದು ಎಂದು ವಿಧಾನ ಸಭಾಧ್ಯಕ್ಷರು ತಿಳಿಸಿದರು.

ಪತ್ರಿಕಾಗೋಷ್ಠಿಯಲ್ಲಿ ಮಾತನಾಡಿದ ಅವರು ನೀತಿ ನಿರೂಪಣಾ ಸಮಿತಿ (ಎಥಿಕ್ಸ್ ಕಮಿಟಿ) ರಚನೆಗೆ ಸಂಬಂಧಿಸಿದಂತೆ ಸದನದ ನಿಯಮಾವಳಿ ಸಮಿತಿಯು ಚರ್ಚೆ ನಡೆಸಿದೆ. ಇದೇ 13 ರಿಂದ ಆರಂಭವಾಗುವ ಅಧಿವೇಶನದಲ್ಲಿ ವಿಧಾನಸಭೆಯ ಕಾರ್ಯವಿಧಾನ ಮತ್ತು ನಡವಳಿಕೆ ನಿಯಮಗಳಿಗೆ ಕೆಲವು ಸೆಕ್ಷನ್‌ಗಳನ್ನು ಸೇರಿಸಿದ ಬಳಿಕ ನೀತಿ ನಿರೂಪಣಾ ಸಮಿತಿಯನ್ನು ರಚಿಸಲಾಗುವುದು ಎಂದರು.

ಸೆಪ್ಟೆಂಬರ್ 13 ರಿಂದ ಆರಂಭವಾಗುವ ಅಧಿವೇಶನದಲ್ಲಿ ವಿಧಾನಸಭೆಯ ಅಧ್ಯಕ್ಷರು ಸದನದಲ್ಲಿ ವರದಿಯೊಂದನ್ನು ಮಂಡಿಸಲಿದ್ದಾರೆ. ನೀತಿ ನಿರೂಪಣಾ ಸಮಿತಿಯ ಅಧಿಕಾರ ವ್ಯಾಪ್ತಿ ಕಾರ್ಯವಿಧಾನಗಳ ಕುರಿತು ಈ ವರದಿ ಸ್ಪಷ್ಟಪಡಿಸಲಿದೆ. ಆ ಬಳಿಕ ಸಮಿತಿಯ ಸದಸ್ಯರನ್ನು ನೇಮಕ ಮಾಡಲಾಗುತ್ತದೆ ಎಂದು ವಿಧಾನಸಭೆ ಸಚಿವಾಲಯದ ಅಧಿಕಾರಿಗಳು ಮಾಹಿತಿ ನೀಡಿದ್ದಾರೆ.

ಕಲಾಪದ ಅವಧಿಯಲ್ಲಿ ಮುಖ್ಯಮಂತ್ರಿ ಮತ್ತು ಎಲ್ಲ ಸಚಿವರು ಹಾಜರಿರುವುದನ್ನು ಕಡ್ಡಾಯಗೊಳಿಸಲಾಗಿದೆ. ಅಧಿವೇಶನದ ಅವಧಿಯಲ್ಲಿ ಯಾವುದೇ ಇತರ ಕಾರ್ಯಕ್ರಮ ನಿಗದಿಪಡಿಸಿಕೊಳ್ಳಬಾರದು. ಸಚಿವರು ರಜೆ ಅರ್ಜಿ ಸಲ್ಲಿಸಬಾರದು. ನೆಪ ಹೇಳಿ ಕಲಾಪಕ್ಕೆ ಗೈರಾಗುವಂತಿಲ್ಲ ಎಂಬ ಸೂಚನೆ ನೀಡಲಾಗಿದೆ ಎಂದು ತಿಳಿಸಿದರು.

ಆಧಾರ:ಪ್ರಜಾವಾಣಿ, ದಿನಾಂಕ:09.09.2021

## 46. ಅಧಿವೇಶನದಲ್ಲಿ ಸಚಿವರು ಕಡ್ಡಾಯ ಭಾಗಿಯಾಗಲಿ: ಸಿ.ಎಂಗೆ ಹೊರಟ್ಟಿ

ಈ ತಿಂಗಳ 13 ರಿಂದ ಆರಂಭವಾಗಲಿರುವ ಹತ್ತು ದಿನದ ವಿಧಾನಮಂಡಲ ಅಧಿವೇಶನದ ಕಲಾಪದಲ್ಲಿ ಕಡ್ಡಾಯವಾಗಿ ಪಾಲ್ಗೊಳ್ಳುವಂತೆ ಸಚಿವ ಸಂಪುಟದ ಸಹೋದ್ಯೋಗಿಗಳಿಗೆ ಸೂಚನೆ ನೀಡುವಂತೆ ವಿಧಾನಪರಿಷತ್ ಸಭಾಪತಿ ಅವರು ಮುಖ್ಯಮಂತ್ರಿ ಅವರಿಗೆ ಮನವಿ ಮಾಡಿದ್ದಾರೆ.

ನಾಡಿನ ಜ್ವಲಂತ ಸಮಸ್ಯೆ ಹಾಗೂ ಸಾರ್ವಜನಿಕರ ಸಂಕಷ್ಟಗಳ ಕುರಿತು ಚರ್ಚೆ ನಡೆಸಿ ಪರಿಹಾರ ಕಂಡುಕೊಳ್ಳಲು ಸೂಕ್ತ ವೇದಿಕೆಯಾಗಿರುವ ಅಧಿವೇಶನದ ಕಲಾಪಗಳು ನಡೆಯುವಾಗ ಸಚಿವರು ಸದನದಲ್ಲಿ ಕಡ್ಡಾಯವಾಗಿ ಹಾಜರಿರುವುದು ಉತ್ತಮ. ಹಿಂದಿನ ಅಧಿವೇಶನಗಳ ಸಂದರ್ಭದಲ್ಲಿ ಹಲವು ಸಚಿವರು ತಮ್ಮ ಕ್ಷೇತ್ರಕ್ಕೆ ಸಂಬಂಧಿಸಿದ ಕೆಲಸಗಳ ಕಾರಣದಿಂದ ಸದನಕ್ಕೆ ಗೈರುಹಾಜರಾಗುವ ಕುರಿತು ಅನುಮತಿ ಕೋರುತ್ತಿದ್ದುದು ಸಾಮಾನ್ಯವಾಗಿತ್ತು. ಪ್ರಶ್ನೋತ್ತರ ಹಾಗೂ ಚರ್ಚೆಯ ವೇಳೆ ಸಚಿವರು ಸದನದಲ್ಲಿ ಇಲ್ಲದೇ ಇರುವುದರಿಂದ ಸಂಬಂಧಪಟ್ಟ ಪ್ರಶ್ನೆಗೆ ಸಮರ್ಪಕ ಉತ್ತರ ದೊರೆಯದೆ ಸಮಸ್ಯೆಗೆ ಸೂಕ್ತ ಪರಿಹಾರ ಸಿಗುವುದಿಲ್ಲ. ಸಚಿವರು ಗೈರಿನಿಂದಾಗಿ ಕಲಾಪ ನಡೆಸುವ ಉದ್ದೇಶ ಸಫಲವಾಗುವುದಿಲ್ಲ ಎಂದು ಅವರು ಹೇಳಿಕೆಯಲ್ಲಿ ತಿಳಿಸಿದ್ದಾರೆ.

**ಕ್ಷೇತ್ರ ಕಾರ್ಯಕ್ಕೆ ಅನುಮತಿ ಕೋರಬೇಡಿ:** ಅಧಿವೇಶನದ ವೇಳೆ ತಮ್ಮ ಕ್ಷೇತ್ರಗಳ ಕಾರ್ಯಕ್ರಮಗಳನ್ನು ಉಲ್ಲೇಖಿಸಿ ಸದನದ ಕಲಾಪದಿಂದ ವಿನಾಯಿತಿ ಕೋರಿ ಮನವಿ ಸಲ್ಲಿಸದಂತೆ ಸಚಿವರನ್ನು ಕೋರಿದ್ದಾರೆ.

ಆಧಾರ:ಕನ್ನಡ ಪ್ರಭ, ದಿನಾಂಕ:10.09.2021

## 47. ಸುಗಮ ಕಲಾಪಕ್ಕೆ ಸರ್ಕಸ್

ಸಿಎಂ ಆದ ಬಳಿಕ ನಡೆಯುತ್ತಿರುವ ಮೊದಲ ವಿಧಾನಸಭೆ ಅಧಿವೇಶನದಲ್ಲಿ ವಿರೋಧ ಪಕ್ಷಗಳನ್ನು ವಿಶ್ವಾಸಕ್ಕೆ ತೆಗೆದುಕೊಂಡು ಮುನ್ನಡೆಸುವ ಉಮೇದಿನಲ್ಲಿರುವ ಬಸವರಾಜ ಬೊಮ್ಮಾಯಿ ಈ ನಿಟ್ಟಿನಲ್ಲಿ ಕೆಲ ಹೆಜ್ಜೆ ಇಟ್ಟಿದ್ದಾರೆ. ವಿರೋಧ ಪಕ್ಷಗಳ ಜೊತೆಗೆ ಈಗಾಗಲೇ ಒಂದು ಸುತ್ತು ಮಾತುಕತೆ ನಡೆಸಿರುವ ಸಿಎಂ ಸದನ ಸುಸೂತ್ರವಾಗಿ ನಡೆಸಲು ಎಲ್ಲರೂ ಚರ್ಚೆಯಲ್ಲಿ ಪಾಲ್ಗೊಳ್ಳಲು ಅನುಕೂಲವಾಗುವ ವಾತಾವರಣ ಸೃಷ್ಟಿಸಲು ನಿಮ್ಮೆಲ್ಲರ ಸಹಕಾರ ಬೇಕು ಎಂದು ಕೇಳಿಕೊಂಡಿದ್ದಾರೆ ಎಂದು ವಿಶ್ವಾಸನೀಯವಾಗಿ ತಿಳಿದು ಬಂದಿದೆ.

**ಗೈರಾದ ಸಚಿವರ ವಿರುದ್ಧ ಕ್ರಮ:** ಹತ್ತು ದಿನ ವಿಧಾನಮಂಡಲದ ಅಧಿವೇಶನ ನಡೆಯಲಿದ್ದು, ಸದನ ಕಲಾಪಗಳ ಸಂದರ್ಭದಲ್ಲಿ ಸಚಿವರು ಕಡ್ಡಾಯವಾಗಿ ಪಾಲ್ಗೊಳ್ಳುವಂತೆ ಸಚಿವ ಸಂಪುಟ ಸಹೋದ್ಯೋಗಿಗಳಿಗೆ ಸೂಚಿಸಬೇಕೆಂದು ವಿಧಾನ ಪರಿಷತ್ತಿನ ಸಭಾಪತಿ ಅವರು ಮುಖ್ಯಮಂತ್ರಿಯವನ್ನು ಕೋರಿದ್ದಾರೆ. ಸದಸ್ಯರು ಸಾರ್ವಜನಿಕ ಮಹತ್ವದ ವಿಚಾರಗಳ ಬಗ್ಗೆ ಸದನದಲ್ಲಿ ಕೇಳುವ ಪ್ರಶ್ನೆಗಳಿಗೆ ಸಂಬಂಧಿತ ಸಚಿವರು ಉತ್ತರ ನೀಡಬೇಕಾಗಿರುವುದು ಅವರ ಕರ್ತವ್ಯ. ಸಚಿವರ ಗೈರಿನಿಂದಾಗಿ ಕಲಾಪ ನಡೆಸುವ ಉದ್ದೇಶ ಸಾಫಲ್ಯಗೊಳ್ಳುವುದಿಲ್ಲ ಎಂದು ಸಭಾಪತಿ ಅಭಿಪ್ರಾಯಪಟ್ಟಿದ್ದಾರೆ.

ಆಧಾರ:ವಿಜಯವಾಣಿ, ದಿನಾಂಕ:10.09.2021

## 48. ಪರಿಷತ್ ಸಭಾನಾಯಕರು ಕೋಟ ಶ್ರೀನಿವಾಸಪೂಜಾರಿ

ವಿಧಾನ ಪರಿಷತ್‌ನ ಸಭಾನಾಯಕರಾಗಿ ಸಮಾಜ ಕಲ್ಯಾಣ ಸಚಿವ ಕೋಟ ಶ್ರೀನಿವಾಸಪೂಜಾರಿ ಅವರನ್ನು ನೇಮಿಸಲಾಗಿದೆ. ಮುಖ್ಯಮಂತ್ರಿ ಅವರು ಈ ಕುರಿತು ಪರಿಷತ್ ಸಭಾಪತಿ ಅವರಿಗೆ ನೇಮಕ ಸಂಬಂಧ ಪತ್ರ ಬರೆದಿದ್ದಾರೆ. ಈ ಹಿಂದೆಯೂ ಕೋಟ ಶ್ರೀನಿವಾಸಪೂಜಾರಿ ಅವರು

ಸಭಾನಾಯಕರಾಗಿ ಕೆಲಸ ಮಾಡಿದ್ದರು. ಹೊಸ ಸಂಪುಟ ಅಸ್ತಿತ್ವಕ್ಕೆ ಬಂದ ನಂತರ ಮತ್ತೆ ಅವರನ್ನೇ ನೇಮಿಸಲಾಗಿದೆ.

ಆಧಾರ:ಉದಯವಾಣಿ, ದಿನಾಂಕ:12.09.2021

## 49. ಅರ್ಥಪೂರ್ಣ ಕಲಾಪದ ನಿರೀಕ್ಷೆ

ವಿಧಾನಸಭೆಯಲ್ಲಿ ಶಾಸಕರು ಕಡ್ಡಾಯವಾಗಿ ಪಾಲ್ಗೊಳ್ಳುವುದು ಮತ್ತು ಸಚಿವರು ಕೂಡ ಸದನಕ್ಕೆ ರಜೆ ಹಾಕದೇ ಕಡ್ಡಾಯವಾಗಿ ಪಾಲ್ಗೊಳ್ಳಬೇಕು ಎಂಬುದು ನನ್ನ ಮೊಟ್ಟಮೊದಲ ಆಶಯ. ಈ ಕುರಿತಾಗಿ ಈಗಾಗಲೇ ಮುಖ್ಯಮಂತ್ರಿಗಳಿಗೆ, ಸಭಾನಾಯಕರಿಗೆ ತಿಳಿಸಿದ್ದೇನೆ. ಕಲಾಪ ಸಲಹಾ ಸಮಿತಿಯ ನಿರ್ಣಯದಂತೆ ನಿತ್ಯ ಸದನದಲ್ಲಿ ಯಾವ ಯಾವ ಕಲಾಪಗಳು ನಡೆಯಬೇಕೆಂಬುದು ನಿಯಮಾನುಸಾರ ನಿರ್ಣಯ ಆಗಿರುತ್ತದೆ. ಅದಕ್ಕೆ ಎರಡೂ ಕಡೆಯ ಸದಸ್ಯರು ಬದ್ಧರಾಗಿ ಸುಗಮವಾಗಿ ಕಲಾಪ ನಡೆಯುವಂತೆ ನಡೆದುಕೊಳ್ಳಬೇಕು. ಅನೇಕ ಸಲ ಕೋರಂ ಇಲ್ಲದೆ ಸದನ ನಡೆಸಲು ಪರದಾಡುವಂತಹ ಪರಿಸ್ಥಿತಿ ಉದ್ಭವವಾಗುತ್ತದೆ. ಹಾಜರಾತಿಯನ್ನು ಖಚಿತಪಡಿಸಿದರೆ ಉಳಿದೆಲ್ಲ ಕಲಾಪಗಳು ತಾನಾಗಿಯೇ ನಡೆದುಕೊಂಡು ಹೋಗುತ್ತವೆ. ಶಾಸನಸಭೆಯ ಗೌರವ ಮತ್ತು ಮಹತ್ವವನ್ನು ಎತ್ತಿ ಹಿಡಿಯುವ ನಿಟ್ಟಿನಲ್ಲಿ ಈಗಾಗಲೇ ಹಲವಾರು ರೀತಿಯಲ್ಲಿ ಪ್ರಯತ್ನಗಳು ಆರಂಭಿಸಿದ್ದೇವೆ. ಈ ಬಾರಿ ಸದನದ ಕಲಾಪದಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುವ ಒಬ್ಬ ಸದಸ್ಯರಿಗೆ ಅತ್ಯುತ್ತಮ ಶಾಸಕ ಪ್ರಶಸ್ತಿ ಕೊಡುವ ಮೂಲಕ ಶಾಸಕರಿಗೆ ಉತ್ತೇಜನ ಕೊಡುವ ಪ್ರಯತ್ನವನ್ನು ಮಾಡುತ್ತಿದ್ದೇವೆ. ಬರುವ ದಿನಗಳಲ್ಲಿ ಸದನ ಇನ್ನಷ್ಟು ಅರ್ಥಪೂರ್ಣವಾಗಿ ನಡೆಯುತ್ತದೆ ಎಂಬ ವಿಶ್ವಾಸವಿದೆಯೆಂದು ವಿಧಾನ ಸಭಾ ಸಭಾಧ್ಯಕ್ಷರು ತಿಳಿಸಿದರು.

**ಪ್ರತಿ ಸದಸ್ಯನ ಹಕ್ಕು ರಕ್ಷಣೆಯಾಗಬೇಕು:**

ಸಂಸದೀಯ ವ್ಯವಸ್ಥೆಯ ಮೌಲ್ಯಗಳು ಉಳಿಯಬೇಕಾದರೆ ಸದನದಲ್ಲಿ ಚರ್ಚೆಯ ಸಂದರ್ಭದಲ್ಲಿ ಪ್ರತಿಯೊಬ್ಬ ಸದಸ್ಯರ ಸ್ವಾತಂತ್ರ್ಯದ ಹರಣ ಆಗದಂತಹ ಮುಕ್ತ ವಾತಾವರಣ ನಿರ್ಮಾಣವಾಗಬೇಕು. ನಿಯಮಾವಳಿ ಅನುಸಾರ ಪ್ರತಿಯೊಬ್ಬ ಸದಸ್ಯ ಸರ್ಕಾರದ ಓರೆಕೋರೆ ತಿದ್ದುವ ಅವಕಾಶ ಸಿಗಬೇಕು ಸದಸ್ಯರ ಭಾವನೆಗಳಿಗೆ ಸದನದಲ್ಲಿ ಬೆಲೆ ಸಿಗಬೇಕು. ಈ ವಿಚಾರದಲ್ಲಿ ಸ್ಪೀಕರ್‌ಗೆ ಬಹುದೊಡ್ಡ ಜವಾಬ್ದಾರಿ ಇದೆ. ಸ್ಪೀಕರ್‌ಗೆ ಸದಸ್ಯರು ಕೂಡ ಸಹಕಾರ ಕೊಡಬೇಕಾಗುತ್ತದೆ. ನಮ್ಮ ರಾಜ್ಯದ ಶಾಸನ ಸಭೆಗೆ ಬಹುದೊಡ್ಡ ಗೌರವ ಇದೆ. ಕಮರಿ ಹೋಗುತ್ತಿರುವ ಸಂಸದೀಯ ಮೌಲ್ಯಗಳನ್ನು ಮರು ಪ್ರತಿಷ್ಠಾಪನೆ ಮಾಡುವ ದೊಡ್ಡ ಜವಾಬ್ದಾರಿ ನಮ್ಮೆಲ್ಲ ಸದಸ್ಯರ ಮೇಲಿದೆ. ಸದನ ಸುಸೂತ್ರವಾಗಿ ನಡೆಯಬೇಕು ಹಾಗೂ ಸದನದಲ್ಲಿ ಸದಸ್ಯರಿಗೆ ನಿಷ್ಪಕ್ಷಪಾತವಾಗಿ ಮಾತನಾಡುವ ಅವಕಾಶ ಸಿಗಬೇಕು. ಕಾಟಾಚಾರಕ್ಕೆ ಸದನ ನಡೆಯುವ ಬದಲು ಫಲಿತಾಂಶ ಪ್ರೇರಿತ ಚರ್ಚೆಗಳಿಗೆ ಸಮಯ ಸಿಗಬೇಕು. ಈ ದಿಸೆಯಲ್ಲಿ ಸ್ಪೀಕರ್ ತೆಗೆದುಕೊಳ್ಳುವ ಸಕಾರಾತ್ಮಕ ಕ್ರಮಗಳಿಗೆ ನಮ್ಮ ನೈತಿಕ ಬೆಂಬಲ ಇದೆ. ಸದನದ ಸದಸ್ಯರ ಹಕ್ಕುಗಳ ಜವಾಬ್ದಾರಿಯನ್ನು ಸ್ಪೀಕರ್ ನಿರ್ವಹಿಸಬೇಕು. ಆಗ ಮಾತ್ರ ಶಾಸನ ಸಭೆಯ ಘನತೆ ಇಮ್ಮಡಿಯಾಗುತ್ತದೆ. ನಾಡಿನ ಜನರ ನಿರೀಕ್ಷೆಯನ್ನು ಹುಸಿಗೊಳಿಸದಂತೆ ನಾವೆಲ್ಲ ನಡೆದುಕೊಳ್ಳಬೇಕು ಎಂದು ಹೆಚ್.ಕೆ.ಪಾಟೀಲ್‌ರವರು ಹೇಳಿದರು.

**ಸಚಿವರು ಉತ್ತರದಾಯಿತ್ವ ಹೊಂದಿರಬೇಕು:**

ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ವಿಧಾನಮಂಡಲದ ಅಧಿವೇಶನ ಬಹುಮುಖ್ಯವಾಗಿದ್ದು ನಾಡಿನ ಜ್ವಲಂತ ಸಮಸ್ಯೆಗಳ ಬಗ್ಗೆ ಹಾಗೂ ಸಾರ್ವಜನಿಕರ ಸಂಕಷ್ಟಗಳ ಕುರಿತು ಚರ್ಚೆ ನಡೆಸಿ ಪರಿಹಾರ ಕಂಡುಕೊಳ್ಳಲು ಅಧಿವೇಶನ ಸೂಕ್ತ ವೇದಿಕೆಯಾಗಿದೆ. ಶಾಸನ ಸಭೆಯ ಕಲಾಪಗಳು ನಡೆಯುವಾಗ ಸಚಿವರು ಸದನದಲ್ಲಿ ಕಡ್ಡಾಯವಾಗಿ ಹಾಜರಿರಬೇಕು. ವಿಧಾನ ಪರಿಷತ್ ಕಲಾಪಗಳಲ್ಲಿ ಸಚಿವರು ಕಡ್ಡಾಯವಾಗಿ ಪಾಲ್ಗೊಳ್ಳುವಂತೆ ಸಚಿವ ಸಂಪುಟದ ಸಹೋದ್ಯೋಗಿಗಳಿಗೆ ಸೂಚನೆ ನೀಡುವಂತೆ

ಮುಖ್ಯಮಂತ್ರಿ ಅವರಿಗೆ ಪತ್ರ ಬರೆಯಲಾಗಿದೆ. ಈ ಹಿಂದೆ ನಡೆದಿರುವ ಅಧಿವೇಶನಗಳ ಸಂದರ್ಭದಲ್ಲಿ ಹಲವು ಸಚಿವರು, ತಮ್ಮ ಕ್ಷೇತ್ರಕ್ಕೆ ಸಂಬಂಧಿತ ಕಾರ್ಯಗಳ ಕಾರಣದ ಮೇಲೆ ಸದನಕ್ಕೆ ಗೈರುಹಾಜರಾಗುವ ಕುರಿತು ಅನುಮತಿ ಕೋರುತ್ತಿದ್ದುದ್ದು ಸರ್ವೇಸಾಮಾನ್ಯವಾಗಿದೆ. ಸಚಿವರ ಅನುಪಸ್ಥಿತಿಯ ಆಡಳಿತಾರೂಢ ಸರ್ಕಾರದಿಂತ ಉತ್ತರ ಪಡೆಯುವ ಸದಸ್ಯರ ಹಕ್ಕು ಮತ್ತು ಅವಕಾಶವನ್ನು ವಂಚಿಸಿದಂತಾಗುತ್ತದೆ. ಕಾರಣ ಸಚಿವರು ಸದನದಲ್ಲಿ ಹಾಜರಿರುವುದನ್ನು ಖಾತ್ರಿಪಡಿಸಿಕೊಳ್ಳುವಂತೆ ಮುಖ್ಯಮಂತ್ರಿಗಳಿಗೆ ಕೋರಿದ್ದೇನೆ. ಅಧಿವೇಶನದ ಯಶಸ್ವಿಯಲ್ಲಿ ಕೇವಲ ಸಚಿವರ ಹಾಗೂ ಶಾಸಕರುಗಳ ಪಾತ್ರವಿರದೇ ಸಂಬಂಧಿಸಿದ ಇಲಾಖೆಗಳ ಅಧಿಕಾರಿಗಳ ಪಾಲ್ಗೊಳ್ಳುವಿಕೆಯೂ ಅಷ್ಟೇ ಪ್ರಮುಖವಾಗಿದೆ. ಚರ್ಚೆಯ ವೇಳೆ ಸದನದಲ್ಲಿ ಅಧಿಕಾರಿಗಳ ಉಪಸ್ಥಿತಿ ಕೂಡ ಮುಖ್ಯವೆಂದು ವಿಧಾನ ಪರಿಷತ್ ಸಭಾಪತಿಯವರು ತಿಳಿಸಿದರು.

ಆಧಾರ:ಸಂಯುಕ್ತ ಕರ್ನಾಟಕ, ದಿನಾಂಕ:13.09.2021

## 50. ವಿಧಾನಸಭೆ: ದಾಖಲೆ ಮಂದಿಗೆ ಸಂತಾಪ

ವಿಧಾನಸಭೆ/ವಿಧಾನಪರಿಷತ್ ಕಳೆದ ಆರು ತಿಂಗಳ ಅವಧಿಯಲ್ಲಿ ಅಗಲಿದ ಮಾಜಿ ಸಚಿವರು, ಮಾಜಿ ಸಂಸದರು, ಉಭಯ ಸದನಗಳ ಸದಸ್ಯರು, ಮಾಜಿ ಸದಸ್ಯರು, ಸಾಹಿತಿ, ಕಲಾವಿದರು, ಶಿಕ್ಷಣ ತಜ್ಞರು, ಸಮಾಜ ಸೇವಕರು, ನಾಡು–ನುಡಿ, ಸಂಸ್ಕೃತಿ, ಭಾಷೆಗೆ ಸಲ್ಲಿಸಿರುವ ಸೇವೆ, ನೀಡಿದ ಕೊಡುಗೆಗಳನ್ನು ವಿಧಾನಮಂಡಲದ ಉಭಯ ಸದನಗಳ ಸದಸ್ಯರು ಸ್ಮರಿಸಿಕೊಂಡು, ಸಂತಾಪ ವ್ಯಕ್ತಪಡಿಸಿದರು.

ವಿಧಾನಸಭೆಯ ಇತಿಹಾಸದಲ್ಲಿಯೇ ಇದೇ ಮೊದಲ ಬಾರಿಗೆ ಒಮ್ಮೆಲೆ 12ಕ್ಕೂ ಹೆಚ್ಚು ಅಗಲಿದ ಗಣ್ಯರಿಗೆ ಸದನದಲ್ಲಿ ಭಾವಪೂರ್ಣ ಶ್ರದ್ಧಾಂಜಲಿ ಅರ್ಪಿಸಿದ್ದು ಇದೇ ಮೊದಲ ಬಾರಿಯಾಗಿದೆ.

ಮಳೆಗಾಲ ಅಧಿವೇಶನದ ಮೊದಲ ದಿನ ಬೆಳಿಗ್ಗೆ 11 ಗಂಟೆಗೆ ಸರಿಯಾಗಿ ಸದನ ಆರಂಭವಾಗುತ್ತಿದ್ದಂತೆ ಸಭಾಧ್ಯಕ್ಷರು ಸಂತಾಪ ಸೂಚಿಸುವ ನಿರ್ಣಯವನ್ನು ಮಂಡಿಸಿದರು. ಸಭಾಧ್ಯಕ್ಷರು ಸೂಚಿಸಿದ ಸಂತಾಪ ನಿರ್ಣಯಕ್ಕೆ ಮುಖ್ಯಮಂತ್ರಿ, ಪ್ರತಿಪಕ್ಷ ನಾಯಕರು, ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವರು, ಬಿ.ಎಸ್.ಯಡಿಯೂರಪ್ಪ, ಜೆಡಿಎಸ್‌ನ ಬಂಡೆಪ್ಪ ಕಾಶೆಂಪೂರ್, ಕಾಂಗ್ರೆಸ್‌ನ ಡಿ.ಕೆ.ಶಿವಕುಮಾರ್, ಹೆಚ್.ಕೆ.ಪಾಟೀಲ್ ಸೇರಿದಂತೆ ಹಲವರು ಬೆಂಬಲ ವ್ಯಕ್ತಪಡಿಸಿ ಅಗಲಿದ ಗಣ್ಯರಿಗೆ ಶ್ರದ್ಧಾಂಜಲಿ ಅರ್ಪಿಸಿದರು.

ಶಾಸಕ ಸಿ.ಎಂ.ಉದಾಸಿ, ಮಾಜಿ ವಿಧಾನಸಭಾಧ್ಯಕ್ಷ ಕೃಷ್ಣ, ಕೇಂದ್ರ ಮಾಜಿ ಸಚಿವರಾದ ಬಾಬಾಗೌಡ ಪಾಟೀಲ್, ಎಂ.ರಾಜಗೋಪಾಲ್, ಜಿ.ಮಾದೇಗೌಡ, ಕೆ.ಬಿ.ಶಾಣಪ್ಪ, ಮುಮ್ತಾಜ್ ಅಲಿಖಾನ್, ಎ.ಕೆ.ಅಬ್ದುಲ್ ಸಮದ್, ಮಾಜಿ ಸಂಸದ ಎಸ್.ಬಿ.ಸಿದ್ನಾಳ್, ವಿಧಾನಪರಿಷತ್ ಮಾಜಿ ಸದಸ್ಯ ಹಾಗೂ ಕವಿ ಡಾ:ಸಿದ್ದಲಿಂಗಯ್ಯ, ಸ್ವಾತಂತ್ರ್ಯ ಹೋರಾಟಗಾರ ಹೆಚ್.ಎಸ್.ದೊರೆಸ್ವಾಮಿ, ಕನ್ನಡ ನಿಘಂಟು ತಜ್ಞ ಪ್ರೊ.ಜಿ.ವೆಂಕಟಸುಬ್ಬಯ್ಯ ಅವರಿಗೆ ಉಭಯ ಸದನದಲ್ಲಿ ಸಂತಾಪ ಸೂಚಿಸಲಾಯಿತು.

ಉತ್ತರ ಪ್ರದೇಶದ ಮಾಜಿ ಸಿ.ಎಂ. ಕಲ್ಯಾಣ್ ಸಿಂಗ್, ರಾಜಶೇಖರ್ ಸಿಂಧೂರ, ಪತ್ರಕರ್ತ, ಮಹದೇವ ಪ್ರಕಾಶ್, ನ್ಯಾಯಮೂರ್ತಿ ಮೋಹನ ಶಾಂತನಗೌಡರ್, ಯಕ್ಷಗಾನ ಅಕಾಡೆಮಿ ಮಾಜಿ ಅಧ್ಯಕ್ಷ ಪ್ರೊ.ಎಂ.ಎ.ಹೆಗಡೆ, ಶಿಕ್ಷಣ ತಜ್ಞ ಪ್ರೊ.ಎಂ.ಐ.ಸವದತ್ತಿ, ಪರಿಸರ ಹೋರಾಟಗಾರ ಸುಂದರ್ ಲಾಲ್ ಬಹುಗುಣ, ಕ್ರೀಡಾಪಟು ಮಿಲ್ಖಾ ಸಿಂಗ್, ನಟಿ ಜಯಂತಿ ಸೇರಿ ಅಗಲಿದ ಗಣ್ಯರಿಗೆ ವಿಧಾನಸಭೆಯು ಶ್ರದ್ಧಾಂಜಲಿ ಸಲ್ಲಿಸಿತು.

ಆಧಾರ:ಕನ್ನಡ ಪ್ರಭ, ದಿನಾಂಕ:14.09.2021

## 51. ನಿಲುವಳಿ ಸೂಚನೆ ಮಂಡಿಸಿದ ಕಾಂಗ್ರೆಸ್

ಉತ್ತರ ಕರ್ನಾಟಕ ಭಾಗದ ಮಹತ್ವದ ನೀರಾವರಿ ಯೋಜನೆಯಾದ ಕೃಷ್ಣಾ ಮೇಲ್ದಂಡೆ ಯೋಜನೆ 3ನೇ ಹಂತ ಕಾಮಗಾರಿ ತ್ವರಿತವಾಗಿ ಪೂರ್ಣಗೊಳಿಸುವ ವಿಚಾರವಾಗಿ ಪ್ರತಿಪಕ್ಷ ಕಾಂಗ್ರೆಸ್ ಮೇಲ್ಮನೆಯಲ್ಲಿ ನಿಲುವಳಿ ಸೂಚನೆ ಮಂಡಿಸಿತು. ಕಲಾಪ ಆರಂಭವಾಗುತ್ತಿದ್ದಂತೆ ಪ್ರತಿಪಕ್ಷ ನಾಯಕರು ನಿಯಮ 59ರಡಿ ನಿಲುವಳಿ ಸೂಚನೆ ಮಂಡಿಸಿ ವಿಷಯ ಪ್ರಸ್ತಾಪಿಸಲು ಅವಕಾಶ ಕೋರಿದರು. ಕೃಷ್ಣಾ ಮೇಲ್ದಂಡೆ ಯೋಜನೆ 3ನೇ ಹಂತದ ಯೋಜನೆ ಉತ್ತರ ಕರ್ನಾಟಕದ ಸುಮಾರು ಏಳು ಜಿಲ್ಲೆಗಳ 14.67 ಲಕ್ಷ ಎಕರೆ ಪ್ರದೇಶಗಳಿಗೆ 130 ಟಿಎಂಸಿ ನೀರು ಹರಿಸುವ ಮಹತ್ವಾಕಾಂಕ್ಷಿ ಯೋಜನೆಯಾಗಿದೆ. ಯೋಜನೆ ನಿಧಾನಗತಿಯಲ್ಲಿ ಸಾಗಿದೆ. ಈ ಬಗ್ಗೆ ಸರ್ಕಾರ ಕ್ರಮ ವಹಿಸಬೇಕು ಎಂದರು. ಕಾವೇರಿ ಯೋಜನೆಗೆ ಗೆಜೆಟ್ ನೋಟಿಫಿಕೇಷನ್ ಪ್ರಕಟಿಸಿದಂತೆ ಕೃಷ್ಣಾ ಮೇಲ್ದಂಡೆ 3ನೇ ಹಂತದ ಯೋಜನೆಗೂ ಗೆಜೆಟ್ ನೋಟಿಫಿಕೇಷನ್ ಪ್ರಕಟಿಸಬೇಕು. 3ನೇ ಹಂತದ ಕಾಮಗಾರಿ ಬೇಗನೆ ಪೂರ್ಣ ಗೊಳಿಸಬೇಕಾಗಿದೆ. ಚರ್ಚೆಗೆ ಅವಕಾಶ ನೀಡುವಂತೆ ಮನವಿ ಮಾಡಿದರು. ನಿಯಮ 68ರಡಿ ಚರ್ಚೆಗೆ ಅವಕಾಶ ನೀಡುವುದಾಗಿ ಸಭಾಪತಿ ಭರವಸೆ ನೀಡಿದರು.

ಆಧಾರ:ಉದಯವಾಣಿ, ದಿನಾಂಕ:14.09.2021

## 52. ಸರ್ಕಾರದ ಮುಖ್ಯಸಚೇತಕರಾಗಿ ನೇಮಕ

ಬೊಮ್ಮನಹಳ್ಳಿ ಕ್ಷೇತ್ರದ ಬಿಜೆಪಿ ಶಾಸಕ ಸತೀಶ್ ರೆಡ್ಡಿ ಅವರನ್ನು ವಿಧಾನಸಭೆಯಲ್ಲಿ ರಾಜ್ಯ ಸರ್ಕಾರದ ಮುಖ್ಯಸಚೇತಕರನ್ನಾಗಿ ನೇಮಿಸಲಾಗಿದೆ. ಮೂರು ಬಾರಿ ಶಾಸಕರಾಗಿರುವ ಸತೀಶ್ ರೆಡ್ಡಿ ಅವರನ್ನು ರಾಜ್ಯ ಸರ್ಕಾರದ ಮುಖ್ಯ ಸಚೇತಕರನ್ನಾಗಿ ನೇಮಿಸುವಂತೆ ಸಿ.ಎಂ. ಅವರ ಮನವಿಯ ಮೇರೆಗೆ ಸ್ಪೀಕರ್ ನಿರ್ದೇಶನದಂತೆ ವಿಧಾನಸಭಾ ಕಾರ್ಯದರ್ಶಿ ಆದೇಶ ಹೊರಡಿಸಿದ್ದಾರೆ. ಯಡಿಯೂರಪ್ಪ ಅವರ ಸರ್ಕಾರದಲ್ಲಿ ಮುಖ್ಯಸಚೇತಕರಾಗಿದ್ದ ವಿ.ಸುನೀಲ್ ಕುಮಾರ್ ಅವರು ಬಸವರಾಜ ಬೊಮ್ಮಾಯಿ ಸರ್ಕಾರದಲ್ಲಿ ಇಂಧನ, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಸಚಿವರಾಗಿರುವುದರಿಂದ ತೆರವಾದ ಸ್ಥಾನಕ್ಕೆ ಸತೀಶ್ ರೆಡ್ಡಿ ಅವರನ್ನು ನೇಮಕ ಮಾಡಲಾಗಿದೆ.

ಆಧಾರ:ಉದಯವಾಣಿ, ದಿನಾಂಕ:14.09.2021

## 53. ಕಾಂಗ್ರೆಸ್ ಚಕ್ಕಡಿ ಚಲೋ

ಪೆಟ್ರೋಲ್, ಡೀಸೆಲ್ ಅಡುಗೆ ಅನಿಲ ಸೇರಿದಂತೆ ಅಗತ್ಯ ವಸ್ತುಗಳ ದರ ಏರಿಕೆ ವಿರುದ್ಧ ಸಮರ ಸಾರಿರುವ ಕಾಂಗ್ರೆಸ್ ನಾಯಕರು ವಿಧಾನಮಂಡಲ ಅಧಿವೇಶನಕ್ಕೆ ಎತ್ತಿನ ಗಾಡಿಯಲ್ಲಿ ಆಗಮಿಸುವ ಮೂಲಕ ಕೇಂದ್ರ ಹಾಗೂ ರಾಜ್ಯ ಸರ್ಕಾರದ ವಿರುದ್ಧ ವಿನೂತನವಾಗಿ ಪ್ರತಿಭಟಿಸಿದರು.

ವಿಧಾನಸೌಧಕ್ಕೆ ಎತ್ತಿನಗಾಡಿ ಚಲೋ ಹೋರಾಟದ ಭಾಗವಾಗಿ ಎತ್ತಿನಗಾಡಿಯಲ್ಲಿ ಆಗಮಿಸಿದ ವಿಧಾನಸಭೆ ವಿರೋಧಪಕ್ಷದ ನಾಯಕ ಹಾಗೂ ಕೆಪಿಸಿಸಿ ಅಧ್ಯಕ್ಷರು ಕೇಂದ್ರ ಸರ್ಕಾರ ಪೆಟ್ರೋಲ್-ಡೀಸೆಲ್ ಮೇಲಿನ ತೆರಿಗೆಯನ್ನು 9ಪಟ್ಟು ಹೆಚ್ಚಳ ಮಾಡುವ ಮೂಲಕ ಜನರ ಲೂಟಿ ಮಾಡುತ್ತಿದೆ. ಸರ್ಕಾರ ದರ ಇಳಿಸುವವರೆಗೂ ರಾಜ್ಯಾದ್ಯಂತ ವಿವಿಧ ರೀತಿಯ ಹೋರಾಟ ಹಮ್ಮಿಕೊಳ್ಳಲಾಗುವುದು ಜೊತೆಗೆ ಉಭಯ ಸದನಗಳಲ್ಲಿ ನಿಲುವಳಿ ಸೂಚನೆ ಮಂಡಿಸಿ ದರ ಇಳಿಕೆಗೆ ಒತ್ತಾಯ ಮಾಡಲಾಗುವುದು ಎಂದು ಎಚ್ಚರಿಕೆ ನೀಡಿದರು.

ಬೆಳಿಗ್ಗೆ 9 ಗಂಟೆಗೆ ಕುಮಾರ ಪಾರ್ಕ್‌ನ ನಿವಾಸದಿಂದ ಸಿದ್ದರಾಮಯ್ಯ ಹಾಗೂ ಬೆಂಬಲಿಗ ನಾಯಕರು ಎತ್ತಿನ ಗಾಡಿಯಲ್ಲಿ ಕುಮಾರಕೃಪ ರಸ್ತೆ ಮೂಲಕ ವಿಧಾನಸೌಧಕ್ಕೆ ತೆರಳಿದರು. ಸದಾಶಿವನಗರದ ನಿವಾಸದಿಂದ ಡಿ.ಕೆ.ಶಿವಕುಮಾರ್ ಹಾಗೂ ನಾಯಕರುಳ್ಳ ಒಟ್ಟು 6 ಎತ್ತಿನ ಗಾಡಿಗಳು

(ಒಟ್ಟು 7) ಬಳ್ಳಾರಿ ರಸ್ತೆಯ ಮೂಲಕ ವಿಂಡ್ಸರ್ ಮ್ಯಾನರ್ ಬಳಿಯಿಂದ ಸಿದ್ದರಾಮಯ್ಯ ಹಾಗೂ ಡಿ.ಕೆ.ಶಿವಕುಮಾರ್ ಒಂದೇ ಎತ್ತಿನಗಾಡಿ ಮೂಲಕ ವಿಧಾನಸೌಧದತ್ತ ಸಾಗಿದರು. ಅವರೊಂದಿಗೆ ಆರು ಎತ್ತಿನಗಾಡಿ ಜೊತೆಗೆ ನೂರಾರು ಮಂದಿ ದ್ವಿಚಕ್ರ ವಾಹನಗಳ ಮೂಲಕ ಪ್ರತಿಭಟನಾ ರ್‍ಯಾಲಿಯಲ್ಲಿ ಭಾಗವಹಿಸಿದ್ದರು.

ಎತ್ತಿನ ಗಾಡಿಯಲ್ಲಿ ಆಗಮಿಸಿದ ಕಾರಣ ವಿಧಾನಸೌಧದ ದ್ವಾರದ ಬಳಿ ಪೊಲೀಸರು ಸಿದ್ದರಾಮಯ್ಯ, ಡಿ.ಕೆ.ಶಿವಕುಮಾರ್ ಅವರನ್ನು ತಡೆದರು. ಈ ವೇಳೆ ಕೆಂಡಾಮಂಡಲರಾದ ಸಿದ್ದರಾಮಯ್ಯ ಸದನಕ್ಕೆ ಹಾಜರಾಗಲು ತೆರಳುತ್ತಿರುವವರನ್ನು ತಡೆದಿದ್ದಾರೆ ಎಂದು ಹಕ್ಕುಚ್ಯುತಿ ಮಂಡಿಸುತ್ತೇನೆ. ಎತ್ತಿನಗಾಡಿಯಲ್ಲಿ ಬರಬಾರದು ಎಂದು ಯಾವ ನಿಯಮದಲ್ಲಿದೆ ಎಂದು ಪ್ರಶ್ನಿಸಿದರು.

ಪೊಲೀಸರು ಡಿ.ಕೆ.ಶಿವಕುಮಾರ್ ಹಾಗೂ ಸಿದ್ದರಾಮಯ್ಯ ಅವರಿದ್ದ ಒಂದೇ ಒಂದು ಎತ್ತಿನಗಾಡಿಗೆ ಮಾತ್ರ ವಿಧಾನಸೌಧದ ಆವರಣಕ್ಕೆ ಪ್ರವೇಶಕ್ಕೆ ಕಲ್ಪಿಸಿದರು. ವಿಧಾನಸೌಧದ ಕೆಂಗಲ್ ದ್ವಾರದವರೆಗೂ ಎತ್ತಿನಗಾಡಿಯಲ್ಲಿ ಆಗಮಿಸಿದ ಕಾಂಗ್ರೆಸ್ ನಾಯಕರು, ದರ ಏರಿಕೆ ವಿರುದ್ಧ ಜನ ಬೀದಿಗಿಳಿಯಲಿದ್ದಾರೆ ಎಂದು ಎಚ್ಚರಿಸಿದರು.

**ಪಿಕ್‌ಪಾಕೆಟ್ ಸರ್ಕಾರವನ್ನು ಸಹಿಸಲಾಗಲ್ಲ:** ಡಿ.ಕೆ.ಶಿವಕುಮಾರ್ ಮಾತನಾಡಿ, ದಿನ ಬೆಳಗಾದರೆ ಜನರ ಲೂಟಿ ಮಾಡುವ ಸರ್ಕಾರವನ್ನು ನೋಡಿಕೊಂಡು ಸಹಿಸಲು ಆಗುವುದಿಲ್ಲ. ಜನರ ಪರವಾಗಿ ನಮ್ಮ ಹೋರಾಟವು ನಿರಂತರವಾಗಿರಲಿದೆ ಎಂದರು. ಸಿದ್ದರಾಮಯ್ಯ ಮಾತನಾಡಿ ಯುಪಿಎಯ ಅವಧಿಯಲ್ಲಿ ರೂ.65–70 ಇದ್ದ ಪೆಟ್ರೋಲ್ ಬೆಲೆ 106ಕ್ಕೆ ಏರಿಕೆಯಾಗಿದೆ. ಇದಕ್ಕೆ ಕಾರಣ ಮನಮೋಹನ್ ಸಿಂಗ್ ಅವರು ಇದ್ದಾಗ ಡೀಸೆಲ್ ಮೇಲೆ ರೂ.3.45 ಕೇಂದ್ರ ತೆರಿಗೆ ಇತ್ತು. ಇದೀಗ ಒಂಭತ್ತು ಪಟ್ಟು ಹೆಚ್ಚಳ ಮಾಡಿ ರೂ.31.84ಕ್ಕೆ ಏರಿಕೆ ಮಾಡಿದ್ದಾರೆ ಎಂದು ದೂರಿದರು.

ಆಧಾರ:ಕನ್ನಡ ಪ್ರಭ, ದಿನಾಂಕ:14.09.2021

## 54. ಸಭಾಪತಿ ಪ್ಯಾನಲ್ ಪುನರ್‌ರಚನೆ

ಸಭಾಪತಿ, ಉಪ ಸಭಾಪತಿ ಸದನದಲ್ಲಿ ಇರದ ಸಮಯದಲ್ಲಿ ಸದನ ನಡೆಸಲು ಸಭಾಪತಿ ಪೀಠದಲ್ಲಿ ಹಿರಿಯ ಸದಸ್ಯರಿಗೆ ಅವಕಾಶ ಕಲ್ಪಿಸುವ ಸಭಾಪತಿ ಪ್ಯಾನಲ್ ಅನ್ನು ಪುನರ್ ರಚಿಸಲಾಗಿದೆ. ಕೆ.ಸಿ.ಕೊಂಡಯ್ಯ, ಎಸ್.ವಿಶ್ವನಾಥ್, ಮರಿತಿಬ್ಬೇಗೌಡ, ತೇಜಸ್ವಿನಿಗೌಡ ಅವರು ಸಭಾಪತಿ, ಉಪಸಭಾಪತಿಗಳೂ ಇಲ್ಲದಿರುವಾಗ ಸಭಾಪತಿ ಪೀಠದಲ್ಲಿ ಕುಳಿತು ಸದನ ನಡೆಸಿಕೊಡಲಿದ್ದಾರೆ ಎಂದು ಸಭಾಪತಿಗಳು ಪ್ರಕಟಿಸಿದರು.

**ಕಲಾಪ ಸಲಹಾ ಸಮಿತಿ ಪುನ:ರಚನೆ :** ವಿಧಾನ ಪರಿಷತ್ ಕಲಾಪ ಸಲಹಾ ಸಮಿತಿಯನ್ನು ಪುನ:ರಚಿಸಲಾಗಿದೆ. ಸಭಾಪತಿಗಳ ಅಧ್ಯಕ್ಷತೆಯ ಸಮಿತಿಯಲ್ಲಿ ಉಪ ಸಭಾಪತಿ ಪ್ರಾಣೇಶ್, ಸಭಾನಾಯಕ ಕೋಟ ಶ್ರೀನಿವಾಸ ಪೂಜಾರಿ, ಪ್ರತಿಪಕ್ಷನಾಯಕ ಎಸ್.ಆರ್.ಪಾಟೀಲ್, ಸರ್ಕಾರಿ ಮುಖ್ಯ ಸಚೇತಕ ಮಹಾಂತೇಶ ಕವಟಗಿಮಠ, ಪ್ರತಿಪಕ್ಷ ಸಚೇತಕ ನಾರಾಯಣ ಸ್ವಾಮಿ, ಹಿರಿಯ ಸದಸ್ಯರಾದ ಕೆ.ಪ್ರತಾಪ್ ಚಂದ್ರ ಶೆಟ್ಟಿ, ಮರಿತಿಬ್ಬೇಗೌಡ, ಬಿ.ಕೆ.ಹರಿಪ್ರಸಾದ್, ಶಶಿಲ್ ಜಿ ನಮೋಶಿ ಹಾಗೂ ವಿಶೇಷ ಆಹ್ವಾನಿತರಾಗಿ ಸಿಎಂ ಬಸವರಾಜ ಬೊಮ್ಮಾಯಿ ಮತ್ತು ಕಾನೂನು ಸಚಿವ ಜೆ.ಸಿ. ಮಾಧುಸ್ವಾಮಿ ಇರಲಿದ್ದಾರೆ ಎಂದು ಸಭಾಪತಿಗಳು ಪ್ರಕಟಿಸಿದ್ದರು.

ಆಧಾರ: ವಿಶ್ವವಾಣಿ, ದಿನಾಂಕ: 15.09.2021

## 55. ಪರಿಷತ್‌ನಲ್ಲಿ ರಾಘವೇಂದ್ರ ಬ್ಯಾಂಕ್ ವಂಚನೆ ಪ್ರತಿಧ್ವನಿ

ಶ್ರೀ ಗುರುರಾಘವೇಂದ್ರ ಸಹಕಾರ ಬ್ಯಾಂಕ್‌ನಲ್ಲಿ ನಡೆದಿದೆ ಎನ್ನಲಾದ ವಂಚನೆ ಪ್ರಕರಣಕ್ಕೆ ಸಂಬಂಧಿಸಿದಂತೆ ತಜ್ಞರ ಸಮಿತಿ ರಚಿಸಲು ಭಾರತೀಯ ರಿಸರ್ವ್ ಬ್ಯಾಂಕ್ ಜೊತೆ ಚರ್ಚಿಸಿ ತೀರ್ಮಾನ ಕೈಗೊಳ್ಳಲಾಗುವುದು ಎಂದು ಸಹಕಾರ ಸಚಿವ ಎಸ್.ಟಿ.ಸೋಮಶೇಖರ್ ತಿಳಿಸಿದರು.

ಪ್ರಶ್ನೋತ್ತರ ವೇಳೆಯಲ್ಲಿ ಕಾಂಗ್ರೆಸ್ ಸದಸ್ಯ ಯು.ಬಿ.ವೆಂಕಟೇಶ್ ಎತ್ತಿದ ಪ್ರಶ್ನೆಗೆ ಪ್ರತಿಕ್ರಿಯಿಸಿದ ಅವರು 'ಗುರುರಾಘವೇಂದ್ರ ಸಹಕಾರ್ ಬ್ಯಾಂಕ್ ವಂಚನೆ' ಪ್ರಕರಣದ ತನಿಖೆಯನ್ನು ಸಿಐಡಿಗೆ ವಹಿಸಲಾಗಿದೆ. ಈ ಮಧ್ಯೆ ಹೈಕೋರ್ಟ್ ನಿರ್ದೇಶನದಂತೆ ಭಾರತೀಯ ರಿಸರ್ವ್ ಬ್ಯಾಂಕ್ (ಆರ್‌ಬಿಐ) ಸೂಚಿಸಿದ ವ್ಯಕ್ತಿಯನ್ನು ಆಡಳಿತಾಧಿಕಾರಿಯನ್ನಾಗಿ ನೇಮಿಸಲಾಗಿದೆ. ಇದರಲ್ಲಿ ಸರ್ಕಾರದ ಯಾವುದೇ ಹಸ್ತಕ್ಷೇಪ ಇಲ್ಲ. ಆದಾಗ್ಯೂ ಅಗತ್ಯಬಿದ್ದರೆ ತಜ್ಞರ ಸಮಿತಿ ರಚಿಸಲಿಕ್ಕೂ ನಮ್ಮ ಅಭ್ಯಂತರ ಇಲ್ಲ. ಈ ಸಂಬಂಧ ಆರ್‌ಬಿಐ ಜೊತೆ ಚರ್ಚಿಸಿ ಸೂಕ್ತ ತೀರ್ಮಾನ ಕೈಗೊಳ್ಳಲಾಗುವುದು ಎಂದರು.

2014–15 ರಿಂದ 2018–19ರವರೆಗಿನ ಸಹಕಾರ ಬ್ಯಾಂಕಿನ ಲೆಕ್ಕಪರಿಶೋಧನೆ ನಡೆಸಲಾಗುತ್ತಿದ್ದು, ಈಗಾಗಲೇ 2014 ಮತ್ತು 2015ರ ಲೆಕ್ಕಪರಿಶೋಧನಾ ಕಾರ್ಯ ಪೂರ್ಣಗೊಂಡಿದ್ದು, ಈ ಅವಧಿಯಲ್ಲಿ 870 ಕೋಟಿ ರೂ. ವಂಚನೆ ಆಗಿರುವುದು ಬೆಳಕಿಗೆ ಬಂದಿದೆ. ಉಳಿದ ಹಣಕಾಸು ವರ್ಷಗಳ ಆಡಿಟ್ ಪ್ರಕ್ರಿಯೆ ನಡೆದಿದೆ. ಈ ನಡುವೆ ನಿರ್ದೇಶಕರು ಸೇರಿದಂತೆ ಸಾಲ ಪಡೆದ ಸದಸ್ಯರು ಮತ್ತಿತರರ ವಿರುದ್ಧ ಎಫ್‌ಐಆರ್ ದಾಖಲಿಸಲಾಗಿದ್ದು, ಬ್ಯಾಂಕಿನ ಆಡಿಟ್ ಮಾಡಿದ್ದ ಚಾರ್ಟರ್ಡ್ ಅಕೌಂಟೆಂಟ್ ಅನ್ನು ಕಪ್ಪುಪಟ್ಟಿಗೆ ಸೇರಿಸಲಾಗಿದೆ ಎಂದು ಮಾಹಿತಿ ನೀಡಿದರು.

ಇದಕ್ಕೆ ಪ್ರತಿಕ್ರಿಯಿಸಿದ ಯು.ಬಿ.ವೆಂಕಟೇಶ್, ಸಿಐಡಿಗೆ ವಹಿಸುವ ಬದಲಿಗೆ ಸಿಬಿಐಗೆ ವಹಿಸಬಹುದಿತ್ತು. ಕಪ್ಪುಪಟ್ಟಿಗೆ ಸೇರಿಸಿದ್ದೀರಿ; ಬಂಧಿಸಲು ಯಾಕೆ ಹಿಂದೇಟು ಹಾಕುತ್ತಿದ್ದೀರಿ, ತಪ್ಪಿತಸ್ಥರನ್ನು ಯಾಕೆ ಬಂಧಿಸುತ್ತಿಲ್ಲ ಎಂದು ಕೇಳಿದರು. ದನಿಗೂಡಿಸಿ ಪ್ರತಿಪಕ್ಷ ನಾಯಕ ಎಸ್.ಆರ್.ಪಾಟೀಲ್, 'ಪ್ರಕರಣವನ್ನು ಸಿಬಿಐ ತನಿಖೆಗೆ ವಹಿಸಬೇಕು' ಎಂದರು.

ಎಸ್.ರವಿ ಮಾತನಾಡಿ, ಆರೋಪಿಗಳ ಆಸ್ತಿ ಮುಟ್ಟುಗೋಲು ಹಾಕಿಕೊಳ್ಳಲು ನಿಯಮದಲ್ಲಿ ಅವಕಾಶ ಇದೆ. ಈ ನಿಟ್ಟಿನಲ್ಲಿ ಸರ್ಕಾರ ಮುಂದಾಗಬೇಕು ಎಂದು ಆಗ್ರಹಿಸಿದರು. ಇದಕ್ಕೆ ಪ್ರತಿಕ್ರಿಯಿಸಿದ ಎಸ್.ಟಿ.ಸೋಮಶೇಖರ್, 'ಶಿವಮೊಗ್ಗ ಡಿಸಿಸಿ ಬ್ಯಾಂಕ್ ಹಗರಣದಲ್ಲಿ ಅಧ್ಯಕ್ಷರನ್ನು ಜೈಲಿಗೆ ಕಳುಹಿಸಲಾಯಿತು. ಇಲ್ಲಿಯೂ ಹಂತ–ಹಂತವಾಗಿ ತನಿಖೆ ನಡೆಸಿ ಕ್ರಮ ಜರುಗಿಸಲಾಗುವುದು. ಎಂದರು.

ಆಧಾರ: ಉದಯವಾಣಿ, ದಿನಾಂಕ: 15.09.2021

## 56. ನಿಲುವಳಿ ಸೂಚನೆ ಕಾಂಗ್ರೆಸ್ ಮನವಿ

ಪೆಟ್ರೋಲ್, ಡೀಸೆಲ್ ಸೇರಿದಂತೆ ಅಗತ್ಯ ವಸ್ತುಗಳ ಬೆಲೆ ಹೆಚ್ಚಳ ಕುರಿತು ಚರ್ಚೆ ನಡೆಸಲು ನಿಯಮ 59ರ ಅಡಿಯಲ್ಲಿ ಅವಕಾಶ ನೀಡುವಂತೆ ಪ್ರತಿಪಕ್ಷ ನಾಯಕ ಎಸ್.ಆರ್.ಪಾಟೀಲ್ ವಿಧಾನ ಪರಿಷತ್‌ನಲ್ಲಿ ನಿಲುವಳಿ ಸೂಚನೆ ಮಂಡಿಸಿದರು. ಕಲಾಪ ಆರಂಭಗೊಳ್ಳುತ್ತಿದ್ದಂತೆ, ಪ್ರಶ್ನೋತರ ಕಲಾಪಕ್ಕೂ ಮೊದಲೇ ಪ್ರತಿಪಕ್ಷ ನಾಯಕ ಎಸ್.ಆರ್.ಪಾಟೀಲ್ ನಿಯಮ 69ರ ಅಡಿ ನಿಲುವಳಿ ಸೂಚನೆ ಮಂಡಿಸಿದರು. ಅಗತ್ಯ ವಸ್ತುಗಳ ಬೆಲೆ ಏರಿಕೆಯಾಗಿದೆ ಇದು ರೈತಾಪಿ ವರ್ಗದ ಜೀವನದ ಮೇಲೆ ಪ್ರತಿಕೂಲ ಪರಿಣಾಮ ಬೀರಿದೆ. ಕೃಷಿ ಉತ್ಪಾದನೆ ಕುಂಠಿತವಾಗಿದೆ. ಇದು ಸಾರ್ವಜನಿಕ ಮಹತ್ವದ ವಿಷಯವಾಗಿದ್ದು, ಚರ್ಚೆಗೆ ಅವಕಾಶ ಕೋರಿದರು. ನಿಲುವಳಿ ಸೂಚನೆಯನ್ನು ಅಂಗೀಕರಿಸಿದ ಸಭಾಪತಿ ಬಸವರಾಜ ಹೊರಟ್ಟಿ ನಿಯಮ 68ಕ್ಕೆ ಮಾರ್ಪಡಿಸಿ ಅವಕಾಶ ಕೊಡಲಾಗುತ್ತದೆ ಎಂದು ರೂಲಿಂಗ್ ನೀಡಿದರು.

ಆಧಾರ: ವಿಶ್ವವಾಣಿ, ದಿನಾಂಕ: 15.09.2021

## 57. ಕಲಾಪ ವಿಸ್ತರಣೆಗೆ ಒಪ್ಪದ ಸರ್ಕಾರ

10 ದಿನಗಳ ನಿಗದಿಯಾಗಿದ್ದ ವಿಧಾನಮಂಡಲ ಅಧಿವೇಶನವನ್ನು ವಿಸ್ತರಿಸುವ ಪ್ರತಿಪಕ್ಷಗಳ ಒತ್ತಡಕ್ಕೆ ಸರ್ಕಾರ ಮಣಿಯದೇ, ನಿಗದಿಯಂತೆ ಸೆಪ್ಟೆಂಬರ್ 23ಕ್ಕೆ ಮುಕ್ತಾಯಗೊಳಿಸಲು ತೀರ್ಮಾನಿಸಲಾಗಿದೆ.

ವಿಧಾನಮಂಡಲ ಅಧಿವೇಶನವನ್ನು ವಿಸ್ತರಿಸಲು ಸರ್ಕಾರ ಒಪ್ಪದೇ ಇರುವುದರಿಂದ ವಿಧಾನಮಂಡಲ ಅಧಿವೇಶನ ನಿಗದಿಯಂತೆ ಸೆಪ್ಟೆಂಬರ್ 23ರವರೆಗೂ ನಡೆಯಲಿದೆ. ವಿಧಾನಸಭಾಧ್ಯಕ್ಷ ಅವರ ನೇತೃತ್ವದಲ್ಲಿ ವಿಧಾನಸೌಧದಲ್ಲಿ ನಡೆದ ಕಲಾಪ ಸಮಿತಿ ಸಭೆಯಲ್ಲಿ ಕಾಂಗ್ರೆಸ್ ಪಕ್ಷ ಅಧಿವೇಶನವನ್ನು ಇನ್ನೂ 10 ದಿನಗಳ ಕಾಲ ವಿಸ್ತರಿಸುವಂತೆ ಬೇಡಿಕೆ ಇಟ್ಟಿತ್ತಾದರೂ ಅದಕ್ಕೆ ಸರ್ಕಾರ ಒಪ್ಪಿಲ್ಲ.

ಹಲವು ವಿಚಾರಗಳನ್ನು ಪ್ರಸ್ತಾಪಿಸಬೇಕಿದೆ. ಅಧಿವೇಶನ ವಿಸ್ತರಿಸಿ ಎಂದು ಪ್ರತಿಪಕ್ಷದ ನಾಯಕ ಸಿದ್ದರಾಮಯ್ಯ ಹೇಳಿದರಾದರೂ ಅದಕ್ಕೆ ಮುಖ್ಯಮಂತ್ರಿ ಬೊಮ್ಮಾಯಿ ಸಮ್ಮತಿ ವ್ಯಕ್ತಪಡಿಸಲಿಲ್ಲ ಎನ್ನಲಾಗಿದೆ. ನಿಯಮಾವಳಿಗಳಂತೆ ಸದನ ನಡೆಸಿದರೆ ನಮ್ಮ ಸಹಕಾರ ಇರುತ್ತದೆ. ತರಾತುರಿಯಲ್ಲಿ ವಿಧೇಯಕಗಳನ್ನು ತಂದರೆ ಅದನ್ನು ಬೆಂಬಲಿಸುವುದಿಲ್ಲ ಎಂದು ಕಾಂಗ್ರೆಸ್ ಹಾಗೂ ಜೆಡಿಎಸ್ ಪಕ್ಷದ ನಾಯಕರುಗಳು ಸಭೆಯಲ್ಲಿ ಹೇಳಿದ್ದು, ಕಲಾಪ ಸಲಹಾ ಸಮಿತಿ ಸಭೆಯಲ್ಲಿ ತೀರ್ಮಾನವಾಗದೆ ಸದನದ ಕಾರ್ಯಸೂಚಿಯಲ್ಲಿ ನಾಲ್ಕು ವಿಧೇಯಕಗಳ ಮಂಡನೆ ಇದೆ ಇದು ಸರಿಯೇ. ಈ ರೀತಿ ನಿಯಮಾವಳಿಗಳನ್ನು ಬಿಟ್ಟು ಸದನ ನಡೆಸಬೇಡಿ ಎಂದು ಸಿದ್ದರಾಮಯ್ಯ ಸಭೆಯಲ್ಲಿ ಹೇಳಿದರು ಎನ್ನಲಾಗಿದೆ.

ಮಾಜಿ ಮುಖ್ಯಮಂತ್ರಿ ಯಡಿಯೂರಪ್ಪ ಅವರು ಸಿದ್ದರಾಮಯ್ಯನವರನ್ನು ಸಮಾಧಾನಿಸಿ, ಸಿದ್ದರಾಮಣ್ಣ ಇದ್ದೆಲ್ಲಾ ಇದ್ದದ್ದೆ ಹಿಂದೆ ಎಲ್ಲ ಆಗಿದೆ. ಎಲ್ಲವನ್ನು ಸರಿ ಮಾಡೋಣ ಬಿಡಿ ಸುಗಮ ಕಲಾಪಕ್ಕೆ ಸಹಕಾರ ನೀಡಿ ಎಂದು ಹೇಳಿ ಎಲ್ಲರನ್ನು ಸಮಾಧಾನಿಸಿದರು. ನಂತರ ಕಲಾಪ ಸಲಹಾ ಸಮಿತಿಯಲ್ಲಿ ಯಾವ ಯಾವ ವಿಧೇಯಕಗಳ ಮಂಡನೆ, ಯಾವ ಯಾವ ವಿಷಯಗಳ ಬಗ್ಗೆ ಚರ್ಚೆಗೆ ಅವಕಾಶ ನೀಡಬೇಕು ಎಂಬೆಲ್ಲಾ ಬಗ್ಗೆ ಚರ್ಚೆಗಳು ನಡೆದು, ಸುಗಮ ಕಲಾಪ ನಡೆಸುವ ಸಂಬಂಧ ತೀರ್ಮಾನಗಳನ್ನು ಕೈಗೊಳ್ಳಲಾಯಿತು.

ಆಧಾರ: ವಿಶ್ವವಾಣಿ, ದಿನಾಂಕ: 15.09.2021

## 58. ಸಚಿವರ ನಡೆ : ಸ್ಪೀಕರ್ ಕಾಗೇರಿ ಗರಂ

ಸಂಸದೀಯ ವ್ಯವಹಾರ ಸಚಿವ ಜೆ.ಸಿ.ಮಾಧುಸ್ವಾಮಿ ಮೇಲೆ ಸ್ಪೀಕರ್ ವಿಶ್ವೇಶ್ವರ ಹೆಗಡೆ ತುಸು ಗರಂ ಆದ ಘಟನೆ ವಿಧಾನಸಭೆಯಲ್ಲಿ ಗಮನ ಸೆಳೆಯುವ ಸೂಚನೆ ವೇಳೆ ನಡೆಯಿತು. ವಸತಿ ಯೋಜನೆ ಸಂಬಂಧಿಸಿದಂತೆ ಮಾನ್ವಿ ಶಾಸಕ ರಾಜಾ ವೆಂಕಟಪ್ಪ ನಾಯಕ ಗಮನ ಸೆಳೆದು ಉತ್ತರ ಪಡೆಯುತ್ತಿದ್ದಾಗ ಮಳವಳ್ಳಿ ಶಾಸಕ ಪ್ರೊ:ಅನ್ನದಾನಿ ತಮ್ಮ ಕ್ಷೇತ್ರಕ್ಕೆ ಸಂಬಂಧಿಸಿ ಮಧ್ಯಪ್ರವೇಶ ಮಾಡಿದರು. ಈ ಹಂತದಲ್ಲಿ ಎದ್ದು ನಿಂತ ಮಾಧುಸ್ವಾಮಿ ಪೀಠವನ್ನು ಉದ್ದೇಶಿಸಿ 'ಗಮನ ಸೆಳೆಯುವ ಸೂಚನೆ ವೇಳೆ ಹೀಗೆ ಚರ್ಚಿಸಲು ನೀವು ಅವಕಾಶ ನೀಡಬಾರದು' ಎಂದು ಹೇಳಿದರು. ಅನ್ನದಾನಿಯವರಿಗೆ ಮಧ್ಯಪ್ರವೇಶಿಸದಂತೆ ಇದಕ್ಕೂ ಮೊದಲು ಅನೇಕ ಬಾರಿ ಹೇಳಿದ್ದ ಸ್ಪೀಕರ್, ಸಚಿವರ ಮಾತಿನಿಂದ ಸಿಡಿಮಿಡಿಗೊಂಡಂತೆ ಕಂಡು ಬಂತು.

ಆಧಾರ: ಸಂಯುಕ್ತ ಕರ್ನಾಟಕ, ದಿನಾಂಕ: 15.09.2021

## 59. ಬೆಲೆ ಏರಿಕೆ : ಕೈನಿಂದ ನಿಲುವಳಿ ಮಂಡನೆ

ಪೆಟ್ರೋಲ್ ಮತ್ತು ಡೀಸೆಲ್ ಹಾಗೂ ಅಗತ್ಯ ವಸ್ತುಗಳ ಬೆಲೆ ಏರಿಕೆ ವಿಚಾರದಲ್ಲಿ ಕಾಂಗ್ರೆಸ್ ನಿಲುವಳಿ ಸೂಚನೆ ಮಂಡಿಸಿದ್ದು, ನಿಯಮ 69ರಡಿ ಚರ್ಚೆಗೆ ಅವಕಾಶ ಕೊಡುವುದಾಗಿ ಸಭಾಧ್ಯಕ್ಷರು ತಿಳಿಸಿದರು. ಸದನದಲ್ಲಿ ಭೋಜನ ವಿರಾಮಕ್ಕೆ ಮುನ್ನ ನಿಲುವಳಿ ಸೂಚನೆ ಕಾಂಗ್ರೆಸ್ ವತಿಯಿಂದ ಬಂದಿರುವ ಬಗ್ಗೆ ತಿಳಿಸಿ, ಪ್ರಶ್ನೋತ್ತರ ನಂತರ ಚರ್ಚೆಗೆ ಅವಕಾಶ ಕೊಡುವುದಾಗಿ ಹೇಳಿದರು. ಸಮಯಪಾಲನೆ ಮಾಡಬೇಕೆಂದು ಸೂಕ್ಷ್ಮವಾಗಿ ತಿಳಿಸಿದರು. ಇದಕ್ಕೆ ಪ್ರತಿಪಕ್ಷ ನಾಯಕ ಸಿದ್ದರಾಮಯ್ಯ, ಇದೊಂದು ಗಂಭೀರ ವಿಚಾರ. ಪ್ರತಿಪಕ್ಷ ನಾಯಕರಿಗೆ ನೀವು ಇಷ್ಟೇ ಹೊತ್ತು ಮಾತನಾಡಿ ಎಂದು ಹೇಳುವಂತಿಲ್ಲ. ಈ ವಿಷಯದಲ್ಲಿ ಧಾರಾಳವಾಗಿರಿ ಎಂದರು. ಆಗ ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಅವರು ಮಧ್ಯಪ್ರವೇಶಿಸಿ, ಪ್ರತಿಪಕ್ಷ ನಾಯಕರಿಗೆ ಸಮಯ ಕೊಡೋಣ, ಆದರೆ ಸಿದ್ದರಾಮಣ್ಣ ಅವರಿಗೂ ಸಮಯ ಕೊಡಬೇಕಲ್ಲಾ ಎಂದರು. ಆಗ ಸಿದ್ದರಾಮಯ್ಯ, ಪ್ರತಿಪಕ್ಷ ನಾಯಕರಿಗೆ ಕೊಡಿ ಸಾಕು ಎಂದು ಹೇಳಿದರು.

**ತಿರಸ್ಕಾರ :** ಇದೇ ಸಂದರ್ಭದಲ್ಲಿ ಅಭಿವೃದ್ಧಿ ಕಾಮಗಾರಿಗಳಲ್ಲಿ ತಾರತಮ್ಯ ಕುರಿತು ಚರ್ಚಿಸಲು ಜೆಡಿಎಸ್ ವತಿಯಿಂದ ಮಂಡಿಸಿದ್ದ ನಿಲುವಳಿ ಸೂಚನೆ ತಿರಸ್ಕರಿಸಿರುವುದಾಗಿ ಹೇಳಿದರು. ಇದರಿಂದ ಆಕ್ರೋಶಗೊಂಡ ಸದಸ್ಯರು ಹೆಚ್.ಡಿ.ರೇವಣ್ಣ ನೇತೃತ್ವದಲ್ಲಿ ಸದನದ ಬಾವಿಗೆ ಇಳಿದು ಧರಣಿ ನಡೆಸಿದರು. ನಿಯಮಾವಳಿ ಪ್ರಕಾರ ನೀವು ನೋಟಿಸ್ ಕೊಟ್ಟಿಲ್ಲ. ಅದರಂತೆ ಕೊಡಿ. ನಿಯಮ 69 ರಡಿ ಅವಕಾಶ ಮಾಡಿಕೊಡುತ್ತೇನೆ. ಇಲ್ಲದಿದ್ದರೆ ಸಾಧ್ಯವಿಲ್ಲ ಎಂದು ಸಭಾಧ್ಯಕ್ಷರು ಹೇಳಿದರು.

ಆಧಾರ: ಉದಯವಾಣಿ, ದಿನಾಂಕ: 15.09.2021

## 60. ಎತ್ತಿನಹೊಳೆ ಯೋಜನೆಗೆ ಬದ್ಧತೆ

ಮಹತ್ವಾಕಾಂಕ್ಷೆಯ ಎತ್ತಿನಹೊಳೆ ಯೋಜನೆಗೆ ಭೂಸ್ವಾಧೀನ ಪ್ರಕ್ರಿಯೆಯಲ್ಲಿ ಆಗಿರುವ ಅಡೆತಡೆಗಳನ್ನು ಪರಿಹರಿಸಲು ಶೀಘ್ರವೇ ನಾನೇ ಖುದ್ದಾಗಿ ಸಭೆ ನಡೆಸುವೆ ಎಂದು ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ವಿಧಾನಸಭೆಗೆ ಭರವಸೆ ನೀಡಿದರು.

ಕೊರಟಗೆರೆ ಕ್ಷೇತ್ರದ ಶಾಸಕ ಡಾ.ಜಿ.ಪರಮೇಶ್ವರ ಅವರು ಎತ್ತಿನಹೊಳೆ ಯೋಜನೆಯ ಭೈರಗೊಂಡ್ಲು ಜಲಾಶಯದ ಭೂಸ್ವಾಧೀನ ಪ್ರಕ್ರಿಯೆಯ ಸಮಸ್ಯೆ ಬಗ್ಗೆ ಕುರಿತು ಪ್ರಶ್ನೋತ್ತರ ವೇಳೆಯಲ್ಲಿ ಪ್ರಸ್ತಾಪಿಸಿ 12,912 ಕೋಟಿ ಯೋಜನೆ 23 ಸಾವಿರ ಕೋಟಿಗೆ ಪರಿಷ್ಕರಣೆ ಆಗಿದ್ದೇಕೆ ಕಾರಣ ತಿಳಿಸಿ ಎಂದು ಪಟ್ಟು ಹಿಡಿದರು. ರೂ.319 ಕೋಟಿ ನೀಡಿ ಭೂಸ್ವಾಧೀನ ಮಾಡಲಾರದ ವಿಳಂಬದಿಂದಲ್ಲವೇ ಎಂದು ಆಕ್ರೋಶ ವ್ಯಕ್ತಪಡಿಸಿದರು.

ಈ ವೇಳೆ ಮಧ್ಯಪ್ರವೇಶಿಸಿದ ಸಿಎಂ ಬೊಮ್ಮಾಯಿ ಅವರು, ನಾನು ಜಲಸಂಪನ್ಮೂಲ ಸಚಿವನಾಗಿದ್ದ ವೇಳೆ ರೂಪಿಸಿದ ಯೋಜನೆ ಇದು. ಕೋಲಾರ, ಚಿಕ್ಕಬಳ್ಳಾಪುರ, ತುಮಕೂರು, ಚಿಕ್ಕಮಗಳೂರು, ಹಾಸನ, ರಾಮನಗರ, ಬೆಂಗಳೂರು ಗ್ರಾಮಾಂತರ ಜಿಲ್ಲೆಗಳ ಜೀವನಾಡಿ ಆಗಲಿರುವ ಎತ್ತಿನಹೊಳೆ ಯೋಜನೆ ಅನುಷ್ಠಾನಕ್ಕೆ ಸರ್ಕಾರ ಬದ್ಧವಾಗಿದೆ. ಯಾವುದೇ ಆತಂಕ ಬೇಡ ಎಂದು ಬೊಮ್ಮಾಯಿ ಅಭಯ ನೀಡಿದರು.

ಇದಕ್ಕೂ ಮುನ್ನ ಉತ್ತರಿಸಿದ ಜಲಸಂಪನ್ಮೂಲ ಸಚಿವರಾದ ಗೋವಿಂದ ಕಾರಜೋಳ ಅವರು, ಇತ್ತೀಚೆಗೆ ತಾವು ಎತ್ತಿನಹೊಳೆ ಯೋಜನಾ ಪ್ರದೇಶಕ್ಕೆ ಭೇಟಿಕೊಟ್ಟು, ಭೂಸ್ವಾಧೀನ ಸೇರಿದಂತೆ, ಯೋಜನೆಯ ಅಡ್ಡಿ ಆತಂಕಗಳನ್ನು ನಿವಾರಿಸಲು ಅಗತ್ಯ ಕ್ರಮಕೈಗೊಂಡಿದ್ದು ಹಲವು ಗೊಂದಲಗಳನ್ನು

ನಿವಾರಿಸಿದ್ದೇನೆ. ಉಳಿದಿರುವ ಸಮಸ್ಯೆಗಳನ್ನು ನಿವಾರಿಸಿಕೊಂಡು ಆದಷ್ಟು ತ್ವರಿತವಾಗಿ ಎತ್ತಿನಹೊಳೆಯಿಂದ ಪ್ರಾಯೋಗಿಕವಾಗಿ ನೀರು ಹರಿಸಲಾಗುವುದು ಎಂದು ವಿವರಿಸಿದರು.

ಕೊರಟಗೆರೆ ಮತ್ತು ದೊಡ್ಡಬಳ್ಳಾಪುರ ತಾಲ್ಲೂಕಿನ ರೈತರ 5078 ಎಕರೆ ಭೂಸ್ವಾಧೀನಕ್ಕೆ ಸಂಬಂಧಪಟ್ಟಂತೆ ಏಕರೂಪದ ದರ ನಿಗದಿಪಡಿಸುವಲ್ಲಿ ಸಮಸ್ಯೆಗಳಿದ್ದು, ಇದರ ಪರಿಹಾರಕ್ಕೆ 2018ರಲ್ಲೇ ಅಂದಿನ ಡಿಸಿಎಂ ಆಗಿದ್ದ ಡಾ.ಜಿ.ಪರಮೇಶ್ವರ ಅವರ ನೇತೃತ್ವದ ಸಚಿವ ಸಂಪುಟದ ಉಪಸಮಿತಿ ಸಭೆ ನಡೆಸಿದ್ದರೂ ಅಂತಿಮ ನಿರ್ಣಯ ಸಾಧ್ಯವಾಗಲಿಲ್ಲ. ನಮ್ಮ ಸರ್ಕಾರ ಸಮಸ್ಯೆ ನೀಗಿಸಲು ಪ್ರಾಮಾಣಿಕ ಪ್ರಯತ್ನ ಮಾಡುತ್ತಿದೆ. ಶೀಘ್ರವೇ ಪ್ರಯತ್ನದ ಫಲಿತಾಂಶ ಸಿಗಲಿದೆ ಎಂದು ಸಚಿವ ಕಾರಜೋಳ ಉತ್ತರ ನೀಡಿದರು.

ಭೂಸ್ವಾಧೀನ ಪ್ರಕ್ರಿಯೆಗೆ ಹಣದ ಕೊರತೆ ಇಲ್ಲ. ಕೆಲವು ಅಧಿಕಾರಿಗಳು ರೈತರಿಗೆ ಹಣವಿಲ್ಲವೆಂದು ಸಬೂಬು ಹೇಳುತ್ತಿದ್ದಾರೆ. ರೈತರಿಗೆ ಹಣಪಾವತಿ ವಿಳಂಬವಾದಲ್ಲಿ ಭೂಸ್ವಾಧೀನ ಅಧಿಕಾರಿಗಳನ್ನೇ ನೇರವಾಗಿ ಹೊಣೆಗಾರರನ್ನಾಗಿಸಲಾಗುವುದು ಎಂದು ಎಚ್ಚರಿಸಿದರು. ಶಾಸಕ ರಮೇಶ್‌ಕುಮಾರ್ ಸೇರಿದಂತೆ ಹಲವು ಶಾಸಕರು ವಿಷಯ ಬೆಂಬಲಿಸಿ ಮಾತನಾಡಿದರು.

ಆಧಾರ: ಸಂಯುಕ್ತ ಕರ್ನಾಟಕ, ದಿನಾಂಕ: 15.09.2021

## 61. ದೇಗುಲ ವಿವಾದ : ಬೆಚ್ಚಿದ ಸರ್ಕಾರ

ರಾಜ್ಯಾದ್ಯಂತ ವಿವಾದಕ್ಕೆ ಒಳಗಾಗಿರುವ ದೇವಸ್ಥಾನಗಳ ತೆರವು ಕಾರ್ಯಾಚರಣೆಯನ್ನು ಸರ್ಕಾರದಿಂದ ಮುಂದಿನ ಸೂಚನೆ ಬರುವವರಿಗೆ ಸ್ಥಗಿತಗೊಳಿಸುವಂತೆ ಜಿಲ್ಲಾಧಿಕಾರಿಗಳು ಮತ್ತು ಕಂದಾಯ ಇಲಾಖೆ ಅಧಿಕಾರಿಗಳಿಗೆ ಸರ್ಕಾರ ಸೂಚಿಸಿದೆ. ಆ ಮೂಲಕ ಜನರ ಭಾವನೆಗೆ ಸ್ಪಂದಿಸಿ ರಕ್ಷಣಾತ್ಮಕ ಕ್ರಮಕ್ಕೆ ಮುಂದಾಗಿದೆ.

ವಿಧಾನಸೌಧದಲ್ಲಿ ಮಾತನಾಡಿದ ಕಂದಾಯ ಸಚಿವ ಆರ್.ಅಶೋಕ್ ಅವರು, ನ್ಯಾಯಾಲಯದ ನಿರ್ದೇಶನಗಳನ್ನು ಸರ್ಕಾರ ಕೂಲಂಕಷವಾಗಿ ಪರಿಶೀಲನೆ ನಡೆಸಿದ್ದು, ಮುಂದೇನು ಮಾಡಬೇಕು ಎಂಬ ಬಗ್ಗೆ 2 ದಿನಗಳಲ್ಲಿ ತೀರ್ಮಾನ ತೆಗೆದುಕೊಳ್ಳುತ್ತದೆ. ಅಲ್ಲಿಯವರೆಗೆ ಯಾವುದೇ ಧಾರ್ಮಿಕ ಕೇಂದ್ರಗಳ ತೆರವು ಕಾರ್ಯಾಚರಣೆ ನಡೆಸುವ ಅಗತ್ಯವಿಲ್ಲ ಎಂದರು.

ಹಠಾತ್ತನೆ ದೇಗುಲಗಳನ್ನು ತೆರವುಗೊಳಿಸುವುದರಿಂದ ಜನರ ಭಾವನೆಗಳಿಗೆ ಧಕ್ಕೆಯಾಗಲಿದೆ. ಕೆಲವು ಕಡೆ ಸಾರ್ವಜನಿಕರಿಂದ ವಿರೋಧ ವ್ಯಕ್ತವಾಗುತ್ತಿದೆ. ಮೈಸೂರು ಜಿಲ್ಲೆ ನಂಜನಗೂಡು, ಹುಣಸೂರಿನಲ್ಲಿ ಪುರಾತನ ದೇವಾಲಯವನ್ನು ಜಿಲ್ಲಾಡಳಿತ ತೆರವುಗೊಳಿಸಿರುವುದು ಸರ್ಕಾರದ ಗಮನಕ್ಕೆ ಬಂದಿದೆ. ಈ ಸಂಬಂಧ ಜಿಲ್ಲಾಧಿಕಾರಿ ಮತ್ತು ತಹಸೀಲ್ದಾರ್ ಜೊತೆ ಮಾತನಾಡಿ ಮಾಹಿತಿ ಪಡೆಯಲಾಗಿದೆ. ಜನತೆ ಯಾವುದೇ ಕಾರಣಕ್ಕೂ ಆಕ್ರೋಶಕ್ಕೆ ಒಳಗಾಗಬರದು ಎಂದು ಮನವಿ ಮಾಡಿದರು.

ರಾತ್ರೋರಾತ್ರಿ ದೇಗುಲ ತೆರವು ಸರಿಯಲ್ಲ. ಹಿಂದೂಪರ ಅನ್ನೋ ಸರ್ಕಾರದಿಂದಲೇ ಇಂತಹ ವರ್ತನೆ ಆಕ್ಷೇಪಾರ್ಹ. ಸುಪ್ರೀಂ ತೀರ್ಪಿನ ಬಗ್ಗೆ ಚರ್ಚಿಸಿ ಕ್ರಮ ಕೈಗೊಳ್ಳಲಿ. ಹಿಂದೂ ದೇಗುಲ ಒಡೆದಿರುವುದಕ್ಕೆ ಬಿಜೆಪಿ ಸರ್ಕಾರವೇ ಕಾರಣ. ಈ ಹಿಂದೆಯೂ ಸುಪ್ರೀಂ ಅಥವಾ ಹೈಕೋರ್ಟ್ ತೀರ್ಪುಗಳನ್ನು ಸರ್ಕಾರಗಳು ಎಷ್ಟರಮಟ್ಟಿಗೆ ಅನುಷ್ಠಾನಕ್ಕೆ ತಂದಿವೆ ಎನ್ನುವುದು ಕೂಡಾ ಪ್ರಶ್ನಾರ್ಹವಾಗಿದೆ ಎಂದು ಮಾಜಿ ಸಿಎಂ ಹೆಚ್.ಡಿ.ಕುಮಾರಸ್ವಾಮಿ ಅಭಿಪ್ರಾಯಪಟ್ಟಿದ್ದಾರೆ.

ಯಾವುದೇ ನ್ಯಾಯಾಲಯದ ತೀರ್ಪು ಪ್ರಶ್ನಿಸಲು ಅವಕಾಶವಿದೆ. ಅನುಷ್ಠಾನ ಮಾಡುವುದಾದರೂ ಗೌರವಯುತ ಮಾರ್ಗಗಳಿವೆ ಎಂದು ಹೇಳಿರುವ ಬಿಜೆಪಿ ರಾಷ್ಟ್ರೀಯ ಪ್ರಧಾನ

ಕಾರ್ಯದರ್ಶಿ ಸಿ.ಟಿ.ರವಿ ಅವರು, ಹಬ್ಬದ ದಿನವೇ ಜಿಲ್ಲಾಡಳಿತ ದೇಗುಲ ಕೆಡುವುವ ಕೆಲಸ ಮಾಡಿರುವುದು ಸಹಜವಾಗಿಯೇ ಭಾವನೆಗೆ ಧಕ್ಕೆ ತಂದಿದೆ ಎಂದಿದ್ದಾರೆ.

ದೇಗುಲ ಧ್ವಂಸಕ್ಕೆ ಕಾರಣರಾದ ಅಧಿಕಾರಿಗಳ ವಿರುದ್ಧ ಕ್ರಮ ಆಗಬೇಕೆಂದು ಒತ್ತಾಯಿಸಿರುವ ಬಿಜೆಪಿ ಶಾಸಕ ಬಸವಗೌಡ ಯತ್ನಾಳ, ಜಿಲ್ಲಾಧಿಕಾರಿಗೆ ನೋಟಿಸ್ ಕೊಡಬೇಕು. ಸುಪ್ರೀಂ ತೀರ್ಪಿನ ಹೆಸರಲ್ಲಿ ಉದ್ಧಟತನ ತೋರಿರುವ ಅಧಿಕಾರಿಗಳ ವಿರುದ್ಧ ಸರ್ಕಾರ ಕಠಿಣ ಕ್ರಮ ಜರುಗಿಸುವಂತೆಯೂ ಅವರು ಒತ್ತಾಯಿಸಿದ್ದಾರೆ.

ರಾಜ್ಯದಲ್ಲಿ 1700 ದೇವಸ್ಥಾನಗಳ ತೆರವಿಗೆ ಸರ್ಕಾರ ಮುಂದಾಗಿದೆ. ಇದು ಕೆಲವು ಅಧಿಕಾರಿಗಳ ಸರ್ವಾಧಿಕಾರದ ವರ್ತನೆ. ಸುಪ್ರೀಂಕೋರ್ಟ್ ಆದೇಶದ ಹೆಸರಿನಲ್ಲಿ ಇಂತಹ ಕ್ರಮ ಸರಿಯಲ್ಲ. ದೇವಸ್ಥಾನ ಸಮಿತಿಯ ಜೊತೆ ಚರ್ಚಿಸದೇ ತೆರವು ಮಾಡಬಾರದು. ಬಿಜೆಪಿ ಹಿಂದೂ ಧರ್ಮದ ಪರವಾಗಿದೆ. ಹಾಗೆಂದು ಮುಸ್ಲಿಂ, ಕ್ರೈಸ್ತರ ವಿರುದ್ಧವೂ ಇಲ್ಲ ಎಂದು ಬಿಜೆಪಿ ಶಾಸಕ ಎಂ.ಪಿ.ರೇಣುಕಾಚಾರ್ಯ ಹೇಳಿದರು.

ನಂಜನಗೂಡಿನ ದೇವಸ್ಥಾನಕ್ಕೆ ತನ್ನದೇ ಇತಿಹಾಸವಿದೆ. ಸುಪ್ರೀಂಕೋರ್ಟ್ ಆದೇಶ ಪಾಲನೆ ಬೇಡ ಎಂದು ಹೇಳಲ್ಲ. ದೇವಸ್ಥಾನ ಸಮಿತಿ ಜೊತೆ ಚರ್ಚಿಸಬೇಕು. ಪರ್ಯಾಯ ದೇವಸ್ಥಾನ ನಿರ್ಮಿಸಿ ನಂತರ ತೆರವು ಮಾಡಲಿ. ಬಿಜೆಪಿಯವರ ಬೆಳಗ್ಗೆ ಎದ್ದರೆ ನಾವು ಹಿಂದೂ ಅಂತರೆ. ಈಗ ಹಿಂದೂ ದೇವಸ್ಥಾನ ಹೊಡೆಯುತ್ತಿದ್ದಾರೆ ಎಂದು ಮಾಜಿ ಸಚಿವ ಹೆಚ್.ಡಿ.ರೇವಣ್ಣ ಟೀಕಿಸಿದರು.

ಧಾರ್ಮಿಕ ಕೇಂದ್ರಗಳು ನಮ್ಮ ಸಂಸ್ಕೃತಿಯ ಪ್ರತೀಕ. ಯಾವುದೇ ಪೂಜಾಸ್ಥಳಗಳನ್ನು ಧ್ವಂಸ ಮಾಡುವುದು ಸರಿಯಾದ ಕ್ರಮವಲ್ಲ. ಜನರ ಭಾವನೆ ಅರ್ಥ ಮಾಡಿಕೊಳ್ಳಬೇಕು. ಕೋರ್ಟ್ ತೀರ್ಪು ಇರುತ್ತದೆ ಅದನ್ನು ಪ್ರಶ್ನಿಸುವ ಅವಕಾಶವು ನಮ್ಮ ದೇಶದಲ್ಲಿದೆ ಎಂದು ಕೇಂದ್ರದ ಮಾಜಿ ಸಚಿವ ಸಿ.ಎಂ.ಇಬ್ರಾಹಿಂ ಅವರು ವಿಶ್ಲೇಷಿಸಿದ್ದಾರೆ. ಒಟ್ಟಾರೆ ದೇಗುಲ ತೆರವಿನ ಸರ್ಕಾರದ ಕ್ರಮ ಪಕ್ಷಾತೀತವಾಗಿ ಟೀಕೆ ಟಿಪ್ಪಣಿಗಳಿಗೆ ಕಾರಣವಾಗಿದೆ.

ಆಧಾರ: ಸಂಯುಕ್ತ ಕರ್ನಾಟಕ, ದಿನಾಂಕ: 15.09.2021

## 62. ಬೆಳಗಾವಿ ಅಧಿವೇಶನಕ್ಕೆ ಹಣ ಮಂಜೂರು

ನೂತನವಾಗಿ ಘೋಷಿತವಾಗಿರುವ ಮಹತ್ವಾಕಾಂಕ್ಷಿ ಅಮೃತ ಯೋಜನೆ, ಬೆಳಗಾವಿ ಅಧಿವೇಶನ ಹಾಗೂ ಇನ್ನಿತರೆ ಮಹತ್ವದ ವೆಚ್ಚಗಳಿಗಾಗಿ 10 ಸಾವಿರ ಕೋಟಿ ರೂಪಾಯಿಗೂ ಹೆಚ್ಚಿನ ಪೂರಕ ಅಂದಾಜುಗಳನ್ನು ಸದನಕ್ಕೆ ಮಂಡಿಸಲಾಗಿದೆ.

2021–22 ನೇ ಸಾಲಿನ ವಾರ್ಷಿಕ ಆಯವ್ಯಯ ಮೀರಿ ಅವಶ್ಯಕ ಬಾಬ್ತುಗಳಿಗೆ ಹಣವನ್ನು ಹೊಂದಿಸುವುದಕ್ಕಾಗಿ ಪೂರಕ ಅಂದಾಜುಗಳ ಮೊದಲ ಕಂತಿನ ಪಟ್ಟಿ ಇದಾಗಿದೆ. ಬೆಳಗಾವಿಯಲ್ಲಿ ನಡೆಸಲು ಉದ್ದೇಶಲಾಗಿರುವ ಚಳಿಗಾಲದ ಅಧಿವೇಶನಕ್ಕೆ 17 ಕೋಟಿ ರೂಪಾಯಿಗಳ ವೆಚ್ಚವನ್ನು ಪೂರಕ ಅಂದಾಜು ಪಟ್ಟಿಯಲ್ಲಿ ವಿವರಿಸಲಾಗಿದೆ. ಇದರಿಂದ ಎರಡು ವರ್ಷಗಳ ನಂತರ ಬೆಳಗಾವಿಯಲ್ಲಿ ಅಧಿವೇಶನ ನಡೆಸುವುದು ಹೆಚ್ಚೂ ಕಡಿಮೆ ಪಕ್ಕಾ ಆದಂತಾಗಿದೆ. ಕೃಷಿ ಮತ್ತು ತೋಟಗಾರಿಕೆ ಇಲಾಖೆಗೆ 298.52 ಲಕ್ಷ, ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆಗೆ ರಾಜಸ್ವ ಲೆಕ್ಕದಲ್ಲಿ 1596.12 ಲಕ್ಷ ಹಾಗೂ ಬಂಡವಾಳ ಲೆಕ್ಕದಲ್ಲಿ 2202 ಲಕ್ಷ ರೂಪಾಯಿ ವ್ಯಯಿಸಲು ಪ್ರಸ್ತಾಪಿಸಲಾಗಿದೆ. ಉಳಿದಂತೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಗೆ 2643.44 ಲಕ್ಷ (ರಾಜಸ್ವ ಲೆಕ್ಕ) ಒಳಾಡಳಿತ ಮತ್ತು ಸಾರಿಗೆಗೆ 2886.91 ಲಕ್ಷ; ಮೂಲಭೂತ ಸೌಕರ್ಯ ಇಲಾಖೆಗೆ 2000 ಲಕ್ಷ; ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್‌ಗೆ 270802.30 ಲಕ್ಷ (ರಾಜಸ್ವ ಲೆಕ್ಕ), ಸಮಾಜ ಕಲ್ಯಾಣಕ್ಕೆ 824.85 ಲಕ್ಷ; ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆಗೆ 170077.24 ಲಕ್ಷ; ಕಂದಾಯ ಇಲಾಖೆಗೆ 147572.33 ಲಕ್ಷ

ಸೇರಿದಂತೆ ಬಹುತೇಕ ಎಲ್ಲಾ ಇಲಾಖೆಗಳಿಗೂ ಪೂರಕ ಅಂದಾಜಿನಲ್ಲಿ ಹಣ ದೊರೆಯಲಿದೆ. ಇದು ಬಜೆಟ್‌ನಲ್ಲಿ ಘೋಷಿತ ಹಣಕ್ಕೆ ಹೆಚ್ಚುವರಿಯಾಗಿ ಲಭಿಸಲಿದೆ.

ಆಧಾರ: ಸಂಯುಕ್ತ ಕರ್ನಾಟಕ, ದಿನಾಂಕ: 15.09.2021

## 63. ಕ್ಷೇತ್ರ ಮರುವಿಂಗಡಣೆ ಆಯೋಗಕ್ಕೆ ಮಸೂದೆ

ಜಿಲ್ಲಾ ಮತ್ತು ತಾಲ್ಲೂಕು ಪಂಚಾಯತ್ ಕ್ಷೇತ್ರಗಳ ಪುನರ್ ವಿಂಗಡಣೆ ಮಾಡುವ ಸಂಬಂಧ ಪ್ರತ್ಯೇಕ ಆಯೋಗವನ್ನು ರಚಿಸಲು ಮಹತ್ವದ ಕರ್ನಾಟಕ ಗ್ರಾಮ ಸ್ವರಾಜ್ ಮತ್ತು ಪಂಚಾಯತ್ ರಾಜ್ (ತಿದ್ದುಪಡಿ) ವಿಧೇಯಕವನ್ನು ಸದನದಲ್ಲಿ ಮಂಡಿಸಲಾಗಿದೆ.

ಗ್ರಾಮೀಣಾಭಿವೃದ್ಧಿ ಸಚಿವ ಕೆ.ಎಸ್.ಈಶ್ವರಪ್ಪ ಅವರು ಈ ವಿಧೇಯಕವನ್ನು ಮಂಡಿಸಿದರು. ವಿಧೇಯಕ ಕುರಿತು ಚರ್ಚೆ ನಡೆಯಬೇಕಿದೆ.

ಕರ್ನಾಟಕ ಪಂಚಾಯತ್‌ರಾಜ್ ಸೀಮಾ ನಿರ್ಣಯ ಆಯೋಗ ರಚನೆ ಮಾಡುವುದು ವಿಧೇಯಕದ ಮುಖ್ಯ ಉದ್ದೇಶವಾಗಿದೆ. ಈ ಆಯೋಗದ ಮೂಲಕ ತಾಲ್ಲೂಕು ಮತ್ತು ಜಿಲ್ಲಾ ಪಂಚಾಯಿತಿ ಕ್ಷೇತ್ರಗಳು ಪುನರ್ ವಿಂಗಡಣೆ ಮಾಡಲಾಗುತ್ತದೆ. ಈಗಾಗಲೇ ಕರ್ನಾಟಕ ರಾಜ್ಯ ಚುನಾವಣೆ ಆಯೋಗವು ಮಾಡಿರುವ ಕ್ಷೇತ್ರ ಪುನರ್‌ವಿಂಗಡಣೆಯು ಅವೈಜ್ಞಾನಿಕ ಮತ್ತು ಕಾನೂನು ಬಾಹಿರ ಎಂದು ನ್ಯಾಯಾಲಯದಲ್ಲಿ ಹಲವು ಅರ್ಜಿಗಳು ಸಲ್ಲಿಕೆಯಾಗಿವೆ. ಕ್ಷೇತ್ರ ಪುನರ್ ವಿಂಗಡಣೆ ಆಯೋಗ ರಚನೆ ಮಾಡಲು ಉದ್ದೇಶದಿಂದ ತಿದ್ದುಪಡಿ ಮಾಡಲಾಗುತ್ತಿದೆ ಎಂದು ವಿಧೇಯಕದಲ್ಲಿ ತಿಳಿಸಲಾಗಿದೆ.

ವಿಧೇಯಕ ಜಾರಿಯಾದ ಬಳಿಕ ತಾಲ್ಲೂಕು ಪಂಚಾಯತ್ ಮತ್ತು ಜಿಲ್ಲಾ ಪಂಚಾಯತ್ ಕ್ಷೇತ್ರಗಳ ಎಲ್ಲಾ ಕ್ಷೇತ್ರ ಪುನರ್‌ವಿಂಗಡಣೆ ಸಂಬಂಧ ಚುನಾವಣಾ ಆಯೋಗ ಹೊರಡಿಸಿರುವ ಅಧಿಸೂಚನೆ ರದ್ದಾಗಲಿದೆ. ಪ್ರಸ್ತುತ ಜಾರಿಯಲ್ಲಿರುವ ತಾಲ್ಲೂಕು ಪಂಚಾಯತ್ ಮತ್ತು ಜಿಲ್ಲಾ ಪಂಚಾಯತ್ ಕ್ಷೇತ್ರಗಳ ಮೀಸಲಿರಿಸುವ ಎಲ್ಲ ಅಧಿಸೂಚನೆಗಳು ರದ್ದಾಗಲಿವೆ. ಜುಲೈ 2 ರಂದು ರಾಜ್ಯ ಸರ್ಕಾರದ ವಿರೋಧದ ನಡುವೆಯು ಆಯೋಗವು ಮೀಸಲಾತಿಯನ್ನು ಪ್ರಕಟಿಸಿತ್ತು.

**ಆಯೋಗ ಹೇಗಿರಲಿದೆ:**

ವಿಂಗಡಣೆ ಕುರಿತ ಪ್ರತ್ಯೇಕ ಆಯೋಗದ ಕೇಂದ್ರ ಕಛೇರಿಯು ಬೆಂಗಳೂರಲ್ಲಿ ಇರಲಿದೆ. ಆಯೋಗಕ್ಕೆ ನಿವೃತ್ತ ಮುಖ್ಯ ಕಾರ್ಯದರ್ಶಿ ಅಥವಾ ಹೆಚ್ಚುವರಿ ಕಾರ್ಯದರ್ಶಿ ಅಧ್ಯಕ್ಷರಾಗಿರುತ್ತಾರೆ. ಆಯೋಗವು ಜನಗಣತಿ ಆಧಾರದಲ್ಲಿ ಪ್ರತಿ ಗ್ರಾಮ ಪಂಚಾಯತ್, ತಾಲ್ಲೂಕು ಪಂಚಾಯತ್ ಮತ್ತು ಜಿಲ್ಲಾ ಪಂಚಾಯತ್‌ಗೆ ಚುನಾಯಿಸಬೇಕಾದ ಒಟ್ಟು ಸದಸ್ಯರ ಸಂಖ್ಯೆಯನ್ನು ನಿಗದಿಪಡಿಸಲು ಶಿಫಾರಸ್ಸು ಮಾಡಲಿದೆ. ವಾರ್ಡ್‌ಗಳು ಅಥವಾ ಕ್ಷೇತ್ರಗಳ ಗಡಿಗಳನ್ನು ನಿರ್ಧರಿಸುವುದಕ್ಕಾಗಿ ಶಿಫಾರಸ್ಸು ಮಾಡಲಿದೆ. ಆಯೋಗ ಸಿವಿಲ್ ನ್ಯಾಯಾಲಯದ ಅಧಿಕಾರ ಹೊಂದಿರಲಿದೆ.

ಆಧಾರ: ಕನ್ನಡ ಪ್ರಭ, ದಿನಾಂಕ: 15.09.2021

## 64.ಸದಸ್ಯರ ನಿರಾಸಕ್ತಿ : ಸ್ಪೀಕರ್ ಕಾಗೇರಿ ಗರಂ

ಭೋಜನ ವಿರಾಮದ ನಂತರ ವಿಧಾನಸಭೆಯ ಕಲಾಪ ಆರಂಭಕ್ಕೆ ಅರ್ಧ ಗಂಟೆ ಬೆಲ್ ಹೊಡೆದರೂ, ಸದಸ್ಯರು ಬಾರದಿದ್ದಾಗ ಸಭಾಧ್ಯಕ್ಷ ವಿಶ್ವೇಶ್ವರ ಹೆಗಡೆ, ಕಾಗೇರಿ ಗರಂ ಆದರು. ಆರು ತಿಂಗಳ ನಂತರ ಸದನ ನಡೆಯುತ್ತಿದೆ. ಆದರೂ ಸದಸ್ಯರು ಆಸಕ್ತಿ ತೋರಿಸದಿರುವುದು ಒಳ್ಳೆಯ

ಬೆಳವಣಿಗೆಯಲ್ಲ. ಮೂರು ಪಕ್ಷಗಳ ವಿಪ್‌ಗಳು ಈ ಬಗ್ಗೆ ಗಂಭೀರವಾಗಿ ಪರಿಗಣಿಸಿ, ಎಲ್ಲ ಸದಸ್ಯರು ಹಾಜರಾಗುವಂತೆ ನೋಡಿಕೊಳ್ಳಲು ಸೂಚಿಸಿದರು.

ಆಧಾರ: ಉದಯವಾಣಿ, ದಿನಾಂಕ: 16.09.2021

## 65. ಸ್ನೇಹ ಹೋದ್ರೂ ಪರ್‍ವಾಗಿಲ್ಲ ಕೊಡಲ್ಲ

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆಯಲ್ಲಿರುವ ಸಿಬ್ಬಂದಿಯನ್ನು ನಮಗೆ ಕೊಡಿ ಎಂದು ಯಾರೂ ಕೇಳಬೇಡಿ. ಸ್ನೇಹ ಹೋದರೂ ಪರವಾಗಿಲ್ಲ. ನಮ್ಮ ಸಿಬ್ಬಂದಿಯನ್ನು ನಿಮಗೆ ಕೊಡುವುದಿಲ್ಲ ಅಷ್ಟೇ. ಗ್ರಾಮೀಣಾಭಿವೃದ್ಧಿ ಸಚಿವ ಕೆ.ಎಸ್.ಈಶ್ವರಪ್ಪ ತಮ್ಮದೇ ಆದ ಧಾಟಿಯಲ್ಲಿ ಗುಡುಗಿದ ಪರಿಯಿದು.

ಗ್ರಾಮೀಣಾಭಿವೃದ್ಧಿಯ ಹಲವಾರು ಸಿಬ್ಬಂದಿ ಬೇರೆ ಇಲಾಖೆಗಳಿಗೆ ವರ್ಗಾವಣೆ ಗೊಂಡಿರುವುದರಿಂದ ನೌಕರರ ಕೊರತೆಯಾಗಿದೆ. ಪಂಚಾಯ್ತಿ ವ್ಯಾಪ್ತಿಯಲ್ಲಿ ಕೆಲಸಗಳು ಆಗುತ್ತಿಲ್ಲ ಎಂಬ ಸದನದ ಹಲವರ ಭಾವನೆಗೆ ಉತ್ತರಿಸುವಾಗ ಈಶ್ವರಪ್ಪ ಮೇಲಿನಂತೆ ಹೇಳಿ ಸಹೋದ್ಯೋಗಿ ಶಾಸಕರ ಮೇಲೆ ಚಾಟಿ ಬೀಸಿದರು.

'ಹೌದು. ಬೇರೆ ಇಲಾಖೆಗಳಿಗೆ ವರ್ಗಾವಣೆ ಆಗಿರುವುದು ಮಾತ್ರವಲ್ಲ. ನನ್ನ ಅನೇಕ ಶಾಸಕ ಸಹೋದ್ಯೋಗಿ ಸ್ನೇಹಿತರು ಕೂಡ ನಮ್ಮ ಇಲಾಖೆಯ ಸಿಬ್ಬಂದಿಯನ್ನೇ ಆಪ್ತ ಸಹಾಯಕರಾಗಿ ನಿಯೋಜನೆ ಮಾಡಿಕೊಂಡಿದ್ದಾರೆ. ಇಂತಹ ಸಿಬ್ಬಂದಿಯನ್ನೇ ನಮಗೆ ನೀಡಿ ಎಂದು ಕೋರುತ್ತಾರೆ. ಸ್ನೇಹಕ್ಕೆ ಕಟ್ಟು ಬಿದ್ದು ಕೊಡುತ್ತಿರುವೆ. ಈಗ ಸಿಬ್ಬಂದಿ ಕೊರತೆ ಎಂಬುದಾಗಿ ನೀವುಗಳೇ ಹೇಳುತ್ತಿದ್ದೀರಿ.

'ಸರಿ. ಸಿಬ್ಬಂದಿ ಕೊರತೆ ನೀಗಿಸುವುದಷ್ಟೇ ಅಲ್ಲ. ಇನ್ನು ಮುಂದೆ ನೀವು ಪತ್ರಗಳನ್ನು ಕೊಟ್ಟರೂ ನಮ್ಮ ಇಲಾಖೆಯವರನ್ನು ಕೊಡುವುದಿಲ್ಲ. ಈಗಾಗಲೇ ನಿಮಗೆ ಕೊಟ್ಟಿರುವ ಆಪ್ತ ಸಹಾಯಕರನ್ನೂ ವಾಪಸ್ ಕರೆಸಿಕೊಳ್ಳಲಾಗುತ್ತದೆ. ಸ್ನೇಹ ಹೋದರೂ ಚಿಂತೆ ಇಲ್ಲ. ತಕ್ಷಣ ಈ ಸಂಬಂಧ ಆದೇಶ ಮಾಡುತ್ತೇನೆ' ಎಂದು ಈಶ್ವರಪ್ಪ ಗರಂ ಆಗಿ ಹೇಳಿದಾಗ ಸ್ಪೀಕರ್ ವಿಶ್ವೇಶ್ವರ ಹೆಗಡೆ, ಕಾಗೇರಿ ಹಾಸ್ಯಮಯ ಮಾತುಗಳ ಮೂಲಕ ವಾತಾವರಣ ತಿಳಿಗೊಳಿಸಿದರು.

ಆಧಾರ: ಸಂಯುಕ್ತ ಕರ್ನಾಟಕ, ದಿನಾಂಕ: 16.09.2021

## 66. ಸ್ಪೀಕರ್ ಗರಂ

ಅಜೆಂಡಾ ಪ್ರಕಾರ ನೋಟಿಸ್ ನೀಡಿಯೂ ಸಂಬಂಧಿಸಿದ ವಿಷಯ ಬರುವಾಗ ತಮ್ಮ ಆಸನದಲ್ಲಿ ಇರದೇ, ನಂತರ ಅವಕಾಶಕ್ಕಾಗಿ ಒತ್ತಾಯಿಸಿದ ಜೆಡಿಎಸ್ ಶಾಸಕ ಅನ್ನದಾನಿ ಅವರನ್ನು ಸ್ಪೀಕರ್ ವಿಶ್ವೇಶ್ವರ ಹೆಗಡೆ ಕಾಗೇರಿ ತೀವ್ರವಾಗಿ ತರಾಟೆಗೆ ತೆಗೆದುಕೊಂಡರು. ಸದನ ಶಿಸ್ತು ಮತ್ತು ನಡವಳಿಕೆಯ ಪಾಠ ಹೇಳಿದರು.

'ಮೈಶುಗರ್ ಖಾಸಗೀಕರಣದ ಬಗ್ಗೆ' ಪ್ರಶ್ನೋತ್ತರದ ನಂತರ ಶೂನ್ಯವೇಳೆಯಲ್ಲಿ ಪ್ರಸ್ತಾಪಿಸಲು ಅನ್ನದಾನಿ ನೋಟೀಸ್ ನೀಡಿದ್ದರು. ಆದರೆ ಸ್ಪೀಕರ್ ಹೆಸರು ಕರೆದಾಗ ಶಾಸಕರು ಮುಖ್ಯಮಂತ್ರಿ ಬಸವರಾಜ್ ಬೊಮ್ಮಾಯಿಯವರ ಆಸನದ ಬಳಿ ತೆರಳಿ, ಸಿಎಂ ಜೊತೆ ಏನೋ ಚರ್ಚಿಸುತ್ತಿದ್ದರು. ಸ್ಪೀಕರ್ ಮೂರು ಬಾರಿ ಕರೆದ ನಂತರ ಮುಂದಿನ ಕಲಾಪವನ್ನು ಕೈಗೆತ್ತಿಕೊಂಡರು. ಆಗ ಸ್ಥಾನಕ್ಕೆ ಮರಳಿದ ಅನ್ನದಾನಿ, 'ಇಲ್ಲೇ ಇದ್ದರೂ ಬೇರೆ ವಿಷಯವನ್ನು ಕೈಗೆತ್ತಿಕೊಳ್ಳುತ್ತೀರಲ್ಲ' ಎಂದದ್ದು ಸ್ಪೀಕರ್ ಅವರನ್ನು ಸಿಟ್ಟಿಗೆಬ್ಬಿಸಿತು. 'ಹೀಗೆಲ್ಲ ಮಾತನಾಡಬಾರದು. ನಾನು ನಿಮ್ಮ ಹೆಸರನ್ನು ಕರೆದಾಗ ನೀವು ಆಸನದಲ್ಲಿ ಇರಬೇಕಾಗಿತ್ತು.

ಕಲಾಪದಲ್ಲಿ ಯಾವುದರ ನಂತರ ಯಾವ ವಿಷಯ ಬರುತ್ತದೆಂಬುದು ನಿಮಗೆ ಗೊತ್ತಿಲ್ಲವೆ' ಎಂದು ಕಾಗೇರಿ ಅನ್ನದಾನಿಯವರನ್ನು ತರಾಟೆಗೆ ತೆಗೆದುಕೊಂಡರು.

ಆಧಾರ: ಸಂಯುಕ್ತ ಕರ್ನಾಟಕ, ದಿನಾಂಕ: 16.09.2021

## 67. ಕೇಂದ್ರ, ರಾಜ್ಯ ಸರ್ಕಾರದಿಂದ ಕ್ರಿಮಿನಲ್ ಲೂಟಿ: ಸಿದ್ದು ಕಿಡಿ

ತೀವ್ರ ಬೆಲೆ ಏರಿಕೆಯಿಂದ ರಾಜ್ಯದ ಜನತೆಯನ್ನು ಕಾಪಾಡಲು ಪೆಟ್ರೋಲ್, ಡಿಸೇಲ್ ಮೇಲಿನ ತೆರಿಗೆಯನ್ನು ಶೇ. 50ರಷ್ಟು ಇಳಿಸುವಂತೆ ವಿಧಾನಸಭೆಯಲ್ಲಿ ಒಮ್ಮತದ ನಿರ್ಣಯ ಕೈಗೊಂಡು ಕೇಂದ್ರಕ್ಕೆ ಕಳುಹಿಸಬೇಕು ಮತ್ತು ರಾಜ್ಯದ ಪಾಲಿನ ತೆರಿಗೆಯನ್ನೂ ಕಡಿಮೆ ಮಾಡಬೇಕು ಎಂದು ಪ್ರತಿಪಕ್ಷ ನಾಯಕ ಸಿದ್ದರಾಮಯ್ಯ ಅವರು ರಾಜ್ಯ ಸರ್ಕಾರವನ್ನು ಆಗ್ರಹಿಸಿದ್ದಾರೆ. ದರ ಏರಿಕೆಯನ್ನು ಈ ಹಿಂದೆ ಅಟಲ್ ಬಿಹಾರಿ ವಾಜಪೇಯಿ ಅವರೇ ಹೇಳಿದಂತೆ 'ಕ್ರಿಮಿನಲ್ ಲೂಟಿ' ಎಂದು ಕಿಡಿಕಾರಿದ್ದಾರೆ.

ವಿಧಾನಸಭೆಯಲ್ಲಿ ಬೆಲೆ ಏರಿಕೆ ಕುರಿತು ನಿಲುವಳಿ ಸೂಚನೆ ಮೇಲಿನ ಚರ್ಚೆಯಲ್ಲಿ ಪಾಲ್ಗೊಂಡು ಮಾತನಾಡಿದ ಅವರು, ಯುಪಿಎ ಹಾಗೂ ಎನ್‌ಡಿಎ ಸರ್ಕಾರದ ಅವಧಿಯಲ್ಲಿ ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ಇದ್ದ ಪ್ರತಿ ಬ್ಯಾರಲ್ ಕಚ್ಚಾ ತೈಲ ಬೆಲೆ, ತೆರಿಗೆ ಏರಿಕೆ ಮತ್ತು ಸಂಗ್ರಹ ಮಾರುಕಟ್ಟೆಯಲ್ಲಿನ ಬೆಲೆ ಏರಿಕೆಯ ಕುರಿತು ವಿಸ್ತೃತವಾಗಿ ಮಾಹಿತಿ ನೀಡಿದರು.

**ಇದು ಕ್ರಿಮಿನಲ್ ಲೂಟಿ :** '1973ರಲ್ಲಿ ಇಂದಿರಾ ಗಾಂಧಿ ಸರ್ಕಾರ 100 ಪೈಸೆ ಇದ್ದ ಪೆಟ್ರೋಲ್ ಬೆಲೆಯನ್ನು 7 ಪೈಸೆ ಏರಿಸಿದಾಗ ಅಂದು ವಾಜಪೇಯಿ ಅವರು ಎತ್ತಿನಗಾಡಿಯಲ್ಲಿ ಸಂಸತ್ ಭವನಕ್ಕೆ ಆಗಮಿಸಿ 'ಇದು ಕ್ರಿಮಿನಲ್ ಲೂಟ್' ಎಂದು ಕರೆದಿದ್ದರು. ನಾನೂ ಇಂದು ಅದಕ್ಕಿಂತ ಹೆಚ್ಚೇನೂ ಹೇಳಬಯಸುವುದಿಲ್ಲ. ಇಂದಿನ 'ಕೇಂದ್ರ ಹಾಗೂ ರಾಜ್ಯ ಬಿಜೆಪಿ ಸರ್ಕಾರಗಳು ಪೆಟ್ರೋಲ್, ಡೀಸೆಲ್, ಅಡುಗೆ ಅನಿಲ ಸೇರಿದಂತೆ ಅಗತ್ಯ ವಸ್ತುಗಳ ಬೆಲೆ ಏರಿಕೆ ಮಾಡಿ ಕ್ರಿಮಿನಲ್ ಲೂಟ್ ಮಾಡುತ್ತಿವೆ. ಕೇವಲ ರೂ. 1.4 ಲಕ್ಷ ಕೋಟಿ ಮೊತ್ತದ ಆಯಿಲ್ ಬಾಂಡ್‌ಗಳ ಸಾಲ ತೀರಿಸುವ ಹೆಸರಲ್ಲಿ ಕಳೆದ ಏಳು ವರ್ಷದಲ್ಲಿ ಜನಸಾಮಾನ್ಯರಿಂದ ರೂ.24 ಲಕ್ಷ ಕೋಟಿ ತೆರಿಗೆ ಸಂಗ್ರಹಿಸಲಾಗಿದೆ' ಎಂದು ಹರಿಹಾಯ್ದರು.

**ಕಚ್ಚಾತೈಲ ಬೆಲೆ ಇಳಿದರೂ ದರ ಏರಿಕೆ:**

ಇಂಧನ ಬೆಲೆ ಏರಿಕೆಗೆ ಬಿಜೆಪಿಯವರು ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ಕಚ್ಚಾತೈಲ ಬಲೆ ಏರಿಕೆ ಹಾಗೂ ಯುಪಿಎ ಸರ್ಕಾರದ ಐದು ಆಯಿಲ್ ಬಾಂಡ್‌ಗಳ ಖರೀದಿಯ ಕಾರಣ ಕೊಡುತ್ತಾರೆ. ಇದರ ನಿಯಂತ್ರಣ ನಮ್ಮ ಕೈಯಲ್ಲಿ ಇಲ್ಲ ಎಂದು ಕೇಂದ್ರ ಹಣಕಾಸು ಸಚಿವೆ ನಿರ್ಮಲಾ ಸೀತಾರಾಮನ್ ಜವಾಬ್ದಾರಿಯಿಂದ ನುಣುಸಿಕೊಳ್ಳುವ ಹೇಳಿಕೆ ನೀಡುತ್ತಾರೆ. ಯುಪಿಎ ಅಧಿಕಾರದಲ್ಲಿ 120 ರಿಂದ 125 ಡಾಲರ್ ಇದ್ದ ಕಚ್ಚಾತೈಲ ಬಲೆ ಪ್ರಧಾನಿ ನರೇಂದ್ರ ಮೋದಿ ಸರ್ಕಾರ ಅಧಿಕಾರಕ್ಕೆ ಬಂದ 2014 ರಲ್ಲಿ 105.52 ಡಾಲರ್‌ಗೆ ಇಳಿಯಿತು. ನಂತರದ ವರ್ಷಗಳಲ್ಲೂ ಇಳಿಯುತ್ತಲೇ ಸಾಗಿದ ಕಚ್ಚಾತೈಲ ಬೆಲೆ ಈಗ ಪ್ರತಿ ಬ್ಯಾರಲ್‌ಗೆ ಕೇವಲ 54.77 ಡಾಲರ್‌ಗೆ ಇಳಿದಿದೆ. ಆ ಪ್ರಕಾರದ ತೈಲ ಬೆಲೆಯನ್ನು ಗಣನೀಯವಾಗಿ ಇಳಿಸಬೇಕಾಗಿತ್ತು. ಆದರೂ ಕೂಡ ಕೇಂದ್ರ ಸರ್ಕಾರ ಪೆಟ್ರೋಲ್, ಡಿಸೇಲ್ ಮೇಲಿನ ತೆರಿಗೆ ಏರಿಕೆ ಮಾಡುತ್ತಲೇ ಇರುವುದರಿಂದ ಜನರು ಇದರ ಪರಿಣಾಮ ಎದುರಿಸಬೇಕಾಗಿದೆ. ಇಂದಿನ ಕಚ್ಚಾತೈಲದ ಬೆಲೆಗೆ ಹೋಲಿಸಿದರೆ ಪ್ರತಿ ಲೀಟರ್ ಬೆಲೆ ರೂ. 38 ಮಾತ್ರ. ಉಳಿದ ಹಣವನ್ನು ತೆರಿಗೆ ರೂಪದಲ್ಲಿ ವಸೂಲಿ ಮಾಡಲಾಗುತ್ತಿದೆ ಎಂದು ಕಿಡಿಕಾರಿದರು.

**ಶೇ. 36ರಷ್ಟು ಜನ ಗ್ಯಾಸ್‌ನಿಂದ ವಿಮುಖ :** ದೇಶದ ಹೆಣ್ಣುಮಕ್ಕಳು ಉರುವಲು ಒಲೆಯ ಹೊಗೆ ಕುಡಿದು ಅನಾರೋಗ್ಯಕ್ಕೊಳಗಾಗಬಾರದು ಎಂಬ ಉದ್ದೇಶಕ್ಕೆ ಅಡುಗೆ ಅನಿಲ ಪರಿಚಯಿಸಲಾಯಿತು. ಈಗ ಅಡುಗೆ ಅನಿಲದ ಬೆಲೆ ಗಗನಕ್ಕೇರಿರುವುದರಿಂದ ದೇಶದಲ್ಲಿ ಶೇ.36ರಷ್ಟು ಜನ ಮಹಿಳೆಯರು ಮತ್ತು ಒಲೆಯಲ್ಲಿ

ಅಡುಗೆ ಮಾಡುವ ಪರಿಸ್ಥಿತಿ ನಿರ್ಮಾಣವಾಗಿದೆ. ಯುಪಿಎ ಅವಧಿಯಲ್ಲಿ ರೂ. 414 ಇದ್ದ ಪ್ರತಿ ಸಿಲಿಂಡರ್ ಅಡುಗೆ ಅನಿಲ ಬೆಲೆ ಇಂದು ರೂ. 922 ಆಗಿದೆ ಎಂದರು.

ಆಧಾರ: ಕನ್ನಡ ಪ್ರಭ, ದಿನಾಂಕ: 16.09.2021

## 68. ಕುಮಾರವ್ಯಾಸ ಭಾರತ ಪದ್ಯ ಓದಿ ಸರ್ಕಾರಕ್ಕೆ ಗುದ್ದು

ಕವಿ ಕುಮಾರವ್ಯಾಸನು ಜನರು ಬೇಸರವಾಗಲು ಕಾರಣವನ್ನು ವಿವರಿಸುವ ಭಾಮಿನಿ ಷಟ್ಪದಿಯ ಪದ್ಯವೊಂದನ್ನು ಓದುವ ಮೂಲಕ ಕೇಂದ್ರದ ಬೆಲೆ ಏರಿಕೆ ಕ್ರಮವನ್ನು ಪ್ರತಿಪಕ್ಷ ನಾಯಕ ಸಿದ್ದರಾಮಯ್ಯ ತರಾಟೆಗೆ ತೆಗೆದುಕೊಂಡ ಘಟನೆ ನಡೆಯಿತು.

ಅರಸು ರಾಕ್ಷಸ

ಮಂತ್ರಿಯೆಂಬುವ ಮೊರೆವ ಹುಲಿ

ಪರಿವಾರ ಹದ್ದಿನ ನೆರವಿ

ಬಡವರ ಭಿನ್ನಪವನಿನ್ನಾರು ಕೇಳುವರು

ಉರಿ ಉರಿವುತಿದೆ ದೇಶ ನಾವಿನ್ನಿರಲು

ಬಾರದೆನುತ್ತ

ಜನ ಬೇಸರದ ಬೇಗೆಯಲಿರದಲೇ

ಭೂಪಾಲ ಕೇಳೆಂದ (ಸಭಾ ಪರ್ವ, 1 ಸಂಧಿ, 62 ಪದ್ಯ)

ಮಹಾಭಾರತದಲ್ಲಿ ಧರ್ಮರಾಯನಿಗೆ ನಾರದರು ಹೇಳುವ ಈ ಪದ್ಯ ಓದಿದ ಸಿದ್ದರಾಮಯ್ಯ ಇಂತಹ ಪರಿಸ್ಥಿತಿ ದೇಶದಲ್ಲಿ ಬರಬಹುದು ಎಂತಲೇ ಕುಮಾರವ್ಯಾಸ ಆಗಲೇ ಈ ಪದ್ಯ ಬರೆದಿರಬಹುದು ಎಂದು ಕಿಚಾಯಿಸಿದರು.

ಆಧಾರ: ಕನ್ನಡಪ್ರಭ, ದಿನಾಂಕ: 16.09.2021

## 69. ಎಲ್ಲಿಂದಾದರೂ ಹಣ ತನ್ನಿ; ಕಾಮಗಾರಿ ಪೂರ್ಣಗೊಳಿಸಿ

'ಭಿಕ್ಷೆಯಾದರೂ ಬೇಡಿ, ಸಾಲವಾದರೂ ತನ್ನಿ, ಕಳ್ಳತನವಾದರೂ ಮಾಡಿ ಒಟ್ಟಿನಲ್ಲಿ ಎಲ್ಲಿಂದಾದರೂ ಹಣ ತಂದು ಕೃಷ್ಣಾ ಮೇಲ್ದಂಡೆ ಯೋಜನೆಯ 3ನೇ ಹಂತದ ಕಾಮಗಾರಿಯನ್ನು ತ್ವರಿತವಾಗಿ ಪೂರ್ಣಗೊಳಿಸಿ' ಎಂದು ಪ್ರತಿಪಕ್ಷ ನಾಯಕ ಎಸ್.ಆರ್.ಪಾಟೀಲ್ ಸರ್ಕಾರವನ್ನು ಆಗ್ರಹಿಸಿದ್ದಾರೆ.

ಕೃಷ್ಣಾ ಮೇಲ್ದಂಡೆ 3ನೇ ಹಂತದ ಯೋಜನೆ ಉತ್ತರ ಕರ್ನಾಟಕ ಭಾಗದ 7 ಜಿಲ್ಲೆಗಳ ಜನರ ಜೀವನಾಡಿ. ಒಂದೊಮ್ಮೆ ತ್ವರಿತವಾಗಿ ಕಾಮಗಾರಿ ಪೂರ್ಣಗೊಳಿಸದಿದ್ದರೆ ಮುಂದಿನ ದಿನಗಳು ಒಳ್ಳೆಯದಿರುವುದಿಲ್ಲ. ಪಾದಯಾತ್ರೆ, ಸರದಿ ಉಪವಾಸ, ಆಮರಣಾಂತ ಉಪವಾಸ ನಡೆಸಬೇಕಾಗುತ್ತದೆ. ಅಖಂಡ ಕರ್ನಾಟಕದ ಕಲ್ಪನೆಗೆ ಧಕ್ಕೆ ತರುವಂತಹ ಆಲೋಚನೆ ಬರುವುದಕ್ಕೆ ಅವಕಾಶ ಕೊಡಬೇಡಿ ಎಂದು ಎಸ್.ಆರ್.ಪಾಟೀಲ್ ಎಚ್ಚರಿಕೆ ನೀಡಿದರು.

ರಾಷ್ಟ್ರೀಯ ಮಹತ್ವದ ಯೋಜನೆ, ಅಂತರರಾಷ್ಟ್ರೀಯ ಮಹತ್ವದ ಯೋಜನೆ ಏನೂ ಬೇಕಾದರೂ ಘೋಷಣೆ ಮಾಡಿ. ಅದು ನಮಗೆ ಬೇಕಿಲ್ಲ. ಯೋಜನೆ ಅನುಷ್ಠಾನಕ್ಕೆ ಬರಬೇಕು ಅಷ್ಟೇ. ಕೇಂದ್ರ ಸರ್ಕಾರ, ವಿಶ್ವಬ್ಯಾಂಕ್, ಐಎಂಎಫ್‌ನಿಂದ ಆರ್ಥಿಕ ನೆರವು ಪಡೆದುಕೊಳ್ಳಿ, ಭಿಕ್ಷೆ ಬೇಡಿ, ಸಾಲ ಮಾಡಿ, ಕಳ್ಳತನ ಮಾಡಿ, ಏನಾದರೂ ಮಾಡಿ ಎಲ್ಲಿಂದಾರೂ ಹಣ ತನ್ನಿ. ಒಟ್ಟಿನಲ್ಲಿ ಪೂರ್ಣಗೊಳಿಸಿ. ಈ ದಿನದಿಂದಲೇ ಭೂಸ್ವಾಧೀನ ಆರಂಭಿಸಿ ಎಂದು ಪಾಟೀಲ್ ಒತ್ತಾಯಿಸಿದರು.

ಈ ವಿಷಯದ ಕುರಿತು ಕಾಂಗ್ರೆಸ್‌ನ ಆರ್.ಬಿ.ತಿಮ್ಮಾಪುರ, ಪ್ರಕಾಶ್ ರಾಥೋಡ್, ಬಸವರಾಜ್ ಪಾಟೀಲ್ ಇಟಗಿ, ಬಿಜೆಪಿಯ ಹನುಮಂತ ನಿರಾಣಿ, ತೇಜಸ್ವಿನಿಗೌಡ, ಜೆಡಿಎಸ್‌ನ ತಿಪ್ಪೇಸ್ವಾಮಿ, ಶ್ರೀಕಂಠೇಗೌಡ ಮತ್ತಿತರರು ಮಾತನಾಡಿದರು.

ಆಧಾರ: ವಿಜಯವಾಣಿ, ದಿನಾಂಕ: 16.09.2021

## 70. ಹಕ್ಕುಚ್ಯುತಿ ಮಂಡನೆಗೆ ನಕಾರ; ಜೆಡಿಎಸ್ ಪ್ರತಿಭಟನೆ

ಮೈಸೂರು ಜಿಲ್ಲಾಧಿಕಾರಿಯಾಗಿದ್ದ ರೋಹಿಣಿ ಸಿಂಧೂರಿ ವಿರುದ್ಧ ಶಾಸಕ ಸಾ.ರಾ.ಮಹೇಶ್ ಹಕ್ಕುಚ್ಯುತಿ ಮಂಡಿಸಲು ಮುಂದಾಗಿದ್ದು, ಇದಕ್ಕೆ ಅವಕಾಶ ನೀಡದಿರುವ ಕಾರಣ ಜೆಡಿಎಸ್ ಶಾಸಕರು ಬಾವಿಗಿಳಿದು ಪ್ರತಿಭಟನೆ ನಡೆಸಿದರು.

ಪ್ರಶ್ನೋತ್ತರ ಅವಧಿ ಮುಗಿಯುತ್ತಿದಂತೆ ಶೂನ್ಯ ವೇಳೆಯನ್ನು ವಿಧಾನ ಸಭಾಧ್ಯಕ್ಷ ವಿಶ್ವೇಶ್ವರ ಹೆಗಡೆ,ಕಾಗೇರಿ ಅವರು ನಿಲುವಳಿ ಸೂಚನೆಗೆ ಪ್ರತಿಪಕ್ಷ ನಾಯಕ ಸಿದ್ದರಾಮಯ್ಯ ಅವರಿಗೆ ಅವಕಾಶ ನೀಡಿದರು. ಇದಕ್ಕೂ ಮೊದಲು ಹಕ್ಕುಚ್ಯುತಿ ಮಂಡನೆಗೆ ಅವಕಾಶ ನೀಡುವಂತೆ ಜೆಡಿಎಸ್ ಶಾಸಕ ಸಾ.ರಾ.ಮಹೇಶ್ ಮನವಿ ಮಾಡಿದರು. ಮುಂದಿನ ದಿನಗಳಲ್ಲಿ ಅವಕಾಶ ನೀಡುವುದಾಗಿ ಸ್ಪೀಕರ್ ಹೇಳಿದಾಗ, ಜೆಡಿಎಸ್ ಶಾಸಕರು ಬಾವಿಗಿಳಿದು ಪ್ರತಿಭಟನೆ ನಡೆಸಿದರು. ಬಾವಿಯಲ್ಲಿದ್ದಾಗ ಮಾತನಾಡಿದ ಸಾ.ರಾ.ಮಹೇಶ್, ಹಕ್ಕುಚ್ಯುತಿ ಪ್ರಸ್ತಾವನೆಗೆ ಅವಕಾಶ ಕೊಡದಿದ್ದರೆ ತಮ್ಮ ಶಾಸಕ ಸ್ಥಾನಕ್ಕೆ ರಾಜೀನಾಮೆ ನೀಡುವುದಾಗಿ ಬೆದರಿಕೆ ಹಾಕಿದರು.

ಇದಕ್ಕೂ ಮೊದಲು ಮಾತನಾಡಿದ ಸಭಾಧ್ಯಕ್ಷರು, ಮಹೇಶ್ ಅವರ ಹಕ್ಕುಚ್ಯುತಿಯನ್ನು ಗಮನಿಸಿದ್ದೇನೆ. ಅದಕ್ಕೆ ನಾನು ಚರ್ಚೆಗೆ ಅವಕಾಶ ಕೊಡುತ್ತೇನೆ ಎಂದು ಹೇಳಿದ್ದರು. ಜೆಡಿಎಸ್‌ನ ಹೆಚ್.ಡಿ.ರೇವಣ್ಣ, ಸಾ.ರಾ.ಮಹೇಶ್, ಡಾ.ಅನ್ನದಾನಿ ಮತ್ತು ಪುಟ್ಟರಾಜು ಸೇರಿದಂತೆ ಮತ್ತಿತರರು ಆಕ್ಷೇಪಿಸಿ ಚರ್ಚೆಗೆ ಅವಕಾಶ ಕೊಡಬೇಕೆಂದು ಒತ್ತಾಯಿಸಿದರು. ಇದು ನನ್ನ ಹಕ್ಕುಚ್ಯುತಿಯ ಪ್ರಶ್ನೆ. ನನಗೆ ಸದನದಲ್ಲಿ ಚರ್ಚೆಗೆ ಅವಕಾಶ ಕೊಡದಿದ್ದರೆ ನನ್ನ ಶಾಸಕ ಸ್ಥಾನಕ್ಕೆ ರಾಜೀನಾಮೆ ಕೊಡುತ್ತೇನೆ ಎಂದು ಸಾ.ರಾ.ಮಹೇಶ್ ಸದನದ ಬಾವಿಗಿಳಿದು ಪ್ರತಿಭಟನೆ ನಡೆಸಲು ಮುಂದಾದರು.

**ಅವಕಾಶ ನೀಡುವುದಿಲ್ಲ ಎಂದಿಲ್ಲ:** ನಾನು ಚರ್ಚೆಗೆ ಅವಕಾಶ ಕೊಡುವುದಿಲ್ಲ ಎಂದು ಹೇಳಿಲ್ಲ. ನಾಳೆ ಅಥವಾ ನಾಡಿದ್ದು ಕೊಡುತ್ತೇನೆ ಎಂದು ಹೇಳಿದ್ದೇನೆ. ನೀವು ಇಂಥ ವಿಷಯಕ್ಕೆ ಸಮಯಕ್ಕೆ ಕೊಡಬೇಕೆಂದು ಸ್ಪೀಕರ್‌ಗೆ ಹೇಳುವುದು ಸರಿಯಲ್ಲ ಎಂದು ಸಭಾಧ್ಯಕ್ಷರು ಆಕ್ಷೇಪಿಸಿದರು. ಈ ವೇಳೆ ಮಧ್ಯ ಪ್ರವೇಶಿಸಿದ ಪ್ರತಿಪಕ್ಷದ ನಾಯಕ ಸಿದ್ದರಾಮಯ್ಯ ಚರ್ಚೆಗೆ ಅವಕಾಶ ನೀಡಬೇಕೆಂದು ಸ್ಪೀಕರ್‌ಗೆ ಮನವಿ ಮಾಡಿದರು. ಇದಕ್ಕೆ ಸಭಾಧ್ಯಕ್ಷರು ಸಮ್ಮತಿಸಿದ್ದರಿಂದ ಜೆಡಿಎಸ್ ಸದಸ್ಯರು ಪ್ರತಿಭಟನೆ ಕೈಬಿಟ್ಟರು.

ಆಧಾರ: ವಿಶ್ವವಾಣಿ, ದಿನಾಂಕ: 16.09.2021

## 71. ರಾಜ್ಯದಲ್ಲಿ 42,427 ಮಹಿಳೆಯರು ನಾಪತ್ತೆ

ರಾಜ್ಯದಲ್ಲಿ ಕಳೆದ ಐದು ವರ್ಷಗಳಲ್ಲಿ 42,427 ಮಹಿಳೆಯರು ನಾಪತ್ತೆಯಾಗಿದ್ದು, ಈ ಪೈಕಿ 38,8324 ಮಹಿಳೆಯರನ್ನು ಗುರುತಿಸಲಾಗಿದೆ ಎಂದು ವಿಧಾನಮಂಡಲದ ಮಹಿಳಾ ಮತ್ತು ಮಕ್ಕಳ ಸಮಿತಿ ವರದಿಯಲ್ಲಿ ತಿಳಿಸಲಾಗಿದೆ. ಕೆ.ಪೂರ್ಣಿಮಾ ಅಧ್ಯಕ್ಷತೆಯ ಈ ಸಮಿತಿ ಸಲ್ಲಿಸಿದ ವರದಿಯನ್ನು ವಿಧಾನಸಭೆಯಲ್ಲಿ ಮಂಡಿಸಲಾಗಿದೆ. ಮಹಿಳೆಯರು ತಪ್ಪಿಸಿಕೊಳ್ಳುವುದಕ್ಕೆ ಕೌಟುಂಬಿಕ ಸಮಸ್ಯೆಯೇ ಮೂಲ ಕಾರಣವೆಂದು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಅಧಿಕಾರಿಗಳು ಸಮಿತಿಗೆ ಮಾಹಿತಿ ನೀಡಿದ್ದಾರೆ. ಕಳೆದು ಹೋದ ಮಹಿಳೆಯರ ಪತ್ತೆ ಕಾರ್ಯ ಪ್ರಗತಿಯಲ್ಲಿದೆ ಎಂದು ಇಲಾಖೆ ನೀಡಿದ ವಿವರಕ್ಕೆ ಸಮಿತಿ ಅಸಮಾಧಾನ ವ್ಯಕ್ತಪಡಿಸಿ, ಇಲಾಖಾಧಿಕಾರಿಗಳು ಪರಸ್ಪರ ಸಮನ್ವಯದಿಂದ ಕೆಲಸ ಮಾಡಬೇಕು ಎಂದು ಸೂಚಿಸಿದೆ.

**ಜಾಲ ಭೇದಿಸಲು ತಾಕೀತು:** ಭಿಕ್ಷಾಟನೆ ನಡೆಸುವವರ ಹಿಂದೆ ದೊಡ್ಡ ಜಾಲವೊಂದಿದ್ದು, ಪೊಲೀಸ್ ಇಲಾಖೆ ಇದನ್ನು ಗಂಭೀರವಾಗಿ ಪರಿಗಣಿಸಿ ಜಾಲ ಭೇದಿಸುವ ಜೊತೆಗೆ ಸಂಬಂಧಿಸಿದ ಇಲಾಖೆ ವರದಿ ನೀಡಿ ಕ್ರಮಕೈಗೊಳ್ಳಬೇಕು ಎಂದು ಸಮಿತಿ ಶಿಫಾರಸ್ಸು ಮಾಡಿದೆ.

ಆಧಾರ: ವಿಜಯವಾಣಿ, ದಿನಾಂಕ: 16.09.2021

## 72. ಮೇಲ್ಮನೆಯಲ್ಲಿ ಜೊಲ್ಲೆ ಟ್ರಾಫಿಕ್ ಜಟಾಪಟಿ

ಸಚಿವರಾಗಿ ಪ್ರಮಾಣವಚನ ಸ್ವೀಕಾರ ಮಾಡುವ ಸಲುವಾಗಿ ಶಶಿಕಲಾ ಜೊಲ್ಲೆಗೆ ಜೀರೋ ಟ್ರಾಫಿಕ್ ನೀಡಿದ ವಿಷಯ ಮೇಲ್ಮನೆಯಲ್ಲಿ ಪ್ರತಿಧ್ವನಿಸಿತು. ಆಡಳಿತ ಪಕ್ಷ ಮತ್ತು ವಿರೋಧ ಪಕ್ಷಗಳ ನಡುವೆ ತೀವ್ರ ಮಾತಿನ ಜಟಾಪಟಿಗೂ ಕಾರಣವಾಯಿತು. ಪ್ರಶ್ನೋತ್ತರ ವೇಳೆಯಲ್ಲಿ ವಿಷಯ ಪ್ರಸ್ತಾಪಿಸಿದ ಕಾಂಗ್ರೆಸ್‌ನ ಎಂ.ನಾರಾಯಣಸ್ವಾಮಿ, ಸಚಿವರಾಗಬೇಕು ಎನ್ನುವ ಕಾರಣಕ್ಕೆ ಜೀರೋ ಟ್ರಾಫಿಕ್ ನೀಡುವುದಾದರೆ ಗಣ್ಯ, ಅತಿ ಗಣ್ಯ ವ್ಯಕ್ತಿಗಳಿಗೆ ನೀಡುವ ಜೀರೋ ಟ್ರಾಫಿಕ್‌ಗೆ ಏನರ್ಥವಿದೆ ಎಂದು ಪ್ರಶ್ನಿಸಿದರು. ಪ್ರಶ್ನೋತ್ತರ ವೇಳೆ ಏನೂ ಬೇಕಾದರೂ ಮಾತನಾಡಬಹುದಾ ಎಂದು ಆಕ್ಷೇಪ ವ್ಯಕ್ತಪಡಿಸಿದ ಸಚಿವರಾದ ಕೋಟ ಶ್ರೀನಿವಾಸಪೂಜಾರಿ, ಜೆ.ಸಿ.ಮಧುಸ್ವಾಮಿ, ಶಿವರಾಂ ಹೆಬ್ಬಾರ್, ಎಂಟಿಬಿ ನಾಗರಾಜ್, ಶಾಸಕ ಆಯನೂರು ಮಂಜುನಾಥ್ ಮತ್ತಿತರರು ವಿರೋಧ ಪಕ್ಷದ ಮೇಲೆ ಹರಿಹಾಯ್ದರು. ಪಕ್ಷಕ್ಕೆ ದ್ರೋಹ ಮಾಡಿ ರಾಜೀನಾಮೆ ನೀಡಲು ಹೋದ ಸಂದರ್ಭದ ಘಟನೆಯನ್ನು ಜನರು ಮರೆತಿಲ್ಲ. ಆಗಲು ಹೀಗೆಯೇ ಮಾಡಲಾಗಿತ್ತು ಎಂದು ಕಾಂಗ್ರೆಸ್ ಸದಸ್ಯರು ಆಕ್ರೋಶ ವ್ಯಕ್ತಪಡಿಸಿದರು. ಗೃಹ ಸಚಿವರಾದ ಆರಗ ಜ್ಞಾನೇಂದ್ರ ಉತ್ತರ ನೀಡಿ, ಶಶಿಕಲಾ ಜೊಲ್ಲೆ ಬರುವುದಕ್ಕೆ ತಡವಾಗಿದ್ದ ಕಾರಣ ನಿಗದಿತ ಸಮಯದೊಳಗೆ ರಾಜಭವನಕ್ಕೆ ತಲುಪಬೇಕು ಅಂತ ಮನವಿ ಮಾಡಿಕೊಂಡಿದ್ದರು. ಸಂಚಾರ ಜಂಕ್ಷನ್‌ಗಳಲ್ಲಿ ಸಿಗ್ನಲ್ ಫ್ರೀ ಮಾಡಿ ಸಂಚಾರಕ್ಕೆ ತೊಂದರೆಯಾಗದಂತೆ ಕ್ರಮ ಕೈಗೊಳ್ಳಲಾಗಿತ್ತಷ್ಟೇ ಎಂದರು. ಮಾಧ್ಯಮಗಳಲ್ಲಿ ಈ ಬಗ್ಗೆ ವರದಿ ಬಂದಿದೆ. ಸದನಕ್ಕೆ ಸುಳ್ಳು ಮಾಹಿತಿ ನೀಡಬಾರದು ಎಂದು ನಾರಾಯಣಸ್ವಾಮಿ ಹೇಳಿದ್ದಕ್ಕೆ, ಈ ವಿಷಯ ಕೋರ್ಟ್‌ನಲ್ಲಿದೆ. ಎಲ್ಲವನ್ನೂ ಇಲ್ಲಿ ಮಾತನಾಡುವುದು ಸರಿಯಲ್ಲ ಎಂದು ಗೃಹ ಸಚಿವರು ಚರ್ಚೆಗೆ ತೆರೆ ಎಳೆದರು.

ಆಧಾರ: ವಿಜಯವಾಣಿ, ದಿನಾಂಕ: 17.09.2021

## 73. ಚರ್ಚೆಗೆ ಗ್ರಾಸವಾದ ಮಾಮನಿ ಗೈರು

ಸಚಿವ ಸ್ಥಾನ ಸಿಗದೇ ಮುನಿಸಿಕೊಂಡಿರುವ ವಿಧಾನಸಭೆಯ ಉಪಾಧ್ಯಕ್ಷ ಆನಂದ ಮಾಮನಿ ಅವರು ಈ ಅಧಿವೇಶನದಲ್ಲಿ ಈವರೆಗೆ ಕಲಾಪಕ್ಕೆ ಹಾಜರಾಗದೇ ಇರುವುದು ಚರ್ಚೆಗೆ ಗ್ರಾಸವಾಗಿದೆ.

ಇದೇ 13 ರಿಂದ ಅಧಿವೇಶನ ಆರಂಭವಾಗಿದ್ದು, ಒಂದೂ ದಿನ ಅವರು ಕಲಾಪಕ್ಕೆ ಹಾಜರಾಗಿಲ್ಲ. ಇದರಿಂದ ವಿಧಾನಸಭಾಧ್ಯಕ್ಷರ ಮೇಲೆ ಕಲಾಪದ ಕಾರ್ಯಭಾರದ ಒತ್ತಡ ಅಧಿಕವಾಗಿದೆ. ಸಭಾಧ್ಯಕ್ಷ ಕಾರ್ಯನಿರ್ವಹಣೆಯ ಪ್ಯಾನಲ್‌ನ ಇತರ ಸದಸ್ಯರನ್ನು ಬಳಸಿಕೊಂಡು ಕಾರ್ಯನಿರ್ವಹಿಸುತ್ತಿದ್ದಾರೆ ಎಂದು ಮೂಲಗಳು ಹೇಳಿವೆ. ಆನಂದ ಮಾಮನಿ ಸದನಕ್ಕೆ ಗೈರಾಗುವ ಮೂಲಕ ತಮ್ಮ ಆಕ್ರೋಶ ಹೊರ ಹಾಕಿದ್ದಾರೆ ಎಂದು ಮೂಲಗಳು ತಿಳಿಸಿವೆ. ಆದರೆ ಅವರು ಪ್ರತಿಕ್ರಿಯೆಗೆ ಲಭ್ಯರಾಗಲಿಲ್ಲ.

ಆಧಾರ: ಪ್ರಜಾವಾಣಿ, ದಿನಾಂಕ: 17.09.2021

## 74. 30x40, ಅದಕ್ಕಿಂತ ದೊಡ್ಡ ಸೈಟಲ್ಲಿ ಮಳೆ ಕೊಯ್ಲು ಕಡ್ಡಾಯ : ಸರ್ಕಾರ

ರಾಜಧಾನಿ ಬೆಂಗಳೂರಿನಲ್ಲಿ 30 x 40 ಮತ್ತು ಅದಕ್ಕಿಂತ ಮೇಲ್ಪಟ್ಟ ನಿವೇಶನದಲ್ಲಿ ನಿರ್ಮಿಸಲ್ಪಟ್ಟ ಕಟ್ಟಡದಲ್ಲಿ ಮಳೆ ನೀರು ಕೊಯ್ಲು ಕಡ್ಡಾಯವಾಗಿರಬೇಕು. 40 x 60 ಹಾಗೂ ಅದಕ್ಕಿಂತ ಮೇಲ್ಪಟ್ಟ ನಿವೇಶನದಲ್ಲಿ ನಿರ್ಮಿಸುವ ಕಟ್ಟಡದಲ್ಲಿ ಎರಡು ಪೈಪ್‌ಗಳನ್ನು ಕಡ್ಡಾಯವಾಗಿ ಅಳವಡಿಸಬೇಕು.

ಈ ಸಂಬಂಧ ಸದನದಲ್ಲಿ ಬೆಂಗಳೂರು ನೀರು ಸರಬರಾಜು ಮತ್ತು ಗ್ರಾಮಸಾರ ಚರಂಡಿ ವ್ಯವಸ್ಥೆ (ತಿದ್ದುಪಡಿ) ವಿಧೇಯಕವನ್ನು ಅಂಗೀಕರಿಸಲಾಯಿತು. ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಪರವಾಗಿ ಕಾನೂನು ಮತ್ತು ಸಂಸದೀಯ ಸಚಿವ ಜೆ.ಸಿ.ಮಾಧುಸ್ವಾಮಿ ವಿಧೇಯಕ ಅಂಗೀಕರಿಸುವಂತೆ ಕೋರಿ ಸದನದ ಒಪ್ಪಿಗೆ ಪಡೆದುಕೊಂಡರು.

ಈಗಾಗಲೇ ನಗರದಲ್ಲಿ ಮಳೆ ನೀರು ಕೊಯ್ಲು ಕಡ್ಡಾಯವಾಗಿದೆ. ಆದರೂ ಬಹಳಷ್ಟು ಮಂದಿ ನಿರ್ಮಿಸಿಕೊಂಡಿಲ್ಲ. ಇದು ಭವಿಷ್ಯದಲ್ಲಿ ನೀರಿನ ಅಭಾವ ಎದುರಿಸುವ ಸಾಧ್ಯತೆ ಹೆಚ್ಚಿದೆ. ರಾಜ್ಯ ಸರ್ಕಾರವು 30x40 ಮತ್ತು ಅದಕ್ಕಿಂತ ಮೇಲ್ಪಟ್ಟ ನಿವೇಶನದಲ್ಲಿ ನಿರ್ಮಿಸಲ್ಪಟ್ಟ ಕಟ್ಟಡದಲ್ಲಿ ಮಳೆ ನೀರು ಕೊಯ್ಲು ಕಡ್ಡಾಯಗೊಳಿಸಿದೆ. 40x60 ಮತ್ತು ಅದಕ್ಕಿಂತ ಮೇಲ್ಪಟ್ಟ ನಿವೇಶನದಲ್ಲಿ ನಿರ್ಮಿಸುವ ಕಟ್ಟಡದಲ್ಲಿ ಎರಡು–ಪೈಪ್‌ಗಳನ್ನು ಕಡ್ಡಾಯವಾಗಿ ಅಳವಡಿಸಬೇಕು. ಒಂದು ಪೈಪ್ ಬಳಕೆಯ ದೃಷ್ಟಿಯಿಂದಾಗಿದೆ. ಸಂಗ್ರಹ ಮಾಡುವುದರಿಂದ ಅಂತರ್ಜಾಲ ವೃದ್ಧಿಗೆ ಸಹಕಾರವಾಗಲಿದೆ.

ಇನ್ನೂ ಕಾವೇರಿ ನೀರು ಅಥವಾ ಅಂತರ್ಜಲದ ಮೇಲಿನ ಅವಲಂಬನೆಯನ್ನು ಕಡಿಮೆ ಮಾಡುವುದು, ಮಳೆ ನೀರು ಒಳಚರಂಡಿಯಲ್ಲಿ ಹರಿದು ಹೋಗುವುದನ್ನು ತಗ್ಗಿಸುವ ಹಿನ್ನೆಲೆಯಲ್ಲಿ ವಿಧೇಯಕವನ್ನು ಅಂಗೀಕರಿಸಲಾಗಿದೆ. ನಗರ ಪ್ರವಾಹವನ್ನು ಇಳಿಸುವುದು, ಮೇಲ್ಮೈ ಮತ್ತು ಅಂತರ್ಜಲದ ಅಂಚು ರಹಿತ ಮಾಲಿನ್ಯ ಮೂಲವನ್ನು ಕಡಿಮೆಗೊಳಿಸುವುದು, ಅಂತರ್ಜಲದ ಗುಣಮಟ್ಟದ ಕಳಪೆಯಾಗಿದ್ದರೆ ಮಳೆ ನೀರು ಕೊಯ್ಲಿನ ಮೂಲಕ ಹೊಸದಾದ ನೀರಿನ ಮೂಲವನ್ನು ಕಲ್ಪಿಸುವುದು ಮತ್ತು ಮಳೆ ನೀರು ಕೊಯ್ಲಿನ ನೀರು ಉಚಿತವಾಗಿದ್ದು, ತಕ್ಷಣವೇ ಲಭ್ಯವಾಗಲಿದೆ. ಸರಬರಾಜಿನ ವೆಚ್ಚವಿಲ್ಲದಿರುವುದು ಮಳೆ ನೀರು ಕೊಯ್ಲು ಕಡ್ಡಾಯಗೊಳಿಸಲಾಗುತ್ತಿದೆ ಎಂದು ವಿಧೇಯಕದ ಉದ್ದೇಶವಾಗಿದೆ.

216 ಚದರ ಮೀಟರ್‌ಗಳಿಗಿಂತ ಕಡಿಮೆ ಇರದ ಮತ್ತ 1000 ಚದರಮೀಟರ್‌ಗಳಿಗಿಂತ ಹೆಚ್ಚಲ್ಲದ ನಿವೇಶನ ಪ್ರದೇಶದಲ್ಲಿ ಕಟ್ಟಡವನ್ನು ಹೊಂದಿರುವವರು ಮಳೆ ನೀರು ಕೊಯ್ಲು ಕಡ್ಡಾಯಗೊಳಿಸಬೇಕು. 2021ರ ಪ್ರಾರಂಭಕ್ಕೆ ಮೊದಲು ಮಳೆ ನೀರು ಕೊಯ್ಲು ರಚನೆಯನ್ನು ಕಲ್ಪಿಸದಿದ್ದರೆ ಕೆಲವು ಷರತ್ತುಗಳಿಗೆ ಒಳಪಟ್ಟು ಮಳೆ ನೀರು ಶೇಖರಣೆಗಾಗಿ, ಬಳಕೆಗಾಗಿ ಅಥವಾ ಅಂತರ್ಜಲ ಪುನಃಭರ್ತಿಗಾಗಿ ಮಳೆ ನೀರು ಕೊಯ್ಲು ರಚನೆಯನ್ನು ಒದಗಿಸಬೇಕು.

ಆಧಾರ: ಕನ್ನಡಪ್ರಭ, ದಿನಾಂಕ: 17.09.2021

## 75. ಸಚಿವರ ಗೈರು, ಶಾಸಕರ ಓಡಾಟ : ಕಾಗೇರಿ ಗರಂ

ಪ್ರಶ್ನೋತ್ತರ ಶುರುವಾದರೂ ಬಾರದ ಸಚಿವರು, ಪ್ರಶ್ನೋತ್ತರ ನಡೆಯುತ್ತಿರುವಾಗಲೇ, ಸಚಿವರುಗಳ ಬಳಿ ಪತ್ರ ಹಿಡಿದು ಓಡಾಡುವ ಶಾಸಕರು, ಈ ಎಲ್ಲದರಿಂದ ಬೇಸರಗೊಂಡ ವಿಧಾನಸಭಾಧ್ಯಕ್ಷರು ಸಚಿವರ ಹಾಗೂ ಶಾಸಕರ ವಿರುದ್ಧ ಅಸಮಾಧಾನ ಹೊರಹಾಕಿದರು.

ವಿಧಾನ ಸಭೆಯಲ್ಲಿ ಪ್ರಶ್ನೋತ್ತರ ಅವಧಿಯಲ್ಲಿ ಆರಂಭದ ಮೊದಲ ಪ್ರಶ್ನೆಗೆ ಉತ್ತರಿಸಬೇಕಾದ ಅರಣ್ಯ ಸಚಿವ ಉಮೇಶ್ ಕತ್ತಿ ಅವರ ಗೈರು ಹಾಜರಾಗಿರುವ ಬಗ್ಗೆ ವಿಧಾನಸಭಾಧ್ಯಕ್ಷರು ಅಸಮಾಧಾನ ವ್ಯಕ್ತಪಡಿಸಿದರು. ಸದನ ಆರಂಭವಾಗಿ ಸಭಾಧ್ಯಕ್ಷರು ಪ್ರಶ್ನೋತ್ತರ ಕಲಾಪ ಕೈಗೆತ್ತಿಕೊಂಡು ಗುಂಡ್ಲುಪೇಟೆಯ ಶಾಸಕ ನಿರಂಜನಕುಮಾರ್ ಅವರು ಪ್ರಶ್ನೆ ಕೇಳಿದಾಗ ಉತ್ತರ ಹೇಳಬೇಕಾದ ಅರಣ್ಯ ಮತ್ತು ಆಹಾರ ಸಚಿವ ಉಮೇಶ್ ಕತ್ತಿ ಗೈರು ಹಾಜರಾಗಿದ್ದು. ಇದರಿಂದ ಗರಂ ಆದ ಸಭಾಧ್ಯಕ್ಷರು ಆಡಳಿತ ಪಕ್ಷದ ಮುಖ್ಯ ಸಚೇತಕ ಸತೀಶ್ ರೆಡ್ಡಿ ಅವರಿಗೆ, 'ಮುಖ್ಯ ಸಚೇತಕರೇ ಇದೇನಿದು ಉತ್ತರ ಹೇಳಬೇಕಾ ಸಚಿವರೇ ಬಂದಿಲ್ಲ. ಅದು ಪ್ರಶ್ನೋತ್ತರ ಅವಧಿಯಲ್ಲಿ ಹೀಗಾದರೆ ಹೇಗೆ' ಎಂದು ಪ್ರಶ್ನಿಸಿದರು.

ಆಗ ಮುಖ್ಯ ಸಚೇತಕರು 'ಸ್ವಲ್ಪ ತಡವಾಗಿ ಬರುತ್ತಾರೆ ಎಂದು ಹೇಳಿದಾಗ, ಪ್ರಶ್ನೋತ್ತರಕ್ಕೆ ತಡ ಮಾಡುವುದು ಸರಿಯಲ್ಲ ಎಂದರು'. ಆಗ ಪ್ರಶ್ನೆ ಕೇಳಿದ್ದ ಬಿಜೆಪಿ ಸದಸ್ಯ ನಿರಂಜನ್‌ಕುಮಾರ್, ಸಚಿವರು ಬಂದಾಗ ಪ್ರಶ್ನೆ ಕೇಳುತ್ತೇನೆ ಎಂದು ಹೇಳಿ ಕುಳಿತರು.

**ಶಾಸಕರ ಮೇಲೆ ಸಿಟ್ಟಾದ ಕಾಗೇರಿ:** ಪ್ರಶ್ನೋತ್ತರ ಅವಧಿಯಲ್ಲಿ ಕೆಲ ಸದಸ್ಯರು ಸಚಿವರುಗಳ ಬಳಿ ಹೋಗಿ ಅರ್ಜಿಗಳನ್ನು ನೀಡಿ ಮಾತನಾಡುತ್ತಿದ್ದು ಸಭಾಧ್ಯಕ್ಷರ ಗಮನಕ್ಕೆ ಬಂದು, ಪ್ರಶ್ನೋತ್ತರ ಅವಧಿಯಲ್ಲಿ ಈ ರೀತಿ ಮಾತನಾಡುವುದು ಸರಿಯಲ್ಲ. ಇದರಿಂದ ಪ್ರಶ್ನೆ ಕೇಳುವ ಸದಸ್ಯರು ಹಾಗೂ ಉತ್ತರ ಹೇಳುವ ಸಚಿವರು ಇಬ್ಬರಿಗೂ ತೊಂದರೆ ಆಗುತ್ತದೆ. ಪ್ರಶ್ನೋತ್ತರ ನಂತರ ಸದಸ್ಯರು ಸಚಿವರ ಜೊತೆ ಮಾತನಾಡಿ ಎಂದು ಸೂಚಿಸಿದರು.

ಬಿಜೆಪಿಯ ಬಸನಗೌಡಪಾಟೀಲ್ ಯತ್ನಾಳ್, ಸಭಾಧ್ಯಕ್ಷರೇ, ಬೇರೆ ಸಮಯದಲ್ಲಿ ಸಚಿವರು ಸಿಗುವುದಿಲ್ಲ. ನಾವೇನು ಮಾಡುವುದು. ವಿಧಾನಸಭೆಯಲ್ಲೇ ಅರ್ಜಿ ಕೊಡಬೇಕಾಗುತ್ತದೆ. ಸಂಸತ್‌ನಲ್ಲಿ ಸದಸ್ಯರಿಗೆ ಬೆಳಿಗ್ಗೆ 11 ರಿಂದ 12 ರವರೆಗೂ ಸಚಿವರುಗಳು ಭೇಟಿ ಮಾಡುವ ಪದ್ಧತಿ ಇದೆ. ಅದೇ ವ್ಯವಸ್ಥೆಯನ್ನು ಇಲ್ಲೂ ಜಾರಿಗೆ ತನ್ನಿ ಎಂದು ಹೇಳಿದರು. ಇದನ್ನು ಶಾಸಕಾಂಗ ಪಕ್ಷದ ಸಭೆಯಲ್ಲಿ ಮಾತನಾಡುತ್ತೇನೆ ಎಂದು ಸಭಾಧ್ಯಕ್ಷರು ಹೇಳಿ ಮುಂದಿನ ಕಲಾಪವನ್ನು ಕೈಗೆತ್ತಿಕೊಂಡರು.

ಆಧಾರ: ವಿಶ್ವವಾಣಿ, ದಿನಾಂಕ: 17.09.2021

## 76. ಸದನ ಖಾಲಿ ಖಾಲಿ

ವಿಧಾನಮಂಡಲದ ಅಧಿವೇಶನದ 3ನೇ ದಿನ ಆರಂಭದಲ್ಲಿ ಸದಸ್ಯರ ಹಾಜರಾತಿ ಕಡಿಮೆ ಇತ್ತು. ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಅವರು ತಮ್ಮ ಸ್ನೇಹಿತನ ಅಂತ್ಯಕ್ರಿಯೆಯಲ್ಲಿ ಪಾಲ್ಗೊಳ್ಳಲು ಹುಬ್ಬಳ್ಳಿಗೆ ತೆರಳಿದ್ದರಿಂದ ಅವರು ಸದನಕ್ಕೆ ಗೈರು ಹಾಜರಾಗಿದ್ದರು. ಆಡಳಿತ ಮತ್ತು ಪ್ರತಿಪಕ್ಷದ ಕಡೆಯೂ ಸದಸ್ಯರ ಹಾಜರಿ ಕಡಿಮೆ ಇದ್ದು, ನಂತರ ಹೊತ್ತೇರುತ್ತಿದ್ದಂತೆ ಸದಸ್ಯರು ಒಬ್ಬೊಬ್ಬರಾಗಿ ಸದನಕ್ಕೆ ಬಂದರು. ಕಾಂಗ್ರೆಸ್‌ನ ಹಿರಿಯ ನಾಯಕ ಆಸ್ಕರ್ ಫರ್ನಾಂಡಿಸ್ ಅವರ ಅಂತ್ಯಕ್ರಿಯೆ ಬೆಂಗಳೂರಿನಲ್ಲಿ ನಡೆದಿದ್ದರಿಂದ ಅಂತ್ಯಕ್ರಿಯೆಯಲ್ಲಿ ಪಾಲ್ಗೊಳ್ಳಲು ಕಾಂಗ್ರೆಸ್ ಬಹುತೇಕ ಸದಸ್ಯರು ತೆರಳಿದ್ದರಿಂದ ಕಾಂಗ್ರೆಸ್ ಸದಸ್ಯರ ಹಾಜರಿಯೂ ಕಡಿಮೆ ಇತ್ತು. ಪ್ರತಿಪಕ್ಷದ ನಾಯಕ ಸಿದ್ದರಾಮಯ್ಯ, ಕೆಪಿಸಿಸಿ ಅಧ್ಯಕ್ಷ ಡಿ.ಕೆ.ಶಿವಕುಮಾರ್ ಸೇರಿದಂತೆ ಮುಂದಿನ ಸಾಲಿನ ಕಾಂಗ್ರೆಸ್‌ನ ಹಲವು ಹಿರಿಯ ನಾಯಕರು ಮಧ್ಯಾಹ್ನದವರೆಗೂ ಸದನಕ್ಕೆ ಬಂದಿರಲಿಲ್ಲ.

ಆಧಾರ: ವಿಶ್ವವಾಣಿ, ದಿನಾಂಕ: 17.09.2021

## 77. ಕ್ಷೇತ್ರ ವಿಂಗಡಣೆ : ವಿಧೇಯಕ ಅಂಗೀಕಾರ

ತಾಲ್ಲೂಕು ಮತ್ತು ಜಿಲ್ಲಾ ಪಂಚಾಯತಿ ಕ್ಷೇತ್ರ ಪುನರ್ ವಿಂಗಡಣೆಗೆ ಆಯೋಗ ರಚನೆ ಮಾಡುವ ಉದ್ದೇಶದ 'ಕರ್ನಾಟಕ ಗ್ರಾಮ ಸ್ವರಾಜ್ ಮತ್ತು ಪಂಚಾಯತ್‌ರಾಜ್ (ತಿದ್ದುಪಡಿ) ವಿಧೇಯಕ ಪ್ರತಿಪಕ್ಷ ಕಾಂಗ್ರೆಸ್ ಸಭಾತ್ಯಾಗದೊಂದಿಗೆ ಅಂಗೀಕಾರಗೊಂಡಿತು.

ತಾಲ್ಲೂಕು ಮತ್ತು ಜಿಲ್ಲಾ ಪಂಚಾಯಿತಿ ಚುನಾವಣೆ ಮುಂದೂಡುವ ದುರುದ್ದೇಶ ಹಾಗೂ ಅಧಿಕಾರ ವಿಕೇಂದ್ರೀಕರಣ ವ್ಯವಸ್ಥೆಯ ಕತ್ತು ಹಿಸುಕುವ ಸಂವಿಧಾನ ವಿರೋಧಿ ಕೃತ್ಯ ಎಂದು ಕಾಂಗ್ರೆಸ್ ಸದಸ್ಯರು ಆರೋಪಿಸಿದರು.

ಪ್ರತಿಪಕ್ಷ ನಾಯಕ ಸಿದ್ದರಾಮಯ್ಯ, ಮಾಜಿ ಸ್ಪೀಕರ್ ರಮೇಶ್‌ಕುಮಾರ್, ಮಾಜಿ ಸಚಿವರಾದ ಹೆಚ್.ಕೆ.ಪಾಟೀಲ್ ವಿಧೇಯಕಕ್ಕೆ ತೀವ್ರ ವಿರೋಧ ವ್ಯಕ್ತಪಡಿಸಿದರು. ಎಚ್.ಡಿ.ರೇವಣ್ಣ, ಶಿವಲಿಂಗೇಗೌಡ, ಜಿ.ಟಿ.ದೇವೆಗೌಡ, ಎ.ಟಿ.ರಾಮಸ್ವಾಮಿ ಸೇರಿ ಜೆಡಿಎಸ್ ಸದಸ್ಯರು ವಿಧೇಯಕಕ್ಕೆ ವಿರೋಧ ವ್ಯಕ್ತಪಡಿಸಿದರೂ ಸಭಾತ್ಯಾಗಕ್ಕೆ ಕಾಂಗ್ರೆಸ್ ಜೊತೆಗೂಡಲಿಲ್ಲ. ಆಯೋಗ ರಚನೆ ಮಾಡಿದರೂ ಇಂತಿಷ್ಟು

ಅವಧಿಯಲ್ಲಿ ಚುನಾವಣೆ ನಡೆಸುತ್ತೇವೆ ಎಂಬುದು ಖಾತರಿಪಡಿಸದಿದ್ದರೆ ರಾಜಕೀಯ ಕಾರಣಗಳಿಗೆ ತಿದ್ದುಪಡಿ ಮಾಡಿದ ಸಂದೇಶ ಹೋಗಲಿದ್ದು ಸರ್ಕಾರಕ್ಕೆ ಕೆಟ್ಟ ಹೆಸರು ಬರಲಿದೆ ಎಂದು ಜೆಡಿಎಸ್ ಸದಸ್ಯರು ಎಚ್ಚರಿಕೆ ನೀಡಿದರು.

ಕಾಂಗ್ರೆಸ್ ಸಭಾತ್ಯಾಗದ ನಡುವೆ ವಿಧೇಯಕಕ್ಕೆ ಅಂಗೀಕಾರ ಪಡೆಯುವಲ್ಲಿ ಆಡಳಿತ ಪಕ್ಷ ಯಶಸ್ವಿಯಾಯಿತು. ಇದರೊಂದಿಗೆ ತಾಲ್ಲೂಕು ಮತ್ತು ಜಿಲ್ಲಾ ಪಂಚಾಯಿತಿ ಚುನಾವಣೆ ಮುಂದಕ್ಕೆ ಹೋಗುವುದು ಖಚಿತವಾದಂತಾಗಿದೆ.

'ವಿಧೇಯಕಕ್ಕೆ ಇಂದೇ ಅಂಗೀಕಾರ ಪಡೆದುಕೊಳ್ಳುವ ಪ್ರತಿಷ್ಠೆ ಮತ್ತು ಹಠ ಒಳ್ಳೆಯದಲ್ಲ. ಬಹುಮತ ಇದೆ ಎಂಬ ಕಾರಣಕ್ಕೆ ಬುಲ್ಡೋಜ್ ಮಾಡಿಕೊಂಡು ಹೋಗುವುದು ಒಳ್ಳೆಯ ಲಕ್ಷಣ ಅಲ್ಲ.

**– ಸಿದ್ದರಾಮಯ್ಯ, ಪ್ರತಿಪಕ್ಷ ನಾಯಕ**

'ಪಂಚಾಯತ್‌ರಾಜ್ ಹಾಗೂ ಅಧಿಕಾರ ವಿಕೇಂದ್ರೀಕರಣ ವ್ಯವಸ್ಥೆಗೆ ಇಡೀ ದೇಶಕ್ಕೆ ಕರ್ನಾಟಕ ಮಾದರಿ. ನಜೀರ್ ಸಾಬ್, ರಾಮಕೃಷ್ಣ ಹೆಗಡೆ ಸೇರಿ ಹಲವು ನಾಯಕರಿಗೆ ಅದರ ಕೀರ್ತಿ ಸಲ್ಲುತ್ತದೆ. ಈಗ ಸರ್ಕಾರ ತಂದಿರುವ ವಿಧೇಯಕ ಸಂವಿಧಾನಕ್ಕೆ ವಿರುದ್ಧ, ಅಧಿಕಾರ ಕೇಂದ್ರೀಕರಣದ ಉದ್ದೇಶದಿಂದ ಕೂಡಿದೆ.

**– ಕೃಷ್ಣ ಬೈರೇಗೌಡ**

'ಅವಧಿ ಮುಗಿಯುವ ಮುನ್ನವೇ ಚುನಾವಣೆ ಮಾಡಬೇಕಿತ್ತು. ಇದೀಗ ಅವಧಿ ಮುಗಿದು ಆರು ತಿಂಗಳು ಆಗಿದೆ. ಆಯೋಗ ಮಾಡಿದರೆ ಇನ್ನೂ ಒಂದೂವರೆ ವರ್ಷ ಚುನಾವಣೆ ಆಗಲ್ಲ. ಇದು ಸಂವಿಧಾನ ಹಾಗೂ ಪ್ರಜಾಪ್ರಭುತ್ವ ವಿರೋಧ ನಡೆಯಲ್ಲವೇ

**– ಪ್ರಿಯಾಂಕ್ ಖರ್ಗೆ, ಕಾಂಗ್ರೆಸ್ ಸದಸ್ಯ**

ಆಧಾರ: ಉದಯವಾಣಿ, ದಿನಾಂಕ: 17.09.2021

## 78. ಸಚಿವರ ಗೈರಿಗೆ ಸಭಾಪತಿ ಗರಂ

ಸಾರಿಗೆ ಇಲಾಖೆಗೆ ಸಂಬಂಧಿಸಿದಂತೆ ಉತ್ತರ ನೀಡಬೇಕಾಗಿದ್ದ ಸಾರಿಗೆ ಸಚಿವ ಬಿ.ಶ್ರೀರಾಮುಲು ಅವರು ಸದನಕ್ಕೆ ಗೈರಾಗಿದ್ದಕ್ಕೆ ಸಭಾಪತಿ ಬಸವರಾಜ ಹೊರಟ್ಟಿ ಗರಂ ಆದರು.

ಪ್ರಶ್ನೋತ್ತರ ಕಲಾಪದ ವೇಳೆ ಜೆಡಿಎಸ್ ಸದಸ್ಯ ಕೆ.ಟಿ.ಶ್ರೀಕಂಠೇಗೌಡ ಅವರು ಬಸ್ ನಿಲ್ದಾಣಗಳಲ್ಲಿ ಮಹಿಳೆಯರ ವಿಶ್ರಾಂತಿ ಕೊಠಡಿ ಹಾಗೂ ಶೌಚಾಲಯದ ವ್ಯವಸ್ಥೆ ಕುರಿತಂತೆ ಸಾರಿಗೆ ಸಚಿವರಿಗೆ ಪ್ರಶ್ನೆ ಕೇಳಿದ್ದರು. ಸಾರಿಗೆ ಸಚಿವರು ಇರಲಿಲ್ಲ. ಅವರ ಬದಲು ಸಭಾನಾಯಕ ಕೋಟ ಶ್ರೀನಿವಾಸಪೂಜಾರಿ ಅವರು ಉತ್ತರ ನೀಡಲು ಮುಂದಾದಾಗ ಎಲ್ಲಿ ಸಾರಿಗೆ ಸಚಿವರು ಬರದಿದ್ದರೆ ಕ್ರಮ ಕೈಗೊಳ್ಳಬೇಕಾಗುತ್ತದೆ ಎಂದು ಎಚ್ಚರಿಕೆ ನೀಡಿದರು.

ಈ ವೇಳೆ ಸಭಾನಾಯಕ ಕೋಟ ಶ್ರೀನಿವಾಸ ಪೂಜಾರಿ ಪ್ರತಿಕ್ರಿಯಿಸಿ, ಇಂದು ಬರಲು ಸಾಧ್ಯವಿಲ್ಲ ಎಂದು ನಿಮಗೆ ಪತ್ರ ನೀಡಿದ್ದಾರೆ ಎಂದಾಗ, ನನಗೆ ಬಂದಿಲ್ಲ ಎಂದು ಸಭಾಪತಿ ತಿಳಿಸಿದರು. ಅಷ್ಟರ ವೇಳೆಗೆ ಸಚಿವಾಲಯದ ಸಿಬ್ಬಂದಿ ಶ್ರೀರಾಮುಲು ನೀಡಿದ್ದ ಪತ್ರವನ್ನು ಸಭಾಪತಿಗಳಿಗೆ ತಲುಪಿಸಿದರು. ಅದನ್ನು ಗಮನಿಸಿದ ಸಭಾಪತಿಗಳು ಈಗ ಕೊಟ್ಟರೆ ಹೇಗೆ ಮುಂಚಿತವಾಗಿ ತಿಳಿಸಬೇಕು ಎಂದು ಸೂಚಿಸಿದರು.

ಕೊನೆಗೆ ಸಭಾನಾಯಕ ಕೋಟ ಶ್ರೀನಿವಾಸ ಪೂಜಾರಿ ಅವರು, ಸಾರಿಗೆ ಸಚಿವರ ಪರವಾಗಿ ಉತ್ತರಿಸಲು ಮುಂದಾದಾಗ ಶ್ರೀಕಂಠೇಗೌಡ ಮಧ್ಯಪ್ರವೇಶಿಸಿ, ರಾಜ್ಯದಲ್ಲಿ 547 ಬಸ್ ನಿಲ್ದಾಣಗಳಲ್ಲಿ 262 ಕಡೆ ವಿಶ್ರಾಂತಿ ಕೊಠಡಿಗಳಿಲ್ಲ. 2 ವಿಭಾಗಗಳ 74 ನಿಲ್ದಾಣಗಳಲ್ಲಿ ಶೌಚಾಲಯಗಳೇ ಇಲ್ಲ. ಹೀಗಿದ್ದರೇ

ಹೇಗೆ ನನಗೆ ಸಾರಿಗೆ ಸಚಿವರಿಂದಲೇ ಉತ್ತರ ಬೇಕು ಎಂದು ಪಟ್ಟು ಹಿಡಿದಿದ್ದರಿಂದ ಮುಂದಿನ ವಾರ ಸಾರಿಗೆ ಸಚಿವರಿಂದ ಇದಕ್ಕೆ ಉತ್ತರ ಕೊಡಿಸಿ ಎಂದು ಸಭಾಪತಿಗಳು ಸಭಾನಾಯಕರಿಗೆ ಸೂಚಿಸಿ ಮುಂದಿನ ಪ್ರಶ್ನೆಗೆ ಹೋದರು.

ಆಧಾರ: ಸಂಯುಕ್ತ ಕರ್ನಾಟಕ, ದಿನಾಂಕ: 18.09.2021

## 79. ಅವಧಿ ಮುಗಿದ ಮಾಸ್ಕ್ ವಿತರಣೆ : ತನಿಖೆಗೆ ಸೂಚನೆ

ಮೇಲ್ಮನೆಯಲ್ಲಿ ಸದಸ್ಯರಿಗೆ ನೀಡಿದ ಮಾಸ್ಕ್ ಅವಧಿ ಮೀರಿದ್ದು ಎಂದು ಗೊತ್ತಾಗಿದ್ದು ಈ ಬಗ್ಗೆ ತನಿಖೆ ನಡೆಸಿ ಸಂಬಂಧಪಟ್ಟವರ ವಿರುದ್ಧ ಕ್ರಮ ಜರುಗಿಸುವಂತೆ ಸಭಾಪತಿ ಬಸವರಾಜ ಹೊರಟ್ಟಿ ಸರ್ಕಾರಕ್ಕೆ ಸೂಚನೆ ನೀಡಿದರು.

ಪ್ರಶ್ನೋತ್ತರ ಕಲಾಪ ಮುಗಿಯುತ್ತಿದ್ದಂತೆಯೇ ಸಭಾಪತಿ ಅವರು, ಕಾಂಗ್ರೆಸ್ ಸದಸ್ಯ ಪಿ.ಆರ್.ರಮೇಶ್ ಅವರು ಪ್ರಸ್ತಾಪ ಮಾಡಿ ಶಾಸಕರಿಗೆ ಅವಧಿ ಮೀರಿದ ಮಾಸ್ಕ್ ನೀಡಲಾಗಿದೆ. ಇದು ಮೇಡ್ ಇನ್ ಚೈನಾ ಆಗಿದೆ ಎಂದು ಆರೋಪಿಸಿದ್ದರಲ್ಲದೆ, ಅವಧಿ ಮೀರಿದ ದಿನಾಂಕದ ಬಳಿ ಎರಡು ವರ್ಷದ ಅವಧಿ ಎಂದು ಸ್ಟಿಕ್ಕರ್ ಅಂಟಿಸಲಾಗಿದೆ ಎಂದು ದೂರಿ ಮಾಸ್ಕ್ ಅನ್ನು ಸಭಾಪತಿಗಳಿಗೆ ನೀಡಿದ್ದರು.

ಈ ಬಗ್ಗೆ ಪರಿಶೀಲನೆ ಮಾಡಿದ ಸಭಾಪತಿಗಳು, ಈ ವಿಷಯವನ್ನು ಸದನದಲ್ಲಿ ಪ್ರಸ್ತಾಪ ಮಾಡಿ ಅವಧಿ ಮೀರಿದ ಮಾಸ್ಕ್ ವಿತರಣೆ ಮಾಡಿರುವುದು ಸಾಬೀತಾಗಿದೆ. ಇದು ಚೀನಾ ನಿರ್ಮಿತ ಮಾಸ್ಕ್ ಆಗಿದೆ. ಅವಧಿ ಮೀರಿದ ಮಾಸ್ಕ್ ವಿತರಣೆ ಮಾಡಿರುವ ಬಗ್ಗೆ ತನಿಖೆ ಮಾಡಿಸಿ ಎಂದು ಸಭಾನಾಯಕ ಕೋಟ ಶ್ರೀನಿವಾಸಪೂಜಾರಿ ಅವರಿಗೆ ಸೂಚಿಸಿದರು.

ಈ ಬಗ್ಗೆ ಸಭಾನಾಯಕ ಕೋಟ ಶ್ರೀನಿವಾಸಪೂಜಾರಿ ಅವರು, ಅವಧಿ ಮುಗಿದ ಮಾಸ್ಕ್ ವಿತರಣೆ ಮಾಡಿರುವ ಸಂಬಂಧಪಟ್ಟ ಅಧಿಕಾರಿಗಳ ವಿರುದ್ಧ ಕ್ರಮ ಕೈಗೊಳ್ಳಲಾಗುವುದು ಎಂದು ಹೇಳಿದರು. ಈ ವೇಳೆ ಕಾಂಗ್ರೆಸ್ ಸದಸ್ಯ ಪ್ರತಾಪಚಂದ್ರ ಶೆಟ್ಟಿ ಅವರು ಮಧ್ಯಪ್ರವೇಶಿಸಿ, ಅವಧಿ ಮುಗಿದ ಮಾಸ್ಕ್‌ಗಳನ್ನು ವಿತರಣೆ ಮಾಡಲು ಮುಂದಾದ ಅಧಿಕಾರಿಗಳ ವಿರುದ್ಧ ಪೊಲೀಸರಲ್ಲಿ ದೂರು ನೀಡಿ ಎಂದು ಅಗ್ರಹಿಸಿದರು.

ಆಧಾರ: ಸಂಯುಕ್ತ ಕರ್ನಾಟಕ, ದಿನಾಂಕ: 18.09.2021

## 80. ಸೆಪ್ಟೆಂಬರ್ 24ಕ್ಕೆ ಜಂಟಿ ಸದನ : ಲೋಕಸಭೆ ಸ್ಪೀಕರ್ ಭಾಷಣ

ವಿಧಾನಮಂಡಲ ಅಧಿವೇಶನ ಸೆಪ್ಟೆಂಬರ್ 24ರಂದು ಬಹುತೇಕ ಅಂತ್ಯಗೊಳ್ಳಲಿದ್ದು, ಅಂತಿಮ ದಿನ ಜಂಟಿ ಸದನ ಉದ್ದೇಶಿಸಿ ಮಾತನಾಡಲು ಲೋಕಸಭಾ ಸ್ಪೀಕರ್ ಆಗಮಿಸುವ ಹಿನ್ನೆಲೆಯಲ್ಲಿ ಎಲ್ಲ ಸದಸ್ಯರೂ ಕಡ್ಡಾಯವಾಗಿ ಹಾಜರಾಗಬೇಕು ಎಂದು ವಿಧಾನಸಭಾಧ್ಯಕ್ಷ ವಿಶ್ವೇಶ್ವರ ಹೆಗಡೆ, ಕಾಗೇರಿ ಹೇಳಿದ್ದಾರೆ.

ಪ್ರಜಾಪ್ರಭುತ್ವದಲ್ಲಿ ಸಂಸದೀಯ ಮೌಲ್ಯಗಳ ಕುರಿತ ಚರ್ಚೆಯಲ್ಲಿ ಭಾಗವಹಿಸಲು ಓಂ ಬಿರ್ಲಾ ಅವರು ಆಗಮಿಸಲಿದ್ದಾರೆ ಎಂದು ತಿಳಿಸಿದರು.

**ವಿಸ್ತರಣೆ ಬಗ್ಗೆ ಬಿಎಸಿಯಲ್ಲಿ ತೀರ್ಮಾನ :** ಇದೇ ವೇಳೆ ಬಹುತೇಕ ಅಧಿವೇಶನ ಕೊನೆಗೊಳ್ಳಲಿದೆ. ಕೆಲ ಸದಸ್ಯರು ಅಧಿವೇಶನ ವಿಸ್ತರಿಸಲು ಮನವಿ ಮಾಡಿದ್ದು, ನಡೆಯಲಿರುವ ಸದನ ಕಲಾಪ ಸಲಹಾ ಸಮಿತಿ ಸಭೆಯಲ್ಲಿ ಈ ಬಗ್ಗೆ ಅಂತಿಮ ನಿರ್ಧಾರ ತೆಗೆದುಕೊಳ್ಳಲಾಗುವುದು ಎಂದರು.

ಆಧಾರ: ಕನ್ನಡ ಪ್ರಭ, ದಿನಾಂಕ: 18.09.2021

## 81. ಕಲ್ಯಾಣ ಕರ್ನಾಟಕಕ್ಕೆ ಬಂಪರ್

ಕಲ್ಯಾಣ ಕರ್ನಾಟಕ ಪ್ರದೇಶಾಭಿವೃದ್ಧಿ ಮಂಡಳಿಗೆ ನೀಡಲಾಗಿರುವ ಅನುದಾನವನ್ನು ಪೂರ್ಣ ಪ್ರಮಾಣದಲ್ಲಿ ಖರ್ಚು ಮಾಡಿದಲ್ಲಿ ವಾರ್ಷಿಕ ರೂ. 3,000 ಕೋಟಿ ಒದಗಿಸಲಾಗುವುದು ಎಂದು ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ ಘೋಷಿಸಿದ್ದಾರೆ.

ಡಿಎಆರ್ ಪೊಲೀಸ್ ಮೈದಾನದಲ್ಲಿ ಆಯೋಜಿಸಿದ್ದ ಕಲ್ಯಾಣ ಕರ್ನಾಟಕ ಉತ್ಸವದಲ್ಲಿ ರಾಷ್ಟ್ರ ಧ್ವಜಾರೋಹಣ ನೆರವೇರಿಸಿ ಮಾತನಾಡಿದರು. ಮಂಡಳಿ ಕಾರ್ಯದರ್ಶಿಯ ಹುದ್ದೆಗೆ ಖಾಯಂ ಆಗಿ ಹಿರಿಯ ಅಧಿಕಾರಿ ನೇಮಕ ಮಾಡಲಾಗುವುದು. ಇದರಿಂದ ಮಂಡಳಿ ಚಟುವಟಿಕೆ ಚುರುಕುಗೊಳ್ಳಲಿದೆ. ಇನ್ನು ಮಂಡಳಿಗೆ ಪ್ರಸಕ್ತ ರೂ. 1,500 ಕೋಟಿ ಅನುದಾನ ಒದಗಿಸಲಾಗುತ್ತಿದ್ದರೂ ಸಮರ್ಪಕವಾಗಿ ಬಳಕೆಯಾಗುತ್ತಿಲ್ಲ. ಈವರೆಗೆ ರೂ. 8 ಸಾವಿರ ಕೋಟಿ ನೀಡಿದ್ದು, 6 ಸಾವಿರ ಕೋಟಿ ಖರ್ಚು ಮಾಡಲಾಗಿದೆ. ಇನ್ನು ರೂ. 2000 ಕೋಟಿ ಉಳಿದಿದ್ದು, ಪೂರ್ಣ ಪ್ರಮಾಣದ ಹಣ ಖರ್ಚು ಮಾಡಿದರೆ ವಾರ್ಷಿಕ ರೂ. 3,000 ಕೋಟಿ ಒದಗಿಸಲಾಗುವುದು ಎಂದು ಷರತ್ತು ಹಾಕಿದರು.

ವಿಮೋಚನೆಗಾಗಿ ಅನೇಕ ಮಹನೀಯರು ಹೋರಾಡುವುದರ ಜೊತೆಗೆ ತ್ಯಾಗ ಬಲಿದಾನ ನೀಡಿದ್ದಾರೆ. ಇದೆಲ್ಲದರ ಫಲದಿಂದಲೇ 'ಕಲ್ಯಾಣ ಕರ್ನಾಟಕ'ಕ್ಕೆ ಸ್ವಾತಂತ್ರ್ಯ ಸಿಕ್ಕಿದೆ. ಹಿಂದಿನ ಸಿಎಂ ಬಿ.ಎಸ್.ಯಡಿಯೂರಪ್ಪ ಕೇಂದ್ರದ ಮೇಲೆ ಒತ್ತಡ ಹೇರಿದ್ದರಿಂದ ಹಿಂದುಳಿದ ಈ ಭಾಗದ ಸಮಗ್ರ ಅಭಿವೃದ್ಧಿಗೆ 371(ಜೆ) ವಿಧಿ ಜಾರಿಗೊಂಡಿದೆ. ಈ ಮೂಲಕ ಲಕ್ಷಾಂತರ ಜನರಿಗೆ ಉದ್ಯೋಗ, ಶೈಕ್ಷಣಿಕ ಕ್ಷೇತ್ರದಲ್ಲಿ ಅವಕಾಶವು ಸಿಕ್ಕಿದೆ ಎಂದು ಬೊಮ್ಮಾಯಿ ವಿವರಿಸಿದರು.

ಆಧಾರ: ವಿಜಯವಾಣಿ, ದಿನಾಂಕ: 18.09.2021

## 82. ನಗರ ಮೇಯರ್ ಹುದ್ದೆಯಲ್ಲಿ ಒಬಿಸಿ ಮೀಸಲಿಗೆ ವಿಧೇಯಕ

ಹಿಂದುಳಿದ ವರ್ಗಗಳಿಗೆ ಮೇಯರ್ ಮತ್ತು ಉಪ ಮೇಯರ್ ಹುದ್ದೆಯಲ್ಲಿ ಮೀಸಲಾತಿ ನೀಡುವ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಅಧಿನಿಯಮ 2020ಕ್ಕೆ ಮೊದಲನೇ ತಿದ್ದುಪಡಿ ತರುವ ಖಾಸಗಿ ವಿಧೇಯಕಕ್ಕೆ ಪರಿಷತ್‌ನಲ್ಲಿ ಅಂಗೀಕಾರ ದೊರೆಯಿತು.

ರಾಜ್ಯದ ಇತಿಹಾಸದಲ್ಲಿಯೇ ಖಾಸಗಿ ವಿಧೇಯಕ ಅಂಗೀಕಾರವಾಗಿರುವ 2ನೇ ಪ್ರಕರಣ ಇದಾಗಿದೆ. ಈ ಹಿಂದೆ ಬಿಜೆಪಿಯ ರಾಮಚಂದ್ರೇಗೌಡರು ಅಂಗಾಂಗ ಕಸಿಗೆ ಸಂಬಂಧಿಸಿದಂತೆ ಮಂಡಿಸಿದ್ದ ಖಾಸಗಿ ವಿಧೇಯಕ ಅಂಗೀಕಾರವಾಗಿತ್ತು. ಈಗ ಮಂಡನೆಯಾದ ವಿಧೇಯಕ ಎರಡನೆಯದಾಗಿದೆ.

**ಮತ್ತೆ ಸದನದ ಮುಂದೆ :** ಕಾಂಗ್ರೆಸ್ ಸದಸ್ಯ ಪಿ.ಆರ್.ರಮೇಶ್ ಅವರು ಮಂಡಿಸಿರುವ ಈ ಖಾಸಗಿ ವಿಧೇಯಕಕ್ಕೆ ಸದನದ ಅನುಮೋದನೆ ನೀಡಿದ್ದರಿಂದ ಸರ್ಕಾರ ಮೀಸಲಾತಿ ನೀಡಲು ನಿಯಮಾವಳಿ ರಚಿಸಿ ಸಾಮಾನ್ಯ ವಿಧೇಯಕದ ರೂಪ ನೀಡಿ ಪುನಃ ಪರಿಷತ್ತಿನಲ್ಲಿ ಮಂಡನೆ ಮಾಡಲಿದೆ. ಹೀಗೆ ಸಾಮಾನ್ಯ ವಿಧೇಯಕವಾಗಿ ಮಂಡನೆಯಾದ ನಂತರ ಅದಕ್ಕೆ ಸದನ ಮತ್ತೆ ಅನುಮೋದನೆ ನೀಡಬೇಕು.

ಅನಂತರ ವಿಧಾನಸಭೆಯಲ್ಲಿ ಅಂಗೀಕಾರ ದೊರೆಯಬೇಕು. ಅನಂತರ ಈ ವಿಧೇಯಕಕ್ಕೆ ಕಾನೂನು ಬಲ ಬರಲಿದೆ.

ವಿಧೇಯಕ ಮಂಡಿಸಿದ ರಮೇಶ್, ಬಿಬಿಎಂಪಿ ಕಾಯ್ದೆಯಲ್ಲಿ ಮೇಯರ್ ಮತ್ತು ಉಪ ಮೇಯರ್ ಹುದ್ದೆಗೆ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಮಹಿಳೆಯರಿಗೆ ಮೀಸಲಾತಿ ನೀಡಲಾಗಿದೆ. ಆದರೆ ಹಿಂದುಳಿದ ವರ್ಗವನ್ನು ಕೈಬಿಡಲಾಗಿದ್ದು ಅವರಿಗೂ ಮೀಸಲಾತಿ ನೀಡಲು ವಿಧೇಯಕ ಮಂಡಿಸಲಾಗಿದೆ ಎಂದು ಸ್ಪಷ್ಟಪಡಿಸಿದರು.

ಆಗ ಸಚಿವ ಮಾಧುಸ್ವಾಮಿ ಮಾತನಾಡಿ, ಮೀಸಲಾತಿ ನೀಡುವ ಬಗ್ಗೆ ಕಾನೂನು ಇಲಾಖೆ ಕಾರ್ಯದರ್ಶಿಯವರ ಬಳಿ ಚರ್ಚೆ ನಡೆಸಲಾಗಿದೆ. ಮೀಸಲಾತಿ ನೀಡಲು ಸರ್ಕಾರವು ಸಿದ್ಧವಿದೆ. ಹೀಗಿರುವಾಗ ವಿಧೇಯಕ ಮಂಡಿಸುವ ಅಗತ್ಯವಾದರೂ ಏನು ಎಂದು ಪ್ರಶ್ನಿಸಿದರು. ಆದರೆ ಅಂತಿಮವಾಗಿ ಸದನವು ವಿಧೇಯಕಕ್ಕೆ ಅಂಗೀಕಾರ ನೀಡಿತು.

ಆಧಾರ: ಕನ್ನಡ ಪ್ರಭ, ದಿನಾಂಕ: 18.09.2021

## 83. ಸದನದಲ್ಲಿ ಪ್ರತಿಧ್ವನಿಸಿದ ಮಗು ಮಾರಾಟ ಪ್ರಕರಣ

ವಿಜಯಪುರದಲ್ಲಿ ಮಗು ಮಾರಾಟ ಪ್ರಕರಣ ಸದನದಲ್ಲಿ ಪ್ರತಿಧ್ವನಿಸಿ ಪ್ರಕರಣ ಬೆಳಕಿಗೆ ತಂದ 'ಉದಯವಾಣಿ' ಪತ್ರಿಕೆ ಕಾರ್ಯಕ್ಕೆ ಮೆಚ್ಚುಗೆ ವ್ಯಕ್ತವಾಯಿತು.

ಶೂನ್ಯ ವೇಳೆಯಲ್ಲಿ ಕಾಂಗ್ರೆಸ್‌ನ ಎಂ.ಬಿ.ಪಾಟೀಲ್ ವಿಷಯ ಪ್ರಸ್ತಾಪಿಸಿ, ವಿಜಯಪುರದಲ್ಲಿ ಆಸ್ಪತ್ರೆಯ ದಾದಿ ಶಾಮೀಲಾಗಿ ಐದು ಸಾವಿರ ರೂ.ಗೆ ಮಗು ಮಾರಾಟ ಮಾಡಿರುವ ಪ್ರಕರಣ ನಡೆದಿದೆ. ಶೋಷಿತ ಸಮುದಾಯದ ಹೆಣ್ಣು ಮಗಳ ಹೆರಿಗೆ ನಂತರ ಈ ಕೃತ್ಯ ನಡೆದಿದೆ. ಈ ಬಗ್ಗೆ ತನಿಖೆ ನಡೆಸಿ ಮಗು ವಾಪಸ್ಸು ಕೊಡಿಸುವ ಕೆಲಸ ಆಗಬೇಕೆಂದು ಆಗ್ರಹಿಸಿದರು.

ಕಾಂಗ್ರೆಸ್‌ನ ಯಶವಂತರಾಯಗೌಡ ಅವರು, ಇಂತಹ ಹೀನ ಕೃತ್ಯದ ಆರೋಪಿಗಳಿಗೆ ಸೂಕ್ತ ಶಿಕ್ಷೆಯಾಗಬೇಕು. ಈ ಪ್ರಕರಣ ಬೆಳಕಿಗೆ ತಂದ ಜವಾಬ್ದಾರಿಯುತ ಮಾಧ್ಯಮವಾಗಿ 'ಉದಯವಾಣಿ' ಪತ್ರಿಕೆ ಕೆಲಸ ಮಾಡಿದೆ. ಆ ಮಾಧ್ಯಮಕ್ಕೆ ನನ್ನ ಅಭಿನಂದನೆಗಳು ಎಂದು ಹೇಳಿದರು.

ಸರ್ಕಾರದ ಪರವಾಗಿ ಉತ್ತರಿಸಿದ ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವ ಜೆ.ಸಿ.ಮಾಧುಸ್ವಾಮಿ, ಪ್ರಕರಣ ಸರ್ಕಾರದ ಗಮನಕ್ಕೆ ಬಂದಿದೆ. ಗಂಭೀರವಾಗಿ ಪರಿಗಣಿಸಲಾಗಿದೆ. ಈಗಾಗಲೇ ಪ್ರಕರಣ ದಾಖಲಾಗಿದೆ, ಸುಳಿವು ಇರುವುದರಿಂದ ತನಿಖೆಗೆ ಕಷ್ಟವಾಗಲ್ಲ ಎಂದು ತಿಳಿಸಿದರು.

ಮೊದಲು ಹೆಣ್ಣು ಮಗು ಎಂದು ಹೇಳಲಾಗಿತ್ತು. ಆ ನಂತರ ಗಂಡು ಮಗು ಎಂದು ಗೊತ್ತಾಗಿದೆ. ಅನಾಮಧೇಯರು ಮಕ್ಕಳನ್ನು ಖರೀದಿಸುತ್ತಾರೆಂಬ ಮಾಹಿತಿ ಇದೆ. ಏನೇ ಆದರೂ ಇಂತಹ ಕೃತ್ಯ ಒಪ್ಪಲು ಸಾಧ್ಯವಿಲ್ಲ ಎಂದು ಹೇಳಿದರು.

ಜೆಡಿಎಸ್‌ನ ಬಂಡೆಪ್ಪ ಕಾಶೆಂಪುರ್, ಇಂತಹ ಪ್ರಕರಣ ರಾಜ್ಯದ ಬೇರೆ ಯಾವ ಕಡೆಯೂ ಆಗದಂತೆ ನೋಡಿಕೊಳ್ಳಬೇಕು. ಈ ಪ್ರಕರಣದಲ್ಲಿ ಸೂಕ್ತ ಕ್ರಮ ಕೈಗೊಂಡರೆ ಬೇರೆಯವರಿಗೆ ಎಚ್ಚರಿಕೆ ಗಂಟೆಯಾಗುತ್ತದೆ ಎಂದು ತಿಳಿಸಿದರು.

ಆಧಾರ: ಉದಯವಾಣಿ, ದಿನಾಂಕ: 18.09.2021

## 84. ಜಿಪಂ, ತಾಪಂ ಕ್ಷೇತ್ರಗಳ ವಿಂಗಡಣೆ ಮಸೂದೆ ಪಾಸ್

ಪ್ರತಿಪಕ್ಷ ಕಾಂಗ್ರೆಸ್ ಹಾಗೂ ಜೆಡಿಎಸ್ ಸದಸ್ಯರ ತೀವ್ರ ವಿರೋಧ, ಆಕ್ಷೇಪ, ಸಭಾತ್ಯಾಗದ ನಡುವೆ ಜಿಲ್ಲಾ, ತಾಲ್ಲೂಕು, ಗ್ರಾಮ ಪಂಚಾಯತಿ ಕ್ಷೇತ್ರಗಳ ಪುನರ್ ವಿಂಗಡಣೆ ಮಾಡಲು ಪ್ರತ್ಯೇಕವಾದ 'ಕರ್ನಾಟಕ ಪಂಚಾಯತ್‌ರಾಜ್ ಸೀಮಾ ನಿರ್ಣಯ ಆಯೋಗ' ರಚಿಸುವ ಕರ್ನಾಟಕ ಗ್ರಾಮ ಸ್ವರಾಜ್ ಮತ್ತು ಪಂಚಾಯತ್‌ರಾಜ್ (ತಿದ್ದುಪಡಿ) ವಿಧೇಯಕಕ್ಕೆ ಸರ್ಕಾರ ಧ್ವನಿಮತದ ಮೂಲಕ ಅಂಗೀಕಾರ ಪಡೆಯಿತು.

ವಿಧೇಯಕದ ಕುರಿತು ನಡೆದ ಚರ್ಚೆಯಲ್ಲಿ 'ತಿದ್ದುಪಡಿ ವಿಧೇಯಕ ಸ್ಥಳೀಯ ಸಂಸ್ಥೆಗಳ ಚುನಾವಣೆ ಮುಂದೂಡುವ ತಂತ್ರವಾಗಿದೆ. ಸಂವಿಧಾನ ಬದ್ಧವಾಗಿ ಅಸ್ತಿತ್ವಕ್ಕೆ ಬಂದಿರುವ ಚುನಾವಣಾ ಆಯೋಗದ ಅಧಿಕಾರ ಮೊಟಕುಗೊಳಿಸಲು ಸರ್ಕಾರ ಮುಂದಾಗಿದೆ. ತಮಗೆ ಬೇಕಾದಂತೆ ಕ್ಷೇತ್ರಗಳ

ಮರು ವಿಂಗಡಣೆ ಮಾಡಿಕೊಳ್ಳಲು ವಿಧೇಯಕ ಮಂಡಿಸಿದೆ. ಹಾಗಾಗಿ ವಿಧೇಯಕವನ್ನು ಹಿಂಪಡೆಯಬೇಕು' ಎಂದು ಪ್ರತಿಪಕ್ಷಗಳ ಆರೋಪ, ಟೀಕೆಯನ್ನು ತಳ್ಳಿಹಾಕಿದ ಸರ್ಕಾರ ವಿಧೇಯಕದ ಅಗತ್ಯತೆಯನ್ನು ಸರ್ಕಾರ ಸಮರ್ಥಿಸಿಕೊಂಡಿತು.

ಇದಕ್ಕೂ ಮುನ್ನ ಮಾತನಾಡಿದ್ದ ಪ್ರತಿಪಕ್ಷ ನಾಯಕ ಎಸ್.ಆರ್.ಪಾಟೀಲ್, ಕಾಂಗ್ರೆಸ್ ಸದಸ್ಯರಾದ ಬಿ.ಕೆ.ಹರಿಪ್ರಸಾದ್, ಕೆ.ಪ್ರತಾಪಚಂದ್ರ ಶೆಟ್ಟಿ, ಎಸ್.ರವಿ, ಜೆಡಿಎಸ್ ಸದಸ್ಯ ಕೆ.ಟಿ.ಶ್ರೀಕಂಠೇಗೌಡ, ಭೋಜೇಗೌಡ, ರಮೇಶ್‌ಗೌಡ ಅವರು 2003ರ ನಂತರ ಚುನಾವಣಾ ಆಯೋಗವೇ ಕ್ಷೇತ್ರಗಳ ಮರುವಿಂಗಡಣೆ ಮಾಡುತ್ತಾ ಬಂದಿದೆ. ಈಗ ಏಕೆ ಆಯೋಗದ ಅಧಿಕಾರವನ್ನು ಸರ್ಕಾರ ಕಸಿದುಕೊಳ್ಳಲು ಪ್ರಯತ್ನಿಸುತ್ತಿದೆ. ಈಗಾಗಲೇ ಸಂವಿಧಾನ ಬದ್ಧ ಅನೇಕ ಸಂಸ್ಥೆಗಳನ್ನು ಸರ್ಕಾರಗಳು ದುರುಪಯೋಗ ಮಾಡುತ್ತಾ ಬಂದಿವೆ. ಈಗ ಅವುಗಳ ಅಧಿಕಾರವನ್ನೇ ಕಿತ್ತುಕೊಳ್ಳಲು ಮುಂದಾಗಿದೆ ಎಂದು ವಾಗ್ದಾಳಿ ಮಾಡಿದರು.

ಸಚಿವ ಜೆ.ಸಿ.ಮಾಧುಸ್ವಾಮಿ ಕ್ಷೇತ್ರಗಳ ಮರುವಿಂಗಡಣೆ, ಮೀಸಲಾತಿ ಸಂಬಂಧ ಸುಮಾರು ಸಾವಿರಾರು ಆಕ್ಷೇಪಣೆಗಳು ಬಂದಿವೆ. ಇವುಗಳನ್ನು ಪರಿಶೀಲಿಸಲು ಚುನಾವಣಾ ಆಯೋಗ ಅಥವಾ ಹೈಕೋರ್ಟ್‌ಗಳಿಗೆ ಸಾಧ್ಯವಿಲ್ಲ. ಪ್ರತ್ಯೇಕವಾದ ಅಡ್‌ಹಾಕ್ ಆಗಿ ಆಯೋಗವನ್ನು ರಚಿಸುವ ಉದ್ದೇಶದಿಂದ ತಿದ್ದುಪಡಿ ವಿಧೇಯಕ ಮಂಡಿಸಲಾಗಿದೆ ಎಂದು ಸ್ಪಷ್ಟನೆ ನೀಡಿದರು.

ಪಂಚಾಯಿತಿ ಚುನಾವಣೆ ಮುಂದೂಡುವ ಉದ್ದೇಶದಿಂದ ಈ ವಿಧೇಯಕ ಮಂಡಿಸಿಲ್ಲ. ಎಲ್ಲ ಚುನಾವಣೆಗಳಲ್ಲೂ ನಮ್ಮ ಪಕ್ಷ ಗೆದ್ದಿದೆ. ಪಂಚಾಯತಿ ಚುನಾವಣೆಯಲ್ಲಿ ಗೆಲ್ಲುತ್ತೇವೆ. ನಮಗೆ ಯಾವುದೇ ಹೆದರಿಕೆ ಇಲ್ಲ ಎಂದು ಪ್ರತಿಪಕ್ಷಗಳಿಗೆ ತಿರುಗೇಟು ನೀಡಿದರು. ಚರ್ಚೆಯ ಮಧ್ಯೆ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವ ಕೆ.ಎಸ್.ಈಶ್ವರಪ್ಪ ಅವರು ಪ್ರತಿಪಕ್ಷಗಳ ತೀವ್ರ ವಿರೋಧ, ಸಭಾತ್ಯಾಗದ ಮಧ್ಯೆ ವಿಧೇಯಕವನ್ನು ಧ್ವನಿಮತದ ಮೂಲಕ ಅಂಗೀಕಾರ ಪಡೆದುಕೊಂಡರು. ವಿಧಾನಸಭೆಯಲ್ಲಿ ಈಗಾಗಲೇ ತಿದ್ದುಪಡಿ ವಿಧೇಯಕಕ್ಕೆ ಒಪ್ಪಿಗೆ ದೊರೆತಿದೆ.

ಆಧಾರ: ವಿಜಯವಾಣಿ, ದಿನಾಂಕ: 18.09.2021

## 85. ಅಮೃತ ಯೋಜನೆಗೆ 750 ಗ್ರಾಪಂ

750 ಗ್ರಾಮ ಪಂಚಾಯತಿಗಳನ್ನು ಸ್ವಾತಂತ್ರ್ಯೋತ್ಸವದ ಅಮೃತ ಮಹೋತ್ಸವದ ನೆನಪಿಗಾಗಿ 'ಅಮೃತ ಗ್ರಾಮ ಪಂಚಾಯಿತಿ' ಎಂದು ಗುರುತಿಸಿ ಸಮಗ್ರವಾಗಿ ಅಭಿವೃದ್ಧಿಪಡಿಸಲಾಗುತ್ತಿದ್ದು, ಈ ಯೋಜನೆಯನ್ನು ಇದೇ 23 ರಂದು ಕೇಂದ್ರ ಸಚಿವರು ಉದ್ಘಾಟಿಸಲಿದ್ದಾರೆ ಎಂದು ಗ್ರಾಮೀಣಾಭಿವೃದ್ಧಿ ಸಚಿವ ಕೆ.ಎಸ್.ಈಶ್ವರಪ್ಪ ತಿಳಿಸಿದರು.

ಪ್ರಶ್ನೋತ್ತರ ಕಲಾಪದಲ್ಲಿ ಕಾಂಗ್ರೆಸ್‌ನ ಎಂ.ಎ.ಗೋಪಾಲಸ್ವಾಮಿ ಪ್ರಶ್ನೆಗೆ ಉತ್ತರಿಸಿ, "ಅಮೃತ ಪಂಚಾಯಿತಿಗೆ ತಲಾ ರೂ. 25 ಲಕ್ಷ ಅನುದಾನ ಒದಗಿಸಲಾಗುತ್ತಿದೆ" ಎಂದು ಹೇಳಿದರು. "ಮುಖ್ಯಮಂತ್ರಿ ಗ್ರಾಮ ವಿಕಾಸ ಯೋಜನೆಯಡಿ ಕೆಲಸ ಮಾಡದಿದ್ದರೂ ಹಣ ಪಾವತಿಸಲಾಗಿದೆ. ಪ್ರಸಕ್ತ ವರ್ಷದ ಅನುದಾನವನ್ನು ಹಿಂದಿನ ವರ್ಷದ ಕಾಮಗಾರಿಗಳಿಗೆ ಬಿಡುಗಡೆ ಮಾಡಲಾಗಿದೆ. ಈ ಯೋಜನೆಯಡಿ ವಿಧಾನ ಪರಿಷತ್ ಸದಸ್ಯರಿಗೆ ರೂ.1 ಕೋಟಿ ನೀಡಲಾಗುತ್ತಿದೆ. ಇದನ್ನು ಮುಂದುವರಿಸಬೇಕು", ಎಂದು ಕಾಂಗ್ರೆಸ್‌ನ ಎಂ.ನಾರಾಯಣಸ್ವಾಮಿ ಆಗ್ರಹಿಸಿದರು.

**ಪಂಚಾಯತ್ ವಿವಿಯಲ್ಲಿ ಮೀಸಲಿಗೆ ಸಮಿತಿ ರಚನೆ :** ರಾಜ್ಯದ ಪಂಚಾಯತ್‌ರಾಜ್ ವಿಶ್ವವಿದ್ಯಾಲಯದಿಂದ ಸ್ನಾತಕೋತ್ತರ ಪದವಿ ಪಡೆದ ವಿದ್ಯಾರ್ಥಿಗಳಿಗೆ ಇಲಾಖೆಯಲ್ಲಿ ಮೀಸಲಾತಿ ಕಲ್ಪಿಸಿ, ಉದ್ಯೋಗ ಒದಗಿಸುವ ಸಂಬಂಧ ಪ್ರಧಾನ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ಉನ್ನತ ಮಟ್ಟದ ಸಮಿತಿ ರಚಿಸಲಾಗುವುದು ಎಂದು ಸಚಿವ ಕೆ.ಎಸ್.ಈಶ್ವರಪ್ಪ ಭರವಸೆ ನೀಡಿದರು. ಬಿಜೆಪಿಯ ಎಸ್.ವಿ.ಸಂಕನೂರ

ಪ್ರಶ್ನೆಗೆ ಉತ್ತರಿಸಿ, "ಸಮಿತಿಯಿಂದ 2-3 ತಿಂಗಳಲ್ಲಿ ವರದಿ ಪಡೆದು, ಇಲಾಖೆಯಲ್ಲಿ ಮೀಸಲಾತಿ ಕಲ್ಪಿಸಿ, ಉದ್ಯೋಗ ನೀಡಲಾಗುವುದು," ಎಂದು ಹೇಳಿದರು.

ಆಧಾರ: ವಿಜಯ ಕರ್ನಾಟಕ, ದಿನಾಂಕ: 18.09.2021

## 86. ಆನ್‌ಲೈನ್ ಜೂಜು ನಿಷೇಧ ಸನಿಹ

ಆನ್‌ಲೈನ್ ಗ್ಯಾಂಬ್ಲಿಂಗ್ ನಿಯಂತ್ರಣ ವಿಚಾರದಲ್ಲಿ ಮತ್ತೊಂದು ಮಹತ್ವದ ಹೆಜ್ಜೆ ಇರಿಸಿರುವ ರಾಜ್ಯ ಸರ್ಕಾರ, ಕಾನೂನು ತಿದ್ದುಪಡಿ ಮಾಡುವ ಸಂಬಂಧ ಕರ್ನಾಟಕ ಪೊಲೀಸ್ (ತಿದ್ದುಪಡಿ) ಆನ್‌ಲೈನ್-2021 ಅನ್ನು ವಿಧಾನಸಭೆಯಲ್ಲಿ ಮಂಡಿಸಿದೆ. ಅದು ಪರ್ಯಾಲೋಚನೆಗೊಳಪಡಲಿದೆ.

ಆನ್‌ಲೈನ್ ಗ್ಯಾಂಬ್ಲಿಂಗ್ ಎಂದರೆ ಯಾವುದು, ಯಾವುದು ಅಲ್ಲ ಎಂದು ಸ್ಪಷ್ಟಪಡಿಸುವುದು ಮತ್ತು ಆನ್‌ಲೈನ್ ಗ್ಯಾಂಬ್ಲಿಂಗ್‌ನಲ್ಲಿ ತೊಡಗಿದರೆ ಯಾವ ರೀತಿ ಕಠಿಣ ಕ್ರಮ ಎದುರಿಸಬೇಕಾಗುತ್ತದೆ ಎಂಬುದನ್ನು ವಿಧೇಯಕದಲ್ಲಿ ಪ್ರಸ್ತಾಪಿಸಲಾಗಿದೆ.

**ಕುದುರೆ ಓಟವಿಲ್ಲ:** ಲಾಟರಿಯು ಪ್ರಸ್ತಾವಿತ ತಿದ್ದುಪಡಿ ಕಾಯ್ದೆಯ ವ್ಯಾಪ್ತಿಗೆ ಬರುವುದಿಲ್ಲ. ಜೊತೆಗೆ ರಾಜ್ಯದ ಒಳಗೆ ಅಥವಾ ಹೊರಗೆ ಯಾವುದೇ ರೇಸ್‌ಕೋರ್ಸ್‌ನಲ್ಲಿ ಕುದುರೆ ಓಟದ ಮೇಲೆ ಬಾಜಿ ಕಟ್ಟುವಿಕೆ ಅಥವಾ ಹಣ ಕಟ್ಟುವಿಕೆಯನ್ನು ಹೊರತಾಗಿರುತ್ತದೆ. ಜೂಜಾಟ ಎಂದರೆ ಆನ್‌ಲೈನ್ ಆಟಗಳು ಹಾಗೂ ಟೋಕನ್‌ಗಳ ರೂಪದಲ್ಲಿ ಆಟದ ಮೊದಲು ಅಥವಾ ತರುವಾಯ ಹಣ ಪಾವತಿಸುವ ವಿಧಾನ, ಹಣ ಪಾವತಿಯ ವರ್ಚುವಲ್ ಕರೆನ್ಸಿ, ವಿದ್ಯುನ್ಮಾನ ವರ್ಗಾವಣೆಯಾಗುವಂಥದ್ದನ್ನು ಈ ಪರಿಧಿಯಲ್ಲಿ ತರಲಾಗಿದೆ.

**ಶಿಕ್ಷೆ ಮತ್ತು ದಂಡ ಪ್ರಮಾಣ :** ಆನ್‌ಲೈನ್ ಗ್ಯಾಂಬ್ಲಿಂಗ್‌ನಲ್ಲಿ ತೊಡಗುವವರಿಗೆ, ಸಹಾಯ ಮಾಡುವವರಿಗೆ ಹಾಗೂ ಆಶ್ರಯ ನೀಡುವವರಿಗೆ 6 ತಿಂಗಳು ಜೈಲು ಶಿಕ್ಷೆ ಹಾಗೂ ರೂ.10 ಸಾವಿರ ದಂಡ ವಿಧಿಸಲಾಗುವುದು ಎಂದು ವಿಧೇಯಕದಲ್ಲಿ ಉಲ್ಲೇಖಿಸಲಾಗಿದೆ. ಜೊತೆಗೆ ಹೆಚ್ಚಿನ ಶಿಕ್ಷೆಯಾಗಿ ಒಂದು ವರ್ಷ ಜೈಲು ಶಿಕ್ಷೆ ಮತ್ತು ರೂ.ಒಂದು ಲಕ್ಷ ದಂಡ ವಿಧಿಸಲು ಅವಕಾಶ ಮಾಡಿಕೊಳ್ಳಲಾಗುತ್ತಿದೆ. ಕರ್ನಾಟಕ ಪೊಲೀಸ್ ಅಧಿನಿಯಮದ 79ನೇ ಪ್ರಕರಣ, 80, 87, 114ನೇ ಪ್ರಕರಣಕ್ಕೆ ತಿದ್ದುಪಡಿ ಮಾಡಲಾಗಿದೆ. ಆ ಮೂಲಕ ದಂಡ ಪ್ರಮಾಣ ಹೆಚ್ಚಿಸಲಾಗುತ್ತಿದೆ. 128ಎ ಪ್ರಕರಣದ ಅಡಿಯಲ್ಲಿನ ಅಪರಾಧಗಳು ಜಾಮೀನುರಹಿತ ಎಂದು ಹೇಳಲಾಗಿದೆ.

ಆಧಾರ: ವಿಜಯವಾಣಿ, ದಿನಾಂಕ: 18.09.2021

## 87. Council passes Delimitation Commission Bill

The Legislative Council passed the Karnataka Gram Swaraj and Panchayat Raj (Amendment) Bill that will empower the state government to form a Delimitation Commission for rural local bodies.

As in the Legislative Assembly, Congress legislators staged a walkout in protest. The proposed Delimitation Commission will redraw panchayat boundaries and fix reservation for seats, potentially delaying elections to taluk and zilla panchayats that are due.

During a discussion on the Bill, Congress and some JD(S) members accused the government of proposing a new delimitation commission only to delay elections for the local bodies. "We oppose the Bill 100%," Leader of Opposition in the Legislative Council S R Patil said.

D(S) MLC KA Thippeswamy suggested that discussion on the Bill be kept on hold until the High Court issued an order on petitions challenging the delimitation and reservation done by the State Election Commission (SEC). He said that the house should hold the discussion after the Court delivers a judgement.

Law Minister JC Madhuswamy defended the state government's move to form a delimitation commission. "Nowhere is it said that SEC has to be entrusted with delimitation," he said.

Courtesy: The Hindu, Dated:18.09.2021

## 88. Child Rights Parliament Soon

The Karnataka State Legislators Forum for Child Rights, which met under the leadership of Legislative Council chairperson Basavaraj Horatti has decided to conduct a Child Rights Parliament. A date will fixed for the Parliament after discussion with Chief Minister said.

The chairperson was keen that a meeting be held with all legislatore to tune them in to issues of importance pertaining to children in the state. The chairperson's office will also issue directions to all ministers to respond to queries of children and children can directly write to the ministers or to the chairperson about issues faced by them Horatti said.

The meeting saw participation of MLC's Shantaram Siddi, Pratap Simha Naik, N.Ravikumar, among other legislators along with Child Rights Observatory coordinator Vasudeva Sharma.

Courtesy:- Deccan Hearld, Dated: 21.09.2021

## 89. ಬಾಲಬ್ರೂಯಿ ಜಾಗದಲ್ಲಿ ಕಾನ್‌ಸ್ಟಿಟ್ಯೂಷನ್ ಕ್ಲಬ್

ಪಾರಂಪರಿಕ ಕಟ್ಟಡವಾದ ಬಾಲಬ್ರೂಯಿ ಜಾಗದಲ್ಲಿ ಶಾಸಕರಿಗಾಗಿ ಕಾನ್‌ಸ್ಟಿಟ್ಯೂಷನ್ ಕ್ಲಬ್ (ಶಾಸಕರ ಮತ್ತು ಮಾಜಿ ಶಾಸಕರ ಮನರಂಜನಾ ಕ್ಲಬ್) ಮಾಡಲು ರಾಜ್ಯ ಸರ್ಕಾರ ಮುಂದಾಗಿದೆ. ವಿಧಾನಸೌಧದಲ್ಲಿ ನಡೆದ ವಿಧಾನಮಂಡಲ ಸಂಸ್ಥೆಗಳ ಸಭೆಯಲ್ಲಿ ಈ ವಿಷಯ ಪ್ರಸ್ತಾಪವಾಗಿದೆ. ಸಭೆಯಲ್ಲಿ ಮುಖ್ಯಮಂತ್ರಿ, ವಿಧಾನ ಸಭಾಧ್ಯಕ್ಷ ಹಾಗೂ ವಿಧಾನಸಭೆಯ ಕಾರ್ಯದರ್ಶಿ ಇದ್ದರು.

ಬಾಲಬ್ರೂಯಿ ಜಾಗದಲ್ಲಿ ಕಾನ್‌ಸ್ಟಿಟ್ಯೂಷನ್ ಕ್ಲಬ್ ಮಾಡುವ ಪ್ರಸ್ತಾವವನ್ನು ವಿಧಾನ ಪರಿಷತ್ ಸದಸ್ಯರೊಬ್ಬರು ಸರ್ಕಾರಕ್ಕೆ ಸಲ್ಲಿಸಿದ್ದರು. ಈ ಬಗ್ಗೆ ಸಭೆಯಲ್ಲಿ ಚರ್ಚೆ ನಡೆದಿದ್ದು, ಕ್ಲಬ್ ಮಾಡಲು ಸಹಮತ ವ್ಯಕ್ತವಾಗಿದೆ ಎಂದು ಸರ್ಕಾರದ ಉನ್ನತ ಮೂಲಗಳು ತಿಳಿಸಿವೆ.

ಆದರೆ ತನ್ನ ವ್ಯಾಪ್ತಿಯಲ್ಲಿರುವ ಈ ಕಟ್ಟಡವನ್ನು ಕ್ಲಬ್ ಮಾಡಲು ಅವಕಾಶ ಇಲ್ಲ ಎಂದು ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಡಿಪಿಎಆರ್) ಸ್ಪಷ್ಟ ಅಭಿಪ್ರಾಯ ನೀಡಿದೆ. ಈ ಪ್ರಸ್ತಾವದ ವಿರುದ್ಧ ಹಿಂದೊಮ್ಮೆ ಹೈಕೋರ್ಟ್‌ನಲ್ಲಿ ಸಾರ್ವಜನಿಕ ಹಿತಾಸಕ್ತಿ ಅರ್ಜಿ ಸಲ್ಲಿಕೆ ಆಗಿತ್ತು. ಆಗ ಕ್ಲಬ್ ಮಾಡುವ ಉದ್ದೇಶ ಇಲ್ಲ ಎಂದು ಕೋರ್ಟ್‌ಗೆ ಸರ್ಕಾರ ಮಾಹಿತಿ ನೀಡಿತ್ತು ಎಂದು ಮೂಲಗಳು ಹೇಳಿವೆ.

ಹದಿನಾಲ್ಕು ಎಕರೆ ಪ್ರದೇಶದಲ್ಲಿರುವ ಬಾಲಬ್ರೂಯಿ ಬೆಂಗಳೂರಿನ ಪ್ರಮುಖ ಪಾರಂಪರಿಕ ಕಟ್ಟಡಗಳಲ್ಲಿ ಒಂದು. ರಾಜ್ಯ ಸರ್ಕಾರಿ ಒಡೆತನದಲ್ಲಿರುವ ಈ ಕಟ್ಟಡದಲ್ಲಿ ನೊಬೆಲ್ ಪುರಸ್ಕೃತ

ರವೀಂದ್ರನಾಥ ಟ್ಯಾಗೋರ್, ಮಾಜಿ ಪ್ರಧಾನಿ ಜವಾಹರಲಾಲ್ ನೆಹರೂ ತಂಗಿದ್ದ ದಾಖಲಾಗಿದೆ. ಸ್ವಾತಂತ್ರ್ಯ ಪೂರ್ವದಲ್ಲಿ ಹಲವು ಗಣ್ಯರು ಈ ಕಟ್ಟಡದಲ್ಲಿ ತಂಗಿದ್ದರು.

ಮುಖ್ಯಮಂತ್ರಿ ದೇವರಾಜ ಅರಸು ಅವರಿಗೆ ಈ ಬಂಗಲೆಯೇ ಅಧಿಕೃತ ನಿವಾಸವಾಗಿತ್ತು. 1850ರಲ್ಲಿ ಬೆಂಗಳೂರಿನ ಮುಖ್ಯ ಕಮೀಷನರ್ ಆಗಿದ್ದ ಲಾರ್ಡ್ ಕಬ್ಬನ್ ಅವರ ಅಧಿಕೃತ ನಿವಾಸವಾಗಿದ್ದ ಹೆಗ್ಗಳಿಕೆಯೂ ಈ ಕಟ್ಟಡಕ್ಕೆ ಇದೆ. ಕುಮಾರಕೃಪದ ನಂತರ ಅತಿ ಹೆಚ್ಚು ಬೇಡಿಕೆ ಇರುವ ಈ ಅತಿಥಿಗೃಹ ಇಂದಿಗೂ ಸರ್ಕಾರಿ ಗಣ್ಯರಿಗೆ ವಸತಿ ನೀಡುತ್ತಿದೆ.

ಈ ಕಟ್ಟಡದಲ್ಲಿ ಸದ್ಯ ಡಿಜಿ ಹಳ್ಳಿ ಕೆಲ ಹಳ್ಳಿ ಪ್ರಕರಣ ತನಿಖೆ ನಡೆಸುವ ತಂಡ ಕಾರ್ಯನಿರ್ವಹಿಸುತ್ತಿದೆ. ಈ ಕಟ್ಟಡದ ಹಿಂಭಾಗದಲ್ಲಿ ಮುಖ್ಯ ಕಾರ್ಯದರ್ಶಿಯವರ ಅಧಿಕೃತ ನಿವಾಸವಿದೆ. ಇದೇ ಕಟ್ಟಡವನ್ನು ಶಾಸಕರ ಸಂವಿಧಾನ ಕ್ಲಬ್ ಆಗಿ ಪರಿವರ್ತಿಸುವ ಚರ್ಚೆ 15 ವರ್ಷಗಳಿಂದ ಚಾಲ್ತಿಯಲ್ಲಿದೆ.

ವಿಧಾನಸಭಾಧ್ಯಕ್ಷರಾಗಿ ಈ ಹಿಂದೆ ಕೆಲಸ ಮಾಡಿದ ಎಂ.ವಿ.ವೆಂಕಟಪ್ಪ, ಕೆ.ಆರ್.ರಮೇಶ್ ಕುಮಾರ್, ಕೃಷ್ಣ, ಜಗದೀಶ ಶೆಟ್ಟರ್, ಕೆ.ಜಿ.ಬೋಪಯ್ಯ, ಕಾಗೋಡು ತಿಮ್ಮಪ್ಪ, ಕೆ.ಬಿ.ಕೋಳಿವಾಡ ಅವರ ಅಧ್ಯಕ್ಷತೆಯಲ್ಲಿ ಬಾಲಬ್ರೂಯಿ ಅತಿಥಿ ಗೃಹದಲ್ಲಿ ಕ್ಲಬ್ ಸ್ಥಾಪಿಸುವ ಕುರಿತಂತೆ ಸಾಕಷ್ಟು ಸಭೆಗಳು ನಡೆದಿದ್ದವು. ಅದಕ್ಕೆ ಸಾರ್ವಜನಿಕರಿಂದ ತೀವ್ರ ವಿರೋಧ ವ್ಯಕ್ತವಾಗಿದ್ದರಿಂದ ಅದನ್ನು ಕೈಬಿಟ್ಟು ಕಾರ್ಲ್‌ಟನ್ ಭವನದಲ್ಲಿ ಕ್ಲಬ್ ಸ್ಥಾಪಿಸಲು ನಿರ್ಧರಿಸಲಾಗಿತ್ತು. ನಂತರ ಈ ಯೋಜನೆ ನೆನೆಗುದಿಗೆ ಬಿದ್ದಿತ್ತು.

ಆಧಾರ:ಪ್ರಜಾವಾಣಿ, ದಿನಾಂಕ:21.09.2021

## 90. 5 ವಿಧೇಯಕಗಳಿಗೆ ಪರಿಷತ್ ಅಸ್ತು

ಕೈದಿಗಳ ಸ್ಥಿತಿಗತಿ ಸುಧಾರಿಸುವ ಕರ್ನಾಟಕ ಬಂಧೀಖಾನೆ ಅಭಿವೃದ್ಧಿ ಮಂಡಳಿ ವಿಧೇಯಕ, ಜಿಲ್ಲಾ ಮತ್ತು ತಾಲ್ಲೂಕು ನ್ಯಾಯಾಲಯಗಳಲ್ಲಿ ಕೈದಿಗಳನ್ನು ವಿಡಿಯೋ ಕಾನ್ಫರೆನ್ಸ್ ಮೂಲಕ ಹಾಜರುಪಡಿಸಲು ಅವಕಾಶ ನೀಡುವ ದಂಡ ಪ್ರಕ್ರಿಯೆ ಸಂಹಿತೆ ಕರ್ನಾಟಕ ತಿದ್ದುಪಡಿ ವಿಧೇಯಕ ಸೇರಿದಂತೆ ವಿಧಾನಸಭೆಯಲ್ಲಿ ಅಂಗೀಕಾರವಾಗಿದ್ದ ಐದು ವಿಧೇಯಕಗಳಿಗೆ ಪರಿಷತ್ ಅನುಮೋದನೆ ನೀಡಿತು.

ಆ ಪೈಕಿ ಕೃಷಿ ಸಂಬಂಧಿ ಕೀಟಗಳು ಮತ್ತು ರೋಗಗಳ ತಿದ್ದುಪಡಿ, ಬಂಧಿಗಳ ಗುರುತಿಸುವಿಕೆ (ಕರ್ನಾಟಕ ತಿದ್ದುಪಡಿ) ವಿಧೇಯಕ ಮತ್ತು ದಂಡ ಪ್ರಕ್ರಿಯಾ ಸಂಹಿತೆ (ಕರ್ನಾಟಕ ತಿದ್ದುಪಡಿ) ಮೂರು ವಿಧೇಯಕಗಳು ಚರ್ಚೆ ಇಲ್ಲದೆ ಅಂಗೀಕಾರಗೊಂಡವು.

ಆಧಾರ:ಪ್ರಜಾವಾಣಿ, ದಿನಾಂಕ:21.09.2021

## 91. ಸ್ಪೀಕರ್ ನಿಲುವಿನ ವಿರುದ್ಧ ಧರಣಿ

ನಿಯಮ 69ರಡಿ ಸಲ್ಲಿಸಿದ ನಿಲುವಳಿ ಸೂಚನೆಯಡಿ ಚರ್ಚೆಗೆ ಅವಕಾಶ ನೀಡುವಂತೆ ಕೋರಿ ಜೆಡಿಎಸ್ ಸದಸ್ಯರು ಸದನದ ಬಾವಿಗಿಳಿದು ಧರಣಿ ನಡೆಸಿದ ಪ್ರಸಂಗ ವಿಧಾನಸಭೆಯಲ್ಲಿ ನಡೆಯಿತು. ಸದನ ಆರಂಭವಾಗುತ್ತಿದ್ದಂತೆ ಜೆಡಿಎಸ್‌ನ ಬಂಡೆಪ್ಪ ಕಾಶೆಂಪುರ, ಅಧಿವೇಶನ ಇನ್ನು ಐದು ದಿನವಷ್ಟೇ ಇದ್ದು, ಪಕ್ಷದ ವತಿಯಿಂದ ಸಲ್ಲಿಸಿರುವ ನಿಲುವಳಿ ಸೂಚನೆಯಡಿ ಚರ್ಚೆಗೆ ಅವಕಾಶ ನೀಡಬೇಕು ಎಂದು ಒತ್ತಾಯಿಸಿದರು. ಇದಕ್ಕೆ ಸಿಡಿಮಿಡಿಗೊಂಡ ಸ್ಪೀಕರ್, ನಾನು ಯಾವ ನಿರ್ಣಯ ಕೈಗೊಳ್ಳಬೇಕು ಎಂಬುದಕ್ಕೆ ಒತ್ತಡ ತಂತ್ರ ಬಳಸುವುದು ಸರಿಯಲ್ಲ ಎಂದು ಹೇಳಿದರು. ಇದಕ್ಕೆ ಸಮಾಧಾನಗೊಳ್ಳದ ಜೆಡಿಎಸ್ ಸದಸ್ಯರು ಧರಣಿ ನಡೆಸಿದರು.

ಆಧಾರ:ವಿಜಯ ಕರ್ನಾಟಕ, ದಿನಾಂಕ:21.09.2021

## 92. ಅತಿಥಿ ಉಪನ್ಯಾಸಕರ ಕಾಯಂಗೆ ಒತ್ತಾಯಿಸಿ ಜೆಡಿಎಸ್ ಸಭಾತ್ಯಾಗ

ಅತಿಥಿ ಉಪನ್ಯಾಸಕರನ್ನು ನಿಗದಿತ ಕಾಲಮಿತಿಯಲ್ಲಿ ಕಾಯಂಗೊಳಿಸಬೇಕೆಂದು ಹಾಗೂ ಕಾಯಂಗೊಳ್ಳುವವರೆಗೆ ಈಗಿರುವ ಗೌರವಧನವನ್ನು ಪರಿಷ್ಕರಿಸಬೇಕೆಂದು ಪಟ್ಟು ಹಿಡಿದ ಜೆಡಿಎಸ್ ಸದಸ್ಯರು ಸಭಾತ್ಯಾಗ ಮಾಡಿದ ಘಟನೆ ನಡೆಯಿತು. ಪ್ರಶ್ನೋತ್ತರ ವೇಳೆಯಲ್ಲಿ ಜೆಡಿಎಸ್‌ನ ಮರಿತಿಬ್ಬೇಗೌಡ, ಹಲವಾರು ವರ್ಷಗಳಿಂದ ಸೇವೆ ಸಲ್ಲಿಸುತ್ತಿರುವ ಅತಿಥಿ ಉಪನ್ಯಾಸಕರಿಗೆ ಅತ್ಯಂತ ಕಡಿಮೆ ಗೌರವಧನ ನೀಡಲಾಗುತ್ತಿದೆ. ಕುಟುಂಬ ನಿರ್ವಹಣೆ ಕೂಡ ಕಷ್ಟವಾಗುತ್ತಿದೆ. ಈ ಬಗ್ಗೆ ಹಲವು ಬಾರಿ ಸರ್ಕಾರದ ಗಮನಕ್ಕೆ ತಂದರೂ ಪ್ರಯೋಜನವಾಗಿಲ್ಲ. ನಿಗದಿತ ಕಾಲಾವಧಿಯಲ್ಲಿ ಅವರ ಸೇವೆಯನ್ನು ಕಾಯಂಗೊಳಿಸಬೇಕು. ಅಲ್ಲಿಯವರೆಗೂ ಗೌರವಧನವನ್ನು ಪರಿಷ್ಕರಿಸಬೇಕು ಎಂದು ಆಗ್ರಹಿಸಿದರು.

ಇದಕ್ಕೆ ಪ್ರತಿಕ್ರಿಯಿಸಿದ ಉನ್ನತ ಶಿಕ್ಷಣ ಸಚಿವರ ಡಾ:ಸಿ.ಎನ್.ಅಶ್ವತನಾರಾಯಣ, ನಿಜವಾಗಿಯೂ ಅತಿಥಿ ಉಪನ್ಯಾಸಕರು ಸಂಕಷ್ಟದಲ್ಲಿದ್ದಾರೆ. ಅವರ ಸಮಸ್ಯೆಗಳ ಬಗ್ಗೆ ಸರ್ಕಾರಕ್ಕೆ ಅರಿವಿದೆ. ಕೋವಿಡ್ ಸಂದರ್ಭದಲ್ಲೂ ಸರ್ಕಾರ ಸಾಕಷ್ಟು ನೆರವಾಗಿದೆ. ಅವರನ್ನು ಕಾಯಂಗೊಳಿಸುವುದು ಮತ್ತು ಗೌರವಧನ ಪರಿಷ್ಕರಣೆಗೆ ಸಂಬಂಧಿಸಿದಂತೆ ಪರಿಶೀಲಿಸಿ ಕ್ರಮ ಕೈಗೊಳ್ಳಲಾಗುವುದು ಎಂದು ಹೇಳಿದರು. ತೃಪ್ತರಾಗದ ಮರಿತಿಬ್ಬೇಗೌಡ ನೆರೆಯ ಐದಾರು ರಾಜ್ಯಗಳಲ್ಲಿ ಅತಿಥಿ ಉಪನ್ಯಾಸಕರನ್ನು ಕಾಯಂಗೊಳಿಸಿದ ಉದಾಹರಣೆಗಳಿವೆ. ಈ ಸಂಬಂಧದ ದಾಖಲೆಗಳೂ ನನ್ನ ಬಳಿ ಇದ್ದು, ಸಭಾಪತಿಗಳಿಗೆ ಅವುಗಳನ್ನು ನೀಡಲಾಗುವುದು. ಬರೀ ಪರಿಶೀಲನೆ ಅಥವಾ ಸೂಕ್ತ ಕ್ರಮದಂತಹ ಸಮಜಾಯಿಷಿಗಳಿಂದ ಸಮಸ್ಯೆ ಬಗೆಹರಿಯುವುದಿಲ್ಲ. ಕಾಯಂಗೊಳಿಸಲು ಮೂರು ತಿಂಗಳು ಬೇಕೇ, ಆರು ತಿಂಗಳು ಅಥವಾ ಆರು ವರ್ಷ ಬೇಕಾಗುತ್ತದೆಯೇ, ನಿರ್ದಿಷ್ಟ ಅವಧಿಯನ್ನು ನಿಗದಿಪಡಿಸಬೇಕು. ಅಲ್ಲಿಯವರೆಗೆ ಗೌರವಧನ ಹೆಚ್ಚಳ ಮಾಡಬೇಕು ಎಂದು ಪಟ್ಟು ಹಿಡಿದರು. ಆಗ ಸಚಿವರು ಈ ಬಗ್ಗೆ ಪರಿಶೀಲಿಸಿ ಅಧಿಕಾರಿಗಳೊಂದಿಗೆ ಚರ್ಚಿಸಲಾಗುವುದು ಎಂದು ಪುನರುಚ್ಚರಿಸಿದರು. ಬೇಸರಗೊಂಡ ಜೆಡಿಎಸ್ ಸದಸ್ಯರು ಸಭಾತ್ಯಾಗ ಮಾಡಿದರು.

ಆಧಾರ:ಉದಯವಾಣಿ, ದಿನಾಂಕ:21.09.2021

## 93. ಮೇಲ್ಮನೆಯಲ್ಲಿ ಪ್ರತಿಧ್ವನಿಸಿದ ಶಿಶು ಮಾರಾಟ ಪ್ರಕರಣ

ವಿಜಯಪುರ ಜಿಲ್ಲಾ ಆಸ್ಪತ್ರೆಯಲ್ಲಿ ನಡೆದ ಹೆಣ್ಣು ಶಿಶು ಮಾರಾಟ ಪ್ರಕರಣವು ಮೇಲ್ಮನೆಯಲ್ಲಿ ಪ್ರತಿಧ್ವನಿಸಿತು. ಪ್ರಕರಣದ ಸಂಬಂಧ ವಿಶೇಷ ವರದಿ ತರಿಸಿ ಸದನಕ್ಕೆ ಸಲ್ಲಿಸುವುದಾಗಿ ಗೃಹ ಸಚಿವರು ತಿಳಿಸಿದರು.

ಶೂನ್ಯ ವೇಳೆಯಲ್ಲಿ ವಿಷಯ ಪ್ರಸ್ತಾಪಿಸಿದ ಕಾಂಗ್ರೆಸ್‌ನ ಯು.ಬಿ.ವೆಂಕಟೇಶ್ ವಿಜಯಪುರ ಜಿಲ್ಲಾ ಆಸ್ಪತ್ರೆಯಲ್ಲಿ ಐದು ಸಾವಿರ ರೂ.ಗೆ ಶಿಶು ಮಾರಾಟ ಮಾಡಲಾಗಿದೆ. ಇದರಲ್ಲಿ ಆಸ್ಪತ್ರೆ ಸಿಬ್ಬಂದಿ ಕೂಡ ಶಾಮೀಲಾಗಿರುವ ಶಂಕೆ ವ್ಯಕ್ತವಾಗಿದೆ. ಶೋಷಿತ ಸಮುದಾಯದ ಹೆಣ್ಣು ಶಿಶುವಿನ ಮಾರಾಟ ಆಗಿದ್ದು ಅಧಿಕಾರಿಗಳು ಈ ಪ್ರಕರಣವನ್ನು ಮುಚ್ಚಿಹಾಕಲು ಯತ್ನಿಸಿದ್ದಾರೆ ಎಂದು ಆಕ್ರೋಶ ವ್ಯಕ್ತಪಡಿಸಿದರು.

ಪ್ರಕರಣ ನಡೆದಿರುವುದು ನಿಜ ಎಂದು ಸ್ವತಃ ಅಲ್ಲಿನ ಜಿಲ್ಲಾಧಿಕಾರಿಗಳು ಒಪ್ಪಿಕೊಂಡಿದ್ದಾರೆ. ಆದರೆ ಜಿಲ್ಲಾ ವೈದ್ಯಾಧಿಕಾರಿಗಳು ಇದಕ್ಕೆ ವ್ಯತಿರಿಕ್ತ ಹೇಳಿಕೆ ನೀಡುತ್ತಿದ್ದಾರೆ. ಇದು ಹಲವು ಅನುಮಾನಗಳಿಗೆ ಎಡೆಮಾಡಿಕೊಟ್ಟಿದೆ ಎಂದು ಹೇಳಿದರು. ಇದಕ್ಕೆ ದನಿಗೂಡಿಸಿದ ಪ್ರತಿಪಕ್ಷ ನಾಯಕರು ವಿಜಯಪುರ ಜೊತೆಗೆ ಯಾದಗಿರಿ, ಕಲಬುರಗಿ ಸುತ್ತ ಬಾಲಕಿಯರ ಮಾರಾಟ ಪ್ರಕರಣ ಕೂಡ ಬೆಳಕಿಗೆ ಬಂದಿವೆ. ಸರ್ಕಾರ ಯಾವುದೇ ಕ್ರಮ ಕೈಗೊಂಡಿಲ್ಲ. ಈ ನಿಟ್ಟಿನಲ್ಲಿ ಸಂಪೂರ್ಣ ವಿಫಲವಾಗಿದೆ ಎಂದು ತರಾಟೆಗೆ ತೆಗೆದುಕೊಂಡರು. ಆಗ ಪ್ರತಿಕ್ರಿಯಿಸಿದ ಗೃಹ ಸಚಿವರು ಪ್ರಕರಣಕ್ಕೆ ಸಂಬಂಧಿಸಿದಂತೆ ವಿಶೇಷ

ವರದಿ ತರಿಸಿಕೊಂಡು ಸದನಕ್ಕೆ ಸಲ್ಲಿಸಲಾಗುವುದು ಎಂದು ಹೇಳಿದರು. ಶಿಶು ಮಾರಾಟ ಪ್ರಕರಣವನ್ನು ಉದಯವಾಣಿ ಬೆಳಕಿಗೆ ತಂದಿತ್ತು.

ಆಧಾರ:ಉದಯವಾಣಿ, ದಿನಾಂಕ:21.09.2021

## 94. ಜೈಲುಗಳ ಅಭಿವೃದ್ಧಿ ಮಂಡಳಿ ರಚನೆ ಮಸೂದೆ ಪಾಸ್

ವಿಧಾನಸಭೆಯಲ್ಲಿ ಅಂಗೀಕಾರವಾಗಿದ್ದ ಕರ್ನಾಟಕ ಬಂಧೀಖಾನೆ ಅಭಿವೃದ್ಧಿ ಮಂಡಳಿ ವಿಧೇಯಕ 2021ಕ್ಕೆ ವಿಧಾನಪರಿಷತ್‌ನಲ್ಲಿ ಅಂಗೀಕಾರ ದೊರಕಿತು. ವಿಧೇಯಕ ಮಂಡಿಸಿದ ಗೃಹ ಸಚಿವರು ಮಾತನಾಡಿ, ಬಂಧೀಖಾನೆಯ ಮಾನವ ಸಂಪನ್ಮೂಲವನ್ನು ರಾಷ್ಟ್ರೀಯ ಸಂಪನ್ಮೂಲವಾಗಿ ರೂಪಿಸುವುದು ಈ ಮಂಡಳಿಯ ಪ್ರಮುಖ ಉದ್ದೇಶವಾಗಿದೆ ಎಂದರು. ಬಂಧೀಖಾನೆ ಉದ್ಯಮಗಳ ವಿಸ್ತರಣೆ ಕೈದಿಗಳ ಕಲ್ಯಾಣಕ್ಕೆ ಈ ಮಂಡಳಿ ಸಹಕಾರಿ, ಶಿಕ್ಷೆ ಮುಗಿಸಿ ಹೊರಬರುವ ಕೈದಿಗಳು ಮುಂದಿನ ಜೀವನ ಕಟ್ಟಿಕೊಳ್ಳಲು ಅನುವಾಗುವಂತೆ ಉದ್ಯೋಗ ಆಧಾರಿತ ತಾಂತ್ರಿಕ ಕಾರ್ಯಕ್ರಮಗಳನ್ನು ರೂಪಿಸಲಾಗುವುದು. ಬಂಧೀಖಾನೆಗಳ ಹಾಲಿ ಉದ್ಯಮಗಳನ್ನು ವಿಸ್ತರಿಸಿ ಆದಾಯಗಳಿಸಲು ಒತ್ತು ನೀಡುವುದಾಗಿ ಹೇಳಿದರು.

ಆಧಾರ:ಕನ್ನಡ ಪ್ರಭ, ದಿನಾಂಕ:21.09.2021

## 95. ಮಳೆ ನೀರು ಕೊಯ್ಲು ಕಡ್ಡಾಯ ವಿಧೇಯಕ ಪಾಸ್

ನಗರದಲ್ಲಿ ಕಾವೇರಿ ನೀರಿನ ಅವಲಂಬನೆ ಕಡಿಮೆ ಮಾಡುವುದು ಮಳೆ ನೀರು ಪೋಲಾಗುವುದನ್ನು ತಪ್ಪಿಸುವ ನಿಟ್ಟಿನಲ್ಲಿ 1200 ಚದರ ಅಡಿಗಿಂತ ಹೆಚ್ಚಿನ ನಿವೇಶನದಲ್ಲಿ ನಿರ್ಮಿಸುವ ಕಟ್ಟಡಗಳಿಗೆ ಮಳೆ ನೀರು ಕೊಯ್ಲು ಅಳವಡಿಕೆಗಾಗಿ ರೂಪಿಸಿರುವ ಬೆಂಗಳೂರು ನೀರು ಸರಬರಾಜು ಮತ್ತು ಗ್ರಾಮ ಸಾರ ಚರಂಡಿ ವ್ಯವಸ್ಥೆ (ತಿದ್ದುಪಡಿ) ವಿಧೇಯಕ 2021ಕ್ಕೆ ವಿಧಾನಪರಿಷತ್ತಿನಲ್ಲಿ ಅಂಗೀಕಾರ ನೀಡಲಾಯಿತು.

ವಿಧಾನಸಭೆಯಲ್ಲಿ ಅಂಗೀಕಾರ ಪಡೆದಿದ್ದ ಸದರಿ ತಿದ್ದುಪಡಿ ವಿಧೇಯಕವನ್ನು ವಿಧಾನಪರಿಷತ್ ಸಭಾ ನಾಯಕ ಅವರು ಮುಖ್ಯಮಂತ್ರಿಗಳ ಪರವಾಗಿ ಸದನದಲ್ಲಿ ಅಂಗೀಕಾರಕ್ಕೆ ಮಂಡಿಸಿದರು. ಈ ವೇಳೆ ವಿರೋಧ ಪಕ್ಷದ ನಾಯಕರು ಹಾಗೂ ಸದಸ್ಯರಾದ ಭೋಜೇಗೌಡ, ತಿಪ್ಪೇಸ್ವಾಮಿ, ನಾರಾಯಣಸ್ವಾಮಿ, ಯು.ಬಿ.ವೆಂಕಟೇಶ್, ಅಪ್ಪಾಜಿಗೌಡ, ಮರಿತಿಬ್ಬೇಗೌಡ ಸೇರಿದಂತೆ ಹಲವು ಸದಸ್ಯರು ಸದರಿ ವಿಧೇಯಕವನ್ನು ಸ್ವಾಗತಿಸಿದರು.

ಅಂತೆಯೇ ಈ ಮಳೆ ನೀರು ಕೊಯ್ಲು ವ್ಯವಸ್ಥೆಯನ್ನು ಕೇವಲ ಖಾಸಗಿ ಕಟ್ಟಡಗಳು ಮಾತ್ರವಲ್ಲದೆ ಸರ್ಕಾರಿ ಕಟ್ಟಡಗಳಿಗೂ ಕಡ್ಡಾಯಗೊಳಿಸಬೇಕು. ಬೆಂಗಳೂರಿಗೆ ಮಾತ್ರ ಸೀಮಿತಗೊಳಿಸಿದೇ ಜಿಲ್ಲೆ, ತಾಲ್ಲೂಕು, ಗ್ರಾಮ ಪಂಚಾಯಿತಿ ಸೇರಿದಂತೆ ಸ್ಥಳೀಯ ಸಂಸ್ಥೆಗಳ ಮಟ್ಟಕ್ಕೂ ವಿಸ್ತರಿಸಬೇಕು ಎಂದು ಸಲಹೆ ನೀಡಿದರು.

ಈ ವೇಳೆ ಮಾತನಾಡಿದ ಕೋಟ ಶ್ರೀನಿವಾಸ ಪೂಜಾರಿ ಅವರು ಈ ತಿದ್ದುಪಡಿ ವಿಧೇಯಕ ಅನ್ವಯ 1200 ಚದರ ಅಡಿಗಿಂತ ಹೆಚ್ಚಿನ ನಿವೇಶನದಲ್ಲಿ ನಿರ್ಮಿಸಲಾಗುವ ಕಟ್ಟಡಗಳಿಗೆ ಹೆಚ್ಚಿನ ನಿವೇಶನದಲ್ಲಿ ನಿರ್ಮಿಸಲಾಗುವ ಕಟ್ಟಡಗಳಿಗೆ ಮಳೆ ನೀರು ಕೊಯ್ಲು ಅಳವಡಿಕೆ ಕಡ್ಡಾಯಗೊಳಿಸಲಾಗಿದೆ. ಈಗಾಗಲೇ ಬೆಂಗಳೂರು ನಗರದಲ್ಲಿ 1.50 ಲಕ್ಷ ಕಟ್ಟಡಗಳಿಗೆ ಜನರು ಮಳೆ ನೀರು ಕೊಯ್ಲು ಅಳವಡಿಸಿಕೊಂಡಿದ್ದಾರೆ. ಬೆಂಗಳೂರು ಜಲ ಮಂಡಳಿಯಿಂದ ಮಳೆ ನೀರು ಕೊಯ್ಲು ಬಗ್ಗೆ ಸಾರ್ವಜನಿಕರಿಗೆ ಮಾಹಿತಿ ನೀಡಲು ವ್ಯವಸ್ಥೆ ಕಲ್ಪಿಸಲಾಗಿದೆ ಎಂದರು.

ಆಧಾರ:ಕನ್ನಡ ಪ್ರಭ, ದಿನಾಂಕ:21.09.2021

## 96. ಕಾಂಗ್ರೆಸ್ ಕಾಲದಲ್ಲಿ ಶೇ.60ರಷ್ಟು ಬೆಲೆ ಏರಿತ್ತು

ಬೆಲೆ ಏರಿಕೆ ನಿರಂತರ ಪ್ರಕ್ರಿಯೆ, ಯುಪಿಎ ಕಾಲದಲ್ಲೂ ಆಗಿತ್ತು. ಈಗಲೂ ಆಗಿದೆ, ಆದರೆ ಕೋವಿಡ್‌ನಂತಹ ಸಂಕಷ್ಟ ಪರಿಸ್ಥಿತಿ ಸಮರ್ಥವಾಗಿ ನಿಭಾಯಿಸಿ ದೇಶವನ್ನು ಸದೃಢ ಮಾಡಿದ ಕೀರ್ತಿ ಪ್ರಧಾನಿ ಅವರದು ಎಂದು ಬಸವರಾಜ ಬೊಮ್ಮಾಯಿ ಹೇಳಿದ್ದಾರೆ.

ಬೆಲೆ ಏರಿಕೆ ಕುರಿತ ಚರ್ಚೆಗೆ ಸರ್ಕಾರದ ಪರವಾಗಿ ಉತ್ತರಿಸಿ, 1973 ರಿಂದ 2021ರ ವರೆಗಿನ ಅಂಕಿ–ಅಂಶ ವಿವರಿಸಿ ಕಾಂಗ್ರೆಸ್ ಸರ್ಕಾರದ ಅವಧಿಯಲ್ಲಿ ಶೇ.60 ರಷ್ಟು ಬೆಲೆ ಹೆಚ್ಚಿಸಲಾಗಿದೆ. ಬಿಜೆಪಿ ಸಕಾರದ ಅವಧಿಯಲ್ಲಿ ಶೇ.30 ರಷ್ಟು ಏರಿಕೆಯಾಗಿದೆ. ಹೀಗಾಗಿ ನಮಗಿಂತ ಹೆಚ್ಚಿನ ಪ್ರಮಾಣದಲ್ಲಿ ದರ ಏರಿಸಿದ್ದು ನಿಮ್ಮ ಅವಧಿಯಲ್ಲಿ ಎಂದು ತಿರುಗೇಟು ನೀಡಿದರು.

ರೈತರು ಬೆಳೆದ ಭತ್ತ, ಗೋಧಿ, ಜೋಳ, ಬೇಳೆ ಸೇರಿದಂತೆ ಆಹಾರ ಧಾನ್ಯಗಳ ಬೆಂಬಲ ಬೆಲೆ ಹೆಚ್ಚಿಸಲಾಗಿದೆ. ಜೊತೆಗೆ ಯುಪಿಎ ಸರ್ಕಾರದ ಅವಧಿಗಿಂತ ಐದಾರು ಪಟ್ಟು ಹೆಚ್ಚು ಖರೀದಿಸಲಾಗಿದೆ. ಪ್ರಧಾನ ಮಂತ್ರಿ ಗರೀಬ್ ಕಲ್ಯಾಣ್ ಯೋಜನೆಯಡಿ ಕೋಟ್ಯಂತರ ಬಡವರಿಗೆ ಆಹಾರ ಧಾನ್ಯ ನೀಡಿದೆ. ಇದೆಲ್ಲವು ಸಾಧನೆಯಲ್ಲವೇ ಎಂದು ಪ್ರಶ್ನಿಸಿದರು.

**ಮೋದಿ ಹತ್ತಿರಕ್ಕೂ ಹೋಗಲ್ಲ:** ತೈಲ ಉತ್ಪನ್ನಗಳ ಮೇಲೆ ಅಬಕಾರಿ ಸುಂಕ ಕಾಂಗ್ರೆಸ್ ಅವಧಿಯಲ್ಲೂ ಹಾಕಲಾಗಿದೆ. ರೂ.36 ಲಕ್ಷ ಕೋಟಿ ಸಂಗ್ರಹದಲ್ಲಿ ರಾಜ್ಯಗಳಿಗೆ ಶೇ.40 ರಷ್ಟು ಹಂಚಿಕೆ ಮಾಡಲಾಗಿದೆ. ಎಲ್ಲವೂ ಕೇಂದ್ರ ಸರ್ಕಾರವೇ ಇಟ್ಟುಕೊಂಡಿಲ್ಲ. ಯುಪಿಎ ಅವಧಿಯಲ್ಲಿ ದಿನಕ್ಕೆ 2 ಕಿ.ಮೀ. ರಸ್ತೆ ನಿರ್ಮಾಣವಾಗುತ್ತಿತ್ತು. ಇಂದು 34 ಕಿ.ಮೀ. ರಸ್ತೆ ನಿರ್ಮಾಣವಾಗುತ್ತಿದೆ. ಭಾರತವನ್ನು ಜಗತ್ತಿನಲ್ಲಿ ಸರ್ವಶಕ್ತಿ ರಾಷ್ಟ್ರ ಮಾಡುವ ನಿಟ್ಟಿನಲ್ಲಿ ಪ್ರಧಾನಿ ಅವರು ಶ್ರಮಿಸುತ್ತಿದ್ದು ಅವರ ಹತ್ತಿರಕ್ಕೂ ಹೋಗಲು ಕಾಂಗ್ರೆಸ್ ನಾಯಕರಿಲ್ಲ ಎಂದು ಛೇಡಿಸಿದರು.

**ಸಭಾತ್ಯಾಗ:**ಬೆಲೆ ಏರಿಕೆಯಿಂದ ಕೋಟ್ಯಂತರ ಜನರು ಸಂಕಷ್ಟಕ್ಕೊಳಗಾಗಿದ್ದರೂ ಏನೂ ಆಗಿಯೇ ಇಲ್ಲ ಎಂಬಂತೆ ಮುಖ್ಯಮಂತ್ರಿ ಉತ್ತರ ಕೊಟ್ಟಿದ್ದಾರೆ. ಇದನ್ನು ಖಂಡಿಸಿ ಸಭಾತ್ಯಾಗ ಮಾಡುತ್ತೇವೆ ಎಂದು ಸಿದ್ದರಾಮಯ್ಯ ಹೇಳಿ ಕಾಂಗ್ರೆಸ್ ಸದಸ್ಯರ ಜೊತೆ ಹೊರ ನಡೆದರು. ಕಾಂಗ್ರೆಸ್ ಸದಸ್ಯರು ಬಿಜೆಪಿ ಸರ್ಕಾರದ ವಿರುದ್ಧ ಘೋಷಣೆಗಳನ್ನು ಕೂಗಿದರು.

ಆಧಾರ:ಪ್ರಜಾವಾಣಿ, ದಿನಾಂಕ:21.09.2021

## 97. ಸಿಎಂ ಮಾತಿಗೆ ಕೈ ಆಕ್ರೋಶ

ದೆಹಲಿಯಲ್ಲಿ ಪಂಜಾಬ್ ಮತ್ತು ಹರಿಯಾಣ ರೈತರು ನಡೆಸುತ್ತಿರುವ ಪ್ರತಿಭಟನೆ–ಧರಣಿ ಪ್ರಾಯೋಜಿತ ಎಂದು ಬಸವರಾಜ ಬೊಮ್ಮಾಯಿ ಹೇಳಿದ ಮಾತು ತೀವ್ರ ಕೋಲಾಹಲಕ್ಕೆ ಕಾರಣವಾಯಿತು. ಬೆಲೆ ಏರಿಕೆ ಕುರಿತ ಚರ್ಚೆಗೆ ಉತ್ತರಿಸುವ ಸಂದರ್ಭದಲ್ಲಿ ರೈತರು ನಡೆಸುತ್ತಿರುವ ಧರಣಿ ಪ್ರಾಯೋಜಿತ. ಅದು ಎಲ್ಲರಿಗೂ ಗೊತ್ತಿರುವ ವಿಚಾರ ಎಂದು ಹೇಳಿದರು. ಇದರಿಂದ ಕೆರಳಿದ ಡಿ.ಕೆ.ಶಿವಕುಮಾರ್, ತಕ್ಷಣ ಮುಖ್ಯಮಂತ್ರಿಯವರು ರೈತರ ಕ್ಷಮೆ ಕೇಳಬೇಕು ಎಂದು ಆಗ್ರಹಿಸಿದರು. ಕಾಂಗ್ರೆಸ್ ಸದಸ್ಯರು ಧ್ವನಿಗೂಡಿಸಿದರು. ಮಾಜಿ ಸ್ಪೀಕರ್ ಕೆ.ಆರ್.ರಮೇಶ್ ಕುಮಾರ್, ಅದು ಪ್ರಾಯೋಜಿತ ಎಂಬುದು ನಿಮ್ಮ ಅಭಿಪ್ರಾಯ ಅಲ್ಲವೇ, ನಾನು ಆಕ್ಷೇಪ ಮಾಡಲ್ಲ, ಆದರೆ ಯಾರ ಪ್ರಾಯೋಜಿತ ಎಂದು ಹೇಳಿ ಎಂದರು. ಆಗ ಮುಖ್ಯಮಂತ್ರಿಯವರು ನೀವು ಏನು ಸಂದೇಶ ರವಾನಿಸಲು ಬಯಸುವಿರಿ ಎಂಬುದು ಗೊತ್ತಿದೆ. ಹಿಂದೆ ಕಾಂಗ್ರೆಸ್ ಅಧಿಕಾರದಲ್ಲಿದ್ದಾಗ ಏನೇ ಆದರೂ ವಿದೇಶಿ ಕೈವಾಡ ಎಂದು ಹೇಳುತ್ತಿದ್ದರು. ಆದರೆ, ಈಗ ವಿದೇಶಿಗರ ಏಜೆಂಟರೇ ಇಲ್ಲಿದ್ದಾರೆ ಎಂದು ಹೇಳಿದರು. ಬಿಜೆಪಿ ಸದಸ್ಯರು ಕಾಂಗ್ರೆಸ್ ಪ್ರಾಯೋಜಿತ ಎಂದು ಘೋಷಣೆ ಕೂಗಿದರು. ಪ್ರತಿಪಕ್ಷ

ನಾಯಕರು ರೈತರ ಪ್ರತಿಭಟನೆಯನ್ನು ಪ್ರಾಯೋಜಿತ ಎಂದು ಮುಖ್ಯಮಂತ್ರಿ ಸ್ಥಾನದಲ್ಲಿ ಹೇಳುವುದು ಶೋಭೆ ತರುವುದಿಲ್ಲ ಎಂದು ಆಕ್ರೋಶ ವ್ಯಕ್ತಪಡಿಸಿದರು.

ಮುಖ್ಯಮಂತ್ರಿಯವರು ನನ್ನ ಮಾತಿಗೆ ನಾನು ಬದ್ಧ ಹಿಂದಕ್ಕೆ ಪಡೆಯುವ ಮಾತೇ ಇಲ್ಲ. ಅದು ಪ್ರಾಯೋಜಿತವೇ ಎಂದು ಸಮರ್ಥಿಸಿಕೊಂಡರು. ಇದಕ್ಕೆ ಕಾಂಗ್ರೆಸ್ ಸದಸ್ಯರು ಆಕ್ಷೇಪ ವ್ಯಕ್ತಪಡಿಸಿ ಸರ್ಕಾರದ ವಿರುದ್ಧ ಘೋಷಣೆ ಕೂಗಿದರು. ಇದರಿಂದ ಕೆಲಕಾಲ ಸದನದಲ್ಲಿ ಗದ್ದಲದ ವಾತಾವರಣ ನಿರ್ಮಾಣವಾಗಿತ್ತು.

ಆಧಾರ:ಉದಯವಾಣಿ, ದಿನಾಂಕ:21.09.2021

## 98. ನಾಯಕರ ಮಧ್ಯೆ ವಸತಿ ಜಗಳ

ಸೂರು ಕಲ್ಪಿಸುವಲ್ಲಿ ವಿಳಂಬ, ಅರ್ಧದಲ್ಲಿ ಸ್ಥಗಿತವಾಗುತ್ತಿರುವ ಕೆಲಸದ ಬಗ್ಗೆ ವಿಧಾನಸಭೆಯಲ್ಲಿ ವಿಸ್ತೃತ ಚರ್ಚೆ ನಡೆಯಿತು. ವಸತಿ ಯೋಜನೆಗಳ ಸ್ಥಗಿತ ಬಗ್ಗೆ ಅರ್ಧ ಗಂಟೆ ವಿಶೇಷ ಚರ್ಚೆಗೆ ಸ್ಪೀಕರ್ ರೂಲಿಂಗ್ ನೀಡಿದರು.

ಶರತ್ ಬಚ್ಚೇಗೌಡ ಪ್ರಶ್ನೆಗೆ ಉತ್ತರಿಸಿದ ವಿ.ಸೋಮಣ್ಣ ವಸತಿರಹಿತರು ಹಾಗೂ ನಿವೇಶನ ರಹಿತರಿಗೆ ಸೂಕ್ತ ಸೂರು ಕಲ್ಪಿಸಲು ಸರ್ಕಾರ ಒತ್ತು ನೀಡಿದೆ. ಹೊಸದಾಗಿ 4 ಲಕ್ಷ ಮನೆ ಮಂಜೂರಾಗಿದ್ದು, ಒಂದೂವರೆ ತಿಂಗಳಲ್ಲಿ ಆದೇಶ ಹೊರಡಿಸಲಾಗುವುದು ಎಂದರು.

ಅದಕ್ಕೆ ಕಾಂಗ್ರೆಸ್‌ನ ಡಿ.ಕೆ.ಶಿವಕುಮಾರ್ ಎಲ್ಲ ಕ್ಷೇತ್ರಗಳಲ್ಲಿ ಮನೆಗಳ ನಿರ್ಮಾಣ ಕಾರ್ಯ ಅರ್ಧಕ್ಕೆ ನಿಂತಿದೆ. ಸಿಎಂ ನಿಮಗೆ ಹಣ ನೀಡುತ್ತಿಲ್ಲವೇ. ಮೂರು ಬಾರಿ ವಸತಿ ಸಚಿವರಾಗಿರುವ ನೀವು ವಿಫಲರಾಗುತ್ತಿರುವುದು ಏಕೆ ಎಂದು ಪ್ರಶ್ನಿಸಿದರು. ಆಗ ಸೋಮಣ್ಣ ಮೈತ್ರಿ ಸರ್ಕಾರ ಒಟ್ಟು 18 ಲಕ್ಷ ಮನೆಗಳಿಗೆ ರೂ.29,000 ಕೋಟಿ ಅನುದಾನ ಒದಗಿಸುವುದಾಗಿ ಹೇಳಿತ್ತು. ಆ ಬಗ್ಗೆ ಹೆಚ್ಚಿನ ಚರ್ಚೆಗೆ ಹೋಗುವುದಿಲ್ಲ ಎಂದರು.

ಇದಕ್ಕೆ ದನಿಗೂಡಿಸಿದ ಪ್ರತಿಪಕ್ಷ ನಾಯಕರು 2018ರಲ್ಲಿ ಎಂ.ಟಿ.ಬಿ.ನಾಗರಾಜ್ ಅವರು ಸಚಿವರಾಗಿದ್ದಾಗ ಬಾದಾಮಿ ಕ್ಷೇತ್ರಕ್ಕೆ 7500 ಮನೆ ಮಂಜೂರಾಗಿತ್ತು. ಈವರೆಗೆ ಒಂದು ಮನೆ ನೀಡಿಲ್ಲ. ಬಹಳಷ್ಟು ಕಡೆ ಲಾಕ್ ಮಾಡಲಾಗಿದ್ದು, ಕೇಳಿದರೆ ಹಣವಿಲ್ಲ ಎನ್ನುತ್ತಿದ್ದಾರೆ. ಹಿಂದಿನ ಸಿಎಂ ಹಾಗೂ ಈಗಿನ ಸಿಎಂ ಜೊತೆ ನಿಮ್ಮ ಸಂಬಂಧ ಹೇಗೋ ಗೊತ್ತಿಲ್ಲ. ಪ್ರತಿಪಕ್ಷ ನಾಯಕನಿಗೆ ಒಂದು ಮನೆ ಕೊಟ್ಟಿಲ್ಲ ಎಂದು ದೂರಿದರು. ಐದು ವರ್ಷದಲ್ಲಿ 17 ಲಕ್ಷ ಮನೆ ನಿರ್ಮಾಣ ಗುರಿಯಿತ್ತು. ವರ್ಷಕ್ಕೆ 3 ಲಕ್ಷ ಮನೆ ನಿರ್ಮಿಸಲು ಚಿಂತಿಸಲಾಗಿತ್ತು. ವಸತಿ ಯೋಜನೆಗಳಲ್ಲಿ ಲೋಪಗಳಾಗಿದ್ದರೆ ತನಿಖೆ ನಡೆಸಲಿ ಎಂದು ಸಲಹೆ ನೀಡಿದರು.

ಆಧಾರ:ವಿಜಯ ಕರ್ನಾಟಕ, ದಿನಾಂಕ:21.09.2021

## 99. ಸಕ್ರಮ ಅರ್ಜಿ ಸ್ವೀಕಾರ, ಇತ್ಯರ್ಥ ಅವಧಿ ವಿಸ್ತರಣೆ

ಗ್ರಾಮೀಣ ಪ್ರದೇಶದ ಸರ್ಕಾರಿ ಭೂಮಿಯಲ್ಲಿ ಅನಧಿಕೃತವಾಗಿ ನಿರ್ಮಾಣಗೊಂಡಿರುವ ವಾಸದ ಮನೆಗಳ ಸಕ್ರಮ ಸಂಬಂಧ ಕರ್ನಾಟಕ ಭೂಕಂದಾಯ ಕಾಯಿದೆ ಕಲಂ 94ಸಿ ಅಡಿ ಅರ್ಜಿ ಸ್ವೀಕಾರ ಅವಧಿಯನ್ನು 2022ರ ಮಾರ್ಚ್ 22ರ ವರೆಗೆ ಹಾಗೂ ಅರ್ಜಿಗಳ ಇತ್ಯರ್ಥಕ್ಕೆ 2023ರ ಮಾರ್ಚ್ 31ರ ವರೆಗೆ ಅವಧಿ ವಿಸ್ತರಿಸಲಾಗಿದೆ ಎಂದು ಆರ್. ಅಶೋಕ್ ಹೇಳಿದರು.

ವಿಧಾನಸಭೆಯಲ್ಲಿ ಬಿಜೆಪಿಯ ಲಾಲಾಜಿ ಮೆಂಡನ್ ಪ್ರಶ್ನೆಗೆ ಉತ್ತರಿಸಿ 2015ರ ಜನವರಿ 1 ಕ್ಕೂ ಮೊದಲು ಗ್ರಾಮೀಣ ಪ್ರದೇಶದಲ್ಲಿ ಅನಧಿಕೃತವಾಗಿ ನಿರ್ಮಾಣವಾಗಿರುವ 30/40, 40/60 ಹಾಗೂ

50/80 ಅಡಿ ಅಳತೆಯ ವಾಸದ ಮನೆಗಳ ಸಕ್ರಮಕ್ಕೆ ಅವಕಾಶ ಕಲ್ಪಿಸಲಾಗಿದೆ. ಅರ್ಹ ಫಲಾನುಭವಿಗಳು 94ಸಿ ಅಡಿ ಅರ್ಜಿ ಸಲ್ಲಿಸುವ ಅವಧಿ ವಿಸ್ತರಿಸಲಾಗಿದ್ದು, ತ್ವರಿತ ವಿಲೇವಾರಿಗೂ ಆದೇಶಿಸಲಾಗಿದೆ ಎಂದು ಹೇಳಿದರು.

ಹಲವೆಡೆ ಅರಣ್ಯ ಭೂಮಿಗಳಲ್ಲೂ ಮನೆ ನಿರ್ಮಿಸಿಕೊಂಡಿದ್ದು 9 ಲಕ್ಷ ಹೆಕ್ಟೇರ್ ಪ್ರದೇಶವನ್ನು ಡೀಮ್ಡ್ ಅರಣ್ಯವೆಂದು ಅರಣ್ಯ ಇಲಾಖೆಗೆ ವರ್ಗಾಯಿಸಲಾಗಿದೆ. ಈ ಬಗ್ಗೆ ಹಿಂದೆಯೇ ಅರಣ್ಯ ಇಲಾಖೆಯೊಂದಿಗೆ ಚರ್ಚಿಸಲಾಗಿದ್ದು, 6 ಲಕ್ಷ ಹೆಕ್ಟೇರ್ ಡೀಮ್ಡ್ ಅರಣ್ಯ ಪ್ರದೇಶವನ್ನು ಕಂದಾಯ ಇಲಾಖೆಗೆ ನೀಡಲು ಅರಣ್ಯ ಇಲಾಖೆ ಒಪ್ಪಿದೆ. ಈ ಸಂಬಂಧ ಅರಣ್ಯ ಇಲಾಖೆ ಸುಪ್ರೀಂ ಕೋರ್ಟ್‌ಗೆ ಪ್ರಮಾಣ ಪತ್ರ ಸಲ್ಲಿಸಬೇಕಿದೆ ಎಂದು ತಿಳಿಸಿದರು.

ಹೊಸದಾಗಿ ಕಾಪು ತಾಲ್ಲೂಕು ರಚನೆಯಾಗಿದ್ದು, ಅಟಲ್‌ಜೀ ಜನಸ್ನೇಹಿ ಕೇಂದ್ರದ ತಂತ್ರಾಂಶದಲ್ಲಿನ ತಾಂತ್ರಿಕ ಸಮಸ್ಯೆಯಿಂದ ಕಾಪು ತಾಲ್ಲೂಕಿನಲ್ಲಿ ಅರ್ಜಿ ಸ್ವೀಕೃತಿ ಸಾಧ್ಯವಾಗದಿರುವುದು ಗಮನಕ್ಕೆ ಬಂದಿದೆ. ಸೆಪ್ಟೆಂಬರ್ 16ರಂದು ತಂತ್ರಾಂಶ ಸಮಸ್ಯೆ ನಿವಾರಣೆಯಾಗಿದೆ. ಅರ್ಜಿ ಸ್ವೀಕೃತಿಸಲಾಗುತ್ತಿದೆ ಎಂದು ಉತ್ತರಿಸಿದರು.

ಸ್ಪೀಕರ್ ಅವರು ಗ್ರಾಮೀಣ ಪ್ರದೇಶದ ಸರ್ಕಾರಿ ಭೂಮಿಯಲ್ಲಿ ಜನ ವಿಶಾಲವಾಗಿ ಮನೆ ಕಟ್ಟಿಕೊಂಡಿರುತ್ತಾರೆ. ಈಗ ಗುರುತಿಸಿರುವ ವಾಸದ ಮನೆ ಅಳತೆಯನ್ನು ಇನ್ನಷ್ಟು ವಿಸ್ತರಿಸುವತ್ತ ಚಿಂತಿಸಿ ಎಂದು ಸೂಚಿಸಿದರು. ಇದಕ್ಕೆ ಉತ್ತರಿಸಿದ ಆರ್.ಅಶೋಕ್ ಈ ವಿಚಾರದಲ್ಲಿ ಚೌಕಾಸಿ ಮಾಡದಂತೆ ಅಧಿಕಾರಿಗಳಿಗೆ ಸೂಚಿಸಲಾಗುವುದು ಎಂದು ಹೇಳಿದರು.

ಆಧಾರ:ವಿಜಯ ಕರ್ನಾಟಕ, ದಿನಾಂಕ:21.09.2021

## 100. ಭವಿಷ್ಯದಲ್ಲಿ ಕುಡಿವ ನೀರಿಗೆ ಹೊಡೆದಾಟ

ಮಳೆ ನೀರು ಕೊಯ್ಲು ಪದ್ಧತಿ ಕಡ್ಡಾಯಗೊಳಿಸಿ ನೀರಿನ ಸಂರಕ್ಷಣೆಗೆ ಗಮನ ಕೊಡದಿದ್ದರೆ ಭವಿಷ್ಯದಲ್ಲಿ ಬೆಂಗಳೂರಿನಲ್ಲಿ ಕುಡಿಯುವ ನೀರಿಗಾಗಿ ಹೋರಾಟ–ಹೊಡೆದಾಟಗಳು ನಡೆಯಬಹುದು ಎಂದು ಕಾಂಗ್ರೆಸ್ ಸದಸ್ಯ ಎಂ. ನಾರಾಯಣಸ್ವಾಮಿ ಆತಂಕ ಹೊರಹಾಕಿದರು.

ಬೆಂಗಳೂರು ನಗರದಲ್ಲಿ ಕಾವೇರಿ ನೀರಿನ ಅವಲಂಬನೆ ಕಡಿಮೆ ಮಾಡುವುದು ಮಳೆ ನೀರು ಪೋಲಾಗುವುದನ್ನು ತಪ್ಪಿಸುವ ನಿಟ್ಟಿನಲ್ಲಿ 1200 ಚದರ ಅಡಿಗಿಂತ ಹೆಚ್ಚಿನ ನಿವೇಶನದಲ್ಲಿ ನಿರ್ಮಿಸುವ ಕಟ್ಟಡಗಳಿಗೆ ಮಳೆ ನೀರು ಕೊಯ್ಲು ಅಳವಡಿಕೆಗಾಗಿ ರೂಪಿಸಿರುವ ಬೆಂಗಳೂರು ನೀರು ಸರಬರಾಜು ಮತ್ತು ಗ್ರಾಮಸಾರ ಚರಂಡಿ ವ್ಯವಸ್ಥೆ (ತಿದ್ದುಪಡಿ) ವಿಧೇಯಕ 2021ರ ಮೇಲೆ ಮಾತನಾಡಿದರು.

ಈ ವೇಳೆ ವಿರೋಧ ಪಕ್ಷದ ನಾಯಕರು, ಸದಸ್ಯರಾದ ಭೋಜೇಗೌಡ, ತಿಪ್ಪೇಸ್ವಾಮಿ, ನಾರಾಯಣಸ್ವಾಮಿ, ಅಪ್ಪಾಜಿಗೌಡ, ಮರಿತಿಬ್ಬೇಗೌಡ, ವೈ.ಎ.ನಾರಾಯಣಸ್ವಾಮಿ, ಮಹಾಂತೇಶ ಕವಟಗಿಮಠ ಸೇರಿದಂತೆ ಹಲವು ಸದಸ್ಯರು ಸದರಿ ವಿಧೇಯಕವನ್ನು ಸ್ವಾಗತಿಸಿದರು. ಕಾಂಗ್ರೆಸ್ ಸದಸ್ಯ ಯು.ಬಿ.ವೆಂಕಟೇಶ್ ವಿಧೇಯಕ ಅವೈಜ್ಞಾನಿಕವಾಗಿದೆ. ಇದನ್ನು ಮರುಪರಿಶೀಲಿಸಬೇಕು ಎಂದು ಆಗ್ರಹಿಸಿದರು.

ಈ ಮಳೆ ನೀರು ಕೊಯ್ಲು ವ್ಯವಸ್ಥೆಯನ್ನು ಕೇವಲ ಖಾಸಗಿ ಕಟ್ಟಡಗಳು ಮಾತ್ರವಲ್ಲದೆ ಸರ್ಕಾರಿ ಕಟ್ಟಡಗಳಿಗೂ ಕಡ್ಡಾಯಗೊಳಿಸಬೇಕು. ಬೆಂಗಳೂರಿಗೆ ಮಾತ್ರ ಸೀಮಿತಗೊಳಿಸಿದ ಜಿಲ್ಲೆ, ತಾಲ್ಲೂಕು, ಗ್ರಾಮ ಪಂಚಾಯಿತಿ ಸೇರಿದಂತೆ ರಾಜ್ಯದ ಎಲ್ಲ ಸ್ಥಳೀಯ ಸಂಸ್ಥೆಗಳ ಮಟ್ಟಕ್ಕೂ ವಿಸ್ತರಿಸಬೇಕು. ಮಳೆ ನೀರು ಕೊಯ್ಲಿಗೆ ಶೇ.18ರಷ್ಟು ಜಿಎಸ್‌ಟಿ ಹಾಕಿರುವುದು ಸರಿಯಲ್ಲ. ಮಳೆ ನೀರು ಕೊಯ್ಲು

ಪರಿಣಾಮಕಾರಿಯಾಗಿ ಅನುಷ್ಠಾನಕ್ಕೆ ತಂದರೆ ಕಾವೇರಿ ನದಿ ನೀರಿನ ಮೇಲಿನ ಶೇ.60 ರಷ್ಟು ಅವಲಂಬನೆ ಕಡಿಮೆಯಾಗಲಿದೆ ಎಂದು ಸದಸ್ಯರು ಅಭಿಪ್ರಾಯಗಳನ್ನು ವ್ಯಕ್ತಪಡಿಸಿದರು.

ಈ ವೇಳೆ ಮಾತನಾಡಿದ ಸಭಾ ನಾಯಕರು ಈ ತಿದ್ದುಪಡಿ ವಿಧೇಯಕದ ಅನ್ವಯ 1200 ಚದರ ಅಡಿಗಿಂತ ಹೆಚ್ಚಿನ ನಿವೇಶನದಲ್ಲಿ ನಿರ್ಮಿಸಲಾಗುವ ಕಟ್ಟಡಗಳಿಗೆ ಮಳೆ ನೀರು ಕೊಯ್ಲು ಅಳವಡಿಕೆ ಕಡ್ಡಾಯಗೊಳಿಸಲಾಗಿದೆ. ಬೆಂಗಳೂರು ನಗರದಲ್ಲಿ 1.50 ಲಕ್ಷ ಕಟ್ಟಡಗಳಿಗೆ ಮಳೆ ನೀರು ಕೊಯ್ಲು ಅಳವಡಿಸಿಕೊಂಡಿದ್ದಾರೆ. ಬೆಂಗಳೂರು ಜಲಮಂಡಳಿಯಿಂದ ಮಳೆ ನೀರು ಕೊಯ್ಲು ಬಗ್ಗೆ ಸಾರ್ವನಿಕರಿಗೆ ಮಾಹಿತಿ ನೀಡಲು ವ್ಯವಸ್ಥೆ ಕಲ್ಪಿಸಲಾಗಿದೆ. ಸರ್ಕಾರಿ, ಅರೆ ಸರ್ಕಾರಿ ಹಾಗೂ ಖಾಸಗಿ ಕಟ್ಟಡಗಳು ಮತ್ತು ಕೇಂದ್ರ ಸರ್ಕಾರಿ ಸ್ವಾಮ್ಯದ ಕಟ್ಟಡಗಳಿಗೂ ಇದು ಅನ್ವಯವಾಗಲಿದೆ ಎಂದರು. ವಿಧೇಯಕಕ್ಕೆ ಧ್ವನಿಮತದ ಅಂಗೀಕಾರ ದೊರಕಿತು.

ಆಧಾರ:ಉದಯವಾಣಿ, ದಿನಾಂಕ:21.09.2021

## 101. 52 ಕಿ.ಮೀ. ರಸ್ತೆ, 42 ಹಂಪ್; ಹೇಗೆ ಸ್ವಾಮಿ ಇದೆಲ್ಲ

52, ಕಿ.ಮೀ. ರಸ್ತೆಗೆ 42 ಹಂಪ್ ಎಂದು ಒಬ್ಬರು ಹೇಳಿದರು, ಈ ರಸ್ತೆ ಉಬ್ಬುಗಳಿಂದಲೇ ನನ್ನ ಸೊಂಟ ಮುರಿದಿದೆ ಎಂದ ಇನ್ನೊಬ್ಬ ಶಾಸಕ. ಚರ್ಚೆ ನಡೆದಿದ್ದು ವಿಧಾನಸಭೆಯಲ್ಲಿ, ಶ್ರೀನಿವಾಸಪುರ ಶಾಸಕರು ಹಾಗೂ ಮಾಜಿ ಸ್ಪೀಕರ್ ಅವರು ಕೇಳಿದ ಪ್ರಶ್ನೆಗೆ ಒಬ್ಬೊಬ್ಬರು ಒಂದೊಂದು ಅಭಿಪ್ರಾಯ ವ್ಯಕ್ತಪಡಿಸಿದರು.

ಹೊಸಕೋಟೆಯಿಂದ ಮಾಡಿಕೆರೆ ಭಾಗದಲ್ಲಿರುವ 52 ಕಿ.ಮೀ. ಉದ್ದದ ರಸ್ತೆಯಲ್ಲಿ ಎಷ್ಟು ರಸ್ತೆ ಉಬ್ಬುಗಳಿವೆ ಎಂದು ರಮೇಶ್ ಕುಮಾರ್ ಪ್ರಶ್ನಿಸಿದ್ದರು. ಇದಕ್ಕೆ ಸಚಿವ ಸಿ.ಸಿ.ಪಾಟೀಲ್ ಅವರು ಅನಧಿಕೃತವಾಗಿ 42 ಹಂಪ್‌ಗಳಿವೆ ಎಂದರು. ಇದೇ ರೀತಿಯ ಪ್ರಶ್ನೆಯನ್ನು ಕಳೆದ ಕಲಾಪದಲ್ಲಿಯೂ ರಮೇಶ್ ಕುಮಾರ್ ಕೇಳಿದ್ದು, ಈಗಲೂ ಅದೇ ಪ್ರಶ್ನೆಗೆ ಅದೇ ಉತ್ತರ ನೀಡಿದ್ದಕ್ಕೆ ಸರ್ಕಾರದ ವಿರುದ್ಧ ಗರಂ ಆದರು.

ಅವೈಜ್ಞಾನಿಕ ರಸ್ತೆ ಉಬ್ಬು ಮಾಡುವವರ ವಿರುದ್ಧ ಸರ್ಕಾರ ಏಕೆ ಕ್ರಮ ಕೈಗೊಂಡಿಲ್ಲ. ಅಧಿಕಾರಿಗಳು ಈ ರಸ್ತೆಗೆ ಹೋಗಿ ಏಕೆ ಪರಿಶೀಲಿಸಿಲ್ಲ. ಹಳ್ಳಿಗಳಲ್ಲಿರುವ ಪುಡಿ ರೌಡಿಗಳ ಮಾತಿಗೆ ಬೆದರಿ ಈ ರೀತಿ ಅವೈಜ್ಞಾನಿಕ ಉಬ್ಬುಗಳ ನಿರ್ಮಾಣ ಮಾಡಿದ್ದು, ಇದರಿಂದ ವಾಹನ ಸವಾರರಿಗೆ ಆಗುವ ತೊಂದರೆ ಬಗ್ಗೆ ಗೊತ್ತಿದೆಯೇ ಎಂದು ವಾಗ್ದಾಳಿ ನಡೆಸಿದರು.

ಶಾಸಕರು ಕೇಳುವ ಪ್ರಶ್ನೆಗೆ ಅಧಿಕಾರಿಗಳು ನಾಮಾಕಾವಸ್ಥೆ ಉತ್ತರ ನೀಡುತ್ತಾರೆ. ಅದನ್ನು ಸಚಿವರು ಓದುತ್ತಾರೆ. ಕೇಳಿದ ಪ್ರಶ್ನೆಗೆ ಪರಿಹಾರ ಸಿಗದಿದ್ದರೆ, ಆ ಪ್ರಶ್ನೆ ಕೇಳಿ ಪ್ರಯೋಜನವಾದರೂ ಏನು. ಆದ್ದರಿಂದ ಸಂಜೆಯೊಳಗೆ ಸಂಬಂಧಪಟ್ಟ ಅಧಿಕಾರಿಗಳನ್ನು ಅಮಾನತ್ತು ಮಾಡಿದರೆ ಈ ಪ್ರಶ್ನೆಯನ್ನು ಹಿಂಪಡೆಯುತ್ತೇನೆ ಹಾಗೂ ಇಡೀ ಪ್ರಶ್ನೆಯನ್ನು ಕಡತದಿಂದ ತೆಗೆದುಹಾಕಿ ಎಂದು ಸ್ಪೀಕರ್‌ಗೆ ಆಗ್ರಹಿಸಿದರು.

ಇದಕ್ಕೆ ಪಕ್ಷಭೇದ ಮರೆತು ಎಲ್ಲ ಸದಸ್ಯರು ದನಿಗೂಡಿಸಿದರು. ಇದು ಕೇವಲ ರಮೇಶ್ ಕುಮಾರ್ ಕ್ಷೇತ್ರಕ್ಕೆ ಸೀಮಿತವಾಗಿಲ್ಲ. ಎಲ್ಲ ಕ್ಷೇತ್ರಗಳ ಹೆದ್ದಾರಿಗಳಲ್ಲಿ ಈ ಸಮಸ್ಯೆ ಇದೆ. ಇದನ್ನು ನಿವಾರಿಸಬೇಕು ಎಂದರು.

ಈ ವೇಳೆ ಮಾತನಾಡಿದ ಸಿ.ಸಿ.ಪಾಟೀಲ್ ಅವೈಜ್ಞಾನಿಕ ಹಂಪ್‌ಗಳಿಂದ ಜನಸಾಮಾನ್ಯರಿಗೆ ಆಗುತ್ತಿರುವ ತೊಂದರೆಯನ್ನು ಕೂಡಲೇ ಸರಿಪಡಿಸುವಂತೆ ಅಧಿಕಾರಿಗಳಿಗೆ ಸ್ಪಷ್ಟ ಸೂಚನೆ ನೀಡಲಾಗಿದೆ. ಕೇವಲ ಇಲಾಖೆ ಎಂಜಿನಿಯರ್‌ಗಳನ್ನು ಅಮಾನತ್ತು ಮಾಡುವುದರಿಂದ ಸಮಸ್ಯೆ ಬಗೆಹರಿಯುವುದಿಲ್ಲ.

ವೈಜ್ಞಾನಿಕವಾಗಿ ರಸ್ತೆ ಹಂಪ್ಸ್‌ಗಳ ಅಗತ್ಯ ಇರುತ್ತದೆ. ಆದರೆ ಅವೈಜ್ಞಾನಿಕ ರಸ್ತೆ ಹಂಪ್ಸ್‌ಗಳಿಂದ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆ. ಅದನ್ನು ಪರಿಹರಿಸಲು ತಕ್ಷಣ ಆದೇಶ ಮಾಡುವುದಾಗಿ ತಿಳಿಸಿದರು.

ಆಧಾರ:ವಿಶ್ವವಾಣಿ, ದಿನಾಂಕ:21.09.2021

## 102. ದೇಗುಲಕ್ಕೆ ಕಾಯ್ದೆ ರಕ್ಷೆ

ಮೈಸೂರು ಜಿಲ್ಲೆಯ ನಂಜನಗೂಡಿನ ದೇಗುಲ ಧ್ವಂಸದ ಬಳಿಕ ಭುಗಿಲೆದ್ದಿರುವ ಸಾರ್ವಜನಿಕರ ಆಕ್ರೋಶವನ್ನು ಶಮನಗೊಳಿಸಲು ಮುಂದಾಗಿರುವ ರಾಜ್ಯ ಸರ್ಕಾರ ನೂತನ ಕಾಯ್ದೆಯ ಮೂಲಕ ದೇಗುಲಗಳ ರಕ್ಷಣೆ ನೀಡಲು ಮುಂದಾಗಿದೆ.

ರಾಜ್ಯದಲ್ಲಿರುವ ಅನಧಿಕೃತ ಧಾರ್ಮಿಕ ಕಟ್ಟಡಗಳ ತೆರವಿಗೆ ಸುಪ್ರೀಂಕೋರ್ಟ್ ಆದೇಶ ನೀಡಿದ್ದು, ಇದರಿಂದಾಗಿ ನಂಜನಗೂಡಿನ ದೇಗುಲವನ್ನು ತೆರವು ಮಾಡಲಾಗಿತ್ತು. ಈ ಬಳಿಕ ಆಡಳಿತ ಪ್ರತಿಪಕ್ಷಗಳು ಮತ್ತು ಸಾರ್ವಜನಿಕರ ಕಡೆಯಿಂದ ತೀವ್ರ ಆಕ್ರೋಶ ವ್ಯಕ್ತವಾಗಿತ್ತು. ಇದಕ್ಕೆ ಮಣಿದಿರುವ ರಾಜ್ಯ ಸರ್ಕಾರ ಧಾರ್ಮಿಕ ಕಟ್ಟಡಗಳಿಗೆ ಗುರಾಣಿಯಾಗಿ ಕಾಯ್ದೆಯೊಂದನ್ನು ಜಾರಿಗೆ ತರಲು ನಿರ್ಧರಿಸಿದೆ.

ಮುಖ್ಯಮಂತ್ರಿಯವರು ವಿಧಾನಸಭೆಯಲ್ಲಿ ನೂತನ ವಿಧೇಯಕ ಮಂಡನೆ ಮಾಡಿದ್ದಾರೆ. ಸಾರ್ವಜನಿಕ ಸ್ಥಳಗಳಲ್ಲಿ ನಿರ್ಮಾಣವಾಗಿರುವ ಧಾರ್ಮಿಕ ಕಟ್ಟಡಗಳನ್ನು ಸಂರಕ್ಷಣೆ ಮಾಡುವ ಉದ್ದೇಶದಿಂದ ಈ ವಿಧೇಯಕ ಮಂಡನೆ ಮಾಡಲಾಗಿದೆ.

**ಸಂಪುಟದಲ್ಲಿ ತೀರ್ಮಾನ:** ಬಸವರಾಜ ಬೊಮ್ಮಾಯಿ ಅವರ ಅಧ್ಯಕ್ಷತೆಯಲ್ಲಿ ನಡೆದ ಸಚಿವ ಸಂಪುಟ ಸಭೆಯಲ್ಲಿ ದೇಗುಲ ರಕ್ಷಣೆ ಮಾಡುವ ವಿಧೇಯಕ ಮಂಡಿಸಲು ನಿರ್ಣಯ ಕೈಗೊಳ್ಳಲಾಗಿದೆ. ಮುಂದಿನ ದಿನಗಳಲ್ಲಿ ಯಾವುದೇ ಕಾರಣಕ್ಕೂ ದೇವಸ್ಥಾನ, ಚರ್ಚ್, ಮಸೀದಿ ಯಾವುದನ್ನೂ ಒಡೆಯುವ ಕಾರ್ಯಕ್ಕೆ ಕೈಹಾಕಿ ಅನಗತ್ಯ ವಿವಾದ ಮೈಮೇಲೆ ಎಳೆದುಕೊಳ್ಳುವುದು ಬೇಡ ಎಂದು ಸಿಎಂ ಸಂಪುಟ ಸಭೆಯಲ್ಲಿ ಹೇಳಿದ್ದಾರೆಂಬ ಮಾಹಿತಿ ಲಭ್ಯವಾಗಿದೆ.

**ತರಾತುರಿಯಲ್ಲಿ ವಿಧೇಯಕ:** ದೇವಾಲಯಗಳ ತೆರವಿನಿಂದ ಸಾಕಷ್ಟು ಮುಜುಗರಕ್ಕೆ ಒಳಗಾಗಿರುವ ಬಿಜೆಪಿ ಅದರಿಂದ ಹೊರ ಬರಲು ತರಾತುರಿಯಲ್ಲಿ ಧಾರ್ಮಿಕ ಕಟ್ಟಡಗಳ ರಕ್ಷಣೆಗೆ ವಿಧೇಯಕ ಮಂಡನೆಗೆ ನಿರ್ಧರಿಸಿದೆ. ಸಂಪುಟದಲ್ಲಿ ತೀರ್ಮಾನ ತೆಗೆದುಕೊಂಡು ಮಧ್ಯಾಹ್ನದ ಹೊತ್ತಿಗೆ ಹೆಚ್ಚುವರಿ ಕಲಾಪಗಳ ಪಟ್ಟಿಯನ್ನು ಸಿದ್ದಪಡಿಸಿ ಮುಜರಾಯಿ ಸಚಿವರು ಸದನದಲ್ಲಿ ಹಾಜರಿದ್ದರೂ, ಸ್ವತಃ ಸಿಎಂ ಅವರೇ ವಿಧೇಯಕ ಮಂಡನೆ ಮಾಡಿದರು. ವಿಧೇಯಕಗಳ ಪ್ರತಿಗಳನ್ನು ಪ್ರತಿಪಕ್ಷಗಳ ಸದಸ್ಯರಿಗೆ ತಡವಾಗಿ ಒದಗಿಸಲಾಯಿತು.

ಆಧಾರ:ಉದಯವಾಣಿ ದಿನಾಂಕ:21.09.2021

## 103. ಸೌಹಾರ್ದ ಸಹಕಾರಿ ಸಂಘ ಇನ್ನುಂದೆ ಸೌಹಾರ್ದ ಸೊಸೈಟಿ

ಸೌಹಾರ್ದ ಸಹಕಾರಿ ಸಂಘ ಎಂಬ ಪದವನ್ನು ಸೌಹಾರ್ದ ಸಹಕಾರಿ ಸೊಸೈಟಿ ಎಂದು ಬದಲಿಸಿ ಸೊಸೈಟಿಯನ್ನು ಇನ್ನಷ್ಟು ಬಲಪಡಿಸುವ ಉದ್ದೇಶದಿಂದ ಕರ್ನಾಟಕ ಸೌಹಾರ್ದ ಸಹಕಾರಿ ತಿದ್ದುಪಡಿ ವಿಧೇಯಕವನ್ನು ಧ್ವನಿ ಮತದ ಮೂಲಕ ಅಂಗೀಕರಿಸಲಾಯಿತು.

ವಿಧೇಯಕವನ್ನು ಮಂಡಿಸಿದ ಸಹಕಾರ ಸಚಿವರು ಕಾರ್ಯಕ್ಷೇತ್ರದ ಅಸ್ಪಷ್ಟತೆ ತೆಗೆದು ಹಾಕಲು ಮತ್ತು ಠೇವಣಿಗಳ ಹೊರತಾಗಿ ಹಣಕಾಸು ಸಂಸ್ಥೆಗಳಿಂದ ಸಂಪನ್ಮೂಲವನ್ನು ಕ್ರೋಢೀಕರಿಸುವುದಕ್ಕೆ ಸಹಕಾರಿ ಸಂಸ್ಥೆಯನ್ನು ಸಶಕ್ತಗೊಳಿಸಲು ಈ ವಿಧೇಯಕವನ್ನು ತಿದ್ದುಪಡಿ ತರಲಾಗಿದೆ ಎಂದರು.

ಸಹಕಾರಿ ಅಥವಾ ಹಣಕಾಸು ಬ್ಯಾಂಕಿನ ಇಲ್ಲವೇ ಅದರ ಒಕ್ಕೂಟದ ಅಥವಾ ಸಂಯುಕ್ತ ಸಹಕಾರಿ ಸಂಸ್ಥೆಯ ವೇತನ ಪಡೆಯುವ ಉದ್ಯೋಗಿಯಾಗಿದ್ದರೆ ಅಂತಹ ನೌಕರನು ಸೌಹಾರ್ದ ಸಹಕಾರಿ ಸೊಸೈಟಿಯ ಚುನಾವಣೆಯಲ್ಲಿ ಸ್ಪರ್ಧೆ ಮಾಡುವಂತಿಲ್ಲ. ಆದರೆ, ಆತನ ಸಂಬಂಧಿಕರು, ಚುನಾವಣೆಯಲ್ಲಿ ಸ್ಪರ್ಧಿಸಬಹುದಾಗಿದೆ. ಒಂದು ವೇಳೆ ಸಂಬಳ ಪಡೆಯುವ ನೌಕರನು ಗ್ರಾಮ ಪಂಚಾಯಿತಿ, ತಾಲ್ಲೂಕು ಪಂಚಾಯಿತಿ ಚುನಾವಣೆಯಲ್ಲಿ ಸ್ಪರ್ಧಿಸುವುದಾದರೆ ಒಪ್ಪಿಗೆ ಪಡೆದು ಸ್ಪರ್ಧಿಸಬಹುದು ಎಂದು ತಿಳಿಸಿದರು.

ಆಧಾರ:ಕನ್ನಡ ಪ್ರಭ, ದಿನಾಂಕ:21.09.2021

## 104. ಅತ್ಯಾಚಾರ ಚರ್ಚೆಗೆ ಒಪ್ಪಿಗೆ

ಆಗಸ್ಟ್ ತಿಂಗಳಲ್ಲಿ ಮೈಸೂರಿನಲ್ಲಿ ನಡೆದ ಸಾಮೂಹಿಕ ಅತ್ಯಾಚಾರ ವಿಷಯವಾಗಿ ಚರ್ಚೆಗೆ ಅವಕಾಶ ನೀಡುವುದಾಗಿ ಸಭಾಪತಿ ತಿಳಿಸಿದರು.

ಕಲಾಪ ಆರಂಭವಾಗುತ್ತಿದ್ದಂತೆಯೇ ಪ್ರತಿಪಕ್ಷ ನಾಯಕ ನಿಲುವಳಿ ಸೂಚನೆ ಮಂಡಿಸಿ, ಮೈಸೂರಿನಲ್ಲಿ ಯುವತಿ ಹಾಗೂ ಯುವಕ ಇದ್ದ ಸಂದರ್ಭದಲ್ಲಿ ಯುವಕನ ಮೇಲೆ ಹಲ್ಲೆ ಮಾಡಲಾಗಿದ್ದು, ಯುವತಿ ಮೇಲೆ ಸಾಮೂಹಿಕ ಅತ್ಯಾಚಾರ ಮಾಡಲಾಗಿದೆ. ನಂತರ ಸಂತ್ರಸ್ತೆಯನ್ನು ಸರ್ಕಾರಿ ಆಸ್ಪತ್ರೆಗೆ ಸೇರಿಸುವ ಬದಲು ಖಾಸಗಿ ಆಸ್ಪತ್ರೆಗೆ ಸೇರಿಸಲಾಗಿದೆ. ಆಕೆಯನ್ನು ಸಾಂತ್ವನ ಕೇಂದ್ರಕ್ಕೆ ದಾಖಲು ಮಾಡಿಲ್ಲ. ಘಟನೆ ನಡೆದ 15 ಗಂಟೆ ನಂತರ ಎಫ್‌ಐಆರ್ ದಾಖಲಾಗಿದೆ. ಇದನ್ನು ಗಮನಿಸಿದರೆ ಕೇಸ್ ಮುಚ್ಚಿಹಾಕುವ ಯತ್ನ. ಈ ಘಟನೆ ರಾಜ್ಯಕ್ಕೆ ಕಪ್ಪುಚುಕ್ಕೆಯಾಗಿದೆ. ರಾಜ್ಯದ ಕಾನೂನು ಸುವ್ಯವಸ್ಥೆ ಹಾಳಾಗಿದೆ. ಇದರಿಂದ ಕಲಾಪವನ್ನು ಬದಿಗೊತ್ತಿ ಈ ವಿಚಾರ ಚರ್ಚೆಗೆ ಮಹತ್ವ ನೀಡಬೇಕು ಎಂದು ಕೋರಿದರು. ಇದಕ್ಕೆ ಸಭಾನಾಯಕ ಪ್ರತಿಕ್ರಿಯಿಸಿ ಇದನ್ನು ಚರ್ಚಿಸಲು ಸರ್ಕಾರ ಸಿದ್ಧವಿದೆ. ಬೇರೆ ರೂಪದಲ್ಲಿ ಅವಕಾಶ ಮಾಡಿಕೊಡಬೇಕು ಎಂದು ಸಭಾಪತಿಗಳನ್ನು ಕೋರಿದರು. ಇದಕ್ಕೆ ಸಭಾಪತಿ ಅವರು ಈ ವಿಷಯವನ್ನು ನಿಯಮ 68ಕ್ಕೆ ಪರಿವರ್ತನೆ ಮಾಡಲಾಗಿದ್ದು ಅದನ್ನು ಕಲಾಪ ಪಟ್ಟಿಯಲ್ಲಿ ಸೇರ್ಪಡೆ ಮಾಡಲಾಗುವುದು ಎಂದು ತಿಳಿಸಿದರು.

ಆಧಾರ:ಸಂಯುಕ್ತ ಕರ್ನಾಟಕ, ದಿನಾಂಕ:22.09.2021

## 105. ಸಿಎಂ ರಿಂದ ಕಾನೂನು ಪದಕೋಶ ಲೋಕಾರ್ಪಣೆ

ಕಾನೂನುಗಳು ಕನ್ನಡದಲ್ಲಿ ಇದ್ದರೆ ಜನಸಾಮಾನ್ಯರಿಗೆ ಸರಳವಾಗಿ ಅರ್ಥವಾಗುತ್ತದೆ ಎಂದು ಬಸವರಾಜ ಬೊಮ್ಮಾಯಿ ಅವರು ಹೇಳಿದರು.

ಕಾನೂನು ಮತ್ತು ಸಂಸದೀಯ ವ್ಯವಹಾರಗಳು ಹಾಗೂ ಶಾಸನ ರಚನಾ ಇಲಾಖೆ ಹಾಗೂ ಭಾಷಾಂತರ ನಿರ್ದೇಶನಾಲಯದಿಂದ ವಿಧಾನಸೌಧ ಸಮ್ಮೇಳನ ಸಭಾಂಗಣದಲ್ಲಿ ಆಯೋಜಿಸಿದ್ದ ಕಾರ್ಯಕ್ರಮದಲ್ಲಿ ಕನ್ನಡದ ಕಾನೂನು ಪದಕೋಶ ಹಾಗೂ 15 ಕೇಂದ್ರ ಅಧಿನಿಯಮಗಳ ಪುಸ್ತಕ ಲೋಕಾರ್ಪಣೆ ಹಾಗೂ ಇಸ್ಕಾನ್ ಸಂಸ್ಥಾಪಕ ಶ್ರೀಲೀಲಾ ಭಕ್ತಿವೇದಾಂತ ಸ್ವಾಮಿ ಪ್ರಭುಪಾದರ 125ನೇ ಜನ್ಮದಿನದ ಪ್ರಯುಕ್ತ ರೂ.125 ಮೌಲ್ಯದ ಬೆಳ್ಳಿ ನಾಣ್ಯ ಬಿಡುಗಡೆಗೊಳಿಸಿ ಅವರು ಮಾತನಾಡಿದರು.

ರಾಜ್ಯದಲ್ಲಿ 2003ರಲ್ಲಿ ಎಲ್ಲ ಕಾನೂನುಗಳನ್ನು ಜನಸಾಮಾನ್ಯರಿಗೆ ಅರ್ಥವಾಗುವ ರೀತಿಯಲ್ಲಿ ಕನ್ನಡಕ್ಕೆ ಭಾಷಾಂತರ ಮಾಡಿದ ಬಳಿಕ ನ್ಯಾಯಾಲಯವು ಅದನ್ನು ಗುರುತಿಸಿ ಮುನ್ನಣೆ ನೀಡಿದೆ. ಕನ್ನಡದಲ್ಲಿ ಕಾನೂನು ತಂದಿದ್ದರಿಂದ ನ್ಯಾಯಾಲಯದಲ್ಲಿ ಕನ್ನಡ ಹೆಚ್ಚು ಗಟ್ಟಿಯಾಗುತ್ತಿದೆ. ಇದೀಗ ಅದರ ಮುಂದುವರಿದ ಕಾರ್ಯವಾಗಿ ಕನ್ನಡದಲ್ಲಿ ಕಾನೂನು ಪದಕೋಶ ಹಾಗೂ 15 ಕೇಂದ್ರ ಅಧಿನಿಯಮಗಳನ್ನು ಪುಸ್ತಕ ಲೋಕಾರ್ಪಣೆ ಮಾಡಲಾಗುತ್ತಿದೆ. ರಾಷ್ಟ್ರ ಹಾಗೂ ಅಂತರರಾಷ್ಟ್ರೀಯ

ಕಾನೂನುಗಳು ಸರಳವಾಗಿ ಜನಸಾಮಾನ್ಯರಿಗೆ ಅರ್ಥವಾಗಬೇಕು ಎಂಬುದು ಇದರ ಮುಖ್ಯ ಉದ್ದೇಶವಾಗಿದೆ ಎಂದರು.

**ನಾಣ್ಯ ಬಿಡುಗಡೆ:** ಇಸ್ಕಾನ್ ಸಂಸ್ಥಾಪಕ ಸ್ವಾಮಿ ಪ್ರಭುಪಾದರ ಜನ್ಮ ದಿನದ ಪ್ರಯುಕ್ತ ಪ್ರಧಾನಿ ಅವರು ರೂ.125 ಮೌಲ್ಯದ ನಾಣ್ಯ ಬಿಡುಗಡೆಗೊಳಿಸಿದ್ದರು. ನ್ಯಾಯ, ನೀತಿ, ಧರ್ಮ ಒಟ್ಟಿಗೆ ಇರುತ್ತದೆ. ನ್ಯಾಯ, ನೀತಿ, ಧರ್ಮ ಪಾಲನೆ ಮಾಡುವ ಶಕ್ತಿಸೌಧದಲ್ಲಿ ಒಂದು ಕಡೆ ಕಾನೂನು ಪದಕೋಶ ಲೋಕಾರ್ಪಣೆ ಮತ್ತೊಂದೆಡೆ ಪ್ರಭುಪಾದರ ಸ್ಮರಣೆ ಮಾಡುತ್ತಿರುವುದು ಯೋಗಾಯೋಗವಾಗಿದೆ ಎಂದು ಸಂತಸ ವ್ಯಕ್ತಪಡಿಸಿದರು.

ಆಧಾರ:ಸಂಯುಕ್ತ ಕರ್ನಾಟಕ, ದಿನಾಂಕ:22.09.2021

## 106. ಸದನದ ಬಾವಿಗಿಳಿದ ಖಂಡ್ರೆ; ಸ್ಪೀಕರ್ ಕೆಂಡಾಮಂಡಲ

ಶೂನ್ಯವೇಳೆಯಲ್ಲಿ ಶಾಸಕ ಈಶ್ವರ ಖಂಡ್ರೆ ಅವರು ಪ್ರಸ್ತಾಪಿಸಿದ ವಿಷಯಕ್ಕೆ ಆರೋಗ್ಯ ಸಚಿವರು ಉತ್ತರಿಸಿದರೂ, ಬಾವಿಗಿಳಿದು ಪ್ರತಿಭಟನೆಗೆ ಮುಂದಾದ ಖಂಡ್ರೆ ವಿರುದ್ಧ ವಿಧಾನಸಭಾಧ್ಯಕ್ಷರು ಕೆಂಡಾಮಂಡಲವಾದ ಘಟನೆ ನಡೆಯಿತು. ಅಂತಿಮವಾಗಿ ಪ್ರತಿಪಕ್ಷ ನಾಯಕರು ಮಧ್ಯಪ್ರವೇಶಿಸಿ ಪರಿಸ್ಥಿತಿಯನ್ನು ತಿಳಿಗೊಳಿಸಿದರು.

ಶೂನ್ಯ ವೇಳೆಯಲ್ಲಿ ಬೀದರ್ ಜಿಲ್ಲೆಯಲ್ಲಿ ಬ್ಲ್ಯಾಕ್ ಫಂಗಸ್ ಔಷಧ ಕೊರತೆ ಬಗ್ಗೆ ಈಶ್ವರ್ ಖಂಡ್ರೆ ಕೇಳಿದ ಪ್ರಶ್ನೆಗೆ ಉತ್ತರ ನೀಡಿದ ಸಚಿವರು 3,900 ಮಂದಿಗೆ ಈವರೆಗೂ ಬ್ಲ್ಯಾಕ್ ಫಂಗಸ್ ದೃಢಪಟ್ಟಿದೆ. ಸರ್ಕಾರದಿಂದ ಉಚಿತ ಚಿಕಿತ್ಸೆ ಕೊಡ್ತಿದ್ದೇವೆ. ಇದು ಅತ್ಯಂತ ದುಬಾರಿ ಚಿಕಿತ್ಸೆ, ಈ ಹಿಂದೆ ಬಿ.ಎಸ್.ಯಡಿಯೂಪ್ಪ ತೆಗೆದುಕೊಂಡ ನಿರ್ಧಾರ ಬೀದರ್‌ನಲ್ಲೂ ಚಿಕಿತ್ಸೆ ಕೊಡ್ತಿದ್ದೇವೆ. ಹೆಚ್ಚುವರಿ ಗುಳಿಗೆ ಮತ್ತು ಔಷಧಿಗೆ ಆರ್ಡರ್ ಮಾಡಿದ್ದೇವೆ. ಬಂದ ತಕ್ಷಣ ಗುಳಿಗೆಯನ್ನು ಬೀದರ್‌ಗೆ ಕಳುಹಿಸಿಕೊಡುತ್ತೇವೆ ಎಂದರು.

ಇದಕ್ಕೆ ಸಮಾಧಾನಗೊಳ್ಳದ ಖಂಡ್ರೆ ಸಚಿವರು ಸದನಕ್ಕೆ ತಪ್ಪು ಮಾಹಿತಿ ಕೊಟ್ಟಿದ್ದಾರೆ ಎಂದು ಆಕ್ರೋಶ ವ್ಯಕ್ತಪಡಿಸಿದರು. ಸ್ಪಷ್ಟನೆ ನೀಡಿ ಎಂದು ಈಶ್ವರ್ ಖಂಡ್ರೆ, ರಾಜಶೇಖರ್ ಪಾಟೀಲ್, ಡಾ:ಯತೀಂದ್ರ, ಸಿದ್ದರಾಮಯ್ಯ, ಅಜಯ್‌ಸಿಂಗ್ ಸದನದ ಬಾವಿಗಿಳಿದು ಪ್ರತಿಭಟಿಸಿದರು. ಈ ವೇಳೆ ಗರಂ ಆದ ಸ್ಪೀಕರ್ ಏರುಧ್ವನಿಯಲ್ಲಿ ಮಾತನಾಡಿದರೆ ಹೆದರಲ್ಲ, ನಮಗೂ ದೇವರು ಬಾಯಿ ಕೊಟ್ಟಿದ್ದಾನೆ. ಏನಾದರೂ ಹೇಳುವುದಿದ್ದರೆ ನಿಮ್ಮ ಚೇರ್‌ಗೆ ಹೋಗಿ ಮಾತನಾಡಿ ಎಂದು ಸ್ಪೀಕರ್ ಗರಂ ಆದರು. ಖಂಡ್ರೆ ಅವರು ಮತ್ತಷ್ಟು ಏರುಧ್ವನಿಯಲ್ಲಿ ತಪ್ಪು ಮಾಹಿತಿ ನೀಡುತ್ತಿದ್ದಾರೆ ಎಂದು ಹೇಳುತ್ತಿದ್ದಂತೆ ಏನು ಮಾತನಾಡುತ್ತಿದ್ದೀರಿ, ಧ್ವನಿ ದೊಡ್ಡದಿದೆ ಎಂದು ಮಾತನಾಡಿದರೆ ನಮಗೂ ಧ್ವನಿ ದೊಡ್ಡದಿಲ್ವಾ ಕುಸ್ತಿ ಅಖಾಡಕ್ಕೆ ಬಂದಿದ್ದೀರಾ ಸ್ವಲ್ಪ ಸಮಾಧಾನದಿಂದ ಇರಿ ಎಂದು ತಾಕೀತು ಮಾಡಿದರು.

ಈ ವೇಳೆ ಮಧ್ಯಪ್ರವೇಶಿಸಿದ ಪ್ರತಿಪಕ್ಷ ನಾಯಕರು ಖಂಡ್ರೆ ಹಾಗೂ ಇನ್ನಿತರೆ ಸದಸ್ಯರನ್ನು ಆಸನದತ್ತ ಹೋಗುವಂತೆ ಸೂಚಿಸಿದರು. ಬಳಿಕ ಮಾತನಾಡಿದ ಅವರು ಬ್ಲ್ಯಾಕ್ ಫಂಗಸ್ ತೀವ್ರವಾಗಿ ಹಬ್ಬುವ ಕಾಯಿಲೆ. ಆದ್ದರಿಂದ ಸರ್ಕಾರ ಈ ನಿಟ್ಟಿನಲ್ಲಿ ಹೆಚ್ಚು ಗಮನಹರಿಸಬೇಕು. ಆರ್ಡರ್ ಬಂದ ಬಳಿಕ ಔಷಧ ಕೊಡುತ್ತೇವೆ ಎನ್ನುವ ಮಾತು ಹೇಳಬಾರದು. ಒಂದು ವೇಳೆ ಯಾವುದಾದರೂ ಒಂದು ಜಿಲ್ಲೆಯಲ್ಲಿ ಔಷಧ ಕೊರತೆ ಬಿದ್ದರೆ ಬೇರೆ ಜಿಲ್ಲೆಗಳಿಂದ ಹೊಂದಾಣಿಕೆ ಮಾಡಬೇಕು ಎಂದು ಸಲಹೆ ನೀಡಿದರು.

ಆಧಾರ:ವಿಶ್ವವಾಣಿ, ದಿನಾಂಕ:22.09.2021

## 107. ಮಾಧ್ಯಮಗಳಿಗೆ ಸ್ಪೀಕರ್ ಕಿವಿಮಾತು

ನಾನು ಬಿಜೆಪಿ ಬಿಟ್ಟು ಕಾಂಗ್ರೆಸ್ ಸೇರುತ್ತೇನೆ ಎಂದು ಕೆಲವು ಮುದ್ರಣ ಹಾಗೂ ದೃಶ್ಯ ಮಾಧ್ಯಮಗಳಲ್ಲಿ ತೇಜೋವಧೆ ಮಾಡುವ ಸುದ್ದಿ ಬಂದಿದೆ ಎಂಬ ಶಾಸಕ ಗೂಳಿಹಟ್ಟಿ ಶೇಖರ್ ಅವರ ಹಕ್ಕುಚ್ಯುತಿ ಕುರಿತ ಆರೋಪಕ್ಕೆ ಸಂಬಂಧಿಸಿ ಪ್ರತಿಕ್ರಿಯಿಸಿದ ಸಭಾಧ್ಯಕ್ಷರು ಮಾಧ್ಯಮಗಳು ಪ್ರಶ್ನಾರ್ಥಕ ಚಿಹ್ನೆ ಬಳಸಿ ಅಥವಾ ಮೂಲಗಳ ಮಾಹಿತಿ ಎಂಬ ಸುದ್ದಿ ಪ್ರಕಟಿಸುವಾಗ ಜನಪ್ರತಿನಿಧಿಗಳ ತೇಜೋವಧೆಯಾಗದಂತೆ ಎಚ್ಚರವಹಿಸಲು ಕಿವಿಮಾತು ಹೇಳಿದರು. ಪ್ರಶ್ನಾರ್ಥಕ ಚಿಹ್ನೆ ಬಳಸಿ ಇಲ್ಲವೇ ವಿಶ್ವಾಸನೀಯ ಮೂಲಗಳಿಂದ ತಿಳಿದುಬಂದಿದೆ ಎಂದು ಅಧಿಕೃತವಲ್ಲದ ಸುದ್ದಿ ಮಾಡುವುದು ಸರಿಯಲ್ಲ. ಇದರಿಂದ ಬಹಳ ತೊಂದರೆಯಾಗುತ್ತಿದೆ. ಕೇವಲ ತೇಜೋವಧೆಯಾಗುತ್ತಿದೆ. ಇನ್ನು ಮುಂದೆ ಇಂತಹ ಸಂದರ್ಭಗಳಲ್ಲಿ ಮಾಧ್ಯಮಗಳು ಎಚ್ಚರವಹಿಸುವಂತೆ ಶಾಸಕರ ಪರವಾಗಿ ಈ ಸ್ಥಾನದಿಂದ ಸೂಚಿಸುತ್ತೇನೆ ಎಂದು ಸ್ಪೀಕರ್ ತಿಳಿಸಿದರು.

ಆಧಾರ:ಸಂಯುಕ್ತ ಕರ್ನಾಟಕ, ದಿನಾಂಕ:22.09.2021

## 108. ಮರಿತಿಬ್ಬೇಗೌಡ ಧರಣಿ: ಪರಿಷತ್ ಕಲಾಪ ಮುಂದೂಡಿಕೆ

ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರವು ಅನಧಿಕೃತವಾಗಿ ಬಳಸಿಕೊಂಡಿರುವ ಜಮೀನುಗಳ ಮಾಲೀಕರಿಗೆ ಪರಿಹಾರ ವಿತರಣೆಗೆ ಕಾಲಮಿತಿ ನಿಗದಿಪಡಿಸುವಂತೆ ಆಗ್ರಹಿಸಿ ಜೆಡಿಎಸ್ ಸದಸ್ಯ ಮರಿತಿಬ್ಬೇಗೌಡ ಧರಣಿ ನಡೆಸಿದ್ದರಿಂದ ವಿಧಾನ ಪರಿಷತ್‌ನಲ್ಲಿ ಕೋಲಾಹಲ ಸೃಷ್ಟಿಯಾಯಿತು.

ಗದ್ದಲ ನಿಯಂತ್ರಣಕ್ಕೆ ಬಾರದೇ ಇದ್ದುದರಿಂದ ಸಭಾಪತಿ, ಸಂಜೆ ನಾಲ್ಕು ಗಂಟೆಯ ಬಳಿಕದ ಕಲಾಪವನ್ನೇ ಮುಂದೂಡಿದರು. ಭೋಜನ ವಿರಾಮದ ಬಳಿಕ ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದ ಪ್ರಕರಣ ಕುರಿತು ಗಮನ ಸೆಳೆಯುವ ಸೂಚನೆ ಮಂಡಿಸಿದ ಮರಿತಿಬ್ಬೇಗೌಡ, ಅಧಿಕೃತವಾಗಿ ಭೂಸ್ವಾಧೀನ ಪ್ರಕ್ರಿಯೆ ನಡೆಸದೇ ಪ್ರಾಧಿಕಾರವು ಖಾಸಗಿ ಜಮೀನುಗಳನ್ನು ಬಳಸಿಕೊಂಡು ಬಡಾವಣೆಗಳಲ್ಲಿ ರಸ್ತೆ ಮತ್ತು ಇತರ ಸೌಕರ್ಯಗಳನ್ನು ನಿರ್ಮಿಸಿದೆ. 15–20 ವರ್ಷಗಳಾದರೂ ಪರಿಹಾರ ನೀಡಿಲ್ಲ. ಅಷ್ಟೇ ವಿಸ್ತೀರ್ಣದ ಅಭಿವೃದ್ಧಿಪಡಿಸದ ಜಮೀನು ನೀಡುವುದಕ್ಕೂ ಹಿಂದೇಟು ಹಾಕುತ್ತಿದೆ ಎಂದು ದೂರಿದರು.

ಉತ್ತರ ನೀಡಿದ ನಗರಾಭಿವೃದ್ಧಿ ಸಚಿವರು ಶೀಘ್ರದಲ್ಲೇ ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರದ ಸಭೆ ನಡೆಸಲಾಗುವುದು. ಅನಧಿಕೃತವಾಗಿ ಬಳಸಿಕೊಂಡಿರುವ ಜಮೀನುಗಳಿಗೆ ಪರಿಹಾರ ವಿತರಣೆಗೆ ತ್ವರಿತ ಕ್ರಮ ಕೈಗೊಳ್ಳಲಾಗುವುದು ಎಂದರು.

ಉತ್ತರದಿಂದ ತೃಪ್ತರಾಗದ ಮರಿತಿಬ್ಬೇಗೌಡ ಸಭಾಪತಿ ಪೀಠದ ಎದುರು ಧರಣಿ ಆರಂಭಿಸಿದರು. ಕೆಲಕಾಲ ವಾಗ್ವಾದ ನಡೆಯಿತು. ಮರಿತಿಬ್ಬೇಗೌಡ ಸಿಟ್ಟಿನಿಂದ ಸಭಾಪತಿ ಪೀಠದ ಎದುರು ನಿಂತು ಏರು ಧ್ವನಿಯಲ್ಲಿ ಸರ್ಕಾರದ ವಿರುದ್ಧ ಮಾತನಾಡತೊಡಗಿದರು. ಕಾಂಗ್ರೆಸ್ ಮತ್ತು ಜೆಡಿಎಸ್ ಸದಸ್ಯರು ಅವರನ್ನು ಸಮಾಧಾನಪಡಿಸಲು ನಡೆಸಿದ ಪ್ರಯತ್ನಗಳು ಫಲ ನೀಡಲಿಲ್ಲ.

ಸಚಿವರು ಸೇರಿದಂತೆ ಬಿಜೆಪಿಯ ಹಲವು ಸದಸ್ಯರು ಮರಿತಿಬ್ಬೇಗೌಡರ ಜೊತೆ ವಾಗ್ವಾದಕ್ಕೆ ಇಳಿದರು. ಸಭಾಪತಿಯವರ ಸೂಚನೆಗಳನ್ನು ಲೆಕ್ಕಿಸದೇ ವಾಗ್ವಾದ ಮುಂದುವರೆಯಿತು. ಬೇಸರಗೊಂಡ ಹೊರಟ್ಟಿ ಪೀಠದ ಮಾತನ್ನೂ ಕೇಳದೆ ಅಗೌರವ ತೋರುತ್ತಿದ್ದೀರಿ. ಇಂತಹ ಸ್ಥಿತಿಯಲ್ಲಿ ಸದನ ನಡೆಸಲು ಸಾಧ್ಯವಿಲ್ಲ ಎಂದು ಕಲಾಪವನ್ನು ಮುಂದೂಡಿದರು.

ಆಧಾರ:ಪ್ರಜಾವಾಣಿ, ದಿನಾಂಕ:22.09.2021

## 109. ಹಳ್ಳ, ತೊರೆಗಳ ಮರಳು ಪಂಚಾಯಿತಿ ವ್ಯಾಪ್ತಿಗೆ ಮಾತ್ರ

ದಶಲಕ್ಷ ಟನ್ ಮರಳಿಗೆ ಬೇಡಿಕೆ ಇದ್ದು 35 ದಶಲಕ್ಷ ಟನ್ ಮಾತ್ರ ಲಭ್ಯವಾಗುತ್ತಿದೆ. ಕೊರತೆ ನೀಗಿಸಲು ಮರಳು ನೀತಿಯಲ್ಲಿ ನಿಯಮ ಸರಳೀಕರಣಗೊಳಿಸಲಾಗಿದೆ ಎಂದು ಗಣಿ ಸಚಿವರು ತಿಳಿಸಿದರು.

ಪರಿಷತ್‌ನಲ್ಲಿ ಜೆಡಿಎಸ್‌ನ ಎಸ್.ಎಲ್.ಭೋಜೇಗೌಡ ಪ್ರಶ್ನೆಗೆ ಉತ್ತರಿಸಿ, ಹೊರ ಮರಳು ನೀತಿಯಂತೆ 1, 2 ಮತ್ತು 3ನೇ ಶ್ರೇಣಿಯ ಹಳ್ಳ, ತೊರೆಗಳಲ್ಲಿ ಲಭ್ಯವಿರುವ ಮರಳನ್ನು ಗ್ರಾಮ ಪಂಚಾಯಿತಿ ವತಿಯಿಂದ ವಿಲೇವಾರಿ ಮಾಡಲು ಅವಕಾಶ ಕಲ್ಪಿಸಲಾಗುವುದು. ಜಿಲ್ಲಾ ಮರಳು ಸಮಿತಿಯು ತಾಲ್ಲೂಕು ಮರಳು ಸಮಿತಿಯ ಪ್ರಸ್ತಾವನೆ ಪರಿಶೀಲಿಸಿ, ಮರಳು ನಿಕ್ಷೇಪ ಪ್ರದೇಶಗಳಲ್ಲಿ ಮರಳು ತೆಗೆಯಲು ಆಯಾ ಗ್ರಾಮ ಪಂಚಾಯಿತಿಗಳಿಗೆ ಅನುಮತಿ ನೀಡುವ ಕಾರ್ಯಾದೇಶ ನೀಡಲಿದೆ ಎಂದರು.

**ಮೂರು ಟನ್ ಸಾಮರ್ಥ್ಯ ಸಾಗಣೆ:** ಹಳ್ಳ, ತೊರೆ, ಕೆರೆಗಳ ಮರಳನ್ನು ಪಂಚಾಯಿತಿ ವ್ಯಾಪ್ತಿಯಲ್ಲಿ ಬಳಸಬಹುದು. ಎತ್ತಿನಗಾಡಿ, ಟ್ರ್ಯಾಕ್ಟರ್ ಹಾಗೂ ಮೂರು ಟನ್ ಸಾಮರ್ಥ್ಯದ ಇತರೆ ಲಘು ವಾಹನಗಳಲ್ಲಿ ಮಾತ್ರ ಮರಳು ಸಾಗಾಣಿಕೆಗೆ ಅವಕಾಶ ನೀಡಲಾಗಿದೆ ಎಂದರು.

ಮರಳು ರವಾನೆ ಪರವಾನಿಗಿ ಮುನ್ನ ಗ್ರಾಹಕರಿಂದ ಮನೆ ಅಥವಾ ಇತರೆ ಕಾಮಗಾರಿಗಳಿಗೆ ಸಂಬಂಧಿಸಿದ ನಕ್ಷೆ ಛಾಯಾಚಿತ್ರ ಅಥವಾ ಇತರೆ ದಾಖಲೆ ಪಡೆದ ನಂತರ ಸಾಗಾಣಿಕೆಗೆ ಪರವಾನಿಗಿ ನೀಡಲಾಗುತ್ತದೆ ಎಂದರು.

ಹಳ್ಳ–ತೊರೆಗಳಲ್ಲಿ ಲಭ್ಯವಿರುವ ಮರಳನ್ನು ಸ್ಥಳೀಯ ಮತ್ತು ಸಮುದಾಯ ಕಾಮಗಾರಿಗಳಿಗೆ ಎತ್ತಿನಗಾಡಿ, ಟ್ರ್ಯಾಕ್ಟರ್ ಹಾಗೂ ಇತರೆ ವಾಹನಗಳಲ್ಲಿ ಸಾಗಾಣೆಗೆ ಅವಕಾಶ ನೀಡಲು ಅರಣ್ಯ ಇಲಾಖೆಯೊಂದಿಗೆ ಚರ್ಚಿಸಿ ಅಡೆತಡೆ ನಿವಾರಿಸಲಾಗುವುದು ಎಂದು ತಿಳಿಸಿದರು.

**ಬಾಕಿ ಪರವಾನಿಗಿ ಅರ್ಜಿಗಳ ವಿಲೇವಾರಿ:** ಕ್ರಷರ್ ಘಟಕಗಳ ಸ್ಥಾಪನೆ, ಕಲ್ಲುಪುಡಿ ಮಾಡುವುದಕ್ಕೆ ಪರವಾನಿಗಿ ನೀಡುವ ಅಧಿಕಾರವನ್ನು ಲೈಸನ್ಸಿಂಗ್ ಮತ್ತು ನಿಯಂತ್ರಣಾ ಪ್ರಾಧಿಕಾರಕ್ಕೆ ನೀಡಲಾಗಿದೆ. ಕಳೆದ ಮೂರು ವರ್ಷಗಳಲ್ಲಿ ಪರವಾನಿಗಿ ಪಡೆಯದೆಯೇ ಕ್ರಷರ್ ನಡೆಸುತ್ತಿದ್ದ 340 ಪ್ರಕರಣಗಳ ಪೈಕಿ 47 ಪ್ರಕರಣಗಳಲ್ಲಿ ಮೊಕದ್ದಮೆ ದಾಖಲಿಸಲಾಗಿದೆ. 293 ಪ್ರಕರಣಗಳಲ್ಲಿ ರೂ. 1.55 ಕೋಟಿ ದಂಡ ವಸೂಲು ಮಾಡಲಾಗಿದೆ ಎಂದು ತಿಳಿಸಿದರು.

ಪಟ್ಟಾ ಜಮೀನುಗಳಲ್ಲಿರುವ ಕಟ್ಟಡ ಕಲ್ಲು ಸೇರಿದಂತೆ ಇತರೆ ಉಪ ಖನಿಜಗಳನ್ನು ಸ್ವಂತ ಬಳಕೆಗೆ ತೆಗೆಯಲು ಅವಕಾಶವಿದೆ. ವಾಣಿಜ್ಯ ಉದ್ದೇಶಕ್ಕೆ ನಿರಂತವಾಗಿ ಗಣಿಗಾರಿಕೆ ನಡೆಸಲು ಅವಕಾಶವಿರುವುದಿಲ್ಲ ಎಂದು ಸ್ಪಷ್ಟಪಡಿಸಿದರು.

ಆಧಾರ:ವಿಜಯಕರ್ನಾಟಕ, ದಿನಾಂಕ:22.09.2021

## 110. ನಾಡಗೀತೆ ಗೊಂದಲ; ಅಕ್ಟೋಬರ್ 2 ಗಡುವು

ನಾಡಗೀತೆ ಗೊಂದಲವನ್ನು ಬರುವ ಅಕ್ಟೋಬರ್ 2ರ ಒಳಗೆ ಪರಿಹರಿಸುವುದಾಗಿ ಕನ್ನಡ ಮತ್ತು ಸಂಸ್ಕೃತಿ ಸಚಿವರು ಹೇಳಿದ್ದಾರೆ. ವಿಧಾನಸಭೆಯಲ್ಲಿ ಶೂನ್ಯ ವೇಳೆಯಲ್ಲಿ ಉತ್ತರಿಸಿದ ಸಚಿವರು, ನಾಡಗೀತೆ ಗೊಂದಲಕ್ಕೆ ಶಾಶ್ವತ ಪರಿಹಾರ ಒದಗಿಸಬೇಕು ಎಂಬ ಉದ್ದೇಶದಿಂದ ಸಾಹಿತಿ ದೊಡ್ಡರಂಗೇಗೌಡ ನೇತೃತ್ವದಲ್ಲಿ ಸಮಿತಿ ನೇಮಕ ಮಾಡಲಾಗಿದೆ ಎಂದರು. ಸಮಿತಿ ಈಗಾಗಲೇ ಕಳೆದ 16ರಂದು ಒಂದು ಸುತ್ತಿನ ಸಭೆ ಮಾಡಿದೆ. ಸದ್ಯದಲ್ಲೇ ಮತ್ತೊಂದು ಸಭೆ ನಡೆಯಲಿದೆ. ಅದರ ವರದಿ ಕೈ ಸೇರಿದ ನಂತರ ಗೊಂದಲ ಪರಿಹರಿಸಲಾಗುವುದು ಎಂದರು. ಸ್ಪೀಕರ್ ಅವರು ಮಧ್ಯ ಪ್ರವೇಶಿಸಿ

ಸಚಿವರು ಇದನ್ನು ಗಂಭೀರವಾಗಿ ತೆಗೆದುಕೊಳ್ಳಬೇಕು. ಪ್ರತಿ ವಿಧಾನಮಂಡಲ ಅಧಿವೇಶನದಲ್ಲೂ ಈ ವಿಚಾರವನ್ನು ಬಹಳ ಗಂಭೀರವಾಗಿ ತೆಗೆದುಕೊಂಡಿದ್ದು, ಹಾಡಿನ ರಾಗ ಸಂಯೋಜನೆ ಮತ್ತು ಕಾಲಮಿತಿ ಗೊಂದಲವನ್ನು ನಿವಾರಿಸಲು ಆದ್ಯತೆ ನೀಡಿದೆ. ಅಕ್ಟೋಬರ್ 2ರೊಳಗೆ ಎಲ್ಲ ಗೊಂದಲವನ್ನು ಶಾಶ್ವತವಾಗಿ ಪರಿಹಾರ ಮಾಡುವುದಾಗಿ ಸಚಿವರು ಸದನಕ್ಕೆ ಭರವಸೆ ನೀಡಿದರು.

ಆಧಾರ:ವಿಶ್ವವಾಣಿ, ದಿನಾಂಕ:22.09.2021

## 111. ಆನ್‌ಲೈನ್ ಗ್ಯಾಂಬ್ಲಿಂಗ್ ನಿಷೇಧಕ್ಕೆ ಒಪ್ಪಿಗೆ

ಅನ್‌ಲೈನ್ ಗೇಮ್ ನಿಷೇಧಿಸುವ ಕರ್ನಾಟಕ ಪೊಲೀಸ್ ಕಾಯ್ದೆ ತಿದ್ದುಪಡಿಗೆ ವಿಧಾನಸಭೆಯಲ್ಲಿ ಅಂಗೀಕಾರ ನೀಡಲಾಯಿತು. ಗೃಹ ಸಚಿವರು ವಿಧೇಯಕದ ಮೇಲೆ ವಿವರಣೆ ನೀಡಿ, ಈ ತಿದ್ದುಪಡಿಯಲ್ಲಿ ಆನ್‌ಲೈನ್ ಗೇಮಿಂಗ್, ಜೂಜಾಟ ಎಲ್ಲವನ್ನೂ ನಿಷೇಧಿಸಲಾಗುವುದು. ಶಿಕ್ಷೆಯ ಪ್ರಮಾಣ ಮತ್ತು ದಂಡವನ್ನು ಹೆಚ್ಚಿಸಲಾಗಿದೆ. ಆನ್‌ಲೈನ್ ಗೇಮ್‌ಗೆ ನೆರವು ಮತ್ತು ಕುಮ್ಮಕ್ಕು ನೀಡುವವರ ವಿರುದ್ಧವು ಕ್ರಮ ಕೈಗೊಳ್ಳಲು ತಿದ್ದುಪಡಿ ತರಲಾಗಿದೆ ಎಂದು ಹೇಳಿದರು. ವಿಧೇಯಕದ ಮೇಲೆ ಮಾತನಾಡಿದ ಕಾಂಗ್ರೆಸ್ ಸದಸ್ಯ ರಮೇಶ್ ಕುಮಾರ್, ಐಪಿಎಲ್ ಆರಂಭವಾಗಿದೆ. ಪ್ರತಿ ಬಾಲ್‌ಗೂ ಬೆಟ್ಟಿಂಗ್ ಕಟ್ಟಲಾಗುತ್ತಿದೆ. ಆನ್‌ಲೈನ್ ಗ್ಯಾಂಬ್ಲಿಂಗ್‌ನಲ್ಲಿ ಯಾರನ್ನು ನಿಷೇಧಿಸಲು ಸರ್ಕಾರ ಮುಂದಾಗಿದೆ ಎನ್ನುವುದನ್ನು ಸ್ಪಷ್ಟಪಡಿಸಬೇಕೆಂದು ಆಗ್ರಹಿಸಿದರು.

ಶರತ್ ಬಚ್ಚೇಗೌಡ ಮಾತನಾಡಿ ಐಪಿಎಲ್ ಆರಂಭವಾದರೆ ಒಬ್ಬ ಬುಕ್ಕಿ ಸುಮಾರು ರೂ.20 ಕೋಟಿ ಗಳಿಸುತ್ತಾನೆ. ಅಂತರರಾಷ್ಟ್ರೀಯ ಮಟ್ಟದಲ್ಲಿ ಆ್ಯಪ್‌ಗಳ ಮೂಲಕ ಮಾಹಿತಿ ಬರುತ್ತದೆ. ಅದನ್ನು ತಡೆಯುವ ಪ್ರಯತ್ನ ಮಾಡಬೇಕು. ಪ್ರತಿಯೊಂದು ಆಟದಲ್ಲಿಯೂ ಹಣದ ವ್ಯವಹಾರ ನಡೆಯುತ್ತದೆ. ಅದರ ಬಗ್ಗೆ ಸರ್ಕಾರ ನಿಲುವು ತಿಳಿಸಬೇಕು ಎಂದು ಅಗ್ರಹಿಸಿದರು. ಅವರ ಪ್ರಶ್ನೆಗಳಿಗೆ ಉತ್ತರಿಸಿದ ಬಸವರಾಜ ಬೊಮ್ಮಾಯಿ ಅವರು ರಿಕ್ರಿಯೇಷನ್ ಕ್ಲಬ್ ಹೆಸರಿನಲ್ಲಿ ದೊಡ್ಡ ಪ್ರಮಾಣದಲ್ಲಿ ಗ್ಯಾಂಬ್ಲಿಂಗ್ ನಡೆಯುತ್ತದೆ. ರಾಯಚೂರು, ಕಲಬುರಗಿ ಗಡಿ ಭಾಗದಲ್ಲಿ ಲಕ್ಷಾಂತರ ರೂ.ಗಳ ಗ್ಯಾಂಬ್ಲಿ ಂಗ್ ನಡೆಯುತ್ತದೆ. ಅವರ ಮೇಲೆ ಪ್ರಕರಣ ದಾಖಲಿಸಿದರೂ ಬೇಲ್ ಮೇಲೆ ಬಿಡುಗಡೆಯಾಗುತ್ತಾರೆ. ಜಾಮೀನು ರಹಿತ ಪ್ರಕರಣ ದಾಖಲಿಸಲು ತಿದ್ದುಪಡಿ ಮಾಡಲಾಗುತ್ತಿದೆ. ಆನ್‌ಲೈನ್ ಅಪರಾಧಗಳನ್ನು ತಡೆಯಲು ಕಾನೂನು ಅಗತ್ಯವಿದೆ ಎಂದು ಸ್ಪಷ್ಟೀಕರಣ ನೀಡಿದರು. ನಂತರ ವಿಧೇಯಕಕ್ಕೆ ಅಂಗೀಕಾರ ನೀಡಲಾಯಿತು.

ಆಧಾರ:ವಿಶ್ವವಾಣಿ, ದಿನಾಂಕ:22.09.2021

## 112. ಧಾರ್ಮಿಕ ಕಟ್ಟಡಗಳ ಸಂರಕ್ಷಣಾ ಮಸೂದೆಗೆ ಒಪ್ಪಿಗೆ

ರಾಜ್ಯದ ಸಾರ್ವಜನಿಕ ಸ್ಥಳಗಳಲ್ಲಿರುವ ಎಲ್ಲ ಅನಧಿಕೃತ ಧಾರ್ಮಿಕ ಕಟ್ಟಡಗಳನ್ನು ರಕ್ಷಿಸುವ ಉದ್ದೇಶದಿಂದ ರೂಪಿಸಿರುವ ಕರ್ನಾಟಕ ಧಾರ್ಮಿಕ ಕಟ್ಟಡಗಳ ಸಂರಕ್ಷಣಾ ಮಸೂದೆ 2021ಕ್ಕೆ ವಿಧಾನಸಭೆ ಅಂಗೀಕಾರ ನೀಡಿತು.

ನಂಜನಗೂಡು ತಾಲ್ಲೂಕಿನ ದೇವಸ್ಥಾನವೊಂದನ್ನು ತೆರವುಗೊಳಿಸಿದ ಘಟನೆಗೆ ತೀವ್ರ ವಿರೋಧ ವ್ಯಕ್ತವಾಗಿತ್ತು. ಉಳಿದಿರುವ 2,000ಕ್ಕೂ ಹೆಚ್ಚು ಅನಧಿಕೃತ ಧಾರ್ಮಿಕ ಕಟ್ಟಡಗಳಿಗೆ ರಕ್ಷಣೆ ನೀಡುವ ಉದ್ದೇಶದಿಂದ ಮಸೂದೆ ರೂಪಿಸಿದ್ದ ರಾಜ್ಯ ಸರ್ಕಾರ, ಅದನ್ನು ವಿಧಾನಸಭೆಯಲ್ಲಿ ಮಂಡಿಸಿತ್ತು. ಚರ್ಚೆಯ ಬಳಿಕ ಮಸೂದೆಗೆ ಸದನದ ಒಪ್ಪಿಗೆ ದೊರಕಿತು.

ವಿರೋಧ ಪಕ್ಷದ ನಾಯಕರು ಮಾತನಾಡಿ ನಂಜನಗೂಡಿನಲ್ಲಿ ದೇವಸ್ಥಾನವನ್ನು ಧ್ವಂಸಗೊಳಿಸಿದ ಪ್ರಕರಣ ರಾಜ್ಯ ಸರ್ಕಾರದ ಗಮನಕ್ಕೆ ಬಾರದೇ ನಡೆದಿದೆ ಎಂಬುದನ್ನು ನಂಬಲಾಗದು. ಹಾಗೆ ಆಗಿದ್ದರೆ

ಸರ್ಕಾರ ಏಕೆ ಇದೆ. ಎಲ್ಲವೂ ಸರ್ಕಾರಕ್ಕೆ ತಿಳಿದಿತ್ತು. ಸುಪ್ರೀಂಕೋರ್ಟ್ ತೀರ್ಪು ಬಂದು 12 ವರ್ಷಗಳಾಗಿವೆ. ಹಿಂದೆ ತೆರವು ಮಾಡಿರುವ ಧಾರ್ಮಿಕ ಕಟ್ಟಡಗಳ ಕತೆ ಏನು ಎಂದು ಪ್ರಶ್ನಿಸಿದರು.

ಬಿಜೆಪಿ ಸರ್ಕಾರದವರೇ ದೇವಸ್ಥಾನ ಒಡೆದು ಹಾಕಿ, ಈಗ ರಕ್ಷಣೆಯ ಮಾತನ್ನಾಡುತ್ತಿದ್ದಾರೆ. ಹಿಂದೂ ಮಹಾಸಭಾ, ಹಿಂದೂ ಜಾಗರಣ ವೇದಿಕೆಯ ಒತ್ತಡಕ್ಕೆ ಮಣಿದು ತರಾತುರಿಯಲ್ಲಿ ಮಸೂದೆ ತಂದಿದ್ದಾರೆ. ಸದ್ಭಾವನೆಯಿಂದ ಧಾರ್ಮಿಕ ಕಟ್ಟಡ ಒಡೆಯುವ ಅಧಿಕಾರಿಗಳ ವಿರುದ್ಧ ಕ್ರಮ ಇಲ್ಲ ಎಂಬ ಅಂಶ ಮಸೂದೆಯಲ್ಲಿದೆ. ಇದು ಸರಿಯಲ್ಲ. ದೇವಸ್ಥಾನ ಒಡೆಯುವುದು ಸದ್ಭಾವನೆಯೇ. ಆ ಅಂಶವನ್ನು ಮಸೂದೆಯಿಂದ ಕೈಬಿಡಬೇಕು ಎಂದು ಆಗ್ರಹಿಸಿದರು.

ಜೆಡಿಎಸ್‌ನ ಬಂಡೆಪ್ಪ ಕಾಶೆಂಪೂರ ಮಾತನಾಡಿ, ಸುಪ್ರೀಂಕೋರ್ಟ್ ನಿರ್ದೇಶನ ನೀಡಿ ಹಲವು ವರ್ಷಗಳು ಕಳೆದಿವೆ. ಬಿಜೆಪಿ ಸರ್ಕಾರ ಈಗ ಪ್ರಚಾರಕ್ಕಾಗಿ ಈ ರೀತಿ ಮಾಡುತ್ತಿದೆ. ಹಿಂದೆ ತೆರವು ಮಾಡಿರುವ ಎಲ್ಲ ಧಾರ್ಮಿಕ ಕಟ್ಟಡಗಳನ್ನು ಪುನರ್ ನಿರ್ಮಾಣ ಮಾಡಬೇಕು ಎಂದು ಒತ್ತಾಯಿಸಿದರು.

ವಿದೇಶಗಳಿಂದ ಬಂದವರು ಗುಡಿ, ಗುಡಾರಗಳನ್ನು ಒಡೆದರು ಎಂಬ ಮಾತನ್ನು ಹಿಂದೆ ಓದುತ್ತಿದ್ದೆವು. ಬಿಜೆಪಿ ಸರ್ಕಾರದವರು ದೇವಸ್ಥಾನ ಒಡೆದರು ಎಂಬುದು ಇತಿಹಾಸದ ಭಾಗವಾಗದಿರಲಿ ಎಂದು ಕಾಂಗ್ರೆಸ್‌ನ ಯು.ಟಿ.ಖಾದರ್ ಹೇಳಿದರು. ಈ ಮಾತು ಬಿಜೆಪಿ ಮತ್ತು ಕಾಂಗ್ರೆಸ್ ಸದಸ್ಯರ ನಡುವೆ ಕೆಲಕಾಲ ಮಾತಿನ ಸಮರಕ್ಕೂ ಕಾರಣವಾಯಿತು.

**ಲೋಪಸರಿಪಡಿಸಲು ಮಸೂದೆ:** ಚರ್ಚೆಗೆ ಉತ್ತರ ನೀಡಿದ ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವರು ಸುಪ್ರೀಂಕೋರ್ಟ್ ಆದೇಶವನ್ನು ಪಾಲಿಸುವ ಅಧಿಕಾರಿಗಳ ಅತ್ಯುತ್ಸಾಹದಿಂದ ಈ ಘಟನೆ ನಡೆದಿದೆ. ನಿಮ್ಮ ಕಾಲದಲ್ಲೂ ಹಲವು ದೇವಸ್ಥಾನಗಳ ತೆರವು ನಡೆದಿದೆ. ಅದಕ್ಕೆ ನಿಮ್ಮನ್ನು ಹೊಣೆ ಮಾಡಲಾದೀತೆ ಎಂದು ಪ್ರಶ್ನಿಸಿದರು.

ಈ ಮಸೂದೆಯು ಕಾನೂನಿನ ವ್ಯಾಪ್ತಿಗೆ ಒಳಪಟ್ಟಿರುವ ಎಲ್ಲ ಅನಧಿಕೃತ ಧಾರ್ಮಿಕ ಕಟ್ಟಡಗಳಿಗೆ ರಕ್ಷಣೆ ನೀಡಲಿದೆ. ಇನ್ನು ಮುಂದೆ ಅನಧಿಕೃತ ಧಾರ್ಮಿಕ ಕಟ್ಟಡಗಳ ನಿರ್ಮಾಣಕ್ಕೆ ಅವಕಾಶ ಇರುವುದಿಲ್ಲ ಎಂದರು.

ಆಧಾರ:ಪ್ರಜಾವಾಣಿ, ದಿನಾಂಕ:22.09.2021

## 113. ಸ್ಯಾಟ್‌ಲೈಟ್ ಫೋನ್ ಬಳಕೆ ಕಟ್ಟೆಚ್ಚರ

ಇತ್ತೀಚೆಗಷ್ಟೇ ಕರಾವಳಿ ಭಾಗದಲ್ಲಿ ಸ್ಯಾಟ್‌ಲೈಟ್ ಫೋನ್‌ಗಳ ಬಳಕೆಯಾಗಿದೆ ಎನ್ನುವ ವರದಿಗಳ ಬೆನ್ನಲ್ಲೇ ರಾಜ್ಯ ಸರ್ಕಾರ ಪ್ರಸಕ್ತ ವರ್ಷವೇ 220 ಕಡೆ ಸ್ಯಾಟ್‌ಲೈಟ್ ಫೋನ್‌ಗಳನ್ನು ಬಳಸಿರುವ ಮಾಹಿತಿಯಿದೆ ಎನ್ನುವ ಅಘಾತಕಾರಿ ವಿಷಯವನ್ನು ಹಂಚಿಕೊಂಡಿದೆ.

ಈ ಬಗ್ಗೆ ವಿಧಾನಸಭೆಯಲ್ಲಿ ಅಧಿಕೃತ ಮಾಹಿತಿ ನೀಡಿದ ಗೃಹ ಸಚಿವರು ರಾಜ್ಯದಲ್ಲಿ ಸ್ಯಾಟ್‌ಲೈಟ್ ಫೋನ್‌ಗಳ ಬಳಕೆಯಾಗಿರುವ ಬಗ್ಗೆ ಮಾಹಿತಿಯಿದೆ. ಇದರಿಂದ ಯಾವುದೇ ಸಮಸ್ಯೆಯಿಲ್ಲ. ಯಾವುದೇ ಆಘಾತಕಾರಿ ಸಂಚು ರೂಪಿಸಿರುವ ಮಾಹಿತಿಯಿಲ್ಲ, ಆದರೂ ಸ್ಯಾಟ್‌ಲೈಟ್ ಫೋನ್‌ಗಳ ಬಗ್ಗೆ ನಿಗಾವಹಿಸಲಾಗಿದೆ ಎಂದರು.

ಶೂನ್ಯ ವೇಳೆಯಲ್ಲಿ ಕಾಂಗ್ರೆಸ್‌ನ ಯು.ಟಿ.ಖಾದರ್ ಪ್ರಸ್ತಾಪಕ್ಕೆ ಉತ್ತರಿಸಿದ ಅವರು ರಾಜ್ಯದ ಕೆಲವೆಡೆ ಸ್ಯಾಟ್‌ಲೈಟ್ ಫೋನ್‌ಗಳ ಬಳಕೆ ಬಗ್ಗೆ ಮಾಹಿತಿಗಳು ಬಂದಿವೆ. ಈ ಮಾಹಿತಿಗಳನ್ನು ಕೇಂದ್ರ ಸರ್ಕಾರದ ರಾ.ಸಂಸ್ಥೆ ಮತ್ತು ಐಬಿಯೊಂದಿಗೆ ಹಂಚಿಕೊಂಡಿದ್ದೇವೆ ಎಂದರು. ರಾಜ್ಯದಲ್ಲಿ 2020ರಲ್ಲಿ 250 ಕಡೆ ಸ್ಯಾಟ್‌ಲೈಟ್ ಫೋನ್‌ಗಳನ್ನು ಬಳಸಲಾಗಿದೆ. 2021ರಲ್ಲಿ 220 ಕಡೆ ಸ್ಯಾಟ್‌ಲೈಟ್ ಫೋನ್‌ಗಳನ್ನು ಬಳಸಿರುವ ಮಾಹಿತಿ ಇದೆ ಎಂದರು.

ಈ ಸ್ಯಾಟ್‌ಲೈಟ್ ಫೋನ್ ಬಳಕೆ ವಿಚಾರ ಸೂಕ್ಷ್ಮವಾಗಿದ್ದು, ದೇಶದ ಭದ್ರತೆಗೆ ಸಂಬಂಧಿಸಿದ್ದರಿಂದ ಈ ಬಗ್ಗೆ ಹೆಚ್ಚು ಮಾತನಾಡಲು ಆಗಲ್ಲ. ರಾಜ್ಯ ಸರ್ಕಾರ ಈ ಬಗ್ಗೆ ಎಚ್ಚರವಹಿಸಿದ್ದು, ಸ್ಯಾಟ್‌ಲೈಟ್ ಫೋನ್ ಬಳಕೆಯಾಗಿರುವ ಪ್ರದೇಶದಲ್ಲಿ ಪೊಲೀಸರು ಹೆಚ್ಚು ಅಲರ್ಟ್ ಆಗಿದ್ದಾರೆ ಎಂದು ತಿಳಿಸಿದರು.

ಆಧಾರ:ವಿಶ್ವವಾಣಿ, ದಿನಾಂಕ:22.09.2021

## 114. ಶಿಕ್ಷಕರ ವರ್ಗಾವಣೆಗೆ ಅಸ್ತು

ಆಡಳಿತ ಮತ್ತು ಪ್ರತಿಪಕ್ಷಗಳ ಹಲವು ಸದಸ್ಯರ ಆಕ್ಷೇಪದ ನಡುವೆಯೂ ಬಹು ನಿರೀಕ್ಷಿತ 'ಶಿಕ್ಷಕರ ವರ್ಗಾವಣೆ ನಿಯಂತ್ರಣ ತಿದ್ದುಪಡಿ ವಿಧೇಯಕ–2021' ವಿಧಾನಸಭೆಯಲ್ಲಿ ಅಂಗೀಕಾರ ದೊರೆತಿದೆ.

ಹತ್ತು ವರ್ಷ ಮೇಲ್ಪಟ್ಟು ಒಂದೇ ಕಡೆ ಸೇವೆ ಸಲ್ಲಿಸುತ್ತಿದ್ದ ಪ್ರಾಥಮಿಕ ಮತ್ತು ಪ್ರೌಢಶಾಲಾ ಶಾಲಾ ಶಿಕ್ಷಕರನ್ನು 2019ರಲ್ಲಿ ಕಡ್ಡಾಯ ವರ್ಗಾವಣೆ ನಿಯಮದಡಿ ವರ್ಗ ಮಾಡಲಾಗಿತ್ತು. ಈ ವೇಳೆ ವಿರೋಧ ಎದುರಾದಾಗ ಒಂದು ಸಲದ ಮರುವರ್ಗಾವಣೆಗೆ ಅವಕಾಶ ಕಲ್ಪಿಸುವುದಾಗಿ ಭರವಸೆ ನೀಡಿತ್ತು. ಅದರಂತೆ ವಿಧೇಯಕದ ಅಧಿನಿಯಮ 04ಕ್ಕೆ ತಿದ್ದುಪಡಿ ತಂದು ಹೊರ ಜಿಲ್ಲೆಗೆ ವರ್ಗಾವಣೆ ಆಗಿರುವ ಶಿಕ್ಷಕರಿಗೆ 2019– 20ರಲ್ಲಿ ಸೇವೆ ಸಲ್ಲಿಸುತ್ತಿದ್ದ ತಾಲ್ಲೂಕು ಮತ್ತು ಜಿಲ್ಲೆಯೊಳಗೆ ಒಂದು ಸಲದ ಮರು ವರ್ಗಾವಣೆಗೆ ಸರ್ಕಾರ ಅವಕಾಶ ಕಲ್ಪಿಸಿಕೊಟ್ಟಿದೆ. ತಾಲ್ಲೂಕು, ಜಿಲ್ಲೆ ಮತ್ತು ವಿಭಾಗೀಯ ವ್ಯಾಪ್ತಿಯನ್ನು ಕ್ರಮವಾಗಿ ಆಯ್ಕೆ ಮಾಡಿಕೊಳ್ಳಲು ಅವಕಾಶ ನೀಡಲಾಗಿದೆ.

ಆಧಾರ: ವಿಜಯ ಕರ್ನಾಟಕ, ದಿನಾಂಕ:23.09.2021.

## 115. ಚಾಣಕ್ಯ ವಿವಿಗೆ ಜಮೀನು: ದೊಡ್ಡ ಹಗರಣ

ಚಾಣಕ್ಯ ವಿಶ್ವವಿದ್ಯಾಲಯ ಸ್ಥಾಪನೆಗೆ ಸರ್ಕಾರದ ವತಿಯಿಂದ ಅರ್ಹತೆ ಹಾಗೂ ಅನುಭವ ಇಲ್ಲದ ಸೆಸ್ ಎಂಬ ಸಂಸ್ಥೆಗೆ ಕಡಿಮೆ ದರದಲ್ಲಿ 116.16 ಎಕರೆ ಜಮೀನು ನೀಡಿದ್ದು, ಸರ್ಕಾರ ಆ ತೀರ್ಮಾನ ಕೈ ಬಿಡಬೇಕು ಎಂದು ಪ್ರತಿಪಕ್ಷ ನಾಯಕ ಸಿದ್ದರಾಮಯ್ಯ ಹಾಗೂ ಕೆಪಿಸಿಸಿ ಅಧ್ಯಕ್ಷ ಡಿ.ಕೆ.ಶಿವಕುಮಾರ್ ಒತ್ತಾಯಿಸಿದ್ದಾರೆ.

ಜಂಟಿ ಸುದ್ದಿಗೋಷ್ಠಿ ನಡೆಸಿದ ಅವರು, ಅಂತರರಾಷ್ಟ್ರೀಯ ವಿಮಾನ ನಿಲ್ದಾಣ ಸಮೀಪ ಏರೋಸ್ಪೇಸ್ ಹಾಗೂ ಡಿಫೆನ್ಸ್ ಪಾರ್ಕ್‌ಗಾಗಿ ರೈತರಿಂದ ಸ್ವಾಧೀನ ಪಡಿಸಿಕೊಂಡಿರುವ ಜಮೀನು ಆರ್‌ಎಸ್‌ಎಸ್‌ಗೆ ಸೇರಿದ ಸಂಸ್ಥೆಗೆ ಬಳುವಳಿಯಾಗಿ ಕೇವಲ ರೂ.50 ಕೋಟಿಗೆ ಕೊಡಲು ವಿಧೇಯಕ ಚರ್ಚೆ ಇಲ್ಲದೆ ಅಂಗೀಕಾರ ಮಾಡಿಕೊಳ್ಳಲಾಗಿದೆ. ಇದನ್ನು ಒಪ್ಪಲು ಸಾಧ್ಯವಿಲ್ಲ ಎಂದು ಹೇಳಿದರು.

ರೈತರಿಂದಲೇ ಪ್ರತಿ ಎಕರೆಗೆ ರೂ.1.50 ಕೋಟಿ ಪರಿಹಾರ ನೀಡಿ ವಶಕ್ಕೆ ಪಡೆಯಲಾಗಿದೆ. ಕೆಐಎಡಿಬಿ ಅಭಿವೃದ್ಧಿ ಪಡಿಸಿದ ನಂತರ ಪ್ರತಿ ಎಕರೆ ರೂ.10 ಕೋಟಿಗೂ ಹೆಚ್ಚು ಬೆಲೆ ಬಾಳುತ್ತದೆ. ರೂ.400 ಕೋಟಿ ಮೊತ್ತದ ಭೂಮಿ ರೂ.50 ಕೋಟಿಗೆ ಕೊಡುವ ಮೂಲಕ ಸರ್ಕಾರಕ್ಕೆ ನಷ್ಟ ಮಾಡಲಾಗಿದೆ ಎಂದು ಆರೋಪಿಸಿದರು.

ಸಿದ್ದರಾಮಯ್ಯ ಮಾತನಾಡಿ, ಚಾಣಕ್ಯ ವಿಶ್ವವಿದ್ಯಾಲಯ ಸ್ಥಾಪನೆಗೆ ಸಂಬಂಧಿಸಿದಂತೆ ಸೆಂಟರ್ ಫಾರ್ ಎಜುಕೇಷನ್ ಅಂಡ್ ಸೋಷಿಯಲ್ ಸ್ಟಡೀಸ್ ಸಂಸ್ಥೆಗೆ(ಸೆಸ್) ಕಡಿಮೆ ದರದಲ್ಲಿ ನೂರಾರು ಎಕರೆ ಭೂಮಿ ನೀಡುವ ತೀರ್ಮಾನದ ವಿರುದ್ಧ ಕಾನೂನು ಹೋರಾಟ ನಡೆಸುವುದಾಗಿ ಎಚ್ಚರಿಸಿದರು.

ಕೆಪಿಸಿಸಿ ಅಧ್ಯಕ್ಷ ಡಿ.ಕೆ.ಶಿವಕುಮಾರ್ ಮಾತನಾಡಿ, ಖಾಸಗಿ ವಿಶ್ವವಿದ್ಯಾಲಯ ಸ್ಥಾಪನೆಗೆ ಇರುವ ನಿಯಮಾವಳಿ ಪರಿಶೀಲನೆ ಮಾಡಿದಾಗ ಈ ಸಂಸ್ಥೆಗೆ ನೀಡಿದ ಪರವಾನಿಗಿಯಲ್ಲಿ ಅದೆಲ್ಲದರ ಉಲ್ಲಂಘನೆ

ಅಗಿದೆ. ಒಂದು ಸಂಸ್ಥೆಯೇ ಇಲ್ಲ. ಜಮೀನು ಕಡಿಮೆ ಬೆಲೆಗೆ ನೀಡುತ್ತಾರೆ ಎಂದು ಪಡೆಯುವುದು ಸರಿಯಲ್ಲ ಎಂದು ತಿಳಿಸಿದರು.

ವಿಧಾನ ಪರಿಷತ್ ವಿರೋಧ ಪಕ್ಷದ ನಾಯಕ ಎಸ್.ಆರ್.ಪಾಟೀಲ್, ಕೆಪಿಸಿಸಿ ಕಾರ್ಯಧ್ಯಕ್ಷ ರಾಮಲಿಂಗಾರೆಡ್ಡಿ, ಮಾಜಿ ಸಚಿವರಾದ ಹೆಚ್.ಕೆ.ಪಾಟೀಲ್, ರಮೇಶ್ ಕುಮಾರ್, ಕೆ.ಜೆ.ಚಾರ್ಜ್, ಕೃಷ್ಣ ಭೈರೇಗೌಡ ಉಪಸ್ಥಿತರಿದ್ದರು.

ಆಧಾರ: ಉದಯವಾಣಿ, ದಿನಾಂಕ:23.09.2021.

## 116. ಅಕ್ಟೋಬರ್ 2 ರಂದು ಖಾದಿ ವಸ್ತು ಖರೀದಿಗೆ ಸ್ಪೀಕರ್ ಸೂಚನೆ

ಅಕ್ಟೋಬರ್ 2 ರಂದು ಗಾಂಧಿ ಜಯಂತಿ ಪ್ರಯುಕ್ತ ಎಲ್ಲ ಶಾಸಕರು ಅಂದು ತಮ್ಮ ಕ್ಷೇತ್ರ ವ್ಯಾಪ್ತಿಯಲ್ಲಿ ಖಾದಿ ವಸ್ತುಗಳನ್ನು ಖರೀದಿ ಮಾಡಿ ಬೇರೆಯವರು ಖರೀದಿ ಮಾಡಲು ಪ್ರೇರಣೆ ನೀಡಬೇಕು ಎಂದು ವಿಧಾನ ಸಭಾಧ್ಯಕ್ಷರವರು ಸೂಚಿಸಿದ್ದಾರೆ. ವಿಧಾನಸಭೆಯಲ್ಲಿ ಖಾದಿ ಮತ್ತು ಗ್ರಾಮೋದ್ಯೋಗ ಮಂಡಳಿ ತಿದ್ದುಪಡಿ ವಿಧೇಯಕಕ್ಕೆ ಅಂಗೀಕಾರ ನೀಡಿದ ಸಂದರ್ಭದಲ್ಲಿ ಮಾತನಾಡಿ, ಗಾಂಧೀಜಿಯವರು ಕಂಡ ಕನಸು ನನಸು ಮಾಡಲು ಖಾದಿಗೆ ಪ್ರೋತ್ಸಾಹ ನೀಡಲು ಎಲ್ಲರೂ ಸಹಕಾರ ನೀಡಬೇಕು. ಅಕ್ಟೋಬರ್ 2 ರಂದು ಪ್ರತಿಯೊಬ್ಬ ಶಾಸಕರು ಖಾದಿಗೆ ಪ್ರೋತ್ಸಾಹ ನೀಡಬೇಕೆಂದು ಸಭಾಧ್ಯಕ್ಷರವರು ಮನವಿ ಮಾಡಿದರು.

ಆಧಾರ: ಉದಯವಾಣಿ, ದಿನಾಂಕ:23.09.2021.

## 117. ಬಹುತ್ವದ ನಾಶಕ್ಕೆ ಮುನ್ನುಡಿ: ಮೇಲ್ಮನೆಯಲ್ಲಿ ಪ್ರತಿಪಕ್ಷಗಳ ವಾಗ್ದಾಳಿ

ದೇಶದಲ್ಲಿ ಎಲ್ಲ ರಾಜ್ಯಗಳಿಗಿಂತ ಮೊದಲು ಜಾರಿಗೊಳಿಸಲು ಹೊರಟಿರುವ ಬಹು ಚರ್ಚಿತ 'ರಾಷ್ಟ್ರೀಯ ಶಿಕ್ಷಣ ನೀತಿ' ಮೇಲ್ಮನೆಯಲ್ಲಿ ಪ್ರತಿಧ್ವನಿಸಿತು. 'ಸಂಘ ಪರಿವಾರದ ಸಿದ್ಧಾಂತಗಳನ್ನು ತುಂಬುವ ಮೂಲಕ ಬಹುತ್ವವನ್ನು ನಾಶಪಡಿಸುವ ಕೇಂದ್ರೀಕೃತ ನೀತಿ ಇದಾಗಿದೆ' ಎಂದು ಪ್ರತಿಪಕ್ಷಗಳು ವಾಗ್ದಾಳಿ ನಡೆಸಿದವು.

ನಿಯಮ 330ರ ಅಡಿ ನಡೆದ ರಾಷ್ಟ್ರೀಯ ಶಿಕ್ಷಣ ನೀತಿ (ಎನ್‌ಇಪಿ) ಕುರಿತ ಚರ್ಚೆಯಲ್ಲಿ ಮಾತನಾಡಿದ ಕಾಂಗ್ರೆಸ್‌ನ ಬಿ.ಕೆ.ಪ್ರಸಾದ್, 'ಜ್ಯಾತ್ಯಾತೀತ ರಾಷ್ಟ್ರದಲ್ಲಿ ಮೂರು ನಾಗರಿಕತೆಗಳು ಏಳೆಂಟು ಧರ್ಮಗಳು, 22 ಅಧಿಕೃತ ಭಾಷೆಗಳು ಒಳಗೊಂಡಂತೆ ಬಹುತ್ವವನ್ನು ಹೊಂದಿದೆ. ಸರ್ಕಾರವು ಹೊಸ ರಾಷ್ಟ್ರೀಯ ಶಿಕ್ಷಣ ನೀತಿ ಮೂಲಕ ಆ ಬಹುತ್ವವನ್ನು ನಾಶಪಡಿಸುವ ಹಾಗೂ ಹಿಂದಿ ಹೇರಿಕೆಯ ಒಂದು ಕೇಂದ್ರೀಕರಿಸಿದ ವ್ಯವಸ್ಥೆ ತರಲು ಹೊರಟಿದೆ' ಎಂದು ಆಕ್ರೋಶ ವ್ಯಕ್ತಪಡಿಸಿದರು.

ಜೆಡಿಎಸ್ ಸದಸ್ಯ ಮರಿತಿಬ್ಬೇಗೌಡ ಮಾತನಾಡಿ, ಎನ್‌ಇಪಿ ಅನುಷ್ಠಾನ ರಚನೆ ಮಾಡಿರುವ ಮೂರು ಸಮಿತಿಯಲ್ಲೂ ಸರಿಯಿಲ್ಲ. ರಾಜ್ಯದ ಪ್ರತಿಷ್ಠಿತ ವಿವಿಯವರು ಯಾರೂ ಇಲ್ಲ. ಯಾವುದೋ ಒಂದು ಗುಂಪು, ಯಾವುದೋ ಅಜೆಂಡಾ ಅನುಷ್ಠಾನ ಮಾಡಿದ್ದಾರೆ. ಎನ್‌ಇಪಿ ಸಮಿತಿ ಹಲವು ಸಂಶಯ ಮೂಡಿಸಿದೆ. ಸಮಿತಿಯಲ್ಲಿ ಶಾಸಕರು ಹಾಗೂ ವಿಧಾನ ಪರಿಷತ್ ಸದಸ್ಯರು ಯಾರೂ ಇಲ್ಲ. ಬದಲಿಗೆ ಆರೆಸ್ಸೆಸ್‌ನ ಒಂದು ಭಾಗ ಅಥವಾ ಆಡಳಿತ ಪಕ್ಷದ ಭಾಗವಾಗಿ ಎರಡು ಸಮಿತಿಗೆ ಅರುಣ್ ಶಹಪೂರ ಅವರು ಸೇರಿಸಿದ್ದಾರೆ ಎಂಬಂತಿದೆ. ಎನ್‌ಇಪಿ ಅನುಷ್ಠಾನದಲ್ಲಿ ಸಮಾನತೆ ಇಲ್ಲ. ಕಾನೂನು ಸಲಹೆಯನ್ನು ಪಡೆದಿಲ್ಲ ಎಂದು ದೂರಿದರು.

**ಎನ್‌ಇಪಿ ಬಗ್ಗೆ ಮುಕ್ತ ಚರ್ಚೆಗೆ ಸಿದ್ದ: ಸಿಎಂ:** ಶಿಕ್ಷಣ, ಶೈಕ್ಷಣಿಕ ಸ್ಪರ್ಧೆ ಹಾಗೂ ಅದಕ್ಕೆ ಬೇಕಾದ ಸಿದ್ಧತೆಗೆ ಬದಲಾವಣೆ ಅನಿವಾರ್ಯ. ಹಾಗೆಯೇ ಜ್ಞಾನ ಯಾವುದೇ ರೂಪದಲ್ಲಿ ಬಂದರೂ

ಸ್ವೀಕರಿಸಬೇಕು. ರಾಷ್ಟ್ರೀಯ ಶಿಕ್ಷಣ ನೀತಿ ಅನುಷ್ಠಾನದಲ್ಲಿ ಬದಲಾವಣೆ ಬೇಕಾಗುತ್ತದೆ. ನಾವು ಇದರ ಬಗ್ಗೆ ಮುಕ್ತ ಚರ್ಚೆಗೆ ಸಿದ್ಧ ಎಂದು ಮುಖ್ಯಮಂತ್ರಿಯವರು ಹೇಳಿದರು.

ಚರ್ಚೆ ನಂತರ ಪ್ರಕ್ರಿಯಿಸಿದ ಮುಖ್ಯಮಂತ್ರಿ, 'ಮಕ್ಕಳ ಉತ್ತಮ ಭವಿಷ್ಯಕ್ಕಾಗಿ ಇದನ್ನು ರೂಪಿಸಲಾಗಿದೆ. ವಿವಿಧ ಆಯಾಮಗಳಲ್ಲಿ ಇನ್ನಷ್ಟು ಚರ್ಚೆ ನಡೆಯಬೇಕಿದೆ. ಸರ್ಕಾರ ಎಲ್ಲ ರೀತಿಯ ಚರ್ಚೆಗೆ ಸಿದ್ಧವಿದೆ. ಮಕ್ಕಳಿಗೆ ಹಲವು ಅವಕಾಶ, ಮುಕ್ತ ವಾತಾವರಣ, ಉತ್ಕೃಷ್ಟ ಕೌಶಲ್ಯ ನೀಡಲು ಈ ನೀತಿ ಸಹಕಾರಿ ಆಗಲಿದೆ ಎಂದರು.

ಉನ್ನತ ಶಿಕ್ಷಣ ಸಚಿವ ಡಾ.ಸಿ.ಎನ್.ಅಶ್ವತ್ಥ ನಾರಾಯಣ ಮಾತನಾಡಿ, ರಾಷ್ಟ್ರೀಯ ಶಿಕ್ಷಣ ನೀತಿಯ ನೆರೆ–ಹೊರೆಯಲ್ಲಿ ಸಮಾನ ಶಿಕ್ಷಣ ನೀತಿ ಎಂಬ ಸಂವಿಧಾನದ ಆಶಯಗಳಿಗೆ ವಿರುದ್ಧವಾಗಿಲ್ಲ. ಎನ್ಇಪಿ ಗುಣಮಟ್ಟ, ಸಮಾನತೆ ಹಾಗೂ ಸೇರುವಿಕೆಗೆ ಒತ್ತು ನೀಡುತ್ತದೆ. ಸುದೀರ್ಘ ಚರ್ಚೆಯ ನಂತರ ಅನುಷ್ಠಾನ ಮಾಡಲಾಗುತ್ತದೆ ಎಂದು ಸ್ಪಷ್ಟ ಪಡಿಸಿದರು.

ಆನ್‌ಲೈನ್ ಮೂಲಕ 2015 ರಿಂದ ಎನ್ಇಪಿಗೆ ಸಂಬಂಧಿಸಿದಂತೆ ಸಲಹೆ ಪಡೆಯಲಾಗಿದೆ. ದೇಶದ ಎರಡು ಲಕ್ಷ ಗ್ರಾಮ ಪಂಚಾಯಿತಿಯಿಂದ 1,10,623 ಸಲಹೆಗಳು ಬಂದಿವೆ. 26 ಕ್ಕೂ ಅಧಿಕ ಸಲಹೆ ಆನ್‌ಲೈನ್ ಬಂದಿತ್ತು. ಸಮಗ್ರವಾಗಿ ಅಧ್ಯಯನ ನಡೆಸಿ, ಎನ್ಇಪಿ ರೂಪಿಸಲಾಗಿದೆ. ಮಾಜಿ ಮುಖ್ಯಮಂತ್ರಿ ಸಿದ್ದರಾಮಯ್ಯ ಕೂಡ ಸಲಹೆ ನೀಡಿದ್ದಾರೆ. ಮಾಜಿ ಶಿಕ್ಷಣ ಸಚಿವರಾದ ಕಿಮ್ಮನೆ ರತ್ನಾಕರ. ತನ್ವೀರ್ ಸೇಠ್ ಹಾಗೂ ಬಸವರಾಜ್ ರಾಯರೆಡ್ಡಿ ಅವರೂ ಎನ್ಇಪಿ ಕುರಿತ ಸಭೆಗಳಲ್ಲಿ ಭಾಗವಹಿಸಿದ್ದರು. ಹೀಗೆ ಎಲ್ಲರೊಂದಿಗೆ ಚರ್ಚಿಸಿ ಅನುಷ್ಠಾನ ಮಾಡಲಾಗುತ್ತಿದೆ ಎಂದು ಹೇಳಿದರು.

ಆಧಾರ: ಉದಯವಾಣಿ, ದಿನಾಂಕ:24.09.2021.

## 118. ಎನ್ಇಪಿ ಮುಕ್ತ ಚರ್ಚೆಗೆ ಸರ್ಕಾರ ಸಿದ್ಧ ಎಂದ ಸಿಎಂ

ನೂತನ ರಾಷ್ಟ್ರೀಯ ಶಿಕ್ಷಣ ನೀತಿ ಬಗ್ಗೆ ಮುಕ್ತ ಚರ್ಚೆಗೆ ಸರ್ಕಾರ ಸಿದ್ಧವಿದ್ದು, ಸದಸ್ಯರ ಸಲಹೆಗಳನ್ನು ಪರಿಗಣಿಸಲಾಗುವುದು ಎಂದು ಮುಖ್ಯಮಂತ್ರಿಯವರು ಹೇಳಿದರು. ಪರಿಷತ್‌ನಲ್ಲಿ ನೂತನ ರಾಷ್ಟ್ರೀಯ ಶಿಕ್ಷಣ ಚರ್ಚೆ ವೇಳೆ ಮಧ್ಯ ಪ್ರವೇಶಿಸಿ," ನೀತಿ ಬಗ್ಗೆ ಚರ್ಚೆಯಾದಷ್ಟೂ ಇನ್ನಷ್ಟು ಹೊಸ ಆಯಾಮಗಳು ದೊರೆಯುತ್ತದೆ," ಎಂದರು.

"ಇಡೀ ವಿಶ್ವ ಗ್ಲೋಬಲ್ ವಿಲೇಜ್‌ಆಗಿರುವ ಈ ಹೊತ್ತಿನಲ್ಲಿ ಕರ್ನಾಟಕದ ಹಳ್ಳಿಯ ಹುಡುಗ ಜಗತ್ತಿನ ಜೊತೆ ಪೈಪೋಟಿ ನಡೆಸಬೇಕಾಗಿದೆ. ಅದನ್ನು ದೃಷ್ಟಿಯಲ್ಲಿಟ್ಟುಕೊಂಡು ಪ್ರಧಾನಿ ನರೇಂದ್ರ ಮೋದಿ ಅವರು ಹೊಸ ನೀತಿಯನ್ನು ಜಾರಿಗೊಳಿಸಲು ಮುಂದಾಗಿದ್ದಾರೆ. ಯಾವುದೇ ಹೊಸ ನೀತಿ ಜಾರಿಗೂ ಮುನ್ನ ಪರ -ವಿರೋಧ ಸಹಜ,' ಎಂದರು.

ಚರ್ಚೆಗೆ ಉನ್ನತ ಶಿಕ್ಷಣ ಸಚಿವರು ಉತ್ತರ ನೀಡುತ್ತಿದ್ದ ವೇಳೆ, ಸಭಾಪತಿಯವರು ಎನ್ಇಪಿ ಬಗ್ಗೆ ಹಲವು ಸದಸ್ಯರು ವಿಷಯ ಪ್ರಸ್ತಾಪಿಸಿದ್ದಾರೆ. ಆ ಬಗ್ಗೆ ಉನ್ನತ ಶಿಕ್ಷಣ ಸಚಿವರ ನೇತೃತ್ವದಲ್ಲಿ ಪರಿಷತ್ತಿನ ಎಲ್ಲ ಸದಸ್ಯರ ಸಭೆ ಕರೆದು ಚರ್ಚೆ ನಡೆಸಬೇಕೆಂದು ಸರ್ಕಾರಕ್ಕೆ ಸಲಹೆ ನೀಡಿದರು. ಅದಕ್ಕೆ ಸಚಿವರು ಸಮ್ಮತಿಸಿದರು.

ಬಿ.ಕೆ ಹರಿಪ್ರಸಾದ್, "ತರಾತುರಿಯಲ್ಲಿ ರಾಷ್ಟ್ರೀಯ ಶಿಕ್ಷಣ ನೀತಿ ಜಾರಿಗೊಳಿಸಲಾಗುತ್ತಿದೆ. ಇದು ಸಂಘ ಪರಿಹಾರದ ಸಿದ್ಧಾಂತವಾಗಿದೆ, ಇದು ಬಹುತ್ವ ಸಂಸ್ಕೃತಿಯನ್ನು ನಾಶಗೊಳಿಸಲಿದೆ," ಎಂದು ಆರೋಪಿಸಿದರು. "ನೀತಿ ಸಂವಿಧಾನದ ಆಶಯಗಳಿಗೆ ವಿರುದ್ಧವಾಗಿದೆ. ಇದರಿಂದ ಆರ್‌ಟಿಇ ಪದ್ಧತಿ ಹೋಗಲಿದೆ. ಕೊಡವ, ತುಳು ಸೇರಿದಂತೆ ಪ್ರಾದೇಶಿಕ ಭಾಷೆಗಳಿಗೆ ಧಕ್ಕೆ ಆಗಲಿದೆ. ಜೊತೆಗೆ ಇದು ಶಿಕ್ಷಣ ಕುರಿತ ರಾಜ್ಯಗಳ ಹಕ್ಕನ್ನು ಕೇಂದ್ರ ಕಸಿದುಕೊಳ್ಳುವ ಹುನ್ನಾರವಾಗಿದೆ," ಎಂದು ಹೇಳಿದರು.

ಜೆಡಿಎಸ್‌ನ ಮರಿತಿಬ್ಬೇಗೌಡ," ಎನ್ಇಪಿ ಶಿಕ್ಷಣವನ್ನು ವ್ಯಾಪರೀಕರಣ ಮತ್ತು ಖಾಸಗಿ ಕಾರಣಗೊಳಿಸುವ ಹುನ್ನಾರ. ಇದರಿಂದ ನಿರುದ್ಯೋಗ ಹೆಚ್ಚಾಗಲಿದೆ ಎಂದರು. ನಜೀರ್ ಮತ್ತು

ಕೆ.ಟಿ.ಶ್ರೀಕಂಠೇಗೌಡ ನೀತಿಯನ್ನು ಮರು ಪರಿಶೀಲಿಸಿ, ಆ ಸಿದ್ಧತೆ ಮಾಡಿಕೊಂಡು ಜಾರಿಗೊಳಿಸಬೇಕೆಂದು ಆಗ್ರಹಿಸಿದರು.

ಆಧಾರ: ವಿಜಯ ಕರ್ನಾಟಕ, ದಿನಾಂಕ:24.09.2021.

## 119. 10 ದಿನದಲ್ಲಿ ಕಲ್ಯಾಣ ಕರ್ನಾಟಕ ಮಂಡಳಿ

ಮುಂದಿನ 10 ದಿನದಲ್ಲಿ ಕಲ್ಯಾಣ ಕರ್ನಾಟಕ ಮಂಡಳಿ ರಚನೆ ಮಾಡಿ, ಕಾಯಂ ಕಾರ್ಯದರ್ಶಿ ನೇಮಕ ಮಾಡಲಾಗುವುದು ಎಂದು ಮುಖ್ಯಮಂತ್ರಿ ಬಸವರಾಜ್ ಬೊಮ್ಮಾಯಿ ಹೇಳಿದರು. ಕಲ್ಯಾಣ ಕರ್ನಾಟಕದ ಅಭಿವೃದ್ಧಿ ಕುರಿತು ನಡೆದ ಚರ್ಚೆಗೆ ಉತ್ತರಿಸಿ, ಕಲ್ಯಾಣ ಕರ್ನಾಟಕದ ಸಮಗ್ರ ಅಭಿವೃದ್ಧಿಗೆ ಬಿಜೆಪಿ ಸರ್ಕಾರ ಬದ್ದವಾಗಿದೆ. ಕಲ್ಯಾಣ ಕರ್ನಾಟಕ ಅಭಿವೃದ್ಧಿಗೆ ಪ್ರಸ್ತುತ ವರ್ಷದಲ್ಲಿ ರೂ.1,500 ಕೋಟಿ ಹಣ ನೀಡಲಾಗುವುದು ಎಂದು ಹೇಳಿದರು.

ಕೋವಿಡ್ ಕಾರಣದಿಂದ ನೇಮಕಾತಿಗೆ ಇರುವ ನಿರ್ಬಂಧ ತೆರವುಗೊಳಿಸಿ ನೇಮಕಾತಿ ಪ್ರಕ್ರಿಯೆ ಆರಂಭಿಸಲಾಗುವುದು. ತಕ್ಷಣ ಖಾಲಿ ಇರುವ ಹುದ್ದೆಗಳನ್ನು ಭರ್ತಿ ಮಾಡಿ, ಅಗತ್ಯ ಹುದ್ದೆಗಳ ಸೃಷ್ಠಿ ಮಾಡಲು ಕ್ರಮ ಕೈಗೊಳ್ಳಲಾಗುವುದು ಎಂದು ಹೇಳಿದರು. ಬೆಂಗಳೂರಿನಲ್ಲಿ 371ಜೆ ಕೇಂದ್ರವನ್ನು ಕಲಬುರ್ಗಿಗೆ ಸ್ಥಳಾಂತರ ಮಾಡಲಾಗುವುದು. ಕಲ್ಯಾಣ ಕರ್ನಾಟಕ ಭಾಗದಲ್ಲಿ ಇಂದು ಜವಳಿ ಪಾರ್ಕ್, ಐಟಿ ಪಾರ್ಕ್ ಬಂದಿದೆ. ಆದಷ್ಟು ಬೇಗ ಈ ಭಾಗದಲ್ಲಿ ಅನುಷ್ಠಾನಗೊಳಿಸಲು ಕ್ರಮ ಕೈಗೊಳ್ಳಲಾಗುವುದು. ಕಲ್ಯಾಣ ಕರ್ನಾಟಕ ಭಾಗದ ನೀರಾವರಿ ಯೋಜನೆಗಳ ಪ್ರಗತಿ ಪರಿಶೀಲನೆ ನಡೆಸಲು ಆ ಭಾಗದ ಅಧಿಕಾರಿಗಳ ಸಭೆ ಕರೆಯಲಾಗಿದೆ. ಕಲ್ಯಾಣ ಕರ್ನಾಟಕ ಭಾಗದ ಜನರಿಗೆ ಆತ್ಮವಿಶ್ವಾಸ ಬರುವಂತೆ ನೋಡಿಕೊಳ್ಳಲಾಗುವುದಾಗಿ ಹೇಳಿದರು.

**ಅವ್ಯವಹಾರ ತನಿಖೆ:** ಕಲ್ಯಾಣ ಕರ್ನಾಟಕದ ಅಭಿವೃದ್ಧಿಗೆ ರಚನೆ ಮಾಡಿರುವ ಕಲ್ಯಾಣ ಕರ್ನಾಟಕದ ಮಾನವ ಸಂಪನ್ಮೂಲ ಕೃಷಿ ಮತ್ತು ಸಾಂಸ್ಕೃತಿಕ ಸಂಘ ನಿಯಮ ಮೀರಿ ಹಣವ್ಯಯ ಮಾಡಿದ್ದರೆ ಸೂಕ್ತ ತನಿಖೆ ನಡೆಸಲಾಗುವುದು ಎಂದು ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವ ಜೆ.ಸಿ.ಮಾಧುಸ್ವಾಮಿ ತಿಳಿಸಿದರು. ಈ ಬಗ್ಗೆ ಚಿತ್ತಾಪುರ ಶಾಸಕ ಪ್ರಿಯಾಂಕ್ ಖರ್ಗೆ ಚರ್ಚೆ ವೇಳೆ ಸದನದ ಗಮನಸೆಳೆದಿದ್ದರು.

ಸರ್ಕಾರದ ಪರವಾಗಿ ಉತ್ತರ ನೀಡಿ, ಕಲ್ಯಾಣ ಕರ್ನಾಟಕ ಮಾನವ ಸಂಪನ್ಮೂಲ ಕೃಷಿ ಮತ್ತು ಸಾಂಸ್ಕೃತಿಕ ಸಂಘದಿಂದ ಪಾರದರ್ಶಕ ಕೆಲಸವಾಗುತ್ತಿಲ್ಲ ಎಂಬ ಆರೋಪ ಕೇಳಿ ಬಂದ ಹಿನ್ನೆಲೆಯಲ್ಲಿ ಆ ಭಾಗದ ಎಲ್ಲ ಶಾಸಕರೊಂದಿಗೆ ಸಭೆ ನಡೆಸಿ ಯೋಜನೆಗಳನ್ನು ಅನುಷ್ಠಾನಗೊಳಿಸುವಂತೆ ಸೂಚನೆ ನೀಡಲಾಗಿದೆ ಎಂದು ಹೇಳಿದರು.

ಆಧಾರ: ಉದಯವಾಣಿ, ದಿನಾಂಕ:24.09.2021.

## 120. ವಿಧಾನ ಸಭಾಂಗಣಕ್ಕೆ ಲೋಕಸಭಾ ಸ್ಪೀಕರ್

ರಾಜ್ಯದ ವಿಧಾನಮಂಡಲ ಜಂಟಿ ಸದನ 17 ವರ್ಷಗಳ ಬಳಿಕ ಮತ್ತೊಂದು ಅಪರೂಪದ ಸನ್ನಿವೇಶಕ್ಕೆ ಸಾಕ್ಷಿಯಾಗಲಿದೆ. 'ಪ್ರಜಾತಾಂತ್ರಿಕ ವ್ಯವಸ್ಥೆಯಲ್ಲಿ ಸಂಸದೀಯ ಮೌಲ್ಯಗಳ ರಕ್ಷಣೆ' ವಿಷಯದ ಕುರಿತು ಮಧ್ಯಾಹ್ನ 3ಕ್ಕೆ ಲೋಕಸಭಾ ಸ್ಪೀಕರ್ ಓಂ ಬಿರ್ಲಾ ಅವರು ಉಭಯ ಸದನಗಳ ಸದಸ್ಯರನ್ನು ಉದ್ದೇಶಿಸಿ ಭಾಷಣ ಮಾಡಲಿದ್ದಾರೆ. ಆದರೆ ಪ್ರತಿಪಕ್ಷ ಕಾಂಗ್ರೆಸ್ ಈ ಕಾರ್ಯಕ್ರಮಕ್ಕೆ ಬಹಿಷ್ಕಾರ ಹಾಕಲು ನಿರ್ಧರಿಸಿದೆ.

ಕಳೆದ ಡಿಸೆಂಬರ್‌ನಲ್ಲಿ ವಿಧಾನ ಪರಿಷತ್ ಸಂಭವಿಸಿದ ಕಹಿ ಘಟನೆ, ಉಭಯ ಸದನಗಳಲ್ಲಿ ಕೆಲವು ಬಾರಿ ತಲೆದೋರಿದ ಅನುಚಿತ ವರ್ತನೆ ಪ್ರಸಂಗಗಳು. ಪ್ರಜಾಪ್ರಭುತ್ವದ ದೇಗುಲದಲ್ಲಿ ಪಾವಿತ್ರ್ಯತೆಗೆ ಧಕ್ಕೆ, ಚರ್ಚೆಯ ಸತ್ವ ಕಳೆದು ಹೋಗುತ್ತಿದೆ ಎಂಬ ವಿಷಯ ಸಾರ್ವಜನಿಕವಾಗಿ ಚರ್ಚೆಯಾಗುತ್ತಿರುವ ಹಿನ್ನೆಲೆಯಲ್ಲಿ ಸಂಸದೀಯ ಮೌಲ್ಯಗಳ ರಕ್ಷಣೆ ತುರ್ತು ಅಗತ್ಯದ ಅಭಿಪ್ರಾಯಗಳು ರೂಪುಗೊಂಡಿದ್ದವು.

ಪರಿಸ್ಥಿತಿಯ ಸೂಕ್ಷ್ಮತೆಗೆ ಸ್ಪಂದಿಸಿದ ವಿಧಾನಸಭೆ ಸ್ಪೀಕರ್ ಹಾಗೂ ವಿಧಾನ ಪರಿಷತ್ ಸಭಾಪತಿ ನಿರ್ಣಾಯಕ ಉಪಕ್ರಮವಹಿಸಿ, ಕುಮಾರ ಕೃಪಾ ಅತಿಥಿ ಗೃಹದಲ್ಲಿ ಸಂಸದೀಯ ಮೌಲ್ಯಗಳ ರಕ್ಷಣೆ ಕುರಿತು ಶಾಸಕರೊಂದಿಗೆ ಸಮಾಲೋಚಿಸಿದ್ದರು. ಎರಡನೇ ಹಂತದಲ್ಲಿ ವಿವಿಧ ಕ್ಷೇತ್ರಗಳ ಗಣ್ಯರನ್ನು ಕರೆಯಿಸಿ ಬ್ಯಾಕ್ವೆಂಟ್ ಹಾಲ್‌ನಲ್ಲಿ ಒಂದು ದಿನದ ವಿಚಾರ ಸಂಕಿರಣ ಆಯೋಜಿಸಿದ್ದರು.

ಮೂರನೇ ಹಂತದಲ್ಲಿ ಲೋಕಸಭೆ ಸ್ಪೀಕರ್ ಅವರಿಂದ ಜಂಟಿ ಸದನವನ್ನು ಉದ್ದೇಶಿಸಿ ಭಾಷಣ ಕಾರ್ಯಕ್ರಮ ಆಯೋಜಿಸಲಾಗಿದೆ. ಪಕ್ಷಾಂತರ ನಿಷೇಧ ಕಾಯ್ದೆ (ಷೆಡ್ಯೂಲ್ 10) ಹಾಗೂ ಪೀಠಾಸೀನ ಅಧಿಕಾರಿಗಳ ಅಧಿಕಾರ ಬಲವರ್ಧನೆಗೆ ದೇಶದಲ್ಲಿ ಗಂಭೀರ ಚಿಂತನೆ ನಡೆದಿದೆ. ಉದ್ದೇಶಿತ ಅಧ್ಯಯನ ವರದಿ ಪಡೆಯಲೆಂದು ರಾಜಸ್ಥಾನ ಸ್ಪೀಕರ್ ಅಧ್ಯಕ್ಷತೆಯಲ್ಲಿ ಸಮಿತಿ ರಚಿಸಿದ ಓಂ ಬಿರ್ಲಾ ಅವರೇ ಇದೀಗ ಸಂಸದೀಯ ಮೌಲ್ಯಗಳ ರಕ್ಷಣೆ ಕುರಿತು ಮಾತನಾಡಲಿರುವುದು ಗಮನಾರ್ಹ ಸಂಗತಿ.

**ಕಲಾಂ ಭಾಷಣ:** ಕರ್ನಾಟಕ ಏಕೀಕರಣವಾಗಿ 50 ವರ್ಷಗಳನ್ನು ಪೂರ್ಣಗೊಳಿಸಿದ ಸಂದರ್ಭ, ಎನ್.ಧರ್ಮಸಿಂಗ್ ನೇತೃತ್ವದ ಕಾಂಗ್ರೆಸ್–ಜೆಡಿಎಸ್ ಸಮ್ಮಿಶ್ರ ಸರ್ಕಾರದ ಅವಧಿಯಲ್ಲಿ ರಾಷ್ಟ್ರಪತಿಯಾಗಿದ್ದ ಎಪಿಜೆ ಅಬ್ದುಲ್ ಕಲಾಂ ಅವರು ಜಂಟಿ ಸದನ ಉದ್ದೇಶಿಸಿ ಭಾಷಣ ಮಾಡಿದ್ದರು. ಇದೇ ವೇಳೆ ಮಹತ್ವಾಕಾಂಕ್ಷೆಯ 'ಪುರ' ಯೋಜನೆಯ ಪರಿಕಲ್ಪನೆ ಬಿಚ್ಚಿಟ್ಟಿದ್ದರು. ನಗರ–ಪಟ್ಟಣಗಳ ಮಾದರಿಯಲ್ಲಿ ಗ್ರಾಮೀಣ ಪ್ರದೇಶದ ಮೂಲ ಸವಲತ್ತುಗಳ ಅಭಿವೃದ್ಧಿ ಪಡಿಸಿ, ಮೇಲ್ದರ್ಜೆಗೇರಿಸುವುದು ಯೋಜನೆಯ ಮುಖ್ಯ ಉದ್ದೇಶ. ಸ್ವಾತಂತ್ರ್ಯದ ವಜ್ರ ಮಹೋತ್ಸವ ಸಂದರ್ಭದಲ್ಲಿ ನ್ಯಾ.ಎಂ.ಎನ್. ವೆಂಕಟಚಲಯ್ಯ ಉಭಯ ಸದನಗಳ ಸದಸ್ಯರನ್ನು ಉದ್ದೇಶಿಸಿ ಭಾಷಣ ಮಾಡಿದ್ದರು.

ಆಧಾರ: ವಿಜಯವಾಣಿ, ದಿನಾಂಕ:24.09.2021.

**ದಿನಾಂಕ: 24.09.2021ರಂದು ಸ್ವಾತಂತ್ರ್ಯದ ಅಮೃತ ಮಹೋತ್ಸವದ ಅಂಗವಾಗಿ ಸನ್ಮಾನ್ಯ ಸಭಾಪತಿಗಳು ವಿಧಾನ ಪರಿಷತ್ತು ಹಾಗೂ ಸನ್ಮಾನ್ಯ ಸಭಾಧ್ಯಕ್ಷರ ಉಪಸ್ಥಿತಿಯಲ್ಲಿ "ಪ್ರಜಾಪ್ರಭುತ್ವದಲ್ಲಿ ಸಂಸದೀಯ ಮೌಲ್ಯಗಳ ರಕ್ಷಣೆ" ಕುರಿತು ಉಭಯ ಸದನಗಳ ಸದಸ್ಯರುಗಳನ್ನು ಉದ್ದೇಶಿಸಿ ವಿಧಾನಸಭೆಯಲ್ಲಿ ಸನ್ಮಾನ್ಯ ಲೋಕಸಭಾ ಅಧ್ಯಕ್ಷರಾದ ಶ್ರೀ ಓಂ ಬಿರ್ಲಾರವರಿಂದ ಪ್ರಧಾನ ಭಾಷಣ ಕಾರ್ಯಕ್ರಮ. ಈ ಸಂದರ್ಭದಲ್ಲಿ ಮಾಜಿ ಮುಖ್ಯಮಂತ್ರಿಗಳಾದ ಸನ್ಮಾನ್ಯ ಶ್ರೀ ಬಿ.ಎಸ್. ಯಡಿಯೂರಪ್ಪರವರಿಗೆ "ಉತ್ತಮ ಶಾಸಕ" ಪ್ರಶಸ್ತಿ ನೀಡಿ ಗೌರವಿಸಲಾಯಿತು.**



## 121. ಯತ್ನಾಳ, ಬೆಲ್ಲದ ಧರಣಿ, ಕಾಗೇರಿ ಗರಂ,

ಆಡಳಿತಾರೂಢ ಪಕ್ಷದ ಶಾಸಕರೇ ಬಾವಿಗಿಳಿದಿದ್ದು ಒಂದು ಕಡೆಯಾದರೆ, ಶೂನ್ಯ ವೇಳೆಯಲ್ಲಿಯೂ ಉಪ ಪ್ರಶ್ನೆಗೆ ನಿಂತ ಜೆಡಿಎಸ್ ಶಾಸಕರು, ಈ ಎಲ್ಲದರ ನಡುವೆ ನಮ್ಮ ವಿಷಯ ಚರ್ಚೆಗೆ ಬರುತ್ತಿಲ್ಲವೆಂದು ಕೂಗಾಡಿ ಬಳ್ಳಾರಿ ಶಾಸಕರ ದಂಡು. ಮೂರು ಪಕ್ಷದ ಶಾಸಕರ ಈ ರೀತಿಯ ವರ್ತನೆಗೆ ಸಭಾಧ್ಯಕ್ಷರವರು ಸಿಡಿಮಿಡಿಗೊಂಡರು.

ಶೂನ್ಯವೇಳೆಯಲ್ಲಿ ಬಿಜೆಪಿಯ ಶಾಸಕರಾದ ಬಸವನಗೌಡ ಯತ್ನಾಳ್ ಅವರು, ವೀರಶೈವ ಲಿಂಗಾಯತ ಪಂಚಮಸಾಲಿ ಸಮುದಾಯದ 2ಎ ಸೇರ್ಪಡೆ, ಕುರುಬ ಜನಾಂಗದ ಎಸ್‌ಟಿ ಸೇರ್ಪಡೆ ಮತ್ತು ಎಸ್‌ಟಿ ಮೀಸಲಾತಿಯನ್ನು ಶೇ.3 ರಿಂದ ಶೇ.7.5 ಕ್ಕೆ ಹೆಚ್ಚಿಸುವ ಸಂಬಂಧ ಸರ್ಕಾರ ನೀಡಿದ್ದ ಭರವಸೆಯನ್ನು ಈಡೇರಿಸುವಂತೆ ಒತ್ತಾಯಿಸಿದರು. ಯತ್ನಾಳ್ ಪ್ರಸ್ತಾಪಿಸಿದ ವಿಷಯಕ್ಕೆ ಮುಖ್ಯಮಂತ್ರಿಗಳೇ ಉತ್ತರಿಸಬೇಕೆಂದು ಪಟ್ಟು ಹಿಡಿದು ಯತ್ನಾಳ್ ಹಾಗೂ ಅರವಿಂದ ಬೆಲ್ಲದ್ ಬಾವಿಗಿಳಿದು ಪ್ರತಿಭಟನೆ ನಡೆಸಿದರು. ಈ ಸಮಯದಲ್ಲಿ ಮುಖ್ಯಮಂತ್ರಿಯವರು ವಿಧಾನ ಪರಿಷತ್ತಿನಲ್ಲಿ ಇದ್ದರಿಂದ, ಅವರ ಬದಲಿಗೆ ಸಚಿವ ಸಿ.ಸಿ.ಪಾಟೀಲ್ ಉತ್ತರಿಸಲು ಮುಂದಾದರು. ಆದರೆ, ಇದಕ್ಕೆ ಒಪ್ಪದ ಯತ್ನಾಳ, ಮುಖ್ಯಮಂತ್ರಿಯವರು ಕಡೆಯಿಂದಲೇ ಉತ್ತರಬೇಕು. ಅದು ಈಗಲೇ ಬೇಕು ಎಂದು ಪಟ್ಟು ಹಿಡಿದರು. ಉತ್ತರ ಬೇಕು ಎಂದು ಅರವಿಂದ್ ಬೆಲ್ಲದ್, ಯತ್ನಾಳ್ ಅವರು ಸಭಾಧ್ಯಕ್ಷರ ಮುಂದಿನ ಪೀಠಕ್ಕೇ ಆಗಮಿಸಿ ಧರಣಿ ನಡೆಸಲು ಮುಂದಾದರು.

ಇದಕ್ಕೆ ಆಕ್ಷೇಪ ವ್ಯಕ್ತಪಡಿಸಿದ ಕಾಗೇರಿ ಅವರು, ಈ ರೀತಿ ಸಚಿವರು ಹಾಗೂ ಇತರ ಸದಸ್ಯರು ಯತ್ನಾಳ ಮನವೊಲಿಸಲು ಪ್ರಯತ್ನಿಸಿದರು. ಈ ಹಂತದಲ್ಲಿ ಸಭಾಧ್ಯಕ್ಷರ ನೆರವಿಗೆ ಬಂದ ಪ್ರತಿಪಕ್ಷ ನಾಯಕ ಸಿದ್ದರಾಮಯ್ಯ, ಮುಖ್ಯಮಂತ್ರಿ ಬಂದ ನಂತರ ಉತ್ತರ ಕೊಡಿಸುವುದಾಗಿ ಹೇಳದ್ದಾರೆ. ಧರಣಿ ನಡೆಸುವುದು ಸರಿಯಲ್ಲ ಎಂದು ಸದಸ್ಯರುಗಳಿಗೆ ಹೇಳಿ, ನಿಮ್ಮ ಸ್ಥಾನಗಳಿಗೆ ತೆರಳಿ ಎಂದು ಮನವಿ ಮಾಡಿದಾಗ, ಅದಕ್ಕೆ ಸ್ಪಂದಿಸಿದ ಯತ್ನಾಳ್ ಮತ್ತು ಬೆಲ್ಲದ್ ಧರಣಿ ಕೈ ಬಿಟ್ಟು ತಮ್ಮ ಸ್ಥಾನಗಳಿಗೆ ಮರಳಿದರು.

ಆರು ತಿಂಗಳ ಹಿಂದೆ ನಡೆದ ಅಧಿವೇಶನದಲ್ಲಿ ರಾಜ್ಯದ ಕುರುಬ ಜನಾಂಗವನ್ನು ಎಸ್‌ಟಿಗೆ ಸೇರ್ಪಡೆ ಕುರಿತು ಸಮಾಜದ ಆರ್ಥಿಕ, ಸಾಮಾಜಿಕ, ಶೈಕ್ಷಣಿಕವಾಗಿ ಹಿಂದುಳಿದವರನ್ನು ಹಿಂದುಳಿದ ವರ್ಗಕ್ಕೆ ಸೇರ್ಪಡೆ ಮಾಡಲು ಆರು ತಿಂಗಳಲ್ಲಿ ಕ್ರಮ ಕೈಗೊಳ್ಳುವುದಾಗಿ ನಿಕಟ ಪೂರ್ವ ಮುಖ್ಯಮಂತ್ರಿ ಯಡಿಯೂರಪ್ಪ ಅವರು ಸ್ಪಷ್ಟ ಭರವಸೆ ಸದನಕ್ಕೆ ನೀಡಿದ್ದರು. ಸೆಪ್ಟಂಬರ್ 15ಕ್ಕೆ ಸರ್ಕಾರಕ್ಕೆ ನೀಡಿದ ಗಡುವು ಮುಗಿದು ಹೋಗಿದೆ ಸರ್ಕಾರ ಬೇಡಿಕೆ ಈಡೇರಿಸಬೇಕು ಎಂದು ಒತ್ತಾಯಿಸಿದರು.

ಇದಕ್ಕೆ ಧ್ವನಿಗೂಡಿಸಿದ ಬಿಜೆಪಿಯ ಅರವಿಂದ ಬೆಲ್ಲದ್ ಅವರು, ಸಮಾಜದಲ್ಲಿ ಈ ಬಗ್ಗೆ ಅಸಮಾಧಾನವಿದೆ. ಸರ್ಕಾರ ಕೂಡಲೇ ತೀರ್ಮಾನ ಕೈಗೊಳ್ಳಬೇಕು ಎಂದರು.

ಆಧಾರ: ವಿಶ್ವವಾಣಿ, ದಿನಾಂಕ:24.09.2021.

## 122. ಇನ್ನು ಕಲ್ಯಾಣ ರಾಜ್ಯ ಅಭಿವೃದ್ಧಿ ಗ್ಯಾರಂಟಿ

ಕಲ್ಯಾಣ ಕರ್ನಾಟಕ ಅಭಿವೃದ್ಧಿ ಮಂಡಳಿಯನ್ನು ಇನ್ನು ಹತ್ತು ದಿನಗಳ ಒಳಗೆ ರಚಿಸುವುದಾಗಿ ಸರ್ಕಾರ ಘೋಷಿಸಿದೆ. ಇದರೊಂದಿಗೆ ಕಲ್ಯಾಣ ಕರ್ನಾಟಕದ 7 ಜಿಲ್ಲೆಗಳ ಅಭಿವೃದ್ಧಿಗೆ ವೇಗ ಬರುವ ನಿರೀಕ್ಷೆ ವ್ಯಾಪಕವಾಗಿ ಮೂಡುವಂತಾಗಿದೆ.

ಕಲ್ಯಾಣ ಕರ್ನಾಟಕ ನಿರ್ಲಕ್ಷ್ಯ ಮಿತಿ ಮೀರಿದೆ. ಈ ಭಾಗದ ಅಭಿವೃದ್ಧಿಗಾಗಿ ಮಂಡಳಿಯನ್ನು ಕೂಡಲೇ ಸ್ಥಾಪಿಸಬೇಕೆಂದು ಆ ಭಾಗದ ಶಾಸಕರು ಒಕ್ಕೊರಲಿನಿಂದ ಪಟ್ಟು ಹಿಡಿದಾಗ, ಮುಖ್ಯಮಂತ್ರಿಯವರು ಸದಸ್ಯರ ಭಾವನೆಗಳಿಗೆ ಸ್ಪಂದಿಸಿ, ಮೇಲಿನ ಘೋಷಣೆ ಮಾಡಿದರು.

'ಕಲ್ಯಾಣ ಕರ್ನಾಟಕ ಪ್ರದೇಶವನ್ನು ಸರ್ವಾಂಗೀಣ ಅಭಿವೃದ್ಧಿ ಮಾಡುವುದಕ್ಕಾಗಿ ಹತ್ತು ದಿನಗಳಲ್ಲಿ ಅಭಿವೃದ್ಧಿ ಮಂಡಳಿಯನ್ನು ರಚಿಸಲಾಗುವುದು. ಈ ಭಾಗದ ಅಭಿವೃದ್ಧಿಗಾಗಿ 2 ಸಾವಿರ ಕೋಟಿ ರೂಪಾಯಿಗಳನ್ನು ತೆಗೆದಿರಿಸಲಾಗಿದೆ. ಇದನ್ನು ಬಳಸಿಕೊಂಡು ಅಭಿವೃದ್ಧಿ ಪಥಕ್ಕೆ ವೇಗ ನೀಡಲಾಗುವುದು. ಮಾರ್ಚ್ ಒಳಗೆ ಈ ಹಣವನ್ನು ಬಳಸಿಕೊಳ್ಳಲಾಗುವುದು ಎಂದು ಪ್ರಕಟಿಸಿದರು. ಕಲ್ಯಾಣ ಕರ್ನಾಟಕ ಅಭಿವೃದ್ಧಿ ಮಂಡಳಿ ವಿಧಿಬದ್ಧವಾಗಿ ಅಸ್ತಿತ್ವಕ್ಕೆ ಬರುವ ಮುನ್ನವೇ ಇದಕ್ಕೆ ಕಾಯಂ ಕಾರ್ಯದರ್ಶಿಯನ್ನಾಗಿ ಐಎಎಸ್ ದರ್ಜೆಯ ಅಧಿಕಾರಿ ನಿಯುಕ್ತಿಗೊಳ್ಳಲಿದ್ದಾರೆ. ಕಲಬುರಗಿಯಿಂದಲೇ ಮಂಡಳಿ ಹಾಗೂ ಇದರ ಕಾರ್ಯದರ್ಶಿ ಕಾರ್ಯನಿರ್ವಹಿಸಲಿದ್ದಾರೆ ಎಂದರು.

ಕಲ್ಯಾಣ ಕರ್ನಾಟಕದ ಅಭಿವೃದ್ಧಿಯ ಕೇಂದ್ರ ಕಚೇರಿ ಕಲಬುರಗಿಯಲ್ಲಿ ಕಾರ್ಯನಿರ್ವಹಿಸಲಿದೆ. 371(ಜೆ)ನೇ ವಿಧಿಯ ಅನ್ವಯ ವಿಶೇಷ ಸ್ಥಾನಮಾನ ಪ್ರದೇಶಕ್ಕೆ ದೊರಕಿದ ನಂತರ ಅಭಿವೃದ್ಧಿಯ ಸಲುವಾಗಿ ತೆರೆಯಲಾಗಿದ್ದ ವಿಶೇಷ ಕೋಶವು ಕೂಡ ಬೆಂಗಳೂರಿನಿಂದ ಕಲಬುರಗಿಗೆ ವರ್ಗಾವಣೆಯಾಗಲಿದೆ' ಎಂದು ಪ್ರಕಟಿಸಿದರು.

ಜವಳಿ, ಐಟಿ ಪಾರ್ಕ್‌ಗೆ ಸಂಬಂಧಿಸಿದ ಪ್ರಕ್ರಿಯೆ ಆರಂಭಿಸುವಂತೆ ಸಂಬಂಧಿಸಿದ ಸಚಿವರಿಗೆ ಸೂಚನೆ ನೀಡಲಾಗಿದೆ. ಕಲಬುರಗಿ ಪ್ರಾಂತ್ಯದ ಅಭಿವೃದ್ಧಿಗೆ ಇವೆರಡೂ ಪೂರಕ ಎನ್ನುವ ಕಾರಣದಿಂದ ಈ ನಿರ್ಧಾರ ತೆಗೆದುಕೊಳ್ಳಲಾಗಿದೆ. ಕಲಬುರಗಿಯಲ್ಲಿ ವಿಭಾಗೀಯ ರೈಲ್ವೆ ಕೇಂದ್ರ ಆರಂಭಿಸುವುದಕ್ಕೆ ಕೇಂದ್ರ ಸಮ್ಮತಿಸಿದೆ. ಕಲ್ಯಾಣ ಕರ್ನಾಟಕ ಭಾಗದಲ್ಲಿ ಎಲ್ಲೆಡೆ ಈಗ ಖಾಲಿ ಇರುವ ಎಂಜಿನಿಯರ್ ಹುದ್ದೆಗಳನ್ನು ಆದಷ್ಟು ಶೀಘ್ರ ನೇಮಕ ಮಾಡಿಕೊಳ್ಳಲಾಗುವುದು. ಕೋವಿಡ್ ಕಾರಣದಿಂದ ಈ ಭಾಗದ ವಿವಿಧ ಹುದ್ದೆಗಳ ನೇಮಕಾತಿಗೆ ವಿಧಿಸಿದ್ದ ನಿರ್ಬಂಧವನ್ನು ಹಿಂಪಡೆಯಲಾಗಿದೆ ಎಂದರು. ಕಲ್ಯಾಣ ಕರ್ನಾಟಕದ ಕಲಬುರಗಿ, ಬೀದರ್, ಯಾದಗಿರಿ, ಕೊಪ್ಪಳ, ಬಳ್ಳಾರಿ, ವಿಜಯನಗರ ಹಾಗೂ ರಾಯಚೂರು ಅಭಿವೃದ್ಧಿಯನ್ನು ಸಂಪೂರ್ಣ ಕಡೆಗಣಿಸಲಾಗಿದೆ. ಹೆಸರಷ್ಟೇ 'ಕಲ್ಯಾಣ ಕರ್ನಾಟಕ'ವಾಗಿದ್ದು, ಉಳಿದಂತೆ ಹೈದರಾಬಾದ್ ಕರ್ನಾಟಕದ ಎಲ್ಲ ನ್ಯೂನತೆಗಳು ಮುಂದುವರಿದಿವೆ. ಪ್ರದೇಶಾಭಿವೃದ್ಧಿ ಮಂಡಳಿ ಇಲ್ಲದೇ ಇರುವುದರಿಂದ ಉತ್ತರದಾಯಿತ್ವವೇ ಈ ಭಾಗಕ್ಕೆ ಇಲ್ಲದಾಗಿದೆ. ಇದನ್ನು ಇನ್ನಾದರೂ ಸರಿ ಮಾಡುವಿರೋ ಇಲ್ಲವೋ ಎಂಬ ಆಕ್ರೋಶ ಸರ್ಕಾರದ ಉತ್ತರಕ್ಕೆ ಮುನ್ನ ವಿಧಾನಸಭೆಯಲ್ಲಿ ಹೊರಹಮ್ಮಿತ್ತು.

ಆಧಾರ: ಸಂಯುಕ್ತ ಕರ್ನಾಟಕ, ದಿನಾಂಕ:24.09.2021.

## 123. ಆನ್‌ಲೈನ್ ಜೂಜಾಟ ನಿಷೇಧ ಮಸೂದೆ ಪಾಸ್

ಆನ್‌ಲೈನ್ ಮೂಲಕ ಆಡುವ ಎಲ್ಲ ರೀತಿಯ ಜೂಜಾಟ ನಿಷೇಧಿಸುವ ಕರ್ನಾಟಕ ಪೊಲೀಸ್ ತಿದ್ದುಪಡಿ ವಿಧೇಯಕಕ್ಕೆ ವಿಧಾನ ಪರಿಷತ್ ಅಂಗೀಕಾರ ನೀಡಿದೆ. ಇದರಿಂದ ಆನ್‌ಲೈನ್ ಜೂಜಾಟ ಆರೋಪ ಸಾಬೀತಾದರೆ 3 ವರ್ಷ ಜೈಲು ಶಿಕ್ಷೆ ಹಾಗೂ ರೂ.1 ಲಕ್ಷ ವರೆಗೂ ದಂಡ ವಿಧಿಸಲಾಗುತ್ತದೆ. ಇದೇ ವೇಳೆ, ಸಿವಿಲ್ ಸೇವೆಗಳ ಮಸೂದೆ, ಶಿಕ್ಷಕರ ವರ್ಗಾವಣೆಗೆ ಸಂಬಂಧಿಸಿದ ಮಸೂದೆಗಳು ಕೂಡ ಪಾಸಾಗಿವೆ. ತಡರಾತ್ರಿ ನಡೆದ ಕಲಾಪದ ಕೊನೆಯಲ್ಲಿ ವಿಧೇಯಕದ ಕುರಿತು ನಡೆದ ಚರ್ಚೆಯ ನಂತರ ವಿಧೇಯಕಕ್ಕೆ ಸದನ ಒಪ್ಪಿಗೆ ನೀಡಿತು.

ವಿಧೇಯಕದಲ್ಲಿ ಜೂಜು ನಿಷೇಧ ಪರಿಧಿಯಿಂದ ಕುದುರೆ ರೇಸ್ ಅನ್ನು ಹೊರತುಪಡಿಸಿರುವುದಕ್ಕೆ ಕೆಲವು ಸದಸ್ಯರು ವಿರೋಧ ವ್ಯಕ್ತಪಡಿಸಿದರು. ಜೆಡಿಎಸ್ ಸದಸ್ಯ ಮರಿತಿಬ್ಬೇಗೌಡ ಮಾತನಾಡಿ, ಕುದುರೆ

ರೇಸ್‌ನಲ್ಲಿ ಕುದುರೆಗಳಿಗೆ ಹಿಂಸೆ ಕೊಡುತ್ತಾರೆ. ಆದರೆ ಈ ವಿಷಯ ಯಾರಿಗೂ ಗೊತ್ತಿಲ್ಲ ಎಂದರು. ಕೆಲವರು ಕುದುರೆ ರೇಸ್ ಇರಲಿ, ಬೆಟ್ಟಿಂಗ್ ಕಟ್ಟದಿದ್ದರೆ ಕುದುರೆಗಳು ಓಡುವುದೇ ಇಲ್ಲ ಎಂದರು. ವಿಧೇಯಕ ಬೆಂಬಲಿಸಿ ಮಾತನಾಡಿದ ಬಿಜೆಪಿ ಸದಸ್ಯ ಲಕ್ಷ್ಮಣ ಸವದಿ, ಪ್ರತಿಯೊಂದು ಗ್ರಾಮದಲ್ಲಿ ಆಡುವ ಜೂಜಾಟದ ಹಿಂದೆ ರಾಜಕಾರಣಿಗಳು ಇರುತ್ತಾರೆ. ಜೂಜಾಟದ ಮಾಹಿತಿ ತಿಳಿದು ಪೊಲೀಸರು ದಾಳಿ ಮಾಡುತ್ತಾರೆ. ಆದರೆ ಜೂಜುಕೋರರನ್ನು ವಶಕ್ಕೆ ತೆಗೆದುಕೊಳ್ಳುವ ಮುಂಚೆ ರಾಜಕಾರಣಿಗಳು ಕರೆ ಮಾಡುತ್ತಾರೆ. ಅವರನ್ನು ಬಿಡದಿದ್ದರೆ ನೀನು ಏನು ಆಗುತ್ತೀಯಾ ಅಂತ ಕೇಳುತ್ತಾರೆ. ಇಂತಹ ಪರಿಸ್ಥಿಯನ್ನು ಪೊಲೀಸರು ಎದುರಿಸುತ್ತಿದ್ದಾರೆ. ಪೊಲೀಸರಿಗೆ ಸಂಪೂರ್ಣ ಸ್ವಾತಂತ್ರ್ಯ ಕೊಟ್ಟಾಗ ಮಾತ್ರ ಈ ವಿಧೇಯಕಕ್ಕೆ ಸಾರ್ಥಕತೆ ಬರುತ್ತದೆ ಎಂದರು. ಚರ್ಚೆಯಲ್ಲಿ ಬಿಜೆಪಿಯ ಭಾರತಿ ಶೆಟ್ಟಿ, ಡಾ.ತೇಜಸ್ವಿನಿ ಗೌಡ ಭಾಗಿಯಾಗಿದ್ದರು.

**ಅಂಗೀಕಾರಗೊಂಡ ಮಸೂದೆಗಳು**: ವಿಧಾನಸಭೆಯಿಂದ ಅಂಗೀಕಾರಗೊಂಡ ಹಲವು ವಿಧೆಯಕಗಳಿಗೆ ವಿಧಾನ ಪರಿಷತ್‌ಲ್ಲಿ ಅನುಮೋದನೆ ದೊರೆಯಿತು. ರಾಜ್ಯ ಸಿವಿಲ್ ಸೇವೆಗಳ ವಿಧೇಯಕ, ಕರ್ನಾಟಕ ಸರಕು ಮತ್ತು ಸೇವೆಗಳ ತೆರಿಗೆ ತಿದ್ದುಪಡಿ ವಿಧೇಯಕ, ಕರ್ನಾಟಕ ಪಟ್ಟಣ ಮತ್ತು ಗ್ರಾಮಾಂತರ ಯೋಜನೆ ತಿದ್ದುಪಡಿ ವಿಧೇಯಕ, ಕರ್ನಾಟಕ ಪೌರ ಸಭೆಗಳು ಮತ್ತು ಕೆಲವು ಇತರೆ ಕಾನೂನು ತಿದ್ದುಪಡಿ ವಿಧೇಯಕ, ಕರ್ನಾಟಕ ಖಾದಿ ಮತ್ತು ಗ್ರಾಮೋದ್ಯೋಗಗಳ ತಿದ್ದುಪಡಿ ವಿಧೇಯಕಕ್ಕೆ ಅನುಮೋದನೆ ನೀಡಲಾಯಿತು.

ಶಿಕ್ಷಕರಿಗೆ ಅವರು ವರ್ಗಾವಣೆ ಪೂರ್ವದಲ್ಲಿ ಕೆಲಸ ನಿರ್ವಹಿಸಿದ್ದ ಸ್ಥಳಕ್ಕೆ ಒಂದು ಬಾರಿ ಮಾತ್ರ ವರ್ಗಾವಣೆ ಮಾಡಲು ಅವಕಾಶ ಕಲ್ಪಿಸುವ 2021ನೇ ಸಾಲಿನ ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳು (ಶಿಕ್ಷಕರ, ವರ್ಗಾವಣೆ ನಿಯಂತ್ರಣ) ತಿದ್ದುಪಡಿ ವಿಧೇಯಕಕ್ಕೆ ವಿಧಾನ ಪರಿಷತ್‌ನಲ್ಲೂ ಅನುಮೋದನೆ ದೊರೆಯಿತು.

ಆಧಾರ: ಕನ್ನಡ ಪ್ರಭ, ದಿನಾಂಕ:24.09.2021

## 124. ಅಶಿಸ್ತು : ಜೆಡಿಎಸ್ ಶಾಸಕರಿಗೆ ಸಭಾಧ್ಯಕ್ಷರ ಖಡಕ್ ಎಚ್ಚರಿಕೆ

ಮಂಡ್ಯ ಜಿಲ್ಲೆಯ ಜೆಡಿಎಸ್ ಕ್ಷೇತ್ರಗಳಿಗೆ ನೀಡಿದ್ದ ಅನುದಾನ ಕಡಿತಗೊಳಿಸಿರುವ ಕುರಿತು ಜೆಡಿಎಸ್ ಸದಸ್ಯರು ಆಕ್ರೋಶ ವ್ಯಕ್ತಪಡಿಸಿದ್ದು, ಜೆಡಿಎಸ್ ಸದಸ್ಯರ ನಡತೆ ಕುರಿತು ಅಸಮಾಧಾನ ವ್ಯಕ್ತಪಡಿಸಿದ ಸಭಾಧ್ಯಕ್ಷರು ಕಠಿಣ ಕ್ರಮದ ಎಚ್ಚರಿಕೆ ನೀಡಿದ ಘಟನೆ ನಡೆಯಿತು.

'ಇನ್ನು ಮುಂದಿ ಅಶಿಸ್ತು ಮುಂದುವರೆದರೆ ನಿಯಮಗಳ ಪ್ರಕಾರ ಕಠಿಣ ಕ್ರಮ ಕೈಗೊಳ್ಳಬೇಕಾಗುತ್ತದೆ' ಎಂದು ಸಭಾಧ್ಯಕ್ಷರು ಎಚ್ಚರಿಕೆ ನೀಡಿದರು. ಇದಕ್ಕೆ 'ನ್ಯಾಯ ನೀಡದಿದ್ದರೆ ಅನುದಾನ ಕಡಿತಗೊಳಿಸಿರುವ ಕುರಿತು ನ್ಯಾಯಾಲಯದಲ್ಲಿ ಸಾರ್ವಜನಿಕ ಹಿತಾಸಕ್ತಿ ಅರ್ಜಿ ಹೂಡಿ ಹೋರಾಟ ಮಾಡುತ್ತೇವೆ ಬಿಡಿ' ಎಂದು ಜೆಡಿಎಸ್ ಸದಸ್ಯರು ತಿರುಗೇಟು ನೀಡಿದ ಘಟನೆಯೂ ನಡೆಯಿತು.

ಶೂನ್ಯ ವೇಳೆಯಲ್ಲಿ ವಿಷಯ ಪ್ರಸ್ತಾಪಿಸಿದ ನಾಗಮಂಗಲ ಶಾಸಕ ಸುರೇಶ್‌ಗೌಡ, ಮಂಡ್ಯ ಜಿಲ್ಲೆಗೆ ನಿಗದಿಯಾಗಿದ್ದ ರೂ.30 ಕೋಟಿ ಅನುದಾನದಲ್ಲಿ ರೂ.16 ಕೋಟಿ ಕಡಿತಗೊಳಿಸಲಾಗಿದೆ. ಕೇವಲ ಎರಡು ಹಿಂದುಳಿದ ಕ್ಷೇತ್ರಗಳಿರುವ ಶಿವಮೊಗ್ಗ ಜಿಲ್ಲೆಗೆ ರೂ.140 ಕೋಟಿ ನೀಡಲಾಗಿದೆ ಎಂದರು.

ಆಧಾರ: ವಿಜಯ ಕರ್ನಾಟಕ, ದಿನಾಂಕ: 24.09.2021

## 125. ತಡರಾತ್ರಿವರೆಗೂ ನಡೆದ ಪರಿಷತ್ ಕಲಾಪ

ವಿಧಾನ ಸಭೆಯಿಂದ ಅಂಗೀಕೃತ ರೂಪದಲ್ಲಿರುವ ವಿವಿಧ ವಿಧೇಯಕಗಳ ಅಂಗೀಕಾರದ ನಡುವೆ ರಾಷ್ಟ್ರೀಯ ಶಿಕ್ಷಣ ನೀತಿ ಮೇಲಿನ ಚರ್ಚೆಯಿಂದ ಕಲಾಪವು ತಡರಾತ್ರಿಯವರೆಗೂ ನಡೆಯಿತು. ಸಂಜೆ 4 ಗಂಟೆಯ ನಂತರ ಆರಂಭವಾದ ಕಲಾಪವು ನಿಯಮ 330ರ ಅಡಿಯಲ್ಲಿ ಹೊಸ ಶಿಕ್ಷಣ ನೀತಿ ಚರ್ಚೆ ಆರಂಭವಾಗಿತ್ತು. ವಿರೋಧಪಕ್ಷ ಹಾಗೂ ಪ್ರತಿ ಪಕ್ಷದ ಸದಸ್ಯರ ನಡುವೆ ವಾಗ್ವಾದವೂ ನಡೆದಿತ್ತು. ಈ ಮಧ್ಯೆ ಮುಖ್ಯಮಂತ್ರಿಯವರು ಸದನಕ್ಕೆ ಆಗಮಿಸಿ ಕರ್ನಾಟಕ ಧನವಿನಿಯೋಗ ವಿಧೇಯಕ ಮಂಡಿಸಿ ಅನುಮೋದನೆ ಪಡೆದರು. ತದನಂತರ ವಿಧಾನ ಸಭೆಯಲ್ಲಿ ಅಂಗೀಕೃತ ರೂಪದಲ್ಲಿರುವ ಶಿಕ್ಷಕರ ವರ್ಗಾವಣೆ ಕಾಯ್ದೆ ಸಂಬಂಧಿಸಿದ ವಿಧೇಯಕ, ಸರಕು, ಸೇವೆಗಳಿಗೆ ಸಂಬಂಧಿಸಿದ ವಿಧೇಯಕ, ಆನ್‌ಲೈನ್ ಜೂಜಿಗೆ ಕಡಿವಾಣ ಹಾಕುವ ವಿಧೇಯಕ ಸೇರಿ ಐದಾರು ವಿಧೇಯಕಗಳನ್ನು ಸಚಿವರಾದ ಮಾಧುಸ್ವಾಮಿ, ಅರಗಜ್ಞಾನೇಂದ್ರ ಹಾಗೂ ಬಿ.ಸಿ.ನಾಗೇಶ ಮಂಡಿಸಿ, ಅನುಮೋದನೆ ಪಡೆದರು. ಈ ವೇಳೆ ಅರ್ಧಕ್ಕೆ  ನಿಂತಿದ್ದ ಎನ್‌ಇಪಿ ಮೇಲಿನ ಚರ್ಚೆ ಪುನಃ ಮುಂದುವರೆದಿದೆ. ಉನ್ನತ ಶಿಕ್ಷಣ ಸಚಿವ ಡಾ.ಅಶ್ವತ್ಥನಾರಾಯಣ ಅವರು ಸದಸ್ಯರ ಪ್ರಶ್ನೆ,  ಸಂಶಯಗಳಿಗೆ ಬಿಡಿಬಿಡಿಯಾಗಿ ಉತ್ತರಿಸಿದರು. ನಂತರ ಸದಸ್ಯರು ಮತ್ತಷ್ಟು ಸ್ಪಷ್ಟೀಕರಣ  ಕೋರಿದರು. ಹೀಗೆ ಮಧ್ಯರಾತ್ರಿ 12.35ರವರೆಗೂ ಕಲಾಪ ನಡೆದಿದ್ದು, ನಂತರ ಸಭಾಪತಿಯವರ ಸೂಚನೆಯಂತೆ ಚರ್ಚೆಯನ್ನು ಪೂರ್ಣಗೊಳಿಸಲಾಯಿತು.

ಆಧಾರ: ಉದಯವಾಣಿ, ದಿನಾಂಕ:24.09.2021.

## 126. ಡಯಾಲಿಸಿಸ್ ಸಮಸ್ಯೆ ಸ್ಪೀಕರ್ ಆತಂಕ, ಸೂಚನೆ

ರಾಜ್ಯದಲ್ಲಿ ಡಯಾಲಿಸಿಸ್ ಅವಶ್ಯಕತೆ ಇರುವ ಬಡ ರೋಗಿಗಳ ಗೋಳು ಮಿತಿ ಮೀರಿದ್ದು, ಸರ್ಕಾರದ ಕ್ರಮ ಯಾವಾಗ ಎಂದು ಸಭಾಧ್ಯಕ್ಷರವರು ಸರ್ಕಾರವನ್ನು ಕೇಳಿದ ಪ್ರಸಂಗ ನಡೆಯಿತು. ಸರ್ಕಾರಿ ಆಸ್ಪತ್ರೆಗಳಲ್ಲಿ ಡಯಾಲಿಸಿಸ್ ಯಂತ್ರಗಳ ಕೊರತೆ ಮತ್ತು ಔಷಧಗಳ ಕೊರತೆಯಿಂದ ರೋಗಿಗಳು ಪರದಾಡುತ್ತಿದ್ದಾರೆಂದು ಸದಸ್ಯರು ಆತಂಕ ತೋಡಿಕೊಂಡ ಹಿನ್ನೆಲೆಯಲ್ಲಿ ಸ್ಪೀಕರ್ ಮಧ್ಯ ಪ್ರವೇಶ ಮಾಡಿದರು. 'ಇಡೀ ರಾಜ್ಯದೆಲ್ಲೆಡೆ ಬಡ ರೋಗಿಗಳಿಗೆ ಡಯಾಲಿಸಿಸ್ ಸೌಕರ್ಯ ದೊರೆಯದೇ ತೊಂದರೆಯಾಗುತ್ತದೆ. ಯಂತ್ರೋಪಕರಣಕ್ಕೆ ಶೀಘ್ರ ಟೆಂಡರ್ ಪ್ರಕ್ರಿಯೆ ಪೂರ್ಣಗೊಳಿಸಿ ಚಿಕಿತ್ಸೆಗೆ ವ್ಯವಸ್ಥೆ ಮಾಡಿ' ಎಂದು ಸಭಾಧ್ಯಕ್ಷರವರು ಆರೋಗ್ಯ ಸಚಿವ ಡಾ.ಕೆ.ಸುದಾಕರ್ ಅವರಿಗೆ ಸೂಚಿಸಿದರು. ಸಕಾರಾತ್ಮಕವಾಗಿ ಉತ್ತರಿಸಿದ ಸಚಿವರು, ಇನ್ನೊಂದು ತಿಂಗಳಲ್ಲಿ ಈ ಅವ್ಯವಸ್ಥೆಯನ್ನು ಸರಿಪಡಿಸಲಾಗುವುದು ಎಂದು ಪೀಠಕ್ಕೆ ಭರವಸೆ ನೀಡಿದರು.

'ಈ ಹಿಂದೆ ಬಿ.ಆರ್.ಶೆಟ್ಟಿ ಎಂಬುವವರಿಗೆ ಪೂರೈಕೆ ಟೆಂಡರ್ ನೀಡಲಾಗಿತ್ತು. ಆದರೆ ಈ ಗುತ್ತಿಗೆದಾರರು ಆರ್ಥಿಕ ಸಮಸ್ಯೆಗೆ ಸಿಲುಕಿದ್ದಾರೆ (ದಿವಾಳಿ). ಆದ್ದರಿಂದ ಸರಿಯಾದವರನ್ನು ಗುರುತಿಸಿ ಮತ್ತೆ ಯಂತ್ರೋಪಕರಣ ಖರೀದಿ ಪ್ರಕ್ರಿಯೆ ಮಾಡಲಾಗುವುದು. ಡಯಾಲಿಸಿಸ್ ಸೌಲಭ್ಯ ನೀಡುವ ರಾಜ್ಯ ಸರ್ಕಾರದ ಯೋಜನೆ ಅತ್ಯಂತ ಒಳ್ಳೆಯ ಕಾರ್ಯಕ್ರಮ. ಬಡವರಿಗೆ ಅತ್ಯಗತ್ಯವಾದ ಕಾರ್ಯಕ್ರಮ. ಇಂತಹ ಕಾರ್ಯಕ್ರಮಗಳಿಗೆ ಕೆಲವು 'ಶಕ್ತಿ'ಗಳು ಉದ್ದೇಶಪೂರ್ವಕವಾಗಿ ಅಡ್ಡಿ ಬರುತ್ತದೆ. ಆದ್ದರಿಂದ ಅಧಿಕಾರಶಾಹಿ ಮತ್ತು ಇಂತಹ ಶಕ್ತಿಗಳನ್ನು ಮೆಟ್ಟಿನಿಂತು ಡಯಾಲಿಸಿಸ್ ವ್ಯವಸ್ಥೆ ದೊರೆಯುವಂತೆ ನೋಡಿಕೊಳ್ಳಿ ಎಂದು  ಸ್ಪೀಕರ್ ಸೂಚಿಸಿದರು. ಇಡೀ ಸದನದಲ್ಲಿ ಸರ್ಕಾರ ಡಯಾಲಿಸಿಸ್ ಕೇಂದ್ರದಲ್ಲಿ ಸೇವೆ ಸ್ಥಗಿತವಾಗಿರುವುದು ಕಳವಳದಿಂದ ಚರ್ಚಿತವಾಯಿತು.

ಆಧಾರ: ಸಂಯುಕ್ತ ಕರ್ನಾಟಕ, ದಿನಾಂಕ:24.09.2021

## 127. ಸದನದಲ್ಲಿ ಮತ್ತೆ ಮೀಸಲಾತಿ ಪ್ರವರ

ಕುರುಬ ಜನಾಂಗ ಎಸ್‌ಟಿಗೆ ಹಾಗೂ ಪಂಚಮಸಾಲಿ ಸಮುದಾಯ ಹಿಂದುಳಿದ ವರ್ಗ 2ಎ ಸೇರ್ಪಡೆ ಸೇರಿ ಮೀಸಲಾತಿ ವಿಚಾರ ಮತ್ತೆ ಸದನದಲ್ಲಿ ಪ್ರಸ್ತಾಪಗೊಂಡು ಆಡಳಿತ ಪಕ್ಷದ ಬಸವನಗೌಡ ಪಾಟೀಲ್ ಯತ್ನಾಳ್ ಹಾಗೂ ಅರವಿಂದ ಬೆಲ್ಲದ್ ಧರಣಿಗೆ ಮುಂದಾದ ಪ್ರಸಂಗ ನಡೆಯಿತು.

ಶೂನ್ಯವೇಳೆಯಲ್ಲಿ ಬಸನಗೌಡ ಪಾಟೀಲ್ ಯತ್ನಾಳ್ ವಿಷಯ ಪ್ರಸ್ತಾಪಿಸಿ, ಆರು ತಿಂಗಳ ಹಿಂದೆ ಕುರುಬ ಜನಾಂಗ ಎಸ್‌ಟಿಗೆ ಸೇರ್ಪಡೆ, ಎಸ್‌ಟಿ ಮೀಸಲಾತಿ ಶೇ.3 ರಿಂದ ಶೇ.7.5ಕ್ಕೆ ಹೆಚ್ಚಿಸಿ ವಾಲ್ಮೀಕಿ, ಉಪ್ಪಾರ ಸಮಾಜಕ್ಕೆ ಅನುಕೂಲ ಮಾಡಿಕೊಡುವುದು, ಹಡಪದ, ಮಡಿವಾಳ ಸಮಾಜ ಪರಿಶಿಷ್ಟ ಜಾತಿಗೆ ಸೇರ್ಪಡೆ, ಪಂಚಮಸಾಲಿ ಸಮಾಜಕ್ಕೆ ಹಿಂದುಳಿದ ವರ್ಗ 2 ಎ ಸೇರ್ಪಡೆ ಮಾಡಿ ನ್ಯಾಯ ಒದಗಿಸುವಂತೆ ಕೋರಿದ್ದೆ. ಈ ಸಂಬಂಧ ನಿಕಟಪೂರ್ವ ಮುಖ್ಯಮಂತ್ರಿ ಯಡಿಯೂರಪ್ಪ ಅವರು ಸದನದ ಒಳಗೆ ನೀಡಿದ್ದ ಭರವಸೆಯ ಗಡುವು ಸೆಪ್ಟೆಂಬರ್ 15ಕ್ಕೆ ಮುಗಿದಿದೆ ಎಂದು ಹೇಳಿದರು.

ಸದರಿ ಬೇಡಿಕೆಯೊಂದಿಗೆ ಐದನೇ ಹಂತದ ಚಳುವಳಿ ಮಲೆಮಹದೇಶ್ವರ ಬೆಟ್ಟದಿಂದ ಆರಂಭಿಸಲಾಗಿದೆ. ಪ್ರತಿಜ್ಞಾ ಪಂಚಾಯತ್ ಜನಜಾಗೃತಿ ಅಭಿಯಾನ ಮುಂದಿನ ದಿನಗಳಲ್ಲಿ ದೊಡ್ಡ ಸ್ವರೂಪ ಪಡೆಯಲಿದೆ. ಪಂಚಮಸಾಲಿ ಸಮುದಾಯ ಮತ್ತೆ ಹೋರಾಟಕ್ಕೆ ಸಜ್ಜಾಗುತ್ತಿದೆ. ಸರ್ಕಾರ ಇದಕ್ಕೆ ಆಸ್ಪದ ನೀಡದೆ ಸದನದಲ್ಲಿ ನೀಡಿದ್ದ ಭರವಸೆಯಂತೆ ಪಂಚಮಸಾಲಿ ಸಮಾಜಕ್ಕೆ ಹಿಂದುಳಿದ ವರ್ಗ 2ಎ ಮೀಸಲಾತಿ ನೀಡಿ ಆದೇಶ ಹೊರಡಿಸಬೇಕು. ಈ ವಿಚಾರದಲ್ಲಿ ಸರ್ಕಾರದ ಸ್ಪಷ್ಟ ನಿಲುವು ಏನು ಎಂದು ತಿಳಿಸಬೇಕು ಎಂದು ಆಗ್ರಹಿಸಿದರು. ಇದಕ್ಕೆ ಅರವಿಂದ ಬೆಲ್ಲದ ಸಹ ಧ್ವನಿಗೂಡಿಸಿ, ಇದು ಸಮುದಾಯದ ವಿಚಾರ.  ಸಾಕಷ್ಟು ಚರ್ಚೆಯಾಗುತ್ತಿದೆ. ಅಧಿವೇಶನದಲ್ಲಿ ತೀರ್ಮಾನದ ನಿರೀಕ್ಷೆ ಹೊಂದಿದ್ದಾರೆ. ತಕ್ಷಣ ಈ ಬಗ್ಗೆ ತೀರ್ಮಾನ ಕೈಗೊಳ್ಳಬೇಕೆಂದು ಆಗ್ರಹಿಸಿದರು.

ಲೋಕೋಪಯೋಗಿ ಸಚಿವ ಸಿ.ಸಿ.ಪಾಟೀಲ್ ಉತ್ತರಿಸಲು ಮುಂದಾದರೂ ಒಪ್ಪದ ಸದಸ್ಯರು ಮುಖ್ಯಮಂತ್ರಿಯವರಿಂದಲೇ ಉತ್ತರ ಬಯಸಿದರು. ಆದರೆ, ಅವರು ಸದನದಲ್ಲಿ ಹಾಜರಿರದ ಕಾರಣ ಸರ್ಕಾರದ ಉತ್ತರ ನಂತರ ಕೊಡಿಸುವುದಾಗಿ ಸ್ಪೀಕರ್ ಭರವಸೆ ನೀಡಿದರು. ಇದರಿಂದ ಅಸಮಾಧಾನಗೊಂಡ ಯತ್ನಾಳ್ ಹಾಗೂ ಬೆಲ್ಲದ್, ಈಗಲೇ ಮುಖ್ಯಮಂತ್ರಿಯವರನ್ನು ಕರೆಸಿ ಉತ್ತರ ಕೊಡಿಸಿ ಎಂದು ಸದನದ  ಬಾವಿಗೆ ಬಂದು ಧರಣಿಗೆ ಮುಂದಾದರು. ಆಗ, ಪ್ರತಿಪಕ್ಷ ನಾಯಕ ಸಿದ್ದರಾಮಯ್ಯ, ಮುಖ್ಯಮಂತ್ರಿಯವರು ಇಲ್ಲ, ಅವರು ಬಂದ ನಂತರ ಉತ್ತರ ಪಡೆದುಕೊಳ್ಳಲಿ. ನೀವೇ ಹೀಗೆ ಧರಣಿಗೆ ಮುಂದಾದರೆ ಹೇಗೆ ಎಂದು ಪ್ರಶ್ನಿಸಿದರು.

ಕಾಂಗ್ರೆಸ್‌ನ ಶಿವಾನಂದ ಪಾಟೀಲ್ ಅವರು ಕ್ರಿಯಾಲೋಪ ಎತ್ತಿ, ಯತ್ನಾಳ್ ಅವರು ನಿಕಟ ಪೂರ್ವ ಸಿಎಂ ಯಡಿಯೂರಪ್ಪ ಅವರ ಹೆಸರು ಪ್ರಸ್ತಾಪಿಸಿದ್ದಾರೆ.  ಹೀಗಾಗಿ, ಅವರು ಸದನದಲ್ಲಿದ್ದು ಉತ್ತರ ನೀಡಲಿ ಎಂದು ಹೇಳಿದರು. ಸಭಾಧ್ಯಕ್ಷರವರು ನಿಮ್ಮ ಪ್ರಸ್ತಾಪ ಕ್ರಿಯಾಲೋಪದ ವ್ಯಾಪ್ತಿಗೆ ಬರುವುದಿಲ್ಲ ಎಂದು ತಿರಸ್ಕರಿಸಿದರು.

ಆಧಾರ: ಉದಯವಾಣಿ,  ದಿನಾಂಕ:24.09.2021.

## 128. ಶಾಸಕರ ವರ್ತನೆಗೆ ಸಭಾಧ್ಯಕ್ಷರ ಅಸಮಾಧಾನ, ಎಚ್ಚರಿಕೆ

ಸದನದಲ್ಲಿ ಬಹುತೇಕ ಎಲ್ಲ ಪಕ್ಷದ ಶಾಸಕರ ಅಶಿಸ್ತು, ಸಹಕಾರಕ್ಕೆ ಅಕ್ರೋಶಿತರಾದ ಸಭಾಧ್ಯಕ್ಷರು, ಅಶಿಸ್ತಿನ ಸದಸ್ಯರ ಹೆಸರನ್ನು ಪಟ್ಟಿ ಮಾಡಿದ್ದು, ಪ್ರಕಟಿಸುವ ಪರಿಸ್ಥಿತಿ ತಂದುಕೊಳ್ಳಬೇಡಿ ಎಂದು ಖಡಕ್ ಎಚ್ಚರಿಕೆಯ ಪಾಠ ಮಾಡಿದರು.

ಶಾಸಕರ ಅಸಭ್ಯ ನಡವಳಿಕೆ, ಅಸಂಬದ್ಧ ಭಾಷೆ, ಅಧಿವೇಶನದ ಬಗ್ಗೆ ನಿರ್ಲಕ್ಷ್ಯ, ಪೀಠಕ್ಕೆ ಅಗೌರವ ಮತ್ತು ಸದನದ ನಡಾವಳಿಕೆ ಅರಿಯದೇ ಬೇಜವಾಬ್ದಾರಿ ವರ್ತನೆ, ಪ್ರತಿಪಕ್ಷಗಳ ಪ್ರಶ್ನೆಗಳ ಬಗ್ಗೆ ಸರ್ಕಾರದ ಬೇಜವಾಬ್ದಾರಿ ಬಗ್ಗೆ ತೀವ್ರ ಕಿಡಿಕಾರಿದರು. ಪಕ್ಷಾತೀತವಾಗಿ ಎಲ್ಲ ಸದಸ್ಯರಿಗೆ ಎಚ್ಚರಿಕೆ ನೀಡುವ ಜೊತೆಗೆ ಸಭಾಧ್ಯಕ್ಷರ ಅಧಿಕಾರ ವ್ಯಾಪ್ತಿ ಏನು ಎಂಬುದು ಗೊತ್ತುಪಡಿಸಬೇಕಾಗುತ್ತದೆ ಎಂದು ಎಚ್ಚರಿಕೆ ನೀಡಿದರು.

ಅಧಿವೇಶನದಲ್ಲಿ ಜರುಗಿದ ಹಲವು ಪ್ರಸಂಗಗಳು ಸಭಾಧ್ಯಕ್ಷರ ತಾಳ್ಮೆಯನ್ನು ಕೆಣಕಿದವು. ಪ್ರತಿಪಕ್ಷದ ಸದಸ್ಯರ ಆಕ್ಷೇಪ, ಆರೋಪ, ಉದ್ವೇಗಗಳು ಮಿತಿಮೀರಿದ್ದವು. ಪ್ರತಿಪಕ್ಷಗಳ ಪ್ರಶ್ನೆಗಳನ್ನು ಗಾಂಭೀರ್ಯದಿಂದ ಸ್ವೀಕರಿಸದ ಸರ್ಕಾರಕ್ಕೂ ಮೌನ ಪ್ರೇಕ್ಷಕರಾಗಬೇಡಿ ಎಂದು ಸಭಾಧ್ಯಕ್ಷರು ತಿವಿದರು.

**ಪಟ್ಟಿ ಮಾಡುತ್ತಿದ್ದೇವೆ :** "ಅಸಿಸ್ತು ಪ್ರದರ್ಶಿಸುವ ಸದಸ್ಯರ ಪಟ್ಟಿ ಮಾಡಿದ್ದೇವೆ. ನಿಮ್ಮನ್ನು ಅಶಿಸ್ತು ಸದಸ್ಯರು ಎಂಬುದನ್ನು ಪ್ರಸ್ತಾಪ ಮಾಡುವ ಭಾವನೆ ನನ್ನದಲ್ಲ. ಇಲ್ಲಿ ಪ್ರಸ್ತಾಪಿಸಬಾರದು ಅಂದುಕೊಂಡಿದ್ದೆ. ಅನಿವಾರ್ಯವಾಗಿ ಪ್ರಸ್ತಾಪಿಸುವ ಪ್ರಸಂಗ ಉದ್ಭವಿಸಿದೆ. ಪೀಠದ ಗೌರವ ಮೀರಿ ಮಾತನಾಡಿದರೆ ಪೀಠದ ಅಧಿಕಾರ ವ್ಯಾಪ್ತಿ ಏನೆಂಬುದನ್ನು ಗೊತ್ತುಪಡಿಸಬೇಕಾಗುತ್ತದೆ" ಎಂದು ಖಡಕ್ ಸೂಚನೆ ಕೊಟ್ಟರು.

**ಪ್ರಥಮ ಸಲವೇ ಬೇಜವಾಬ್ದಾರಿ :** ಮೊದಲ ಬಾರಿಗೆ ಬಸವಕಲ್ಯಾಣದಿಂದ ಆಯ್ಕೆಯಾದ ಶರಣು ಸಲಗಾರಿಗೆ ಮೊದಲ ಅಧಿವೇಶನ ಇದು. ಮೊದಲ ಸಲ ಚುಕ್ಕೆಗುರುತಿನ ಪ್ರಶ್ನೆ ಕೇಳಿದ್ದಾರೆ. ಮೊದಲ ದಿನವೇ ಬರಲೇ ಇಲ್ಲ. ಶಾಸಕರಿಗೇ ಜವಾಬ್ದಾರಿ ಇಲ್ಲ" ಎಂದು ಸ್ಪೀಕರ್ ಬೇಸರ ವ್ಯಕ್ತಪಡಿಸಿದರು. ಕೊನೆಗೆ ಬಂದ ಶರಣು ಸಲಗಾರರಿಗೆ ಹೊಸಬರು ಎಂದು ಪ್ರಶ್ನೆ ಕೇಳಲು ಅವಕಾಶ ನೀಡಿದರು.

**ಅರ್ಥವೇ ಆಗೋಲ್ಲ :** ಮೀಸಲು ಕುರಿತು ಸದನದ ಬಾವಿಗಿಳಿದ ಹಿರಿಯ ಸದಸ್ಯ ಯತ್ನಾಳ್, ಅರವಿಂದ ಬೆಲ್ಲದ್ ನಡವಳಿಕೆ ಬಗ್ಗೆ ಆಕ್ಷೇಪ ವ್ಯಕ್ತಪಡಿಸಿದ ಸಭಾಧ್ಯಕ್ಷರು, ನಿಮಗೆಲ್ಲ ಯಾರು ಅರ್ಥ ಮಾಡಿಸಬೇಕು. ನಿಮ್ಮ ಮುಂದಿನ ಸಾಲೇ ಇಲ್ಲ ಎಂದರು.

**ನಡಾವಳಿ ಪುಸ್ತಕ ಓದಿ :** ಅನುದಾನ ಹಂಚಿಕೆ ಬಗ್ಗೆ ಶೂನ್ಯವೇಳೆಯಲ್ಲಿ ಶಾಸಕ ಭೀಮಾ ನಾಯಕ್ ಪದೇಪದೆ ಮಧ್ಯ ಪ್ರವೇಶಿಸಿದ್ದನ್ನು ಎಚ್ಚರಿಸಿದ ಸಭಾಧ್ಯಕ್ಷರು ಸದನದ ನಡಾವಳಿ ಪುಸ್ತಕ ಪ್ರದರ್ಶಿಸಿ ಶೂನ್ಯವೇಳೆ ಅಂದ್ರೆ ಏನು ಎಂಬುದನ್ನು ಅರಿತುಕೊಳ್ಳಿ ಎಂದು ಜಾಡಿಸಿದರು.

**ಇದೇನು ಲಾಂಜ್ ಅನ್ಕೊಂಡ್ರಾ :** ಮೀಸಲಾತಿ ಪ್ರಶ್ನೆ ವ್ಯಂಗ್ಯವಾಡಿದ ಶಾಸಕ ರಾಜುಗೌಡಗೆ ತಮ್ಮ ಭಾಷೆಯಲ್ಲೇ ವಾರ್ನಿಂಗ್ ನೀಡಿ, "ನಾ ಎಲ್ಲವನ್ನು ಕೇಳಿಸಿಕೊಳ್ತೀನಿ. ಹೊರಗಡೆ ಲಾಂಜ್‌ನಲ್ಲಿ ಮಾಡನಾಡಿದಂತೆ ಇಲ್ಲಿ ಮಾತನಾಡಬೇಡಿ" ಎಂದರು ಸಭಾಧ್ಯಕ್ಷರು.

**ಜೆಡಿಎಸ್ ಶಾಸಕರಿಗೇನಾಗಿದೆ?** ಜೆಡಿಎಸ್ ಶಾಸಕರಿಗೆ ನೇರವಾಗಿಯೇ ಚಾಟಿ ಬೀಸಿದ ಸಭಾಧ್ಯಕ್ಷರು ಶೂನ್ಯವೇಳೆಯಲ್ಲಿ ಎಲ್ಲರೂ ಪ್ರಶ್ನೆ ಕೇಳ್ತಿರಿ. 'ನಿಮಗೆ ಯಾರ್ ಶಿಸ್ತು ಕಲಿಸೋವ್ರು, ನಿಮ್ ಪಾರ್ಟಿಗೆ ಏನ್ ಆಗಿದೆ ರೀ ಸಮಾಧಾನದಿಂದ ನಡೆದುಕೊಳ್ಳಿ. ಸಂಖ್ಯೆ ಇದೆ ಎಂದು ಶಕ್ತಿ ಪ್ರದರ್ಶನ ಮಾಡೋಕ್ಕಾಗಲ್ಲ. ನೀವ್ ಹೇಳಿದಂತೆ ಕೇಳ್‌ಬೇಕ್‌ನೂ? ಎಂದು ಉದ್ಗಾರ ತೆಗೆದರು.

**ಶಾಸಕಾಂಗದ ನಾಯಕರಿಗೆ ಮನವಿ :** ಶಾಸಕಾಂಗದ ನಿಯಮಗಳ ಬಗ್ಗೆ ಶಾಸಕರಿಗೆ ಆಗಾಗ ತಿಳಿಸುವ ಕಾರ್ಯಕ್ರಮ ಜರುಗಿಸುವಂತೆ ಸಭಾಧ್ಯಕ್ಷರು ಮುಖ್ಯಮಂತ್ರಿ ಬೊಮ್ಮಾಯಿ ಅವರಿಗೆ ಮನವಿ ಮಾಡಿದ್ದಾರೆ. ಪ್ರಶ್ನೋತ್ತರ, ಶೂನ್ಯವೇಳೆ, ಗಮನ ಸೆಳೆಯುವ ವಿಷಯ, ನಿಯಮ 350, 60, 69ರಡಿ ಬದಲಾವಣೆ ಅಂದ್ರೆ ಏನು ಪೀಠದ ಗೌರವ, ಸದನದ ಮರ್ಯಾದೆಗಳ ಬಗ್ಗೆ ತಿಳಿಯಲು ಮನವಿ ಮಾಡಿದರು. ಜೊತೆಗೆ ಆಯಾ ಪಕ್ಷದ ಹಿರಿಯ ಸದಸ್ಯರಿಗೂ ಕಿರಿಯ ಸದಸ್ಯರಿಗೆ ಮಾರ್ಗದರ್ಶನ ಮಾಡುವಂತೆಯೂ ಸಭಾಧ್ಯಕ್ಷರು ಹೇಳಿದ್ದರು.

**ಇವತ್ತು ಯಾವ ವಾರವಪ್ಪ**? ಒಂದು ಹಂತದಲ್ಲಿ ಸದನದಲ್ಲಿ ಶಾಸಕರು ಎಲ್ಲದಕ್ಕೂ ಯದ್ವತದ್ವಾ ಪ್ರಶ್ನೆ ಕೇಳತೊಡಗಿದಾಗ ಬೇಸರ ವ್ಯಕ್ತಪಡಿಸಿ **"**ಇವತ್ತು ಯಾವ ವಾರವಾಪ್ಪ .. ಗುರುವಾರ. ರಾಯರ ದಿನ ಆದ್ರೂ ಹೀಗೇಕೆ ಸದಸ್ಯರು ನಡೆದುಕೊಳ್ತಿದ್ದಾರೆ**"** ಎಂದು ಆಶ್ಚರ್ಯ ವ್ಯಕ್ತಪಡಿಸಿದರು.

ಆಧಾರ: ವಿಜಯ ಕರ್ನಾಟಕ, ದಿನಾಂಕ: 24.09.2021

## 129. ಸಂಸದೀಯ ಪ್ರಜಾಪ್ರಭುತ್ವ ವ್ಯವಸ್ಥೆ ಬಲಗೊಳಿಸಲು ಆತ್ಮಾವಲೋಕನ ಅಗತ್ಯ

ಸಂಸದೀಯ ಪ್ರಜಾಪ್ರಭುತ್ವ ವ್ಯವಸ್ಥೆ ಬಲಗೊಳಿಸುವ ನಿಟ್ಟಿನಲ್ಲಿ ಆತ್ಮಾವಲೋಕನ ಮಾಡಿಕೊಳ್ಳುವ ಅಗತ್ಯವಿದೆ ಎಂದು ವಿಧಾನ ಸಭಾಧ್ಯಕ್ಷರು ತಿಳಿಸಿದರು.

ಸ್ವಾತಂತ್ರ್ಯದ ಅಮೃತ ಮಹೋತ್ಸವದ ಅಂಗವಾಗಿ ಪ್ರಜಾಪ್ರಭುತ್ವ ಸಂಸದೀಯ ಮೌಲ್ಯಗಳ ರಕ್ಷಣೆ ಕುರಿತು ಎರಡೂ ಸದನಗಳ ಸದಸ್ಯರನ್ನುದ್ದೇಶಿಸಿ ಮಾತನಾಡಿದ ಅವರು, ನಮ್ಮ ವ್ಯವಸ್ಥೆ ಇಷ್ಟೊಂದು ಸುಂದರವಾಗಿರಲು ಸಂವಿಧಾನ ಬರೆದ ಅಂಬೇಡ್ಕರ್ ಕೊಡುಗೆ ದೊಡ್ಡದಿದೆ. ನಮ್ಮಷ್ಟೆ ಜವಾಬ್ದಾರಿ ಕಾರ್ಯಾಂಗ, ನ್ಯಾಯಾಂಗ, ಪತ್ರಿಕಾಂಗಕ್ಕೂ ಇದೆ. ಎಲ್ಲ ರಂಗಗಳು ಆತ್ಮಾವಲೋಕನ ಮಾಡಿಕೊಳ್ಳಬೇಕು. ಕಾರ್ಯಾಂಗಕ್ಕೂ ಜವಾಬ್ದಾರಿಯಿದೆ. ನ್ಯಾಯಾಂಗ ಹಾಗೂ ಪತ್ರಿಕಾರಂಗದ ಬಗ್ಗೆಯೂ ಜನರು ಹೇಗೆ ಮಾತನಾಡುತ್ತಿದ್ದಾರೆ ಎನ್ನುವುದನ್ನು ಎಲ್ಲರೂ ನೋಡಿದ್ದೇವೆ. ನಾವು ಆತ್ಮಾವಲೋಕನ ಮಾಡಿಕೊಂಡು ಬೇರೆಯವರಿಗೆ ಮಾರ್ಗದರ್ಶಕರಾಗೋಣ. ಕೇವಲ ಚುನಾವಣೆಗಳ ಬಗ್ಗೆ ಆಲೋಚನೆ ಮಾಡುವ ಬದಲು ವ್ಯವಸ್ಥೆ ಸುಧಾರಣೆ ಮಾಡುವ ಕಡೆಗೆ ಗಮನಹರಿಸೋಣ ಎಂದು ತಿಳಿಸಿದರು.

ಪ್ರತಿಪಕ್ಷ ಕಾಂಗ್ರೆಸ್ ಸದಸ್ಯರು ಗೈರು ಹಾಜರಾಗಿರುವುದು ಬೇಸರದ ಸಂಗತಿ. ಮೂವರು ಸಾಂವಿಧಾನಿಕ ಸ್ಥಾನದಲ್ಲಿರುವವರು ಭಾಗವಹಿಸುವ ಕಾರ್ಯಕ್ರಮದಲ್ಲಿ ಕಾಂಗ್ರೆಸ್ ಭಾಗವಹಿಸದಿರುವುದು ಬೇಸರ ತಂದಿದೆ ಎಂದರು.

ಇದಲ್ಲದೇ ತಮ್ಮ ಲಿಖಿತ ಭಾಷಣದಲ್ಲಿ ಚುನಾವಣೆಗಳಲ್ಲಿ ಸುಧಾರಣೆ ತರಲು 1951ರ ಪ್ರಜಾಪ್ರತಿನಿಧಿ ಕಾಯ್ದೆಯನ್ನು ತಿದ್ದುಪಡಿ ಮಾಡುವುದು, ಅಧಿವೇಶನದ ಕಾಲಾವಧಿ ಹೆಚ್ಚಿಸುವುದು, ಸದನದ ಕಾರ್ಯಕಲಾಪ ಬಹಿಷ್ಕರಿಸುವ ಹಾಗೂ ಮೊಟಕುಗೊಳಿಸುವ ಸದಸ್ಯರ ವಿರುದ್ಧ ತಕ್ಷಣ ಅಮಾನತ್ತು ಅಥವಾ ಭತ್ಯೆ ಕಡಿತಗೊಳಿಸುವಂತಹ ಕಠಿಣ ಕ್ರಮ ಜರುಗಿಸಲು ಅವಕಾಶ ದೊರೆಯುವಂತೆ ನಿಯಮಗಳ ತಿದ್ದುಪಡಿ, ಪ್ರತಿಪಕ್ಷಗಳು ಚರ್ಚಿಸುವ ವಿಷಯಗಳಿಗೆ ಪ್ರತ್ಯೇಕ ದಿನ ಅಥವಾ ಸಮಯ ನಿಗದಿ ಮಾಡುವುದು ಹಾಗೂ ಶಾಸಕರು ಶಿಸ್ತು, ಘನತೆಯಿಂದ ನಡೆದುಕೊಳ್ಳುವಂತೆ ನೋಡಿಕೊಳ್ಳುವುದು ಆಯಾ ಪಕ್ಷಗಳ ಜವಾಬ್ದಾರಿಯಾಗಬೇಕು ಎಂದು ಸಲಹೆ ನೀಡಿದರು.

ಆಧಾರ: ಉದಯವಾಣಿ, ದಿನಾಂಕ: 25.09.2021

## 130. ಸದನದ ಬಾವಿಗಿಳಿದು ಸಿದ್ದು, ಡಿಕೆಶಿ ಧರಣಿ

ರಾಷ್ಟ್ರೀಯ ಶಿಕ್ಷಣ ನೀತಿ, ಕುಣಿಗಲ್ ಲಿಂಕ್ ಕೆನಾಲ್ ಸೇರಿದಂತೆ ಕಾಂಗ್ರೆಸ್ ಕ್ಷೇತ್ರಗಳ ವಿವಿಧ ಸಮಸ್ಯೆಗಳ ಬಗ್ಗೆ ಚರ್ಚಿಸಲು ಅವಕಾಶ ನೀಡದ ಸರ್ಕಾರದ ವಿರುದ್ಧ ಕಾಂಗ್ರೆಸ್ ಪಕ್ಷ ಆಕ್ರೋಶ ವ್ಯಕ್ತಪಡಿಸಿದೆ. ಈ ಬಗ್ಗೆ ವಿಪಕ್ಷ ನಾಯಕ ಸಿದ್ದರಾಮಯ್ಯ, ಡಿ.ಕೆ.ಶಿವಕುಮಾರ್ ನೇತೃತ್ವದಲ್ಲಿ ಕಾಂಗ್ರೆಸ್ ಸದಸ್ಯರು ಸದನದ ಬಾವಿಗಿಳಿದು ಭಿತ್ತಿಪತ್ರ ಪ್ರದರ್ಶಿಸಿ ಧರಣಿ ನಡೆಸಿದ ಘಟನೆ ನಡೆದಿದೆ.

ಕೊರೋನಾ ನಿರ್ವಹಣೆ ವೈಫಲ್ಯ ಹಾಗೂ ರಾಷ್ಟ್ರೀಯ ಶಿಕ್ಷಣ ನೀತಿ ವಿರುದ್ಧ ಕೇಂದ್ರ ಬಿಜೆಪಿ, ಪ್ರಧಾನಮಂತ್ರಿ ನರೇಂದ್ರ ಮೋದಿ ಹಾಗೂ ರಾಜ್ಯ ಸರ್ಕಾರದ ವಿರುದ್ಧ ಘೋಷಣೆ ಕೂಗಿದ ಸದಸ್ಯರು, 'ಗಲಿ ಗಲಿ ಮೇ ಶೋರ್ ಹೈ, ಚೌಕಿದಾರ್ ಚೋರ್ ಹೈ' ಎಂದು ಕಿಡಿಕಾರಿದರು. ಈ ವೇಳೆ ಬಿಜೆಪಿ ಸದಸ್ಯರು ಪ್ರತಿ ಘೋಷಣೆ ಕೂಗಿದ ಹಿನ್ನೆಲೆಯಲ್ಲಿ ತೀವ್ರ ಗದ್ದಲದ ವಾತಾವರಣ ನಿರ್ಮಾಣವಾಗಿತ್ತು.

ಕೊರೋನಾ ನಿರ್ವಹಣೆ ಹಾಗೂ ಪಂಚಮಸಾಲಿ ಮೀಸಲಾತಿ ಕುರಿತು ಸರ್ಕಾರ ಉತ್ತರ ನೀಡಿದ ಬಳಿಕ ಅಧಿವೇಶನ ಮುಂದೂಡಲು ಸಭಾಧ್ಯಕ್ಷರು ಸಿದ್ಧತೆ ನಡೆಸಿದ್ದರು. ಇದರಿಂದ ಕೆರಳಿದ ಕಾಂಗ್ರೆಸ್ ಶಾಸಕರಾದ ಕುಣಿಗಲ್ ಡಾ.ರಂಗನಾಥ್, ಕಂಪ್ಲಿ ಶಾಸಕ ಗಣೇಶ್ ಅಂಜಲಿ ನಿಂಬಾಳ್ಕರ್ ಸೇರಿದಂತೆ ಎಲ್ಲ ಸದಸ್ಯರು ಸದನದ ಬಾವಿಗಿಳಿದು ಧರಣಿ ನಡೆಸಿದರು.

ಈ ವೇಳೆ ಮಾತನಾಡಿದ ವಿಪಕ್ಷ ನಾಯಕ ಸಿದ್ದರಾಮಯ್ಯ, ಸರ್ಕಾರದ ಬಿಲ್‌ಗಳ ಬಗ್ಗೆ ಒಪ್ಪಿಗೆ ಪಡೆದಿದ್ದೀರಿ. ಜನಪ್ರತಿನಿಧಿಗಳ ಕ್ಷೇತ್ರಗಳ ಸಮಸ್ಯೆಗಳ ಬಗ್ಗೆ ಪ್ರಸ್ತಾಪಿಸಲು ಸಮಯಾವಕಾಶ ನೀಡುತ್ತಿಲ್ಲ. ಸದನವನ್ನು ಒಂದು ವಾರ ವಿಸ್ತರಣೆ ಮಾಡಿ ಎಂದು ಮನವಿ ಮಾಡಿದ್ದೆ. ರಾಷ್ಟ್ರೀಯ ಶಿಕ್ಷಣ ನೀತಿ ಕುರಿತು ಸಹ ಚರ್ಚೆ ಮಾಡಿಲ್ಲ. ಆರು ತಿಂಗಳ ಬಳಿಕ ಸದನ ನಡೆಸುತ್ತಿದ್ದೇವೆ. ದಯವಿಟ್ಟು ಎಲ್ಲ ಸದಸ್ಯರಿಗೂ ಮಾತನಾಡಲು ಅವಕಾಶ ನೀಡಿ ಎಂದು ಒತ್ತಾಯ ಮಾಡಿದರು. ಇದಕ್ಕೆ ಸಭಾಧ್ಯಕ್ಷರು ಒಪ್ಪಿಗೆ ನೀಡದಿದ್ದಾಗ ಕೆರಳಿದ ಕಾಂಗ್ರೆಸ್ ಸದಸ್ಯರು ಭಿತ್ತಿ ಪತ್ರ ಪ್ರದರ್ಶಿಸಿ ಆಕ್ರೋಶ ವ್ಯಕ್ತಪಡಿಸಿದರು.

ಆಧಾರ: ಕನ್ನಡ ಪ್ರಭ, ದಿನಾಂಕ: 25.09.2021

## 131. ಧಾರ್ಮಿಕ ಕಟ್ಟಡ ವಿಧೇಯಕ ಅಂಗೀಕಾರ

ವಿಧಾನಸಭೆಯಿಂದ ಅಂಗೀಕೃತ ರೂಪದಲ್ಲಿರುವ ಕರ್ನಾಟಕ ಧಾರ್ಮಿಕ ಕಟ್ಟಡಗಳ (ಸಂರಕ್ಷಣೆ) ವಿಧೇಯಕ–2021 ಅನ್ನು ಸದನ ಅನುಮೋದಿಸಿದೆ. ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವ ಜೆ.ಸಿ.ಮಾಧುಸ್ವಾಮಿಯವರು ವಿಧೇಯಕ ಮಂಡಿಸಿ, ಸರ್ಕಾರಿ ಜಮೀನಿನಲ್ಲಿ ಅಕ್ರಮವಾಗಿ ನಿರ್ಮಿಸಿರುವ ಧಾರ್ಮಿಕ ಕಟ್ಟಡಗಳನ್ನು ಸಂರಕ್ಷಿಸಲು ಈ ವಿಧೇಯಕ ತಂದಿದ್ದೇವೆ. ಪ್ರಕರಣವು ಸುಪ್ರೀಂಕೋರ್ಟ್‌ನಲ್ಲಿ ಇರುವುದರಿಂದ ಈ ರೀತಿ ನಿರ್ಮಾಣವಾಗಿರುವ ಯಾವುದೇ ಧಾರ್ಮಿಕ ಕಟ್ಟಡವನ್ನು ಸಕ್ರಮ ಮಾಡುವುದಿಲ್ಲ. ನ್ಯಾಯಾಲಯದ ಅಂತಿಮ ಆದೇಶದವರೆಗೂ ಅವುಗಳನ್ನು ರಕ್ಷಣೆ ಮಾಡಲು ಮತ್ತು ಸದ್ಯ ಉದ್ಭವಿಸಿರುವ ಗೊಂದಲ ನಿವಾರಣೆಗೆ ವಿಧೇಯಕ ತಂದಿದ್ದೇವೆ. ಇದರಿಂದ ಯಾರಿಗೂ ಸಮಸ್ಯೆ ಆಗುವುದಿಲ್ಲ ಎಂದರು. ನಾವು ಯಾವುದೇ ಧಾರ್ಮಿಕ ಕಟ್ಟಡವನ್ನು ಸಕ್ರಮ ಮಾಡುವುದಿಲ್ಲ. ಅಧಿಕಾರಿಗಳು ನ್ಯಾಯಾಲಯದ ಆದೇಶ ತೋರಿಸಿ, ನೆಲಸಮ ಮಾಡುವುದನ್ನು ತಾತ್ಕಾಲಿಕವಾಗಿ ಸುಪ್ರೀಂಕೋರ್ಟ್‌ನ ಅಂತಿಮ ಆದೇಶದವರೆಗೂ ತಡೆಯುವ ಕಾರ್ಯ ಮಾಡಲಿದ್ದೇವೆ ಎಂದು ಸ್ಪಷ್ಟಪಡಿಸಿದರು. ನಂತರ ಆಡಳಿತ ಪಕ್ಷ ಹಾಗೂ ಪ್ರತಿಪಕ್ಷದ ಸದಸ್ಯರ ಒಪ್ಪಿಗೆಯಂತೆ ವಿಧೇಯಕ ಅಂಗೀಕಾರಗೊಂಡಿತು.

ಆಧಾರ: ಉದಯವಾಣಿ, ದಿನಾಂಕ: 25.09.2021

## 132. ವಿಧಾನಮಂಡಲ ಕಲಾಪ ಸದ್ಬಳಕೆ

ಸೆಪ್ಟೆಂಬರ್ 13 ರಿಂದ 24 ರವರೆಗೆ ನಡೆದ 12 ದಿನಗಳ ವಿಧಾನಮಂಡಲದ ಅಧಿವೇಶನದಲ್ಲಿ ವಿಧಾನಸಭೆಗಿಂತ ಪರಿಷತ್‌ನಲ್ಲಿ ಹೆಚ್ಚು ಸಮಯ ಕಲಾಪ ನಡೆಯಿತು. ಪ್ರತಿಪಕ್ಷಗಳು ಸಹ ಕಲಾಪದಲ್ಲಿ ಅರ್ಥಪೂರ್ಣವಾಗಿ ಭಾಗವಹಿಸಿ ಸಾರ್ವಜನಿಕ ಸಮಸ್ಯೆ ಬಿಂಬಿಸುವಲ್ಲಿ ಯಶಸ್ವಿಯಾದರು. ಪರಿಷತ್‌ನಲ್ಲಿ 62 ಗಂಟೆ 30 ನಿಮಿಷ ಕಲಾಪ ಸಮಯ ಬಳಸಿಕೊಂಡರೆ, ವಿಧಾನಸಭೆಯಲ್ಲಿ 59 ಗಂಟೆ ಬಳಸಿಕೊಳ್ಳಲಾಯಿತು.

ವಿಧಾನಸಭೆಯಲ್ಲಿ 9 ವರದಿಗಳು, 29 ಅಧಿಸೂಚನೆ, 4 ಅಧ್ಯಾದೇಶ, 72 ವಾರ್ಷಿಕ ವರದಿಗಳು, 101 ಲೆಕ್ಕ ಪರಿಶೋಧನಾ ವರದಿಗಳು, 3 ತಪಾಸಣಾ ವರದಿಗಳು, 2 ಅನುಸರಣಾ ವರದಿ ಮಂಡಿಸಲಾಗಿದೆ. ಧನವಿನಿಯೋಗ ವಿಧೇಯಕ ಸೇರಿದಂತೆ 17 ವಿಧೇಯಕಗಳನ್ನು ಮಂಡಿಸಲಾಗಿದ್ದು, ಒಟ್ಟು 19 ವಿಧೇಯಕಗಳನ್ನು ಅಂಗೀಕರಿಸಲಾಗಿದೆ.

ಒಟ್ಟು 21 ಸೂಚನೆಗಳನ್ನು ನಿಯಮ 69ರಡಿ ಸ್ವೀಕರಿಸಿ 5 ಸೂಚನೆಗಳ ಬಗ್ಗೆ ಚರ್ಚಿಸಲಾಗಿದೆ. ಒಟ್ಟು 2,743 ಪ್ರಶ್ನೆಗಳನ್ನು ಸ್ವೀಕರಿಸಿದ್ದು, ಸದನದಲ್ಲಿ ಉತ್ತರಿಸಬೇಕಾಗಿದ್ದ 150 ಪ್ರಶ್ನೆಗಳ ಪೈಕಿ 146, ಲಿಖಿತ ಮೂಲಕ ಉತ್ತರಿಸುವ 1950 ಪ್ರಶ್ನೆಗಳ ಉತ್ತರ ಮಂಡಿಸಲಾಗಿದೆ. ನಿಯಮ 351ರಡಿ 166 ಸೂಚನೆ ಅಂಗೀಕರಿಸಿ, 108 ಸೂಚನೆಗಳ ಉತ್ತರ ಸ್ವೀಕರಿಸಲಾಗಿದೆ. ಗಮನ ಸೆಳೆಯುವ 361 ಸೂಚನೆಗಳ ಪೈಕಿ, 58 ಸೂಚನೆಗಳನ್ನು ಚರ್ಚಿಸಲಾಗಿದೆ. 40 ಸೂಚನೆಗಳ ಉತ್ತರ ಮಂಡಿಸಲಾಗಿದೆ. ಶೂನ್ಯ ವೇಳೆಯಲ್ಲಿ ಒಟ್ಟು 21 ಸೂಚನೆಗಳನ್ನು ಚರ್ಚಿಸಲಾಗಿದೆ. ಒಂದು ಅರ್ಜಿಯನ್ನು ಸದನಕ್ಕೆ ಒಪ್ಪಿಸಲಾಗಿದೆ. ಈ ಅವಧಿಯಲ್ಲಿ ಸದನವು ಶೇ. 90ಕ್ಕಿಂತ ಹೆಚ್ಚಿನ ಕಾರ್ಯಕಲಾಪಗಳು ಪೂರ್ಣಗೊಂಡಿದೆ.

**ಪರಿಷತ್‌ನಲ್ಲಿ 62 ಗಂಟೆ 30 ನಿಮಿಷ ಚರ್ಚೆ :** ಪರಿಷತ್ 10 ದಿನಗಳ ಕಾಲ ನಡೆಯಿತು. 1582 ಪ್ರಶ್ನೆಗಳ ಪೈಕಿ 150 ಅನ್ನು ಚುಕ್ಕೆ ಗುರುತಿನ ಪ್ರಶ್ನೆಗಳನ್ನಾಗಿ ಅಂಗೀಕರಿಸಿ, 147ಕ್ಕೆ ಸದನದಲ್ಲಿ ಉತ್ತರಿಸಲಾಯಿತು. ಲಿಖಿತ ಮೂಲಕ ಸ್ವೀಕೃತಗೊಂಡಿದ್ದ 1432 ಪ್ರಶ್ನೆಗಳ ಪೈಕಿ 606ಕ್ಕೆ ಉತ್ತರ ಮಂಡಿಸಲಾಯಿತು. ನಿಯಮ 72 ರಡಿ 184 ಸೂಚನೆಗಳನ್ನು ಸ್ವೀಕರಿಸಿ, 10ಕ್ಕೆ ಉತ್ತರ ಕೊಡಲಾಯಿತು. 47 ಸೂಚನೆಗಳಿಗೆ ಉತ್ತರ ಮಂಡಿಸಲಾಯಿತು.

ನಿಯಮ 330ರ ಅಡಿಯಲ್ಲಿ 130 ಸೂಚನೆಗಳನ್ನು ಸ್ವೀಕರಿಸಿ, 12 ಪ್ರಸ್ತಾವಗಳಿಗೆ ಉತ್ತರಿಸಲಾಗಿದೆ. 27 ಪ್ರಸ್ತಾವಗಳಿಗೆ ಉತ್ತರ ಮಂಡಿಸಲಾಯಿತು. ಶೂನ್ಯವೇಳೆಯ 78 ಪ್ರಸ್ತಾವಗಳ ಪೈಕಿ 16ಕ್ಕೆ ಸದನದಲ್ಲಿ ಉತ್ತರಿಸಲಾಯಿತು. 26 ಪ್ರಸ್ತಾವನೆಗಳಿಗೆ ಉತ್ತರ ಮಂಡಿಸಲಾಯಿತು. ನಿಯಮ 69ರಡಿ 6 ಸೂಚನೆ ಸ್ವೀಕರಿಸಿ, ಒಂದು ಸೂಚನೆಯನ್ನು ನಿಯಮ 68ಕ್ಕೆ ಪರಿವರ್ತಿಸಿ, ಚರ್ಚಿಸಿ ಉತ್ತರಿಸಲಾಯಿತು. ನಿಯಮ 68 ರಡಿ 5 ಸೂಚನೆ ಸ್ವೀಕರಿಸಿ, ಒಂದನ್ನು ಚರ್ಚಿಸಿ ಉತ್ತರ ಕೊಡಲಾಯಿತು. ಇದಲ್ಲದೇ ನಿಯಮ 68ರಡಿ 7 ಸೂಚನೆ ಸ್ವೀಕರಿಸಿ ಉತ್ತರ ಮಂಡಿಸಲಾಯಿತು. ವಿಧಾನಸಭೆಯಿಂದ ಅಂಗೀಕಾರ ರೂಪದಲ್ಲಿ ಬಂದಿದ್ದ 19 ವಿಧೇಯಕಗಳಿಗೆ ಸಮ್ಮತಿ ಸೂಚಿಸಲಾಯಿತು.

ಆಧಾರ: ವಿಜಯ ಕರ್ನಾಟಕ, ದಿನಾಂಕ: 25.09.2021

## 133. ಚರ್ಚೆ ಇಲ್ಲದೇ ಶಾಸನ ರಚನೆ ಜನತಂತ್ರಕ್ಕೆ ಮಾರಕ

ಶಾಸನಸಭೆಗಳಲ್ಲಿ ಯಾವುದೇ ಚರ್ಚೆಗೆ ಅವಕಾಶ ನೀಡದೇ ವಿಧೇಯಕಗಳನ್ನು ಅನುಮೋದಿಸುವ ಪರಿಪಾಠ ಪ್ರಜಾಪ್ರಭುತ್ವ ವ್ಯವಸ್ಥೆಗೆ ಮಾರಕವಾಗಿದೆ ಎಂದು ಮೇಲ್ಮನೆ ಸಭಾಪತಿ ಬಸವರಾಜ ಹೊರಟ್ಟಿ ಬೇಸರ ವ್ಯಕ್ತಪಡಿಸಿದ್ದಾರೆ.

ವಿಧಾನಮಂಡಲ ಜಂಟಿ ಅಧಿವೇಶನದಲ್ಲಿ ಮಾತನಾಡಿದ ಅವರು, ಚಿಂತಕರ ಚಾವಡಿ ಎಂದೇ ಬಿಂಬಿತವಾಗಿರುವ ಮೇಲ್ಮನೆಯಲ್ಲಿ ಕೆಲ ವರ್ಷಗಳ ಹಿಂದೆ ಅರ್ಧ ಗಂಟೆಯಲ್ಲಿ ಯಾವುದೇ ಚರ್ಚೆಯಿಲ್ಲದೇ 22 ಮಸೂದೆಗಳು ಅನುಮೋದಿತಗೊಂಡ ಪ್ರಸಂಗಕ್ಕೆ ನಾನೇ ಸಾಕ್ಷಿಯಾಗಿದ್ದೇನೆ. ಇಂದಿಗೂ ಎಲ್ಲ ಶಾಸನಸಭೆಗಳಲ್ಲಿ ಚರ್ಚೆಗೆ ಅವಕಾಶವನ್ನೇ ನೀಡದೇ ಕೇವಲ ಗದ್ದಲ, ಗೊಂದಲ ಮತ್ತು ರಾಜಕೀಯ ತಿಕ್ಕಾಟಗಳ ಮಧ್ಯೆಯೇ ವಿಧೇಯಕಗಳನ್ನು ಅನುಮೋದಿಸುವ ಪರಿಪಾಠ ನಡೆಯುತ್ತಿದ್ದು ಇದು ಪ್ರಜಾಪ್ರಭುತ್ವಕ್ಕೆ ಮಾರಕವಾಗಿದೆ ಎಂದು ನೋವಿನಿಂದ ನುಡಿದರು.

ರಾಷ್ಟ್ರ ಮತ್ತು ರಾಜ್ಯ ಸರ್ಕಾರಗಳಿಗೆ ಅತ್ಯಂತ ತುರ್ತಾಗಿ ಶಾಸನಗಳ ಅನಿವಾರ್ಯತೆಯುಂಟಾದ ಸಂದರ್ಭದಲ್ಲಿ ಮಾತ್ರ ಸುಗ್ರೀವಾಜ್ಞೆಯನ್ನು ಹೊರಡಿಸುವ ಕಾಲವೊಂದಿತ್ತು. ಈಗ ಶಾಸನಸಭೆಗಳಲ್ಲಿ ಅಂಗೀಕಾರವಾಗದಾದ ಸುಗ್ರೀವಾಜ್ಞೆಯನ್ನು ತರುವ ಪದ್ಧತಿ ಜಾರಿಯಲ್ಲಿರುವುದು ಪ್ರಸ್ತುತ ನಾವು ಎಂತಹ ವಿಷಮ ಪರಿಸ್ಥಿತಿಯಲ್ಲಿದ್ದೇವೆ ಎಂಬುದರ ಸಂಕೇತವಾಗಿದೆ ಎಂದು ಹೊರಟ್ಟಿ ಅಸಮಾಧಾನ ಹೊರಹಾಕಿದರು.

ಕ್ಷೇತ್ರದ ಅಭಿವೃದ್ಧಿಗೆ ಶ್ರಮಿಸಿದ ಜನಪ್ರತಿನಿಧಿಗಳಿಗೆ ಮತದಾರರ ಮನ್ನಣೆ ದೊರೆಯದಂತಾಗಿದೆ. ಶಾಸನಸಭೆಗಳಿಗೆ ಸ್ಪರ್ಧಿಸುವ ಅಭ್ಯರ್ಥಿಗಳಿಗೆ ಎಷ್ಟು ಹಣ ಖರ್ಚು ಮಾಡುತ್ತಾರೆಂಬುದರ ಮೇಲೆ ಎಲ್ಲ ರಾಜಕೀಯ ಪಕ್ಷಗಳು ಅಂಥ ಅಭ್ಯರ್ಥಿಗಳಿಗೆ ಟಿಕೆಟ್ ನೀಡಲಾಗುತ್ತಿದೆ. ಎಲ್ಲ ರಾಜಕೀಯ ಪಕ್ಷಗಳು ಇದಕ್ಕೆ ಹೊರತಾಗಿಲ್ಲ. ಇಂತಹ ಪರಿಸ್ಥಿತಿಯಲ್ಲಿ ಆಯ್ಕೆಗೊಂಡ ಜನಪ್ರತಿನಿಧಿಗಳಿಂದ ಪ್ರಾಮಾಣಿಕತೆ ಅಪೇಕ್ಷಿಸಲು ಹೇಗೆ ಸಾಧ್ಯ ಎಂದು ಪ್ರಶ್ನಿಸಿದ ಹೊರಟ್ಟಿ, ಹಣ, ಹೆಂಡ, ಜಾತಿ ಮತ್ತು ಸ್ವಜನಪಕ್ಷಪಾತಗಳಿಂದ ಅನಿಷ್ಠಗಳಿಂದ ಚುನಾವಣೆಯನ್ನು ಮುಕ್ತ ಮಾಡಿದಾಗ ಮಾತ್ರ ಪ್ರಜಾಪ್ರಭುತ್ವಕ್ಕೆ ನಿಜವಾದ ಅರ್ಥ ಬರುತ್ತದೆ ಎಂದು ಅಭಿಪ್ರಾಯಪಟ್ಟರು.

ಚುನಾವಣಾ ಆಯೋಗ ಚುನಾವಣಾ ಪದ್ಧತಿ ಸುಧಾರಣೆಗೆ ಹಲವಾರು ಕ್ರಾಂತಿಕಾರಿ ಕಾರ್ಯಕ್ರಮಗಳನ್ನು ಜಾರಿಗೊಳಿಸಿದರೂ ಪರಿಣಾಮಕಾರಿಯಾಗಿ ಜಾರಿಗೊಳ್ಳುತ್ತಿಲ್ಲ. ಈ ನಿಟ್ಟಿನಲ್ಲಿ ಎಲ್ಲ ರಾಜಕೀಯ ಪಕ್ಷಗಳು, ಚಿಂತಕರು ಮತ್ತು ಜನಪ್ರತಿನಿಧಿಗಳು ಪ್ರಾಮಾಣಿಕತೆಯಿಂದ ಚಿಂತನೆ ನಡೆಸಿ ನ್ಯಾಯಸಮ್ಮತೆ ಚುನಾವಣೆ ನಡೆಸಲು ಮುಂದಾಗಬೇಕಿದೆ ಎಂದರು.

ಸಮಾಜದಲ್ಲಿ ಮಹಿಳೆಯರ ಮೇಲಿನ ಸಾಮೂಹಿಕ ಅತ್ಯಾಚಾರ ಪ್ರಕರಣಗಳು ಹೆಚ್ಚುತ್ತಿರುವುದು ನಾಗರಿಕ ಸಮಾಜದಲ್ಲಿರುವ ಪ್ರತಿಯೊಬ್ಬರೂ ತಲೆತಗ್ಗಿಸುವಂತೆ ಮಾಡಿದೆ. ಸದನಗಳ ಮೌಲ್ಯಗಳ ಪರಿಧಿಯಲ್ಲಿಯೇ ಕಾನೂನುಗಳನ್ನು ರಚಿಸುವ ಹಾಗೂ ಬದಲಾಯಿಸುವ, ಮಾರ್ಪಾಡು ಮತ್ತು ರದ್ದುಪಡಿಸುವ ಸರ್ವಸ್ವತಂತ್ರ ಅಧಿಕಾರವು ಇದೆ. ಆ ದಿಕ್ಕಿನಲ್ಲಿ ನಾವೆಲ್ಲರೂ ಚಿಂತಿಸಬೇಕಿದೆ ಎಂದು ಸಭಾಪತಿಗಳು ತಿಳಿಸಿದರು.

ಪ್ರಜಾತಂತ್ರದ ವ್ಯವಸ್ಥೆಯ ಪ್ರಮುಖ ಭಾಗವಾಗಿರುವ ಸಂಸದೀಯ ಮೌಲ್ಯಗಳನ್ನು ಪಾಲಿಸದೆ ಇದ್ದರೆ ಪ್ರಜಾಪ್ರಭುತ್ವಕ್ಕೆ ಸಂಚಕಾರ ಖಂಡಿತ. ಆಗ ಸರ್ವಾಧಿಕಾರಿ ಆಡಳಿತದ ಉಗಮ ತಾನಾಗಿ ಸೃಷ್ಟಿಯಾಗಿಬಿಡುತ್ತದೆ. ಸಂವಿಧಾನದ ಮಾರ್ಗದರ್ಶನದಲ್ಲಿಯೇ ನಡೆಯಬೇಕಾದ ಶಾಸಕಾಂಗ, ಕಾರ್ಯಾಂಗ ಹಾಗೂ ನ್ಯಾಯಾಂಗಗಳು ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಪರಸ್ಪರ ಪೂರಕವಾಗಿ ಪ್ರಜಾಪರವಾಗಿ ನಡೆದುಕೊಳ್ಳಬೇಕಾಗುತ್ತದೆ. ಕಾರ್ಯಾಂಗವು ಶಾಸಕಾಂಗದ ಮೇಲೆ ಸವಾರಿ ಮಾಡುವ ಅಪಾಯಕಾರಿ ಹಂತವನ್ನು ನಾವು ಸುಗ್ರೀವಾಜ್ಞೆಗಳನ್ನು ತರಲಾಗುತ್ತಿದೆ ಎಂದು ಬಸವರಾಜ ಹೊರಟ್ಟಿ ಖೇದ ವ್ಯಕ್ತಪಡಿಸಿದರು. ವಿಧಾನಮಂಡಲದ ಕಾರ್ಯಕಲಾಪಗಳು ವರ್ಷದಲ್ಲಿ ಕನಿಷ್ಠ ಅರವತ್ತು ದಿನಗಳು ನಡೆಯಬೇಕೆಂಬ ವಿಚಾರವನ್ನು ಪಕ್ಷಬೇಧ ಮರೆತು ನಾವೆಲ್ಲರೂ ಒಪ್ಪಿಕೊಂಡಿದ್ದರೂ ಅದು ಇತ್ತೀಚಿನ ವರ್ಷಗಳಲ್ಲಿ ಸಾಧ್ಯವಾಗಿಲ್ಲ ಎಂಬುದು ಕಟುಸತ್ಯವಾಗಿದೆ ಎಂದು ಸಭಾಪತಿಗಳು ನೊಂದು ನುಡಿದರು.

ಆಧಾರ: ಸಂಯುಕ್ತ ಕರ್ನಾಟಕ, ದಿನಾಂಕ: 25.09.2021

## 134. ಬಿಎಸ್‌ವೈಗೆ ಅತ್ಯುತ್ತಮ ಶಾಸಕ ಪ್ರಶಸ್ತಿ ಪ್ರದಾನ

ಮಾಜಿ ಮುಖ್ಯಮಂತ್ರಿ ಬಿ.ಎಸ್.ಯಡಿಯೂರಪ್ಪ ಅವರಿಗೆ 2021ನೇ ಸಾಲಿನ ಅತ್ಯುತ್ತಮ ಶಾಸಕ ಪ್ರಶಸ್ತಿ ನೀಡಲಾಯಿತು. ರಾಜ್ಯ ವಿಧಾನಸಭೆಯಿಂದ ಪ್ರತಿವರ್ಷ ಒಬ್ಬರಿಗೆ ನೀಡಲು ತೀರ್ಮಾನಿಸಿರುವ ಮೊದಲ ಪ್ರಶಸ್ತಿಗೆ ವಿಧಾನಸಭೆಯ ಹಿರಿಯ ಸದಸ್ಯರೂ ಆಗಿರುವ ಯಡಿಯೂರಪ್ಪ ಆಯ್ಕೆಯಾಗಿದ್ದಾರೆ ಎಂದು ವಿಧಾನಸಭಾಧ್ಯಕ್ಷರು ತಿಳಿಸಿದರು.

ಪ್ರಶಸ್ತಿ ಆಯ್ಕೆಗೆ ತಮ್ಮ ನೇತೃತ್ವದಲ್ಲಿ ಸಮಿತಿ ರಚಿಸಲಾಗಿತ್ತು. ಸಮಿತಿಯಲ್ಲಿ ಮುಖ್ಯಮಂತ್ರಿ ಬಸವರಾಜ ಬೊಮ್ಮಾಯಿ, ಪ್ರತಿಪಕ್ಷದ ನಾಯಕ ಸಿದ್ದರಾಮಯ್ಯ, ಕಾನೂನು ಸಚಿವ ಜೆ.ಸಿ.ಮಾಧುಸ್ವಾಮಿ ಹಾಗೂ ಕಾಂಗ್ರೆಸ್‌ನ ಹಿರಿಯ ಸದಸ್ಯ ಆರ್.ವಿ.ದೇಶಪಾಂಡೆ ಇದ್ದರು. ನಿರಂತರ ಹೋರಾಟಗಳ ಮೂಲಕ ವಿಧಾನಸಭೆ ಸದಸ್ಯರಾಗಿ, ಪ್ರತಿಪಕ್ಷದ ನಾಯಕ, ಉಪ ಮುಖ್ಯಮಂತ್ರಿ, ನಾಲ್ಕು ಬಾರಿ ಮುಖ್ಯಮಂತ್ರಿಯಾಗಿ

ರಾಜ್ಯದ ಜನರ ಸೇವೆ ಸಲ್ಲಿಸಿರುವ ಯಡಿಯೂರಪ್ಪ ಅವರು ಆಯ್ಕೆಯಾಗಿರುವುದು ಸಂತಸ ತಂದಿದೆ ಎಂದರು.

ಬೇರೆ ಬೇರೆ ರಾಜ್ಯಗಳಲ್ಲಿ ಉತ್ತಮ ಶಾಸಕರನ್ನು ಆಯ್ಕೆ ಮಾಡುವ ಪದ್ಧತಿ ಇದೆ. ಅದೇ ರೀತಿ ರಾಜ್ಯ ವಿಧಾನಸಭೆಯಲ್ಲೂ ಉತ್ತಮ ಶಾಸಕರನ್ನು ಆಯ್ಕೆ ಮಾಡುವ ಮೂಲಕ ಶಾಸಕರಿಗೆ ಪ್ರೇರಣೆ ನೀಡಿದಂತಾಗುತ್ತದೆ. ಇದರಿಂದ ಎಲ್ಲ ಶಾಸಕರಿಗೂ ಸದನದಲ್ಲಿ ಪಾಲ್ಗೊಳ್ಳಲು ಉತ್ತೇಜನ ನೀಡದಂತಾಗುತ್ತದೆ ಎಂದು ಹೇಳಿದರು.

ಅತ್ಯುತ್ತಮ ಶಾಸಕ ಪ್ರಶಸ್ತಿಯನ್ನು ಲೋಕಸಭಾ ಸ್ಪೀಕರ್ ಓಂಬಿರ್ಲಾ ಅವರು ಯಡಿಯೂರಪ್ಪ ಅವರಿಗೆ ಪ್ರದಾನ ಮಾಡಿದರು. ಈ ಸಂದರ್ಭದಲ್ಲಿ ವಿಧಾನ ಸಭಾಧ್ಯಕ್ಷರು, ವಿಧಾನ ಪರಿಷತ್ ಸಭಾಪತಿಯವರು, ಮುಖ್ಯಮಂತ್ರಿಯವರು, ಕಾನೂನು ಸಚಿವರು ಹಾಜರಿದ್ದರು.

ಆಧಾರ: ಉದಯವಾಣಿ, ದಿನಾಂಕ: 25.09.2021




## 135. ಬಿರ್ಲಾ ಹಿಂದಿ ಭಾಷಣಕ್ಕೆ ವಿರೋಧ, ಕನ್ನಡ ಬಾವುಟ ಪ್ರದರ್ಶನ

ವಿಧಾನಮಂಡಲದ ಉಭಯ ಸದಸ್ಯರನ್ನು ಉದ್ದೇಶಿಸಿ ಲೋಕಸಭಾ ಸಭಾಧ್ಯಕ್ಷ ಓಂ ಬಿರ್ಲಾ ಮಾಡಿದ ಹಿಂದಿಯ ಭಾಷಣಕ್ಕೆ ಜೆಡಿಎಸ್‌ನ ಶಾಸಕ ಡಾ.ಕೆ.ಅನ್ನದಾನಿ ವಿರೋಧ ವ್ಯಕ್ತಪಡಿಸಿ ಕನ್ನಡ ಬಾವುಟ ಪ್ರದರ್ಶಿಸಿದ ಪ್ರಸಂಗ ನಡೆಯಿತು.

ವಿಧಾನ ಸಭೆಯಲ್ಲಿ 'ಪ್ರಜಾಪ್ರಭುತ್ವ ಸಂಸದೀಯ ಮೌಲ್ಯಗಳ ರಕ್ಷಣೆ' ಕುರಿತು ಉಭಯ ಸದನಗಳ ಸದಸ್ಯರನ್ನು ಉದ್ದೇಶಿಸಿ ಬಿರ್ಲಾ ಮಾತನಾಡಲು ಪ್ರಾರಂಭಿಸುತ್ತಿದ್ದಂತೆ ಕನ್ನಡದಲ್ಲಿ ಮಾತನಾಡಬೇಕು ಎಂದು ಒತ್ತಾಯಿಸಿದರು. ಕನ್ನಡ ಬಾವುಟ ಪ್ರದರ್ಶಿಸಿ ಜೈ ಕರ್ನಾಟಕ ಎಂದು ಘೋಷಣೆ ಕೂಗಿದರು.

ಈ ಮೂಲಕ ಲೋಕಸಭಾ ಸಭಾಧ್ಯಕ್ಷರ ಹಿಂದಿ ಭಾಷಣಕ್ಕೆ ಆಕ್ಷೇಪ ವ್ಯಕ್ತಪಡಿಸಿದರು. ಅನ್ನದಾನಿ ಅವರು ಕಪ್ಪು ಅಂಗಿ ಧರಿಸಿದ್ದು ಸಹ ಪ್ರತಿಭಟನೆ ಎಂಬ ಸಂಕೇತವಾಗಿತ್ತು.

ಆಧಾರ: ಕನ್ನಡ ಪ್ರಭ, ದಿನಾಂಕ: 25.09.2021

## 136. ಪಕ್ಷಾಂತರ ನಿಷೇಧಕ್ಕೆ ಬಲ

ಪಕ್ಷಾಂತರ ನಿಷೇಧ ಕಾಯ್ದೆ ಬಲವರ್ಧನೆಗೆ ಸಂಬಂಧಿಸಿದಂತೆ ರಾಜಸ್ಥಾನ ಸ್ಪೀಕರ್ ಸಿ.ಪಿ.ಜೋಶಿ ಅಧ್ಯಕ್ಷತೆಯ ಸಮಿತಿ ವರದಿ ಸಲ್ಲಿಸಿದೆ. ಅಕ್ಟೋಬರ್ 26 ರಿಂದ 28 ರವರೆಗೆ ಶಿಮ್ಲಾದಲ್ಲಿ ನಡೆಯಲಿರುವ ಸ್ಪೀಕರ್‌ಗಳ ಸಮಾವೇಶದಲ್ಲಿ ಈ ಕುರಿತು ಚರ್ಚಿಸಿ, ಕೇಂದ್ರ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಲಾಗುವುದು ಎಂದು ಲೋಕಸಭಾ ಸ್ಪೀಕರ್ ಓಂ ಬಿರ್ಲಾ ಮಾಹಿತಿ ನೀಡಿದರು.

ವಿಧಾನಸೌಧದಲ್ಲಿ ಮಾಧ್ಯಮಗೋಷ್ಠಿ ಉದ್ದೇಶಿಸಿ ಮಾತನಾಡಿ, ಈ ಕಾಯ್ದೆಯಡಿ ಸ್ಪೀಕರ್‌ಗಳ ಕಾರ್ಯವಿಧಾನದ ನಿಯಮಗಳಂತೆ ಸ್ಪಷ್ಟತೆ, ಸಂಬಂಧಿತ ವಿಷಯದಲ್ಲಿ ನಿರ್ಣಯಗಳಿಗೆ ಕಾಲಮಿತಿ ನಿಗದಿಪಡಿಸುವುದಕ್ಕೆ ಸ್ಪೀಕರ್‌ಗಳೇ ಕೋರಿದ ಹಿನ್ನೆಲೆಯಲ್ಲಿ ಅಧ್ಯಯನ ನಡೆಸಿ ವರದಿ ಸಲ್ಲಿಸಲು ಈ ಸಮಿತಿ ರಚಿಸಲಾಗಿತ್ತು ಎಂದು ವಿವರಿಸಿದರು. ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಪಂಚಾಯಿತಿಯಿಂದ ಪಾರ್ಲಿಮೆಂಟ್‌ವರೆಗಿನ ಸಂಸ್ಥೆಗಳು ಕಾರ್ಯಾಂಗದ ಮೇಲೆ ಪರಿಣಾಮಕಾರಿ ನಿಗಾ ವಹಿಸಬೇಕು. ಶಾಸನಸಭೆಗಳು ಉತ್ತರದಾಯಿತ್ವ ಹಾಗೂ ಪಾರದರ್ಶಕತೆ ಕಾಯ್ದುಕೊಳ್ಳುವುದು ಮುಖ್ಯವಾಗಿದೆ ಎಂದರು.

**75 ಕಾರ್ಯಕ್ರಮಗಳು :** ಸ್ವಾತಂತ್ರ್ಯದ ಅಮೃತ ಮಹೋತ್ಸವ ನಿಮಿತ್ತ ದೇಶಾದ್ಯಂತ 75 ಕಾರ್ಯಕ್ರಮಗಳನ್ನು ಆಯೋಜಿಸಲು ನಿರ್ಧರಿಸಿದ್ದು, ಜನಪ್ರತಿನಿಧಿಗಳ ಸಂಸ್ಥೆಗಳನ್ನು ಸಶಕ್ತಗೊಳಿಸಿ, ಜವಾಬ್ದಾರಿ ಹೆಚ್ಚಿಸುವುದು ಮುಖ್ಯ ಉದ್ದೇಶವಾಗಿದೆ ಎಂದರು. ಸಾರ್ವಜನಿಕ ಲೆಕ್ಕಪತ್ರಗಳ ಸಮಿತಿ (ಪಿಎಸಿ) ಈ ವರ್ಷ 100 ವಸಂತಗಳನ್ನು ಪೂರೈಸಲಿರುವ ಹಿನ್ನೆಲೆಯಲ್ಲಿ ಡಿಸೆಂಬರ್ 4, 5ರಂದು ಶತಮಾನೋತ್ಸವ ವರ್ಷ ಆಚರಿಸಲಿದ್ದು, ದೇಶದ ಸಾರ್ವಜನಿಕ ಪ್ರತಿನಿಧಿಗಳು ಮತ್ತು ಇತರ ಪ್ರಜಾಪ್ರಭುತ್ವ ರಾಷ್ಟ್ರಗಳ ಪ್ರತಿನಿಧಿಗಳನ್ನು ಆಹ್ವಾನಿಸಲಾಗುವುದು. ಅಧ್ಯಕ್ಷರುಗಳ ಸಮ್ಮೇಳನದ ಶತಮಾನೋತ್ಸವ ವರ್ಷಾಚರಣೆ ನಿಮಿತ್ತ ಶಿಮ್ಲಾದಲ್ಲಿ ಸಮ್ಮೇಳನ ಸಂಘಟಿಸುತ್ತಿದ್ದು, ರಾಜ್ಯಗಳ ಮುಖ್ಯಮಂತ್ರಿಗಳು ಮತ್ತು ಇತರರನ್ನು ಆಹ್ವಾನಿಸುವ ಉದ್ದೇಶವಿದೆ ಎಂದು ಓಂ ಬಿರ್ಲಾ ತಿಳಿಸಿದರು.

**ಸಾಮೂಹಿಕ ಹೊಣೆಗಾರಿಗೆ :** ಕಲಾಪ ಸಲಹ ಸಮಿತಿ ಸಭೆಗಳಲ್ಲಿ ಚರ್ಚಿಸಿದ ನಂತರ ಸದನದಲ್ಲಿ ಮಂಡಿಸಿದ ವಿಧೇಯಕಗಳು ಚರ್ಚೆಯಾಗದೆ ಅನುಮೋದನೆ ಪಡೆಯುತ್ತಿರುವುದು ಒಳ್ಳೆಯ ಬೆಳವಣಿಗೆಯಲ್ಲ. ಅಲ್ಲದೆ ಶಿಸ್ತು, ಗುಣಮಟ್ಟ, ಚರ್ಚೆಯ ಸತ್ವ ಕುಸಿಯುತ್ತಿರುವುದು ಚಿಂತಿತರನ್ನಾಗಿಸಿದ್ದು, ಈ ಪರಿಸ್ಥಿತಿಗೆ ಎಲ್ಲರೂ ಹೊಣೆಗಾರರು. ಜನರ ಭಾವನೆಗಳಿಗೆ ಸ್ಪಂದನೆ, ವಿಶ್ವಾಸಾರ್ಹತೆ ಸುಧಾರಿಸಲು, ಕಾರ್ಯಕ್ಷಮತೆ ಹೆಚ್ಚಿಸಲು, ಸಂಸದೀಯ ಪ್ರಜಾಪ್ರಭುತ್ವದ ವಿಶಿಷ್ಟತೆ ಬಲವರ್ಧನೆಗೆ ಅಧ್ಯಕ್ಷರ ಸಮ್ಮೇಳನದಲ್ಲಿ ಸಮಗ್ರ ಕ್ರಿಯಾ ಯೋಜನೆ ರೂಪಿಸಲಾಗುವುದು ಎಂದು ಓಂ ಬಿರ್ಲಾ ತಿಳಿಸಿದರು. **'ಒಂದು ದೇಶ, ಒಂದು ಚುನಾವಣೆ'** ಕುರಿತು ಖಾಸಗಿ ವಿಧೇಯಕದಡಿ ಸಂಸತ್ತಿನಲ್ಲಿ ಚರ್ಚೆಯಾಗಿದ್ದು, ದೇಶವ್ಯಾಪಿ ಮತ್ತಷ್ಟು ಚರ್ಚೆಯಾಗಿ ಸ್ಪಷ್ಟ ಫಲಿತಾಂಶ ಹೊರಬರಬೇಕಾಗಿದೆ ಎಂದರು.

ಆಧಾರ: ವಿಜಯವಾಣಿ, ದಿನಾಂಕ:25.09.2021




**ದಿನಾಂಕ: 25.09.2021 ರಂದು ಸನ್ಮಾನ್ಯ ಸಭಾಧ್ಯಕ್ಷರ ಉಪಸ್ಥಿತಿಯಲ್ಲಿ ಗೌರವಾನ್ವಿತ ಲೋಕಸಭಾ ಅಧ್ಯಕ್ಷರಾದ ಶ್ರೀ ಓಂ ಬಿರ್ಲಾರವರು ವಿಧಾನಸೌಧದ ಸಮ್ಮೇಳನಾ ಸಭಾಂಗಣದಲ್ಲಿ ಪತ್ರಿಕಾಗೋಷ್ಠಿ ನಡೆಸಿದ ಸಂದರ್ಭ**

## 137. 75ನೇ ಸ್ವಾತಂತ್ರೋತ್ಸವದ 'ಅಮೃತ ಮಹೋತ್ಸವ' ಸಂದರ್ಭದಲ್ಲಿ ವಿಧಾನಸಭೆ ಸಭಾಂಗಣದಲ್ಲಿ ಸಭಾಧ್ಯಕ್ಷರ ಭಾಷಣ ಕುರಿತು

## ಪ್ರಜಾಪ್ರಭುತ್ವ: ಸಂಸದೀಯ ಮೌಲ್ಯಗಳ ರಕ್ಷಣೆ

## (Democracy: Safeguarding Parliamentary Values)

**ಮಾನ್ಯರೇ,**



**ನಮ್ಮ ದೇಶದ ಸ್ವಾತಂತ್ರ್ಯೋತ್ಸವದ 75ನೇ ಈ ಅಮೃತ ಮಹೋತ್ಸವದ ಸಂದರ್ಭದಲ್ಲಿ ಈ ದಿನ ಆಯೋಜಿಸಲಾಗಿರುವ "ಪ್ರಜಾಪ್ರಭುತ್ವ: ಸಂಸದೀಯ ಮೌಲ್ಯಗಳ ರಕ್ಷಣೆ" (Democracy: Safeguarding Parliamentary Values) ಕುರಿತಾಗಿ ಪ್ರಧಾನ ಭಾಷಣಕಾರರಾಗಿ ಆಗಮಿಸಿರುವ ನಮ್ಮ ದೇಶದ ಸಂಸತ್ತಿನ ಅಂಗವಾದ ಲೋಕಸಭೆಯ ಸಭಾಧ್ಯಕ್ಷರಾದ ಶ್ರೀ ಓಂ ಬಿರ್ಲಾ ಜೀ, ಕರ್ನಾಟಕ ವಿಧಾನ ಪರಿಷತ್ತಿನ ಸಭಾಪತಿಯವರಾದ ಶ್ರೀ ಬಸವರಾಜ ಎಸ್.ಹೊರಟ್ಟಿಯವರೇ, ಸನ್ಮಾನ್ಯ ಮುಖ್ಯಮಂತ್ರಿಯವರೇ, ಉಭಯ ಸದನಗಳ ಪ್ರತಿಪಕ್ಷದ ನಾಯಕರುಗಳೇ, ಮಂತ್ರಿ ಮಂಡಲದ ಸದಸ್ಯರುಗಳೇ, ಉಭಯ ಸದನಗಳ ಮಾನ್ಯ ಸದಸ್ಯರುಗಳೇ, ಸಂಸತ್ತಿನ ಮಾನ್ಯ ಸದಸ್ಯರುಗಳೇ ಮಾಧ್ಯಮದ ಮಿತ್ರರೇ ನಮ್ಮ ಕೋರಿಕೆಯ ಮೇರೆಗೆ ಆಗಮಿಸಿರುವ ಎಲ್ಲಾ ಆಹ್ವಾನಿತರೇ ಹಾಗೂ ಇಲ್ಲಿ ಉಪಸ್ಥಿತರಿರುವ ಎಲ್ಲಾ ಅಧಿಕಾರಿ ವರ್ಗದವರೇ,**

1. 75ನೇ ವರ್ಷದ ಸ್ವಾತಂತ್ರ್ಯ ಅಮೃತ ಮಹೋತ್ಸವ, 72ನೇ ಸಂವಿಧಾನ ಸಮರ್ಪಣೆಯ ವಾರ್ಷಿಕೋತ್ಸವ ಹಾಗೂ ಸಂಸದೀಯ ಪ್ರಜಾಪ್ರಭುತ್ವದ 70ನೇ ವಾರ್ಷಿಕೋತ್ಸವ ಆಚರಣೆಯ ಸಂದರ್ಭದಲ್ಲಿ ನಾವೇನು ಗಳಿಸಿದ್ದೇವೆ, ನಾವೇನು ಮಾಡುತ್ತಿದ್ದೇವೆ ಮತ್ತು ಮುಂದಿನವರಿಗೆ ನಾವೇನು ಕೊಡುತ್ತಿದ್ದೇವೆ ಎಂಬುದನ್ನು ಪರಿಶೀಲಿಸುವಂತಹ ಸಂದರ್ಭ ಬಂದೊದಗಿರುವುದು ಈ ದಿನದ ಮಹತ್ವ ಎಂಬುದನ್ನು ತಿಳಿಸಬಯಸುತ್ತೇನೆ.

2. ಪ್ರಜಾಪ್ರಭುತ್ವ ಭಾರತಕ್ಕೆ ಹೊಸದೇನಲ್ಲ. ಚಕ್ರವರ್ತಿಗಳು, ರಾಜ ಮಹಾರಾಜರ ಕಾಲದಲ್ಲೂ ಅಸ್ತಿತ್ವದಲ್ಲಿತ್ತು. ಕಾನೂನು ಬದ್ಧ ಪ್ರಜಾಪ್ರಭುತ್ವವಿರಲಿಲ್ಲ. ಪ್ರಜಾಪ್ರಭುತ್ವವು ಸಮಾನತೆ, ನ್ಯಾಯ ಮತ್ತು ಸಹೋದರತ್ವ ಇವುಗಳ ಮೇಲೆ ಆಧಾರಿತವಾಗಿದೆ. ಅದಕ್ಕಾಗಿ ಶಿಸ್ತು ಅನಿವಾರ್ಯ. ನಮ್ಮ ರಾಷ್ಟ್ರ ಪ್ರಜಾಪ್ರಭುತ್ವದ ರಾಷ್ಟ್ರವಾದ ಮೇಲೆ ಅನೇಕ ರಾಷ್ಟ್ರಗಳು ಪ್ರಜಾಪ್ರಭುತ್ವ ಸರ್ಕಾರಗಳನ್ನು ಸ್ಥಾಪಿಸಿಕೊಂಡವು. ಕೆಲ ರಾಷ್ಟ್ರಗಳು ಪ್ರಜಾಪ್ರಭುತ್ವವನ್ನು ಉಳಿಸಿಕೊಳ್ಳಲು ತೀವ್ರವಾಗಿ ಶ್ರಮಿಸುತ್ತಿರುವುದು ಕಂಡುಬರುತ್ತಿದೆ. ಈ ನಿಟ್ಟಿನಲ್ಲಿ ಭಾರತ 75 ವರ್ಷಗಳ ಅಭೂತಪೂರ್ವವಾದ ಯಶಸ್ಸನ್ನು ಹೊಂದಿರುವುದು ನಮ್ಮೆಲ್ಲರ ಹೆಮ್ಮೆ.

3. ಸ್ವಾತಂತ್ರ್ಯಕ್ಕೆ ಮುನ್ನ ನಮ್ಮ ರಾಜಕೀಯ ನಾಯಕರು ನಾವು ಈ ದೇಶಕ್ಕಾಗಿ ಇದ್ದೇವೆ, ದೇಶಕ್ಕಾಗಿ ಹೋರಾಡುತ್ತೇವೆ ಎಂದು ಹೇಳಿದ್ದರು. ನಾವು ದೇಶವನ್ನು ಸುಸ್ಥಿತಿಯಲ್ಲಿ ನಡೆಸುತ್ತೇವೆ ಎನ್ನುವ ಪ್ರಮಾಣವನ್ನು ಮಾಡಬೇಕಾಗಿದೆ. 'ದೇಶಕ್ಕಾಗಿ ನಾವು ನಮಗಾಗಿ ದೇಶ ಅಲ್ಲ' ಎನ್ನುವುದನ್ನು ಅರಿಯಬೇಕಿದೆ. ಈ ಅರಿವಿನೊಂದಿಗೆ ಭಾರತದ ಪ್ರಜೆಗಳಾದ ನಾವು ಪ್ರಜಾಪ್ರಭುತ್ವದ ವ್ಯವಸ್ಥೆಯಲ್ಲಿ ಸಂಸದೀಯ ಮೌಲ್ಯಗಳನ್ನು ಸಂಸದೀಯ ವ್ಯವಸ್ಥೆಯಲ್ಲಿರುವ ಜನಪ್ರತಿನಿಧಿಗಳು ಮೊದಲು ಎತ್ತಿಹಿಡಿಯಬೇಕಾಗಿದೆ. ನಮ್ಮ ನಡವಳಿಕೆಯ ಜೊತೆಗೆ ಕಾರ್ಯಾಂಗ, ನ್ಯಾಯಾಂಗ ವ್ಯವಸ್ಥೆ, ಪ್ರಜಾಪ್ರಭುತ್ವದಲ್ಲಿನ ನಾಲ್ಕನೇ ಅಂಗ ಎಂದು ಪರಿಗಣಿಸಲ್ಪಟ್ಟಿರುವ ಮಾಧ್ಯಮಗಳು,

ಬಹು ಮುಖ್ಯವಾಗಿ ರಾಜಕೀಯ ಪಕ್ಷಗಳು ಹಾಗೂ ಪ್ರಜ್ಞಾವಂತ ಮತದಾರರನ್ನೊಳಗೊಂಡಂತೆ ಎಲ್ಲರ ಪಾತ್ರ ಬಹು ಮುಖ್ಯವಾಗಿದೆ.

4. **ಒಂದು ಪುನರಾವಲೋಕನ:** ಪ್ರಾಚೀನ ಕಾಲದ ಗ್ರೀಕ್ ರಾಜ್ಯಗಳಲ್ಲಿ ನೇರ ಅಥವಾ ಪ್ರತ್ಯಕ್ಷ ಪ್ರಜಾಪ್ರಭುತ್ವ ಅಸ್ತಿತ್ವದಲ್ಲಿತ್ತು. ಈ ಪದ್ಧತಿಯ ವೈಶಿಷ್ಟ್ಯವೆಂದರೆ ನಾಗರಿಕರು ತಮ್ಮ ಪ್ರತಿನಿಧಿಗಳನ್ನು ಚುನಾಯಿಸದೆ ತಾವೇ ನೇರವಾಗಿ ತಮ್ಮ ರಾಜ್ಯಾಡಳಿತ ನಡೆಸುತ್ತಿದ್ದರು. ಅರಿಸ್ಟಾಟಲ್ ಮೊದಲು "ಮಿಶ್ರ ಸರ್ಕಾರ" ಅಥವಾ ಹೈಬ್ರಿಡ್ ಸರ್ಕಾರದ ಕಲ್ಪನೆಯನ್ನು ತನ್ನ ಕೃತಿಯಲ್ಲಿ ಉಲ್ಲೇಖಿಸಿದ್ದಾನೆ. ಭಾರತದಲ್ಲಿ ವಿದುರ ನೀತಿ ಮತ್ತು ಚಾಣಕ್ಯನ ನೀತಿಗಳೊಂದಿಗೆ ಬಿಂದುಸಾರ ಮತ್ತು ಅಶೋಕ ಪ್ರಜಾಪ್ರಭುತ್ವದ ನೆಲೆಯಲ್ಲಿ ಆಡಳಿತ ನಡೆಸಿದ್ದಾರೆ. ಕರ್ನಾಟಕದಲ್ಲಿ ಶ್ರೇಷ್ಠ ದಾರ್ಶನಿಕ ಬಸವಣ್ಣನವರು 12 ನೇ ಶತಮಾನದಲ್ಲಿ ತಮ್ಮ ಅನುಭವ ಮಂಟಪದ ಮೂಲಕ ರಾಜಸತ್ತೆಯ ದಿನಗಳಲ್ಲಿಯೇ ನಾಡಿಗೆ ಪ್ರಜಾಪ್ರಭುತ್ವದ ಮೌಲ್ಯಗಳನ್ನು ಸಾರಿದ್ದಲ್ಲದೆ ಆಚರಣೆಗೆ ತಂದರು.

5. ಸಂಸದೀಯ ವ್ಯವಸ್ಥೆಯ ಮೌಲ್ಯಗಳು: ವಿವಿಧ ಸಂದರ್ಭದಲ್ಲಿ ಮೌಲ್ಯಗಳನ್ನು ತಜ್ಞರು ಸಾದರಪಡಿಸಿದ್ದಾರೆ. ಅವುಗಳಲ್ಲಿ ಮಾನವೀಯ ಮೌಲ್ಯಗಳು, ಸಾಮಾಜಿಕ ಮೌಲ್ಯಗಳು, ರಾಜಕೀಯ ಮೌಲ್ಯಗಳು, ಪ್ರಜಾಪ್ರಭುತ್ವದ ಮೌಲ್ಯಗಳು, ಸಂಸದೀಯ ಮೌಲ್ಯಗಳು, ನೈತಿಕ ಮೌಲ್ಯಗಳು ಎಂದೆಲ್ಲಾ ವಿಭಾಗಿಸಿದ್ದಾರೆ. ನಮ್ಮೆದುರಿಗಿರುವ ಸವಾಲು ಎಂದರೆ ಸಂಸದೀಯ ಮೌಲ್ಯಗಳು. ಸಂವಿಧಾನದ ಪ್ರಸ್ತಾವನೆಯ ಮುಖ್ಯ ತತ್ವಗಳಾದ ನ್ಯಾಯ, ಸ್ವಾತಂತ್ರ್ಯ ಮತ್ತು ಸಮಾನತೆಗಳೇ ಮೌಲ್ಯಗಳನ್ನಾಗಿ ರೂಢಿಸಿಕೊಂಡರೆ ಸಾಕು.

6. ಪ್ರಜಾಪ್ರಭುತ್ವದ ಸೌಧ ನಿಂತಿರುವುದೇ ಸಂಸದೀಯ ವ್ಯವಸ್ಥೆ ಎಂಬ ಬುನಾದಿಯ ಮೇಲೆ. ಸಂಸದೀಯ ವ್ಯವಸ್ಥೆ ಕುಸಿಯತೊಡಗಿದರೆ ಸೌಧ ಇನ್ನೆಲ್ಲಿ ಉಳಿಯುತ್ತದೆ ಎಂಬುದು ಅನೇಕರ ಪ್ರಶ್ನೆ. ಸಂವಿಧಾನದತ್ತವಾದ ಪ್ರಜಾಪ್ರಭುತ್ವವನ್ನು ಉಳಿಸಿ ಬೆಳೆಸುವುದು ಸಂಸದೀಯ ಮೌಲ್ಯಗಳ ಮೇಲೆ ನಿಂತಿದೆ. ಸಂಸದೀಯ ವ್ಯವಸ್ಥೆಯ ಪ್ರಮುಖ ಭಾಗವಾಗಿರುವ ಜನಪ್ರತಿನಿಧಿಗಳ ನಡವಳಿಕೆ ಸರಿ ಇದ್ದರೆ ಉಳಿದಿದ್ದೆಲ್ಲವೂ ಸರಿ ಆದೀತು.

7. ರಕ್ಷಣೆ, ಸಾಧನೆ ಹಾಗೂ ಆಚರಣೆಯಲ್ಲಿ ಅತ್ಯುಚ್ಚ ಸ್ಥಾನದಲ್ಲಿರಬೇಕಾದ ಸಭಾಧ್ಯಕ್ಷರ/ಸಭಾಪತಿಯ ಸ್ಥಾನದ ಘನತೆ, ಗೌರವ ಇತ್ತೀಚಿನ ದಿನಗಳಲ್ಲಿ ಅಪಮೌಲ್ಯವಾಗುತ್ತಿರುವುದು ನನಗೆ ಚಿಂತೆ ತರಿಸಿದೆ. ಕೇರಳ, ಕರ್ನಾಟಕ, ಮಹಾರಾಷ್ಟ್ರ ಮತ್ತಿತರ ರಾಜ್ಯಗಳು ಸೇರಿದಂತೆ ಸಂಸತ್ತಿನ ಅತಿರೇಕಗಳು ಪ್ರಜಾಪ್ರಭುತ್ವದ ಸಂಸದೀಯ ವ್ಯವಸ್ಥೆಗೆ ಕಪ್ಪುಚುಕ್ಕೆಗಳಾದವು. ಇವುಗಳು ಪುನರಾವರ್ತನೆಯಾಗಬಾರದೆಂಬುದೇ ಪ್ರಜ್ಞಾವಂತ ಭಾರತೀಯರ ಅಳಲು.

8. ಸಂಸದೀಯ ವ್ಯವಸ್ಥೆ ಬ್ರಿಟನ್ನಿನಲ್ಲಿ ಜನ್ಮ ತಾಳಿ ಇಂದು ಅನೇಕ ದೇಶಗಳು ಅಳವಡಿಸಿಕೊಂಡಿವೆ. ಭಾರತವು 1947ರಿಂದ ಸಂಸದೀಯ ಪದ್ಧತಿಯನ್ನು ಅಳವಡಿಸಿಕೊಂಡಿದ್ದರೂ, ಕರ್ನಾಟಕದಲ್ಲಿ 25.03.1881ರಲ್ಲಿ ಮಹಾರಾಜ ಚಾಮರಾಜೇಂದ್ರ ಒಡೆಯರ್‌ರನ್ನು ಮೈಸೂರಿನ ಮಹಾರಾಜರಾಗಿ ನೇಮಿಸುವುದರೊಂದಿಗೆ ಪ್ರಜಾಪ್ರತಿನಿಧಿ ಸಭೆ, ರಚನೆ ಮತ್ತು ಅದರ ಕಾರ್ಯಗಳ ಕುರಿತು ಆದೇಶ ಪ್ರಕಟವಾಯಿತು.

9. ಸಂಸದೀಯ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ರಾಜಕೀಯ ಪಕ್ಷಗಳ ಪಾತ್ರ ಅತ್ಯಂತ ಮಹತ್ವದ್ದಾಗಿರುತ್ತದೆ. ರಾಜಕೀಯ ಪಕ್ಷಗಳಿಲ್ಲದೆ ಪ್ರಜಾಪ್ರಭುತ್ವ ಅಸಾಧ್ಯ. ರಾಜಕೀಯ ಪಕ್ಷಗಳನ್ನು ಪ್ರಜಾಪ್ರಭುತ್ವದ ಬೆನ್ನೆಲುಬು ಎಂದು ಪರಿಗಣಿಸಲಾಗಿದೆ. ಆಧುನಿಕ ಪ್ರಾತಿನಿಧಿಕ ಪ್ರಜಾಪ್ರಭುತ್ವ ಸರಕಾರವು ಒಂದು ರಾಜಕೀಯ ಪಕ್ಷದ ಸರಕಾರವಾಗಿದೆ. ರಾಜಕೀಯ ಪಕ್ಷಗಳು ಸರಕಾರ ಮತ್ತು ಮತದಾರರ ನಡುವಿನ ಸೇತುವೆ ಇದ್ದಂತೆ. ರಾಜಕೀಯ ಪಕ್ಷಗಳಿಲ್ಲದ ಪ್ರಜಾಪ್ರಭುತ್ವ

ಎಂದರೆ ನಾವಿಕನಿಲ್ಲದ ದೋಣಿಯಂತೆ, ಚುಕ್ಕಾಣಿ ಇಲ್ಲದ ಹಡಗು ಇದ್ದಂತೆ, ಎಂದು ಮುಂತಾಗಿ ಹೇಳಲಾಗುವ ಇಂತಹ ಬೃಹತ್ ರಾಷ್ಟ್ರದಲ್ಲಿ ಬಹುಪಕ್ಷದ ಪದ್ಧತಿಯ ಬೃಹತ್ ವ್ಯವಸ್ಥೆಯಲ್ಲಿ ನಾವೂ ಒಬ್ಬರು ಎನ್ನುವುದು ಹೆಮ್ಮೆಯ ವಿಷಯವೇ ಸರಿ.

10. ಸ್ವಾಮಿ ವಿವೇಕಾನಂದರು ಭಾರತೀಯ ಧರ್ಮ ಕುರಿತಂತೆ ತಮ್ಮದೇ ಆದ ರೀತಿಯಲ್ಲಿ ಪ್ರತಿಪಾದಿಸುತ್ತಾರೆ. ನಮ್ಮ ರಾಷ್ಟ್ರದ ಎರಡು ಮಹಾನ್ ಆದರ್ಶಗಳೆಂದರೆ ತ್ಯಾಗ ಮತ್ತು ಸೇವೆ. ಇವನ್ನು ಸಮರ್ಪಕವಾಗಿ ಅನುಷ್ಠಾನಕ್ಕೆ ತಂದದ್ದೇ ಆದರೆ ಉಳಿದುದೆಲ್ಲವೂ ತಾನೇ ತಾನಾಗಿ ಸಾಗುತ್ತದೆಂದು, ಇಲ್ಲಿ ಸಂಸದೀಯ ವ್ಯವಸ್ಥೆಯಲ್ಲಿ ಕಾರ್ಯನಿರ್ವಹಿಸುವ ಜನಪ್ರತಿನಿಧಿಗಳು ಈ ಆದರ್ಶಗಳ ಅಡಿಯಲ್ಲಿ ಕಾರ್ಯನಿರ್ವಹಿಸಿದ್ದಲ್ಲಿ ಜನಹಿತ ಸಾಧ್ಯ.

11. 25ನೇ ನವೆಂಬರ್ 1949 ರಂದು ನಮ್ಮ ಸಂವಿಧಾನ ಅಂಗೀಕಾರವಾದಾಗ, ಅದರ ಮಹಾಶಿಲ್ಪಿಯಾದ ಡಾ. ಬಿ. ಆರ್. ಅಂಬೇಡ್ಕರ್‌ರವರು ಸೂಕ್ಷ್ಮವಾಗಿ ನಾವು ಪ್ರಜಾಪ್ರಭುತ್ವವನ್ನು ಕಾಯ್ದುಕೊಳ್ಳಲು ಬಯಸಿದ್ದಲ್ಲಿ ನಾವು ಏನು ಮಾಡಬೇಕು? ಎಂದು ಕೇಳುತ್ತಾ "ನನ್ನ ನಿರ್ಣಯದಂತೆ ನಾವು ಮಾಡಲೇಬೇಕಾದ ಮೊದಲ ಕೆಲಸವೆಂದರೆ, ನಮ್ಮ ಸಾಮಾಜಿಕ ಮತ್ತು ಆರ್ಥಿಕ ಧ್ಯೇಯೊದ್ದೇಶಗಳನ್ನು ಸಾಧಿಸುವ ಸಂವಿಧಾನಿಕ ವಿಧಾನಗಳಿಗೆ ಅಂಟಿಕೊಳ್ಳುವುದು" ಎಂದು ಹೇಳುತ್ತಾ, "ಆರ್ಥಿಕ ಮತ್ತು ಸಾಮಾಜಿಕ ಧ್ಯೇಯೋದ್ದೇಶಗಳನ್ನು ಸಾಧಿಸುವಲ್ಲಿ, ಸಾಂವಿಧಾನಿಕ ವಿಧಾನಗಳ ಯಾವುದೇ ಮಾರ್ಗ ಲಭ್ಯವಿರದಿದ್ದ ಕಾಲದಲ್ಲಿ ಅಸಂವಿಧಾನಿಕ ವಿಧಾನಗಳನ್ನು ಅಪಾರವಾಗಿ ಸಮರ್ಥಿಸಿಕೊಳ್ಳುವುದು ಕಂಡು ಬರುತ್ತಿತ್ತು. ಸಾಂವಿಧಾನಿಕ ವಿಧಾನಗಳ ಲಭ್ಯತೆಯ ಸಂದರ್ಭದಲ್ಲಿ ಅಂತಹ ಅಸಂವಿಧಾನಿಕ ವಿಧಾನಗಳು ಅರಾಜಕತೆಯ ವ್ಯಾಕರಣವಲ್ಲದೆ ಮತ್ತೇನೂ ಅಲ್ಲ. . ."ಎಂದಿದ್ದಾರೆ.

12. ರಾಜ್ಯಸಭೆಯ ಮಾಜಿ ಸಭಾಧ್ಯಕ್ಷರು ಮತ್ತು ಭಾರತದ ಮಾಜಿ ರಾಷ್ಟ್ರಪತಿಯಾಗಿದ್ದ ಶ್ರೀ ಕೆ.ಆರ್.ನಾರಾಯಣ್‌ರವರು, "ಸಂಸದೀಯ ಸಂಸ್ಥೆಗಳಲ್ಲಿನ ಅಶಿಸ್ತು ಮತ್ತು ಅವ್ಯವಸ್ಥೆಯನ್ನು ಶೈಶವಾವಸ್ಥೆಯಲ್ಲಿ ಬರುವ ಕಾಯಿಲೆಗಳು ಅಥವಾ ನಡು ವಯಸ್ಸಿನಲ್ಲಿ ಬರುವ ದಡಾರವಿದ್ದಂತೆ ಎಂದು ವರ್ಣಿಸಿ ಅವುಗಳನ್ನು ನಿವಾರಿಸಲೇಬೇಕು, ಇಲ್ಲವಾದರೆ ವ್ಯವಸ್ಥೆಯು ಮಾರಣಾಂತಿಕ ಅಪಾಯಕ್ಕೆ ಒಳಗಾಗುತ್ತದೆ" ಎಂದಿದ್ದಾರೆ.

13. ರಾಜ್ಯ ಸಭೆಯ ಅಂದಿನ ಅಧ್ಯಕ್ಷರಾಗಿದ್ದ ಡಾ. ಎಸ್.ರಾಧಾಕೃಷ್ಣನ್‌ರವರು 1955 ಸೆಪ್ಟೆಂಬರ್ 27 ರಂದು ಸದನದ ವ್ಯವಹರಣೆಗಳಲ್ಲಿನ ಹಲವು ಆಕ್ಷೇಪಾರ್ಹ ಭಾಗವನ್ನು ಅಳಿಸಿಹಾಕುವ ಆದೇಶದ ಸಂದರ್ಭದಲ್ಲಿ ಅವರು ಹೀಗೆ ಅಭಿಪ್ರಾಯಿಸಿದ್ದಾರೆ. **"ಸದನದ ಉತ್ತಮ ಹೆಸರು ಮತ್ತು ಘನತೆಯನ್ನು ನಾವು ಕಾಪಾಡಬೇಕಾಗಿದೆ. ನಮ್ಮಲ್ಲಿನ ಪ್ರತಿಯೊಬ್ಬರೂ ಸಾಧ್ಯವಾದಷ್ಟು ಮಟ್ಟಿಗೆ ನಾನು ಬಯಸುವಂತೆಯೇ ಇರುವ ಆಸಕ್ತಿ ಹೊಂದಿದ್ದಾರೆ. ಹಲವು ಬಾರಿ ಚರ್ಚೆಗಳನ್ನು ಮಾಡುವ ನಾವು ಗಂಭೀರವಾದ, ಜವಾಬ್ದಾರಿಯುತವಾದ ಸಂಸತ್ತಿನ ಸದಸ್ಯರಂತೆ ವರ್ತಿಸದೆ, ಬೇಜವಾಬ್ದಾರಿಯುತ ವೃತ್ತಿಪರ ಚಳುವಳಿಕಾರರಂತೆ ವರ್ತಿಸುತ್ತಿದ್ದೇವೆ ಎಂಬುದನ್ನು ನಾನು ಹೇಳಬೇಕಾಗಿಲ್ಲ. ಈ ಸದನದ ಎಲ್ಲಾ ಸದಸ್ಯರು ಅವರು ಯಾವುದೇ ವರ್ಗಕ್ಕೆ ಸೇರಿರಲಿ ಈ ಬಗೆಯ ಕಳಂಕವನ್ನು ತಡೆಗಟ್ಟಬೇಕು. ನಾವು ನಮ್ಮ ಉತ್ತಮ ಹೆಸರು ಮತ್ತು ನಮ್ಮ ಘನತೆಯನ್ನು ಎಚ್ಚರಿಕೆಯಿಂದ ಕಾಪಾಡಿಕೊಳ್ಳಬೇಕು. ಅದಕ್ಕಾಗಿಯೇ ನಾನು ಈ ಬಗ್ಗೆ ಉತ್ಸುಕನಾಗಿದ್ದೇನೆ."**

14. "ಸಂಸತ್ತು, ರಾಜ್ಯಗಳ ಮತ್ತು ಒಕ್ಕೂಟ ರಾಜ್ಯಕ್ಷೇತ್ರಗಳ ವಿಧಾನಮಂಡಲಗಳಲ್ಲಿ ಶಿಸ್ತು ಮತ್ತು ಸಭ್ಯ ವರ್ತನೆ" ಎಂಬ ವಿಷಯದ ಮೇಲೆ ಅಧ್ಯಕ್ಷಾಧಿಕಾರಿಗಳ, ಮುಖ್ಯಮಂತ್ರಿಗಳ, ಸಂಸದೀಯ ವ್ಯವಹಾರಗಳ ಮಂತ್ರಿಗಳ, ರಾಜಕೀಯ ಪಕ್ಷಗಳ ಮುಖಂಡರ ಮತ್ತು ಸಚೇತಕರುಗಳ 'ಅಖಿಲ ಭಾರತ ಮಟ್ಟದ ಸಮ್ಮೇಳನ'ವನ್ನು 25 ನವೆಂಬರ್ 2001 ರಂದು ನವದೆಹಲಿಯಲ್ಲಿ

ನಡೆಸಲಾಯಿತು. ಸಮ್ಮೇಳನವು, "ಹೆಚ್ಚುತ್ತಿರುವ ಆತಂಕಕಾರಿ ಪ್ರವೃತ್ತಿ" ಎಂದು ಕರೆದು ಅಂಥ ಪ್ರವೃತ್ತಿಯನ್ನು ನಿಯಂತ್ರಿಸುವ ಹಿಂದಿನ ಪ್ರಯತ್ನಗಳ ಬಗ್ಗೆ ಕಳಕಳಿಯನ್ನು ವ್ಯಕ್ತಪಡಿಸಿದ್ದು ಹಾಗೂ ಅದನ್ನು "ಅಸಮರ್ಪಕವಾಗಿದೆ" ಎಂಬುದಾಗಿ ಅಭಿಪ್ರಾಯಪಟ್ಟಿತು.

15. 15.09.2021ರಂದು ಆಚರಿಸಿದ 'ವಿಶ್ವ ಪ್ರಜಾಪ್ರಭುತ್ವದ ದಿನಾಚರಣೆ'ಯನ್ನು ನೆನಪಿಸಬಯಸುತ್ತೇನೆ. ಭಾರತ ವಿಶ್ವದಲ್ಲೇ ಅತಿದೊಡ್ಡ ಪ್ರಜಾಪ್ರಭುತ್ವ ರಾಷ್ಟ್ರ ಎನ್ನುವುದು ತಮಗೆಲ್ಲಾ ತಿಳಿದ ವಿಷಯ. ವಿಶ್ವದಲ್ಲಿ ಎಕಾನಾಮಿಕ್ ಇಂಟಲಿಜೆಂಟ್ ಯುನಿಟ್ ಎಂಬ ಸಂಸ್ಥೆಯು ಪ್ರಪಂಚದಲ್ಲಿರುವ 167 ಪ್ರಜಾಪ್ರಭುತ್ವ ರಾಷ್ಟ್ರಗಳ ಅಧ್ಯಯನ ಮಾಡಿ ಕಳೆದ ಫೆಬ್ರುವರಿಯಲ್ಲಿ ವಿಶ್ವ ಮಟ್ಟದ ರ್‍ಯಾಂಕಿಂಗ್ ಪಟ್ಟಿ ಬಿಡುಗಡೆ ಮಾಡಿತು. ಆ ಪಟ್ಟಿಯ ಪ್ರಕಾರ ಪ್ರಸ್ತುತ 2020ರ ಸಾಲಿನ ಡೆಮಾಕ್ರಟಿಕ್ ಇಂಡೆಕ್ಸ್ ರ್‍ಯಾಂಕಿಂಗ್‌ನಲ್ಲಿ ಭಾರತ 53ನೇ ಸ್ಥಾನದಲ್ಲಿದೆ. ಆದರೆ ನಾರ್ವೆ ಎಂಬ ಪುಟ್ಟ ರಾಷ್ಟ್ರ ಈ ಸಂಸ್ಥೆಯ ರ್‍ಯಾಂಕಿಂಗ್ ಪಟ್ಟಿಯಲ್ಲಿ ಪ್ರಥಮ ಸ್ಥಾನದಲ್ಲಿದೆ. 53ನೇ ಸ್ಥಾನದಿಂದ ಪ್ರಥಮ ಸ್ಥಾನದತ್ತ ಸಾಗುವುದು ನಮ್ಮೆಲ್ಲರ ಆದ್ಯತೆಯಾಗಬೇಕು. At this juncture, I humbly appeal to Sri. Om Birla ji to play a pivotal role in introducing "National Democracy Index" to assess democratic performance of all the States and Union Territories in the Country.

16. ಸಂಸದೀಯ ಮೌಲ್ಯಗಳನ್ನು ರಕ್ಷಣೆ ಮಾಡುವಲ್ಲಿ ಬಹುಮುಖ್ಯ ಪಾತ್ರವಹಿಸುವ ಐದು ಅಂಶಗಳು. 1. ಪ್ರಜಾಸತ್ತಾತ್ಮಕ ಸಂಸ್ಥೆಗಳು, 2. ರಾಜಕೀಯ ಪಕ್ಷಗಳು, 3. ಜನಪ್ರತಿನಿಧಿಗಳು, 4. ಮಾಧ್ಯಮ, 5. ಮತದಾರರು.

17. ಸಂಸತ್ ಮತ್ತು ವಿಧಾನ ಮಂಡಲ ಸಂಸದೀಯ ವ್ಯವಸ್ಥೆಯ ತಾಯಿಬೇರು. ಸಂಸತ್ ಪ್ರಜಾಪ್ರಭುತ್ವದ ಗರ್ಭಗುಡಿ, ಸದನದ ನಡವಳಿಕೆಗಳು ಪ್ರಜಾಪ್ರಭುತ್ವವೆಂಬ ಹೃದಯದ ಬಡಿತವಿದ್ದಂತೆ, ಅಲ್ಲಿನ ಕ್ರಿಯೆ ಪ್ರಕಿಯೆಗಳನ್ನು ಇಡೀ ದೇಶವೇ ಅನುಸರಿಸುತ್ತದೆ. ಆದುದರಿಂದ ಪ್ರಜಾಪ್ರಭುತ್ವದ ವೃಕ್ಷ ಚೆನ್ನಾಗಿ ಬೆಳೆಯಬೇಕಾದರೆ ತಾಯಿಬೇರಿಗೆ ಕುಂಠಿತವಾಗದಂತೆ ಎಚ್ಚರವನ್ನು, ಗರ್ಭಗುಡಿಯಲ್ಲಿನ ಆಚರಣೆ ವ್ಯತ್ಯಯವಾಗದಂತಹ ಪ್ರಕ್ರಿಯೆಗಳನ್ನು, ಹೃದಯದ ಬಡಿತ ಮತ್ತು ಇಡೀ ದೇಶದ ನಾಡಿಮಿಡಿತ ಏರಿಳಿತವಾಗದ ಹಾಗೆ ಸುಸ್ಥಿತಿಯಲ್ಲಿಡುವ ಆರೋಗ್ಯವಂತ ಸ್ಥಿತಿಯನ್ನು ಜನಪ್ರತಿನಿಧಿಗಳೇ ಮಾಡಬೇಕಾಗಿದೆ.

18. ಪ್ರಜಾಪ್ರಭುತ್ವದಲ್ಲಿ ಆಡಳಿತ ಪಕ್ಷ ಮತ್ತು ವಿರೋಧ ಪಕ್ಷಗಳು ಪ್ರಮುಖ ಪಾತ್ರ ವಹಿಸುತ್ತವೆ. ಆಡಳಿತ ಪಕ್ಷ ಮತ್ತು ವಿರೋಧ ಪಕ್ಷ ಪ್ರಜಾಪ್ರಭುತ್ವವೆಂಬ ರಥದ ಎರಡು ಚಕ್ರಗಳು. ಚಕ್ರಗಳು ಸರಿಯಾಗಿ ಚಲಿಸಿದಾಗ ಮಾತ್ರ ರಥ ಸರಿಯಾದ ದಿಕ್ಕಿನಲ್ಲಿ ಸಾಗಿ ಗುರಿ ತಲುಪುತ್ತದೆ. ಇದರ ಬದಲಾಗಿ ಬಂಡಿಗೆ ಹೂಡಿದ ಎತ್ತು ಮತ್ತು ಎಮ್ಮೆಗಳಾಗಬಾರದೆಂಬುದೇ ನನ್ನ ನಿಲುವು. ಆಡಳಿತ ಪಕ್ಷ ಸರಿಯಾದ ಮಾರ್ಗದಲ್ಲಿ ಚಲಿಸುವಂತೆ ವಿರೋಧ ಪಕ್ಷಗಳು ಮಾರ್ಗದರ್ಶನ ಮಾಡಬೇಕಾಗುತ್ತದೆ. ವಿರೋಧ ಪಕ್ಷಗಳ ವಿರೋಧ ಕೇವಲ ಟೀಕಿಸುವುದಲ್ಲ. ಜನತೆಯ ಹಿತಕ್ಕಾಗಿ ಟೀಕಿಸಬೇಕು. ನೆಹರುರವರು ಒಮ್ಮೆ ಭಾರತಕ್ಕೆ ಆಗಮಿಸಿದ್ದ ಬ್ರಿಟಿಷ್ ಅಧಿಕಾರಿಯೊಬ್ಬರಿಗೆ ಯುವಕ ಅಟಲ್ ಬಿಹಾರಿ ವಾಜಪೇಯಿ ಅವರನ್ನು ಪರಿಚಯಿಸುತ್ತಾ, 'ಇವರು ಅಟಲ್ ಜೀ, ವಿರೋಧಪಕ್ಷದ ಯುವ ನಾಯಕ. ಯಾವತ್ತಿಗೂ ನನ್ನನ್ನು ಟೀಕಿಸುವುದರಲ್ಲಿ ಇವರು ನಿಸ್ಸೀಮ, ಆದರೆ ನನಗಂತೂ ಇವರಲ್ಲಿ ಭಾರತದ ಭವಿಷ್ಯದ ಪ್ರಧಾನಿ ಕಾಣುತ್ತಿದ್ದಾನೆ' ಎಂದಿದ್ದರು. ಅದೇ ರೀತಿಯಾಗಿ ಕವಿಹೃದಯದ ರಾಜಕಾರಣಿ ವಾಜಪೇಯಿ ಅವರು ಜವಾಹರಲಾಲ್ ನೆಹರು, ಇಂದಿರಾ ಗಾಂಧಿ, ರಾಜೀವ್ ಗಾಂಧಿ ಅವರಂಥ ವಿಪಕ್ಷದ ನಾಯಕರನ್ನೂ ಮುಕ್ತ ಕಂಠದಿಂದ ಶ್ಲಾಘಿಸುವ ಕೆಲಸ ಮಾಡಿದರು. ಟೀಕಿಸುವುದು ಮಾತ್ರವಲ್ಲ, ಪಕ್ಷ, ಸಿದ್ಧಾಂತವನ್ನೂ ಮೀರಿ

ಒಳಿತನ್ನು ಮೆಚ್ಚುವ ಪ್ರಬುದ್ಧತೆ ರಾಜಕಾರಣದ ಈ ಹೊತ್ತಿನ ಅಗತ್ಯ ಎಂಬುದನ್ನು ಅವರು ತೋರಿಸಿಕೊಟ್ಟರು. ವಿರೋಧ ಪಕ್ಷ ಎಂದರೆ ಆಡಳಿತ ಪಕ್ಷದ ಎಲ್ಲ ನಡೆಯನ್ನೂ ಟೀಕಿಸಲೇಬೇಕು ಎಂಬ ಮನಸ್ಥಿತಿಯನ್ನು ವಾಜಪೇಯಿ ಅವರು ಎಂದಿಗೂ ಒಪ್ಪಲಿಲ್ಲ. ಪಕ್ಷ, ಸಿದ್ಧಾಂತವನ್ನು ಮೀರಿ ಒಳಿತನ್ನು ಒಳಿತು ಎಂದು ಸ್ವೀಕರಿಸುವ ಉದಾರತೆಯೇ ಪ್ರಬುದ್ಧ ರಾಜಕಾರಣಿಯಾಗುವ ದಿಟ್ಟ ಹೆಜ್ಜೆ ಎಂಬುದು ಅವರ ನಿಲುವಾಗಿತ್ತು. ಅದೇ ಕಾರಣಕ್ಕೇ ಅವರು ಅಜಾತಶತ್ರು ಎಂಬ ಪದಕ್ಕೆ ಅನ್ವರ್ಥವಾಗಿಯೇ ಉಳಿದರು. ಸದನಗಳಲ್ಲಿ ಆಡಳಿತ ಮತ್ತು ವಿಪಕ್ಷಗಳಲ್ಲಿ ಸಾಮರಸ್ಯವಿದ್ದು, ಸದನದಲ್ಲಿ ತೆಗೆದುಕೊಳ್ಳುವ ತೀರ್ಮಾನಗಳು ಸಂವಿಧಾನ ಮತ್ತು ಕಾನೂನಿನ ಚೌಕಟ್ಟಿನಲ್ಲಿರಬೇಕೆಂದರೆ ಸದನಗಳು ಆಡಳಿತ ಕೇಂದ್ರಗಳಾಗಿರಬೇಕೇ ಹೊರತು ಹೋರಾಟದ ಅಖಾಡವಾಗಬಾರದು.

19. ಸದನದ ಕಲಾಪಗಳನ್ನು ರಾಷ್ಟ್ರ ಮತ್ತು ವಿಶ್ವ ನೋಡುತ್ತಿರುತ್ತದೆ ಎಂಬುದನ್ನು ಮರೆಯದಂತೆ ಕೆಲವು ಜನಹಿತ ಕಾಪಾಡುವ ಜವಾಬ್ದಾರಿಗಳನ್ನು ನಿರ್ವಹಿಸುವಂತಾಗಬೇಕಾಗಿದೆ. ಆಡಳಿತ ಪಕ್ಷದವರ ತಪ್ಪುಗಳನ್ನು ಮರೆಮಾಚದೇ ತಪ್ಪು ತಪ್ಪೇ ಎಂಬುದನ್ನು ನಿರೂಪಿಸಿ, ಆಡಳಿತ ಪಕ್ಷ ತೆಗೆದುಕೊಂಡ ನಿರ್ಧಾರಗಳು ಜನಹಿತವಾಗಿರುವಂತೆ ಹಾಗೂ ಪ್ರಜಾಪ್ರಭುತ್ವದ ಆಧಾರದಲ್ಲಿ ಇರುವುದರ ಬಗ್ಗೆ ಗಮನಹರಿಸಬೇಕಾಗುತ್ತದೆ.

20. ಪ್ರಜಾಪ್ರಭುತ್ವದಲ್ಲಿ ಆಡಳಿತ ಪಕ್ಷ ಹಾಗೂ ವಿರೋಧ ಪಕ್ಷಗಳ ಮತ್ತು ಸದಸ್ಯರ ಸ್ಥಾನ ಶಾಶ್ವತವಲ್ಲ ಎಂಬುದನ್ನು ಗಮನದಲ್ಲಿಟ್ಟುಕೊಳ್ಳಬೇಕು. ಚುನಾವಣಾ ಸಂದರ್ಭದಲ್ಲಿ ಮಾತ್ರ ರಾಜಕೀಯ ಪಕ್ಷಗಳು ತಮ್ಮ ಪ್ರಣಾಳಿಕೆಗೆ ಅನುಗುಣವಾಗಿ ವಿಷಯಾಧಾರಿತ ಪ್ರಚಾರ ಮಾಡಬೇಕೇ ಹೊರತು ವೈಯಕ್ತಿಕ ಟೀಕೆಗೆ ಇಳಿಯಬಾರದು. ಈ ಮೂಲಕ ವ್ಯಕ್ತಿ ಹಾಗೂ ಪಕ್ಷದ ಘನತೆಯನ್ನು ಕಾಪಾಡುವುದು ಒಳಿತು. ಚುನಾವಣೆಯ ನಂತರ ಸದನ ಮತ್ತು ಚರ್ಚಾ ವೇದಿಕೆಗಳಲ್ಲಿ ವಿಷಯಾಧಾರಿತ ಚರ್ಚೆಗಳೇ ಇಂಬು ಪಡೆಯಬೇಕು. ಅದನ್ನು ನಾವೆಲ್ಲರು ಮಾಡುತ್ತೇವೆ ಎಂದು ಪ್ರತಿಜ್ಞೆಗೈಯ್ಯೋಣ.

21. ನಾವುಗಳು ಪ್ರಜಾಪ್ರತಿನಿಧಿಗಳೆಂಬುದನ್ನು ಮರೆಯದೆ ಟೀಕೆಗೋಸ್ಕರ ಟೀಕೆ ಮಾಡದೆ ವಿಷಯಾಧಾರಿತವಾಗಿ ಮಾತನಾಡಿ ಸಂವಿಧಾನದ ವಾಕ್ ಸ್ವಾತಂತ್ರ್ಯವನ್ನು ಎತ್ತಿಹಿಡಿಯೋಣ.

22. ಸಂಸದೀಯ ವ್ಯವಸ್ಥೆಯ ಕಾರ್ಯವಿಧಾನ ನಿಯಮಗಳ ಮೇರೆಗೆ ವಿರೋಧ ಪಕ್ಷಗಳು ಸದನದ ಕಾಲಮಿತಿಯೊಳಗೆ ತಮ್ಮ ಜವಾಬ್ದಾರಿಯನ್ನು ಅರಿತು ಹೊಸ ಹೊಸ ಸಲಹೆ ಸೂಚನೆಗಳನ್ನು ನೀಡಿ ಆಡಳಿತ ಪಕ್ಷವನ್ನು ಉತ್ತೇಜಿಸುವಂತಾಗಬೇಕು. ಸದಸ್ಯರ ಘನತೆಗೆ ಧಕ್ಕೆ ಬರದಂತೆ, ಸದನದ ಕಾರ್ಯಕಲಾಪಕ್ಕೆ ಅಡ್ಡಿಪಡಿಸುವ ಪರಿಪಾಠ ನಿಲ್ಲುವಂತಾಗಬೇಕು.

23. ಆಡಳಿತ ಪಕ್ಷದ ಅಧಿಕಾರ ಪ್ರಜೆಗಳ ಹಿತಕ್ಕೆ ಮಾತ್ರ ಮೀಸಲಾಗಿರಬೇಕು. ಜನತೆಯ ಸೇವೆಯೇ ನಮ್ಮ ಕರ್ತವ್ಯ ಎಂಬುದನ್ನು ಅರಿತು ವಿರೋಧ ಪಕ್ಷದವರ ಸಲಹೆಗಳನ್ನು ಮುಕ್ತ ಮನಸ್ಸಿನಿಂದ ಸ್ವೀಕರಿಸಬೇಕು. ಆಡಳಿತ ಪಕ್ಷವಾದರೆ 'ನಮ್ಮ ಸರ್ಕಾರ' ಎಂಬ ಪ್ರತಿಷ್ಠೆ, ವಿರೋಧ ಪಕ್ಷವಾದರೆ 'ನಿಮ್ಮ ಸರ್ಕಾರ' ಎಂಬ ಅಸಹನೆ ಬೇಡ. ಎರಡೂ ಪಕ್ಷಗಳಿಗೂ ಕರ್ನಾಟಕ ಸರ್ಕಾರ ಎನ್ನುವುದಾಗಬೇಕು. ಏಕೆಂದರೆ ಕರ್ನಾಟಕ ಸರ್ಕಾರ ಜಾರಿಗೊಳಿಸಿದ ವಿಧೇಯಕ, ಕಾರ್ಯಕ್ರಮ, ಯೋಜನೆಗಳು ಕೇವಲ ಆಡಳಿತ ಪಕ್ಷದ ಜನತೆಗಷ್ಟೇ ಅಲ್ಲದೆ ಎಲ್ಲಾ ನಾಗರೀಕರಿಗೂ ತಲುಪುತ್ತದೆ.

24. ವಿಧಾನಮಂಡಲದ ಅಧಿವೇಶನಗಳ ಕಲಾಪದಲ್ಲಿ ಶ್ರದ್ಧೆಯಿಂದ ಭಾಗವಹಿಸುವುದು ಜನಪ್ರತಿನಿಧಿಗಳ ಆದ್ಯ ಕರ್ತವ್ಯ ಅಥವಾ ಪ್ರಥಮ ಮೌಲ್ಯ ಎಂದರೆ ತಪ್ಪಾಗಲಾರದು. ಆದರೆ,

ಸದನಕ್ಕೆ ಗೈರು ಆಗುವ ಶಾಸಕರು ತಮ್ಮ ಕರ್ತವ್ಯ ಲೋಪದ ನಡವಳಿಕೆಯಿಂದ ಚುನಾವಣೆಯಲ್ಲಿ ಗೆಲ್ಲಿಸಿ ಕಳುಹಿಸಿರುವ ಜನರಿಗೆ ಏನನ್ನು ಸೂಚಿಸುತ್ತಿದ್ದೇವೆ ಎನ್ನುವ ಕನಿಷ್ಠ ಜವಾಬ್ದಾರಿಯನ್ನು ಅರಿಯಬೇಕಾಗಿದೆ.

25. ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ, ಜನಸಾಮಾನ್ಯರು ಪಾವತಿಸುವ ತೆರಿಗೆ ಹಣವನ್ನು ನಾವು ಸದನದ ಕಲಾಪಕ್ಕೆ ವ್ಯಯಿಸುತ್ತಿದ್ದೇವೆ. ಅದು ಸಾರ್ಥಕ ರೂಪ ಪಡೆಯಬೇಕೆಂಬುದು ನಮ್ಮ ನಿಲುವಾಗಬೇಕು.

26. ನಮ್ಮ ದೇಶದ ಸಂವಿಧಾನದ 7ನೇ ಪರಿಚ್ಛೇದದಲ್ಲಿ (246ನೇ ವಿಧಿ) ವಿವರಿಸಿರುವಂತೆ, ರಾಜ್ಯ ಪಟ್ಟಿ ಮತ್ತು ಸಹವರ್ತಿ ಪಟ್ಟಿಯಲ್ಲಿರುವ ಎಲ್ಲ ವಿಷಯಗಳ ಬಗ್ಗೆಯೂ ಕಾನೂನು ರಚಿಸುವ ಅಧಿಕಾರವನ್ನು ಶಾಸಕರು ನಿಷ್ಠುರವಾಗಿ ಬಳಸಿಕೊಳ್ಳಬಹುದಾಗಿದೆ. ಇಂತಹ ಕರ್ತವ್ಯದಲ್ಲಿ ಪ್ರತಿ ವಿಧೇಯಕಗಳ ಪರ್ಯಾಲೋಚನೆಯ ಸಂದರ್ಭದಲ್ಲಿ ಪರ–ವಿರೋಧ ಚರ್ಚೆಯಾಗಲೇಬೇಕು. ಹಿಂದೆ ಎಷ್ಟೋ ವಿಧೇಯಕಗಳು ವಿರೋಧ ಪಕ್ಷದವರ ಸಮರ್ಥ ಚರ್ಚೆಗಳಿಂದ ಬಿದ್ದುಹೋದದ್ದಕ್ಕೆ ಸಾಕ್ಷಿಯಾಗಿದ್ದೇವೆ. ಅಂತಹ ಸಕಾರಾತ್ಮಕ ಚರ್ಚೆಗಳಿಗೆ ನಾವೇಕೆ ವಿಮುಖರಾಗುತ್ತಿದ್ದೇವೆ. ಇದಕ್ಕೆ ಕಾರಣ ಕರ್ತವ್ಯ ಲೋಪವೋ, ಪರಿಜ್ಞಾನದ ಕೊರತೆಯೋ, ಅಧಿಕಾರದ ಕಾರಣವೋ, ಜನಹಿತದ ಅವಜ್ಞೆಯೋ, ರಾಜಕೀಯ ಇಚ್ಛಾಶಕ್ತಿಯ ಕೊರತೆಯೋ, ರಾಜಕೀಯ ಹಿತಾಸಕ್ತಿಯ ಹೆಚ್ಚುಗಾರಿಕೆಯೋ, ಬದ್ಧತೆಯ ಜಾಣ ಮರೆವೋ, ಪ್ರಲಾಪ ಮತ್ತು ಪ್ರಚಾರದ ಪರವೋ? ಅಥವಾ ಇವೆಲ್ಲವುಗಳು ಇರಬಹುದು. ಆದರೆ ಇವು ನಮ್ಮ ಸದನವನ್ನು ಮತ್ತು ನಮ್ಮನ್ನು ಚುನಾಯಿಸಿದ ಮತದಾರರನ್ನು ತಪ್ಪುದಾರಿಗೆಳೆಯುತ್ತವೆ ಎನ್ನುವುದನ್ನು ನಾವು ಮರೆಯಲೇಬಾರದು.

27. **ಸಭಾಧ್ಯಕ್ಷರ ಪಾತ್ರವನ್ನು** ನಾನು ಈ ಸಂದರ್ಭದಲ್ಲಿ ಸಂಸತ್ತಿನ ಪಿತಾಮಹಾ ದಾದಾ ಸಾಹೇಬ್ ಜಿ.ವಿ.ಮಾವಲಂಕರ್ ರವರ ಹೇಳಿಕೆಯೊಂದಿಗೆ ದಾಖಲಿಸಬಯಸುತ್ತೇನೆ. **"....ಸಂಸದೀಯ ಪದ್ಧತಿಯನ್ನು ಕೇವಲ ತಲೆಗಳನ್ನೋ ಅಥವಾ ಕೈಗಳನ್ನೋ ಎಣಿಕೆ ಮಾಡುವುದಕ್ಕಷ್ಟೇ ಸೀಮಿತಗೊಳಿಸದರೆ ಪ್ರಜಾಪ್ರಭುತ್ವ ಮರೀಚಿಕೆಯಾಗುತ್ತದೆಂಬುದು ಸುಸ್ಪಷ್ಟವಾಗುತ್ತದೆ. ಬಹುಮತಕ್ಕೆ ಮಾತ್ರವೇ ನಾವು ಪ್ರಮುಖ್ಯತೆ ಕೊಟ್ಟರೆ, ನಿರಂಕುಶ ಪದ್ಧತಿಯ, ಬಂಡಾಯದ ವಿಷಬೀಜಗಳಿಗೆ ನೀರೆರದಂತಾಗುತ್ತದೆ. ಹಾಗೆ ಮಾಡದೆ, ಸಹನೆ, ತಾಳ್ಮೆ ಸ್ವಭಾವವನ್ನು, ಚರ್ಚಾ ಸ್ವಾತಂತ್ರ್ಯ ಪ್ರವೃತ್ತಿಯನ್ನು, ವಿವೇಚನಾ ಮನೋಧರ್ಮವನ್ನು ಬೆಳೆಸಲು ನಾವು ನೆರವಾದರೆ ಪ್ರಜಾಪ್ರಭುತ್ವದ ಅಂತಃಸತ್ವವನ್ನು ಪೋಷಿಸಿದಂತಾಗುತ್ತದೆ."** ಸಂಸತ್ತು ಮತ್ತು ರಾಜ್ಯ ವಿಧಾನ ಮಂಡಲಗಳಲ್ಲಿ ಸಂಸದೀಯ ಕಾರ್ಯಗಳ ನಿರ್ವಹಣಾ ಪಾತ್ರವನ್ನು ಶಾಂತಿಯುತವಾಗಿ ಮತ್ತು ಪರಿಣಾಮಕಾರಿಯಾಗಿ ಮುಂದುವರಿಸುವ ನಿರ್ಣಾಯಕ ಪಾತ್ರ ಅಧ್ಯಕ್ಷಾಧಿಕಾರಿಯವರದು. ಆದರೆ ಈ ಪಾತ್ರಕ್ಕೆ ಆಡಳಿತ ಪಕ್ಷ ಮತ್ತು ವಿರೋಧ ಪಕ್ಷದವರ ಸಂಪೂರ್ಣ ಸಹಕಾರವೇ ಪೀಠಾಸೀನ ಅಧಿಕಾರಿಗಳ ಬುನಾದಿಯಾಗಿದೆ. ಪೀಠಾಸೀನ ಅಧಿಕಾರಿಗಳು ನಡವಳಿಕೆ ನಿಯಮಗಳ ಪಾಲಕರು ಹಾಗೂ ಮಾರ್ಗದರ್ಶಕರೇ ಹೊರತು ನಿಯಮಗಳ ಉಲ್ಲಂಘಿಸುವವರಲ್ಲ. ಶಾಸಕಾಂಗದ ಸಂಪೂರ್ಣ ಅಧಿಕಾರವನ್ನು ಹೊಂದಿರುವ ಸಭಾಧ್ಯಕ್ಷರನ್ನು ಭಾರತೀಯ ಸಂಸದೀಯ ಪ್ರಜಾಪ್ರಭುತ್ವದ ನಿಜವಾದ ರಕ್ಷಕ ಎಂದು ಪರಿಗಣಿಸಲಾಗಿದೆ. ಅವರು ಸಾಮಾನ್ಯವಾಗಿ ರಾಜಕೀಯ ಪಕ್ಷದ ಬ್ಯಾನರ್‌ನಲ್ಲಿ ಆಯ್ಕೆಯಾಗಿದ್ದರೂ ಸಹ ನ್ಯಾಯಾಧೀಶರ ಜವಾಬ್ದಾರಿಯನ್ನು ನಿಭಾಯಿಸಬೇಕಿದೆ. ಈ ಹಿಂದೆ ಹೇಳಿರುವಂತೆ ನಾನು ಸಭಾಧ್ಯಕ್ಷ ಆಗಿರುವ ಅವಧಿಯಲ್ಲಿ ಯಾವುದೇ ರೀತಿಯ ಪಕ್ಷಪಾತತನದ ಕೆಲಸ ಮಾಡುವುದಿಲ್ಲ. ಎಲ್ಲಾ ವಿಧೇಯಕಗಳನ್ನು ಚರ್ಚೆಗೆ ಒಳಪಡಿಸುತ್ತೇನೆ. ಅಲ್ಲದೆ ಎಲ್ಲಾ ಸದಸ್ಯರಿಗೆ ಸಮಾನ ಅವಕಾಶ ನೀಡುತ್ತೇನೆ. ಸದನ ತನ್ನ

ಸಂಸದೀಯ ಮೌಲ್ಯಗಳನ್ನು ಎತ್ತಿಹಿಡಿಯುವಂತಹ ಕೆಲಸ ಮಾಡುತ್ತೇನೆ. ಈ ಕಾರ್ಯಕ್ಕೆ ಶಾಸಕರ ಸಹಕಾರ ಅತ್ಯಗತ್ಯ ಎಂಬುದನ್ನು ಈ ಮೂಲಕ ಮತ್ತೊಮ್ಮೆ ನೆನಪಿಸುತ್ತೇನೆ.

28. ಸಭಾಧ್ಯಕ್ಷರ ಹುದ್ದೆಯ ಗುರುತರ ಜವಾಬ್ದಾರಿಯು ಕೇವಲ ಈ ಬೃಹತ್ ಸಭಾಂಗಣಕ್ಕೆ ಹಾಗೂ 225 ಶಾಸಕರಿಗೆ ಒಳಪಟ್ಟಿದೆಯೆಂದು ನಾನು ಭಾವಿಸುವುದಿಲ್ಲ. ಇಡೀ ಕರ್ನಾಟಕಕ್ಕೆ ಹಾಗೂ 225 ಶಾಸಕರು ಪ್ರತಿನಿಧಿಸುವ ಜನತೆಗೆ – ಕನ್ನಡಿಗರಿಗೆ ಉತ್ತರದಾಯಿ ಆಗಿದ್ದೇನೆ ಎಂಬ ಗೌರವ ಇದೆ. ಈ ತಿಳಿವನ್ನು ಲೋಕಸಭಾಧ್ಯಕ್ಷರಾಗಿ ನಂತರ ರಾಷ್ಟ್ರಪತಿಗಳಾಗಿ ಕಾರ್ಯನಿರ್ವಹಿಸಿದ ನೀಲಂ ಸಂಜೀವರೆಡ್ಡಿಯವರ ಕಾರ್ಯವಿಧಾನದಿಂದ ಅರಿತಿದ್ದೇನೆ. ಅವರು ಸಭಾಧ್ಯಕ್ಷನನ್ನು **"ಪಾರ್ಲಿಮೆಂಟ್ ವಾಚ್‌ಮನ್"** ಎಂದು ಬಣ್ಣಿಸಿದ್ದರು.

29. ಸಂವಿಧಾನದಲ್ಲಿ ಕೇಂದ್ರ ಹಾಗೂ ರಾಜ್ಯ ಶಾಸಕಾಂಗಗಳು ತಮ್ಮ ತಮ್ಮ ಕಕ್ಷೆಗಳಲ್ಲಿ ಪರಮಾಧಿಕಾರ ಹೊಂದಿವೆ. ಆದರೆ, ವ್ಯಾಪ್ತಿ ಮೀರಿದಾಗ ಅಥವಾ ಅರ್ಥೈಸುವಿಕೆಯ ದೃಷ್ಟಿ ಬೇರೆಯಾದಾಗ ನ್ಯಾಯಾಂಗದಲ್ಲಿ ಪ್ರಶ್ನಿಸಬಹುದಾದಂತಹ **'ಮೂಲಭೂತ ಹಕ್ಕುಗಳ ಪಟ್ಟಿ'** ಸಂವಿಧಾನದಲ್ಲಿದೆ. ಹೀಗಾಗಿ ನಮ್ಮ ಕಾರ್ಯಗಳನ್ನು ಪರಿಶೀಲಿಸುವ, ವಿಶ್ಲೇಷಿಸುವ, ಅರ್ಥೈಸುವ ಇನ್ನೊಂದು ವ್ಯವಸ್ಥೆ ಇದೆ ಎನ್ನುವ ಎಚ್ಚರಿಕೆ ನಮಗಿರಬೇಕಿದೆ. ಈ ಮೂಲಕ ನ್ಯಾಯಾಂಗವೂ ಸಹ ಅರ್ಥೈಸುವಿಕೆಯ ಸಂದರ್ಭದಲ್ಲಿ ಸಂಸದೀಯ ಪ್ರಜಾಪ್ರಭುತ್ವದ ಮೌಲ್ಯಗಳನ್ನು ಎತ್ತಿಹಿಡಿಯುವಂತಹ ಕಾರ್ಯನಿರ್ವಹಿಸಲಿ ಹಾಗೂ ನ್ಯಾಯಾಂಗದ ವ್ಯಾಪ್ತಿಯಲ್ಲಿ ತನ್ನ ಮೌಲ್ಯಗಳನ್ನು ಸಂರಕ್ಷಿಸುವ ಕೆಲಸವನ್ನೂ ಮಾಡಲಿ ಎಂದು ಭಿನ್ನವಿಸಿಕೊಳ್ಳುತ್ತೇನೆ.

30. ಶಾಸಕಾಂಗ ರಚಿಸಿದ ಕಾಯ್ದೆಗಳ ಸೌಲಭ್ಯಗಳು, ಆಡಳಿತ ಕ್ರಮಗಳ ಫಲಿತಾಂಶಗಳು ಎಲ್ಲರಿಗೂ ದೊರಕುವಂತೆ ಮಾಡಲು ಕಾರ್ಯಾಂಗದ ಕ್ರಿಯಾಶೀಲ ಮೌಲ್ಯ ಮುಖ್ಯವಾಗಿದೆ. ಕಾರ್ಯಾಂಗವು ರೂಪಿಸುವ ನಿಯಮಗಳು – ಕಾರ್ಯವಿಧಾನಗಳು ಜನತೆಗೆ ಕೂಡಲೇ ತಲುಪುವಂತೆ ಕರ್ತವ್ಯಪರತೆಯಿಂದ ಮಾಡಿದರೆ ಅದು ಕಾರ್ಯಾಂಗದ ಮೌಲ್ಯವಾಗುತ್ತದೆ. ಈ ಮೌಲ್ಯವನ್ನು ಕಾರ್ಯಾಂಗವೂ ಚಾಚುತಪ್ಪದೆ ಮಾಡಲೆಂದು ಆಶಿಸುತ್ತೇನೆ.

31. **ಮತದಾರರ ಪಾತ್ರ:** ಸದನದಲ್ಲಿ ನಮ್ಮ ಪರವಾಗಿ ಶಾಸನ ರೂಪಿಸುವ, ಕ್ಷೇತ್ರದ ಕುಂದುಕೊರತೆಗಳನ್ನು ನಿವಾರಿಸುವ ಮತ್ತು ಸಂಸದೀಯ ಮೌಲ್ಯಗಳನ್ನು ಕಾಪಾಡುವಂತಹ ಪ್ರತಿನಿಧಿಗಳನ್ನು ಆಯ್ಕೆ ಮಾಡಬೇಕಾದ ಜವಾಬ್ದಾರಿ ನಮ್ಮ ಪ್ರಜ್ಞಾವಂತ ಮತದಾರರದು. ಚುನಾವಣಾ ಸಂದರ್ಭದಲ್ಲಿ ಒದಗಿಸುವ ಅಲ್ಪಮೌಲ್ಯಕ್ಕೆ ಬೆಲೆಕೊಡದೆ ಕ್ಷೇತ್ರ, ರಾಜ್ಯ, ಸದನ ಎನ್ನುವ ವಿಚಾರಗಳಿಗೆ ಬೆಲೆಕೊಡುವ ಪ್ರತಿನಿಧಿಯನ್ನು ಆಯ್ಕೆ ಮಾಡಲಿ ಎಂದು ರಾಜ್ಯದ ಜನತೆಯಲ್ಲೂ ಮನವಿ ಮಾಡಿಕೊಳ್ಳುತ್ತೇನೆ. ನೀವು ಆಯ್ಕೆ ಮಾಡಿದ ಸದಸ್ಯ ನಿಮ್ಮ ಅಮೂಲ್ಯ ಮತಕ್ಕೆ ಮೌಲ್ಯ ನೀಡುವಂತವನಾಗಿರಲಿ ಎಂಬುದೇ ನನ್ನ ತೀವ್ರ ಕಳಕಳಿ. ಹೀಗಾಗಿ ಮಾನ್ಯ ಸದಸ್ಯ ಬಂಧುಗಳೇ, ನಮ್ಮನ್ನ ಆಯ್ಕೆ ಮಾಡಿದ ಪ್ರಜಾಪ್ರಭುವಿನ ಮತಕ್ಕೆ ಧಕ್ಕೆಯಾಗದಂತೆ, ಹಿರಿಯರು ಕಟ್ಟಿ ಬೆಳಸಿದ ಈ ಸದನದ ಮೌಲ್ಯಗಳಿಗೆ ಕುಂದು ತಾರದಂತೆ, ಪ್ರಜಾಪ್ರಭುತ್ವದ ಸಂಸದೀಯ ಮೌಲ್ಯಗಳಿಗೆ ಹೆಚ್ಚು ಗೌರವ ನೀಡುವಂತೆ, ನಾಡುಕಟ್ಟಿದ ಪ್ರಭುವರ್ಗದ ಪರಂಪರೆಗೆ ಚ್ಯುತಿ ಬರದಂತೆ ನಾವೆಲ್ಲರೂ ನಡೆದುಕೊಳ್ಳೋಣ.

32. ವಿಧಾನ ಮಂಡಲದ ಮತ್ತೊಂದು ಬಹುಮುಖ್ಯವಾದ ಪಾತ್ರ ಆರ್ಥಿಕ ಹೊಣೆಗಾರಿಕೆ. ರಾಜ್ಯದ ಹಣಕಾಸು ಸ್ಥಿತಿಗತಿಯ ಮೇಲೆ ಚರ್ಚೆ ಮಾಡುವ, ಬದಲಾಯಿಸುವ ಮತ್ತು ಹೊಸ ಯೋಜನೆಗಳನ್ನು ಪ್ರಕಟಿಸುವಂತಹ ನಿಯಂತ್ರಣ ಹೊಂದಿರುತ್ತದೆ.

೩೩. **ಮಾಧ್ಯಮಗಳ ಪಾತ್ರ:** ಭಾರತದ ಸ್ವಾತಂತ್ರ್ಯಕ್ಕಾಗಿ ಅಂದಿನ ದಿನಪತ್ರಿಕೆಗಳು ಪ್ರಮುಖ ಪಾತ್ರ ವಹಿಸಿದ್ದನ್ನು ಸ್ಮರಿಸುತ್ತಾ ಸಂಸದೀಯ ನಡವಳಿಕೆಗಳನ್ನು, ಸದನದ ಉತ್ತಮ ಭಾಷಣ ಹಾಗೂ ಭಾಷಣಕಾರರನ್ನ ಶ್ಲಾಘಿಸುತ್ತಿದ್ದವು. ಆದರೆ ಇಂದು ಅಪಸವ್ಯಗಳನ್ನು, ಸಲ್ಲದ ವಿಚಾರಗಳನ್ನು, ಅಸಂಸದೀಯ ನಡವಳಿಕೆಗಳನ್ನು ಹೆಚ್ಚು ಬಿಂಬಿಸುತ್ತಿರುವುದು ಮಾಧ್ಯಮಗಳ ಮೌಲ್ಯಗಳ ಕುಸಿತ ಎನ್ನದೆ ವಿಧಿಯಿಲ್ಲ. ಇಂದು ಪ್ರಜೆಗಳು ಮತ್ತು ಸರಕಾರದ ನಡುವೆ ಕೊಂಡಿಯಾಗಿ ಮುದ್ರಣ ಹಾಗೂ ವಿದ್ಯುನ್ಮಾನ ಮಾಧ್ಯಮಗಳು ಕಾರ್ಯನಿರ್ವಹಿಸಬೇಕಾದ ಜವಾಬ್ದಾರಿಯಿದೆ. ಸಾರ್ವಜನಿಕರು ಮಾಧ್ಯಮಗಳನ್ನು ಹೆಚ್ಚು ಅವಲಂಬಿಸಿರುವುದರಿಂದ ಸಾಮಾಜಿಕ ಜವಾಬ್ದಾರಿ, ಸಂಸದೀಯ ಮೌಲ್ಯಗಳನ್ನು ವಿಜೃಂಭಿಸುವಂತಹ ಕೆಲಸ ಮಾಡಿದರೆ ಮಾಧ್ಯಮಗಳಿಗೂ ಗೌರವ ಸಲ್ಲುತ್ತದೆ. ಮಾಧ್ಯಮಗಳು ಜನತೆಯ ಮತ್ತು ಸಂಸದೀಯ ವ್ಯವಸ್ಥೆಯ ಕೈಗನ್ನಡಿಯಾಗಿ ಪ್ರಜಾಪ್ರಭುತ್ವದ ಬಲವರ್ಧನೆಗೆ ಸಂವಿಧಾನದ ಆಶಯಗಳಿಗೆ ಪೂರಕವಾಗಿ ಕಾರ್ಯನಿರ್ವಹಿಸುವ ಅವಶ್ಯಕತೆಯಿದೆ.

೩೪. ವ್ಯಕ್ತಿಗಿಂತ ಸಮಾಜ ದೊಡ್ಡದು ಎಂದು ಭಾವಿಸಿ, ಸಮಾಜದ ಹಿತಕ್ಕಾಗಿ ಸ್ವಹಿತ ಮರೆತು ಸಂಸದೀಯ ಮೌಲ್ಯಗಳಿಗಾಗಿ ಈ ಮೂಲಕ ರಾಜ್ಯದ ಕಲ್ಯಾಣಕ್ಕಾಗಿ ಪ್ರಜಾಪ್ರತಿನಿಧಿಗಳು ಶ್ರಮಿಸಬೇಕಾಗಿರುತ್ತದೆ. ಮಹಾತ್ಮಾ ಗಾಂಧೀಜಿ ಕಂಡ ಸರ್ವೋದಯ ಕಲ್ಪನೆಯ ರಾಜ್ಯದ ಕನಸು ಸಹ ಇದೇ ಆಗಿತ್ತು ಎನ್ನುವುದನ್ನು ಈ ಸಂದರ್ಭದಲ್ಲಿ ನೆನಪು ಮಾಡಿಕೊಳ್ಳಬೇಕು. ಒಟ್ಟಾರೆಯಾಗಿ ಪ್ರಜಾಪ್ರತಿನಿಧಿಗಳು ಚುನಾಯಿಸಿ ಕಳುಹಿಸಿದ ಪ್ರಜೆಗಳ ಸ್ವಾತಂತ್ರ್ಯ, ನ್ಯಾಯ, ಭ್ರಾತೃತ್ವ, ಸಮಾನತೆ, ಬಹುತ್ವ, ಸಹನೆ, ಐಕಮತ್ಯ, ಗೌರವ ಉಳಿಸಿ ಬೆಳೆಸುವುದು ಗಮನಾರ್ಹವಾಗಿದೆ.

೩೫. ಸದನದಲ್ಲಿ ಸದಸ್ಯರು ತಮ್ಮ ಕುಂದು ಕೊರತೆಗಳಿಗೆ ಸಂಬಂಧಿಸಿದ ವಿಷಯಗಳ ಬಗ್ಗೆ ಧ್ವನಿ ಎತ್ತಲು ಸಾಕಷ್ಟು ಸಮಯ ದೊರೆಯದಿರುವುದು ಗೊಂದಲಕ್ಕೆ ಒಂದು ಕಾರಣವಾಗಿರಬಹುದಾದರೂ ಸದನದ ಕಾನೂನು ಸುವ್ಯವಸ್ಥೆ ಮತ್ತು ಸಭ್ಯ ನಡತೆಯನ್ನು ಕಾಪಾಡುವ ನಿಟ್ಟಿನಲ್ಲಿ ಸದನದ ಪ್ರಕ್ರಿಯಾ ನಿಯಮಗಳನ್ನು ಕಟ್ಟುನಿಟ್ಟಾಗಿ ಪಾಲಿಸುವುದು ಎಲ್ಲರ ಜವಾಬ್ದಾರಿಯಾಗಬೇಕಾಗಿದೆ.

೩೬. ಶಾಸನಸಭೆಗಳಲ್ಲಿ ದೊರೆಯುವ ಉತ್ತರ ಹೆಚ್ಚು ಪರಿಣಾಮಕಾರಿಯಾಗಿರುತ್ತದೆ. ಹೀಗಾಗಿ ಶಾಸಕರು ತಮ್ಮ ಪ್ರಶ್ನೆಗಳಿಗೆ ಇಂತಹುದೇ ಉತ್ತರಬೇಕೆಂದು ನಿರೀಕ್ಷಿಸದೆ ಸರ್ಕಾರದ ಪರಿಣಾಮಕಾರಿ ಕೆಲಸದ ಉತ್ತರ ಪಡೆಯುವುದು ಮುಖ್ಯ.

37. ಎರಿಸ್ಕಿನ್ ಮೇ (Erskine May) ಎನ್ನುವ ಲೇಖಕ ತನ್ನ **"Parliamentary Practice"** ಕೃತಿಯಲ್ಲಿ "ಪಾರ್ಲಿಮೆಂಟರಿ ಸಂಸ್ಥೆ ಎಂದು ಪರಿಗಣಿಸಲ್ಪಟ್ಟಿರುವ ವಿರೋಧ ಪಕ್ಷದ ಬಗ್ಗೆ ಹೇಳುವುದಾದರೆ, ವಿಮರ್ಶೆ–ಟೀಕೆಗಳನ್ನೂ ರಚನಾತ್ಮಕವಾಗಿ ಹಾಗೂ ಜವಾಬ್ದಾರಿಯುತವಾಗಿ ಮಾಡುವ ಕಾರ್ಯಕ್ಕೆ ಇದಕ್ಕಿಂತ ಉತ್ತಮವಾದ ಯಾವ ವ್ಯವಸ್ಥೆಯನ್ನೂ ಇಲ್ಲಿಯವರೆಗೆ ಸೃಷ್ಟಿಸಲಾಗಿಲ್ಲ" ಎಂದಿದ್ದಾನೆ. ಈ ಮಾತಿಗೆ ಪೂರಕವೆಂಬಂತೆ ಕರ್ನಾಟಕದ ಇಂದಿನ ವಿರೋಧಪಕ್ಷದವರು 'ಸದನದ ಕಲಾಪಗಳಲ್ಲಿ ಧರಣಿ ಮಾಡದೆ ಭಾಗವಹಿಸುತ್ತೇವೆ, ನಮ್ಮ ಪ್ರತಿರೋಧ ಏನೇ ಇದ್ದರೂ ಚರ್ಚೆಗಳಲ್ಲಿ ದಾಖಲಾಗಲಿ' ಎಂದು ತಳೆದಿರುವ ನಿಲುವನ್ನು ಮತ್ತು ನೀಡುತ್ತಿರುವ ಸಹಕಾರವನ್ನು ರಚನಾತ್ಮಕ ಮೌಲ್ಯವೆಂದೇ ಭಾವಿಸುತ್ತೇನೆ.

38. ಪ್ರಜಾಪ್ರಭುತ್ವದ ನೆಲೆಯಲ್ಲಿನ ವಾಕ್ ಸ್ವಾತಂತ್ರ್ಯದ ಬಲದಿಂದ ಜಾತಿ, ಮತ, ಧರ್ಮಗಳ ತಾತ್ಕಾಲಿಕ ನಾಯಕರು ಸಾರ್ವಜನಿಕ ವೇದಿಕೆ, ಮಾಧ್ಯಮ ಹಾಗೂ ಸಾಮಾಜಿಕ ಮಾಧ್ಯಮಗಳ ಮುಖೇನ ಹೆಚ್ಚು ಪ್ರಚಾರದ ಉದ್ದೇಶದಿಂದ ಇಲ್ಲದ ಹಕ್ಕನ್ನು ಪ್ರತಿಪಾದಿಸಲು ತೊಡಗಿರುವುದು

ಸಾಮಾಜಿಕ ಮೌಲ್ಯದ ಕುಸಿತವಲ್ಲದೆ ಮತ್ತೇನೂ ಅಲ್ಲ. ಸಮಾಜದ ಎಲ್ಲಾ ಮೌಲ್ಯಗಳನ್ನು ರಕ್ಷಿಸಬೇಕಾದ ಅಗತ್ಯವು ಇಂದು ಕಂಡುಬಂದಿದೆ. ಆದುದರಿಂದ ನಮ್ಮ ಈ ದಿನದ ಮೌಲ್ಯಗಳ ರಕ್ಷಣೆಯ ಕಾರ್ಯಕ್ರಮವು ರಾಜ್ಯದ ವಿವಿಧ ರಂಗಗಳಲ್ಲೂ ಪಸರಿಸಲಿ ಎಂದು ಆಶಿಸುವೆ.

೩೯. ಸಭಾಧ್ಯಕ್ಷರ ಸ್ಥಾನದ ಬಲದಿಂದ ಕರ್ನಾಟಕದ ವಿಧಾನ ಸಭೆ ಮತ್ತು ವಿಧಾನ ಪರಿಷತ್ತುಗಳು **"ಸಂಸದೀಯ ಮೌಲ್ಯಗಳ ಕುಸಿತವನ್ನು ತಡೆಗಟ್ಟುವ ನಿಟ್ಟಿನಲ್ಲಿ ಒಂದು ಆತ್ಮಾವಲೋಕನ"** ಎಂಬ ಸಭೆಯನ್ನು ವಿವಿಧ ಕ್ಷೇತ್ರಗಳ ಗಣ್ಯರನ್ನು ಆಹ್ವಾನಿಸಿ ಮೌಲ್ಯಗಳ ಎತ್ತಿಹಿಡಿಯುವ ಹಾಗೂ ಕುಸಿತವನ್ನು ತಡೆಗಟ್ಟುವ ನಿಟ್ಟಿನಲ್ಲಿ ಆತ್ಮಾವಲೋಕನ ಮಾಡಿಕೊಳ್ಳಲಾಯಿತು. ಈ ಸಭೆಯನ್ನು ಎರಡು ಹಂತದಲ್ಲಿ ಮಾಡಲಾಗಿದ್ದು, ಅಲ್ಲಿ ಹೊರಹೊಮ್ಮಿದ ಕೆಲ ಸಲಹೆಗಳನ್ನು ಇಂದು ಹಂಚಿಕೊಳ್ಳಲು ಬಯಸುತ್ತೇನೆ. ಈ ಎರಡೂ ಚಿಂತನ ಸಭೆಗಳು ಸಂಸದೀಯ ವ್ಯವಸ್ಥೆಗೆ ನಾವೆಲ್ಲಾ ಜೊತೆ ಸೇರಿ ಒಂದು ಶಕ್ತಿಯನ್ನು ಕೊಡಬಹುದೆಂಬ ಆಶಾಭಾವವನ್ನು ಮತ್ತು ಕೊಡಲೇಬೇಕಾದ ಅಗತ್ಯತೆಯನ್ನು ಸಾದರಪಡಿಸಿದವು. ಮೌಲ್ಯಗಳು ಅವನತಿಯತ್ತ ಸಾಗುತ್ತಿರುವುದನ್ನೂ, ಈಗ ಸರಿಪಡಿಸದಿದ್ದರೆ ಮುಂದೆ ಸರಿಪಡಿಸಲು ಸಾಧ್ಯವಿಲ್ಲ ಎಂಬ ನಿಲುವನ್ನು ಪ್ರಸ್ತುತಪಡಿಸಿತು. ಗಿಡವಾಗಿದ್ದಾಗಲೇ ಬಗ್ಗಿಸಬೇಕೆನ್ನುವ ಜನಪದೀಯರ ಮಾತನ್ನು ಅಕ್ಷರಸಹ ನೆನಪಿಸಿದೆ. ಆ ಸಭೆಗೆ ಆಗಮಿಸಿದ್ದ ಮುಖ್ಯಮಂತ್ರಿಗಳು, ಹಾಲಿ ಸಭಾಪತಿಗಳು, ವಿಧಾನ ಪರಿಷತ್ತಿನ ಮಾಜಿ ಸಭಾಪತಿಗಳು, ವಿಧಾನ ಸಭೆಯ ಮಾಜಿ ಸಭಾಧ್ಯಕ್ಷರು, ಮಾಜಿ ಮುಖ್ಯಮಂತ್ರಿಗಳು, ಮಾಜಿ ವಿರೋಧ ಪಕ್ಷದ ನಾಯಕರು, ಮಾಜಿ ಸಚಿವರು, ಹಾಲಿ ಸಚಿವರು ಸಮಾಜ ಸುಧಾರಕರು, ಹಿರಿಯ ಪತ್ರಕರ್ತರು, ಸಾಂಸ್ಕೃತಿಕ ಚಿಂತಕರು, ಸಾಹಿತಿಗಳು, ಸಾಧಕ ಮಹಿಳೆಯರು ಮೊದಲಾದವರು ಸೇರಿದ್ದರು.

೪೦. ಸದನದ ಕಲಾಪಗಳು ಹಾದಿ–ಬೀದಿಯ ರಂಪಗಳಾಗದೆ, ಚರ್ವಿತ–ಚರ್ವಣವೂ ಆಗದೆ, ಯಾಂತ್ರಿಕವೂ ಆಗದೆ, ಹಗರಣಗಳ ಕೆಸರೆರಚಾಟವಾಗದೆ ಸಂಸದೀಯ ಕಲಾಪಗಳ ಮಾರ್ಗಸೂಚಿಗಳನ್ವಯ ಸತ್ಸಂಪ್ರದಾಯಗಳ ಪಾಲನೆಯೊಂದಿಗೆ ಸಂಸದೀಯ ಮೌಲ್ಯಗಳು ಶಾಸಕರ ಜೀವನ ಕ್ರಮವಾಗಬೇಕೆಂಬುದೇ ನನ್ನ ಆಶಯ. ಈ ನಿಟ್ಟಿನಲ್ಲಿ ಸದನದ ನಡವಳಿಕೆಗಳ ಮೌಲ್ಯವನ್ನು ಎತ್ತಿಹಿಡಿದ ಶಾಸಕತ್ವವನ್ನು ಪ್ರೋತ್ಸಾಹಿಸುವ ಉಪಕ್ರಮವಾಗಿ **"ಅತ್ಯುತ್ತಮ ಶಾಸಕ"** ಪ್ರಶಸ್ತಿ ನೀಡಲಾಗಿರುವುದು ಈಗಾಗಲೇ ತಮ್ಮ ಗಮನಕ್ಕೆ ಬಂದಿದೆ. ಇದು ಕರ್ನಾಟಕದಲ್ಲಿ ಪ್ರಥಮ ಪ್ರಯತ್ನವಾಗಿದೆ.

41. ಸಭಾಧ್ಯಕ್ಷನಾಗಿ ಸಂಸತ್ತಿನ ವ್ಯವಸ್ಥೆಯಲ್ಲಿ ಸದನದ ಶಾಸನ ಸಭೆ ಯಾವುದೇ ರೀತಿಯ ಅಡಚಣೆ, ಅನವಶ್ಯಕವಾದ ಪ್ರತಿಭಟನೆ/ಬಹಿಷ್ಕಾರ ರಹಿತ ಹಾಗೂ ಶಾಂತಿಯುತವಾದ ರೀತಿಯಲ್ಲಿ ಕಾರ್ಯಕಲಾಪವು ನಡೆಯುವಂತೆ ಮಾಡಲು ನನ್ನ ವೈಯಕ್ತಿಕವಾದ ಅಭಿಪ್ರಾಯಗಳು ಈ ಕೆಳಗಿನಂತಿವೆ. ಇವುಗಳನ್ನು ಮಾನ್ಯ ಲೋಕಸಭಾ ಅಧ್ಯಕ್ಷರ ಆದ್ಯ ಗಮನಕ್ಕೆ ತರಬಯಸುತ್ತೇನೆ.

1. ಭಾರತದ ಚುನಾವಣೆಗಳಲ್ಲಿ ಸುಧಾರಣೆ ತರುವ ನಿಟ್ಟಿನಲ್ಲಿ 1951ರ ಪ್ರಜಾಪ್ರತಿನಿಧಿ ಕಾಯ್ದೆಯನ್ನು ತಿದ್ದುಪಡಿ ಮಾಡುವುದು.
2. ಸಂವಿಧಾನದ ಶಾಸನ ಸಭೆಗಳ ಕಲಾಪಗಳಿಗೆ ಸಂಬಂಧಿಸಿದ ಅನುಚ್ಛೇದಗಳ ತಿದ್ದುಪಡಿ ಮಾಡುವುದು.
3. ಶಾಸನ ಸಭೆಯ ಅಧಿವೇಶನದ ಕಾಲಾವಧಿಯನ್ನು ಹೆಚ್ಚುಗೊಳಿಸುವುದು.

4. ಈಗಿರುವ 3 ಅಧಿವೇಶನದ ಪದ್ಧತಿಯನ್ನು 4 ಅಧಿವೇಶನಗಳಾಗಿ ಮಾರ್ಪಡಿಸುವುದು (ಜನವರಿಯಿಂದ ಮಾರ್ಚ್‌ವರೆಗೆ: ಆಯವ್ಯಯ ಅಧಿವೇಶನ, ಏಪ್ರಿಲ್‌ನಿಂದ ಜೂನ್‌ವರೆಗೆ: ಬೇಸಿಗೆ ಕಾಲದ ಅಧಿವೇಶನ, ಜುಲೈನಿಂದ ಸೆಪ್ಟಂಬರ್‌ವರೆಗೆ: ಮುಂಗಾರು ಅಧಿವೇಶನ ಮತ್ತು ಅಕ್ಟೋಬರ್‌ನಿಂದ ಡಿಸೆಂಬರ್‌ವರೆಗೆ: ಚಳಿಗಾಲದ ಅಧಿವೇಶನ).
5. ಸದನದ ಕಾರ್ಯಕಲಾಪವನ್ನು ಬಹಿಷ್ಕರಿಸುವ ಹಾಗೂ ಮೊಟಕುಗೊಳಿಸುವ ಸದಸ್ಯರ ವಿರುದ್ಧ ತಕ್ಷಣವೇ ಕಠಿಣ ಕ್ರಮವನ್ನು ಜರುಗಿಸುವುದು (ಅಮಾನತ್ತುಗೊಳಿಸುವುದು, ಭತ್ಯೆಗಳನ್ನು ಕಡಿತಗೊಳಿಸುವುದು ಇತ್ಯಾದಿ).
6. ಕಾರ್ಯಕಲಾಪಗಳ ನಿಯಮಾವಳಿಗಳನ್ನು ಸೂಕ್ತ ತಿದ್ದುಪಡಿ ಮೂಲಕ ಹೆಚ್ಚು ಬಲಪಡಿಸುವುದು.
7. ಸದನದಲ್ಲಿ ಅಡ್ಡಿ ಆತಂಕಗಳ ಬದಲಿಗೆ ಅರ್ಥಪೂರ್ಣ ಚರ್ಚೆಗಳಾಗಲಿ. (Discussions to replace Disruptions in the House.)
8. Strict enforcement of Rules of Procedure of Conduct of Business in the House to prevent "Disruptions by any member including by members of the Opposition who oppose on various issues/decisions just for the sake of being in the Opposition".
9. ಪ್ರತಿಪಕ್ಷಗಳು ಪ್ರತಿಪಾದಿಸುವ ವಿಷಯಗಳನ್ನು ಚರ್ಚಿಸುವ ಸಲುವಾಗಿ ಸದನದಲ್ಲಿ ಪ್ರತ್ಯೇಕವಾಗಿ ದಿನ ಹಾಗೂ ಸಮಯವನ್ನು ನಿಗದಿಪಡಿಸುವುದು. (Opposition Parties Business Day)
10. ಎಲ್ಲಾ ರಾಜಕೀಯ ಪಕ್ಷಗಳು ತಮ್ಮ ಪಕ್ಷದ ಅಭ್ಯರ್ಥಿಗಳನ್ನು ಆಯ್ಕೆ ಮಾಡುವ ಹಂತದಿಂದ ಹಿಡಿದು ಶಾಸಕಾಂಗಕ್ಕೆ ಆಯ್ಕೆಯಾದ ಮೇಲೂ ರಾಜಕೀಯ ಶಿಕ್ಷಣ, ಸದನದಲ್ಲಿನ ನಡವಳಿಕೆ, ಪ್ರಜಾಪ್ರಭುತ್ವದ ಮೌಲ್ಯಗಳು ಮತ್ತು ಅವರ ನೈತಿಕ ಬೆಳವಣಿಗೆಗೆ ಮಹತ್ವ ನೀಡುವಂತಹ ವ್ಯವಸ್ಥೆಯನ್ನು ಜಾರಿಗೆ ತರುವಲ್ಲಿ ಗುರುತರವಾದ ಪಾತ್ರವಹಿಸಬೇಕು ಹಾಗೂ ಈ ದಿಸೆಯಲ್ಲಿ ತ್ವರಿತ ಕ್ರಮದ ಅಗತ್ಯವಿದೆ ಎನ್ನುವುದು ನನ್ನ ಬಲವಾದ ಒತ್ತಾಯ. ಅದೇರೀತಿ ವಿಧಾನ ಮಂಡಲ/ಸಂಸತ್ತಿನಲ್ಲಿ ಸದಸ್ಯರ ಶಿಸ್ತು, ಸಭ್ಯತೆ ಮತ್ತು ಸದನದ ಘನತೆ ಹಾಗೂ ಗೌರವದ ಹೊಣೆಯನ್ನು ಆಯಾ ಪಕ್ಷದ ನಾಯಕರು/ ಸಚೇತಕರೇ ಹೊರಬೇಕೆಂಬುದು ನನ್ನ ಸಲಹೆ.

42. ಮೊದಲನೆಯ ಸ್ಪೀಕರ್ ಅವರಿಂದ ಹಿಡಿದು ಇವತ್ತಿನ ಸ್ಪೀಕರ್ ಅವರ ತನಕ ಈ ವ್ಯವಸ್ಥೆಗೆ ಶಕ್ತಿ ಕೊಡಬೇಕಾದಂತಹವರು ಎಲ್ಲರೂ ತಮ್ಮ ಶಕ್ತಿಯನ್ನು ಕೊಟ್ಟಿದ್ದಾರೆ. ಒಳ್ಳೆಯ ವ್ಯವಸ್ಥೆಯನ್ನು ರೂಪಿಸಿಕೊಂಡು ಬಂದಿದ್ದಾರೆ. ನಮ್ಮ ವ್ಯವಸ್ಥೆಯ ಬಗ್ಗೆ ನಮಗೆ ಹೆಮ್ಮೆ, ಅಭಿಮಾನ ಇರಬೇಕು. ನಾವು ಆ ರೀತಿಯ ವ್ಯವಸ್ಥೆಯನ್ನು ಬೆಳೆಸಿಕೊಂಡು ಬಂದಂತಹವರು ಎನ್ನುವ ಸಂತೋಷ ನಮಗಿದೆ. ನಮ್ಮ ಸಂಸದೀಯ ಮೌಲ್ಯಗಳನ್ನು ಕಾಪಾಡಿಕೊಳ್ಳಬೇಕಾದ ನಿಟ್ಟಿನಲ್ಲಿ ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಪ್ರಯತ್ನಗಳನ್ನು ಮಾಡಲಾಗಿದೆ. ಅದರಲ್ಲಿ ಈ ದಿನದ ಕಾರ್ಯಕ್ರಮವೂ ಕೂಡ ಒಂದಾಗಿದೆ. ಆದರೂ 'ನಾವು ಮಾಡಬೇಕಾದ, ಸಾಧಿಸಬೇಕಾದ ಅನೇಕ ಕಾರ್ಯಗಳು ಉಳಿದಿವೆ. ಮಾಡಿರುವುದು ಅತಿ ಸ್ವಲ್ಪ, ಮಾಡಬೇಕಾದುದು ಬೆಟ್ಟದಷ್ಟು'. ಅನೇಕ ಯುಗಗಳ ಹಿಂದೆ ಯಾರೋ ಸರಿಯಾಗಿ ಪ್ರಶ್ನಿಸಿದಂತೆ 'ಈಗಲ್ಲದಿದ್ದರೆ ಮತ್ತೆ ಯಾವಾಗ?, ನಾವಲ್ಲದಿದ್ದರೆ ಮತ್ತೆ ಯಾರು?' ಎನ್ನುವ ಮಾತಿನಂತೆ ನಾವೆಲ್ಲರು ಪಣ ತೊಟ್ಟು ಈ ದಿನದ

ಪ್ರಯತ್ನವನ್ನು ನಿರಂತರ ಹಾಗೂ ಪ್ರಾಮಾಣಿಕವಾಗಿ ಮುಂದುವರಿಸೋಣ. ಸಂಸದೀಯ ಮೌಲ್ಯವನ್ನು ರಕ್ಷಿಸುವುದರಲ್ಲಿ ನಮ್ಮ ನಮ್ಮ ಭಾಗದ ಪಾತ್ರವನ್ನು ಸದಾ ಸಕ್ರಿಯವಾಗಿ ಮತ್ತು ಆತ್ಮನಿರ್ವಂಚನೆಯಿಂದ ವಹಿಸೋಣ.

43. While thanking Sri Om Birla ji for having consented to grace this occasion as Prime Speaker, I look forward for his able guidance to bring about progressive reforms in Parliamentary Practice and Procedure to enhance and safeguard Parliamentary Values in our Democracy.

**ಜೈಹಿಂದ್**

**ಜೈಕರ್ನಾಟಕ**



## 138. 15ನೇ ವಿಧಾನಸಭೆಯ 10ನೇ ಅಧಿವೇಶನದ ಕಾರ್ಯಕಲಾಪಗಳ ಸಂಕ್ಷಿಪ್ತ ವರದಿ

13ನೇ ಸೆಪ್ಟೆಂಬರ್ ರಿಂದ 24ನೇ ಸೆಪ್ಟೆಂಬರ್, 2021 ರವರೆಗೆ 12 ದಿನಗಳ ಕಾಲ ಸುಮಾರು 59 ಗಂಟೆ ಕಾಲ ಕಾರ್ಯಕಲಾಪ ನಡೆಸಲಾಗಿದೆ.

- ಭಾರತ ರತ್ನ ಶ್ರೀ ಎಂ.ವಿಶ್ವೇಶ್ವರಯ್ಯನವರ ಜನ್ಮ ದಿನೋತ್ಸವದ ಅಂಗವಾಗಿ ದಿನಾಂಕ:15.09.2021 ರಂದು ಇಂಜಿನಿಯರ್ಸ್ ದಿನ, 17.09.2021 ರಂದು ಕಲ್ಯಾಣ ಕರ್ನಾಟಕ ವಿಮೋಚನಾ ದಿನ ಮತ್ತು 23.09.2021 ರಂದು ಪೌರಕಾರ್ಮಿಕರ ದಿನಾಚರಣೆ ಪ್ರಯುಕ್ತ ಈ ಸದನದ ಮೂಲಕ ಅಭಿನಂದನೆಗಳನ್ನು ಸಲ್ಲಿಸಲಾಗಿದೆ.
- ಇತ್ತೀಚೆಗೆ ನಿಧನ ಹೊಂದಿದ ಗಣ್ಯರುಗಳಿಗೆ ಸಂತಾಪ ಸೂಚನಾ ನಿರ್ಣಯವನ್ನು ಮಂಡಿಸಿ, ಅಂಗೀಕರಿಸಲಾಗಿದೆ.
- 2021–22ನೇ ಸಾಲಿನ ಪೂರಕ ಅಂದಾಜುಗಳ ಮೊದಲನೇ ಕಂತನ್ನು ದಿನಾಂಕ: 14.09.2021 ರಂದು ಮಂಡಿಸಿದ್ದು, ದಿನಾಂಕ:23.09.2021 ರಂದು ಮತಕ್ಕೆ ಹಾಕಿ ಅಂಗೀಕರಿಸಲಾಗಿದೆ.
- ರಾಷ್ಟ್ರಪತಿ/ರಾಜ್ಯಪಾಲರಿಂದ ಒಪ್ಪಿಗೆ ಪಡೆದ ವಿಧೇಯಕಗಳ ಬಗ್ಗೆ ಕಾರ್ಯದರ್ಶಿಯವರ ವರದಿಯನ್ನು ಮಂಡಿಸಲಾಗಿದೆ.
- ಭಾರತ ಸಂವಿಧಾನದ 151(2)ನೇ ಅನುಚ್ಛೇದದ ಮೇರೆಗೆ, ಭಾರತದ ಲೆಕ್ಕನಿಯಂತ್ರಕರು ಮತ್ತು ಮಹಾ ಲೆಕ್ಕಪರಿಶೋಧಕರು ನೀಡಿರುವ ರಾಜ್ಯ ಸರ್ಕಾರದ ಹಣಕಾಸಿನ ವ್ಯವಹಾರಗಳ ಮೇಲೆ ನೀಡಿರುವ ಲೆಕ್ಕಪರಿಶೋಧನಾ ವರದಿ (2021ನೇ ವರ್ಷದ ವರದಿ ಸಂಖ್ಯೆ:1) ಹಾಗೂ ಬೆಂಗಳೂರು ನಗರ ಪ್ರದೇಶದಲ್ಲಿ ಮಳೆನೀರು ನಿರ್ವಹಣೆಯ ಮೇಲಿನ ಕಾರ್ಯನಿರ್ವಹಣಾ ಲೆಕ್ಕಪರಿಶೋಧನಾ ವರದಿ (2021ನೇ ವರ್ಷದ ವರದಿ ಸಂಖ್ಯೆ:2) ಮತ್ತು ಅನುಪಾಲನಾ ಲೆಕ್ಕಪರಿಶೋಧನಾ ವರದಿಯನ್ನು ಸದನದಲ್ಲಿ ಮಂಡಿಸಲಾಗಿದೆ.
- ಕರ್ನಾಟಕ ವಿಧಾನಮಂಡಲದ ಮಹಿಳಾ ಮತ್ತು ಮಕ್ಕಳ ಕಲ್ಯಾಣ ಸಮಿತಿಯ 37ನೇ ವರದಿ, ಅಧೀನ ಶಾಸನಾ ರಚನಾ ಸಮಿತಿಯ 51ನೇ ವರದಿ, ಸ್ಥಳೀಯ ಸಂಸ್ಥೆಗಳ ಮತ್ತು ಪಂಚಾಯತ್ ರಾಜ್ ಸಂಸ್ಥೆಗಳ ಸಮಿತಿಯ 34ನೇ ವರದಿ, ಅನುಸೂಚಿತ ಜಾತಿ ಮತ್ತು ಅನುಸೂಚಿತ ಪಂಗಡಗಳ ಸಮಿತಿಯ 4ನೇ ವರದಿ, ಕರ್ನಾಟಕ ವಿಧಾನ ಸಭೆಯ ಹಕ್ಕುಬಾಧ್ಯತೆಗಳ ಸಮಿತಿಯ ಮೊದಲನೇ ಹಾಗೂ ಎರಡನೇ ವರದಿ, ಸರ್ಕಾರಿ ಭರವಸೆಗಳ ಸಮಿತಿಯ 10 ಮತ್ತು 11ನೇ ವರದಿ ಮತ್ತು 29 ಅಧಿಸೂಚನೆಗಳು, 04 ಅಧ್ಯಾದೇಶಗಳು, 72 ವಾರ್ಷಿಕ ವರದಿಗಳು, 101 ಲೆಕ್ಕ ಪರಿಶೋಧನಾ ವರದಿಗಳು, 03 ತಪಾಸಣಾ ವರದಿಗಳು ಮತ್ತು 02 ಅನುಸರಣಾ ವರದಿಗಳನ್ನು ಮಂಡಿಸಲಾಗಿದೆ.
- ಈ ಅಧಿವೇಶನದಲ್ಲಿ ಧನವಿನಿಯೋಗ ವಿಧೇಯಕ ಸೇರಿದಂತೆ 17 ವಿಧೇಯಕಗಳನ್ನು ಮಂಡಿಸಲಾಗಿದ್ದು, ಒಟ್ಟು 19 ವಿಧೇಯಕಗಳನ್ನು ಅಂಗೀಕರಿಸಲಾಗಿದೆ.
- ನಿಯಮ 60 ರಡಿಯಲ್ಲಿ ನೀಡಿದ್ದ 05 ನಿಲುವಳಿ ಸೂಚನೆಗಳನ್ನು ಪರಿವರ್ತಿಸಿರುವುದನ್ನು ಸೇರಿಸಿ 21 ಸೂಚನೆಗಳನ್ನು ನಿಯಮ 69 ರಡಿಯಲ್ಲಿ ಸ್ವೀಕರಿಸಿದ್ದು, 05 ಸೂಚನೆಗಳನ್ನು ಚರ್ಚಿಸಲಾಗಿದೆ.

- ಒಟ್ಟು 2743 ಪ್ರಶ್ನೆಗಳನ್ನು ಸ್ವೀಕರಿಸಲಾಗಿದ್ದು, ಸದನದಲ್ಲಿ ಉತ್ತರಿಸಬೇಕಾಗಿದ್ದ 150 ಪ್ರಶ್ನೆಗಳ ಪೈಕಿ 146 ಪ್ರಶ್ನೆಗಳಿಗೆ ಉತ್ತರಿಸಲಾಗಿದೆ. ಲಿಖಿತ ಮೂಲಕ ಉತ್ತರಿಸುವ 1950 ಪ್ರಶ್ನೆಗಳ ಉತ್ತರಗಳನ್ನು ಮಂಡಿಸಲಾಗಿದೆ.
- ನಿಯಮ 351 ರಡಿಯಲ್ಲಿ 166 ಸೂಚನೆಗಳನ್ನು ಅಂಗೀಕರಿಸಿದ್ದು, 108 ಸೂಚನೆಗಳ ಉತ್ತರಗಳನ್ನು ಸ್ವೀಕರಿಸಲಾಗಿದೆ.
- ಗಮನ ಸೆಳೆಯುವ 361 ಸೂಚನೆಗಳ ಪೈಕಿ 58 ಸೂಚನೆಗಳನ್ನು ಚರ್ಚಿಸಲಾಗಿದೆ. 40 ಸೂಚನೆಗಳ ಉತ್ತರಗಳನ್ನು ಮಂಡಿಸಲಾಗಿದೆ.
- ಶೂನ್ಯ ವೇಳೆಯಲ್ಲಿ ಒಟ್ಟು 21 ಸೂಚನೆಗಳನ್ನು ಚರ್ಚಿಸಲಾಗಿದೆ.
- 01 ಅರ್ಜಿಯನ್ನು ಸದನಕ್ಕೆ ಒಪ್ಪಿಸಲಾಗಿದೆ.
- 2021–22ನೇ ಸಾಲಿನ ವಿಧಾನಮಂಡಲ/ವಿಧಾನ ಸಭೆಯ ವಿವಿಧ ಸ್ಥಾಯಿ ಸಮಿತಿಗಳಿಗೆ ಸದಸ್ಯರನ್ನು ನಾಮನಿರ್ದೇಶನ ಮಾಡಲು ಮಾನ್ಯ ಸಭಾಧ್ಯಕ್ಷರಿಗೆ ಅಧಿಕಾರ ನೀಡಲಾಗಿರುತ್ತದೆ.

**ಈ ಅವಧಿಯಲ್ಲಿ ಸದನವು ಶೇಕಡ 90 ಕ್ಕಿಂತ ಹೆಚ್ಚಿನ ಕಾರ್ಯಕಲಾಪಗಳನ್ನು ಪೂರ್ಣಗೊಳಿಸಿರುತ್ತದೆ ಎಂಬುದನ್ನು ತಿಳಿಸಲು ಹರ್ಷವಾಗುತ್ತದೆ.**

ಸದನ ನಡೆಸಲು ಸಹಕರಿಸಿದ ಸಭಾ ನಾಯಕರಾದ ಮಾನ್ಯ ಮುಖ್ಯಮಂತ್ರಿಯವರಿಗೆ, ಮಾನ್ಯ ವಿರೋಧ ಪಕ್ಷದ ನಾಯಕರಿಗೆ, ಸಚಿವ ಸಂಪುಟದ ಸದಸ್ಯರಿಗೆ, ಉಪ ಸಭಾಧ್ಯಕ್ಷರಿಗೆ, ಸರ್ಕಾರಿ ಹಾಗೂ ವಿರೋಧ ಪಕ್ಷದ ಮುಖ್ಯ ಸಚೇತಕರಿಗೆ, ಎಲ್ಲಾ ಸದಸ್ಯರುಗಳಿಗೆ, ಮಾಧ್ಯಮ ಪ್ರತಿನಿಧಿಗಳಿಗೆ, ಇಲಾಖಾ ಮುಖ್ಯಸ್ಥರು, ಅಧಿಕಾರಿ–ಸಿಬ್ಬಂದಿಯವರಿಗೆ, ವಿಧಾನಸಭೆ ಸಚಿವಾಲಯದ ಅಧಿಕಾರಿ ಹಾಗೂ ಸಿಬ್ಬಂದಿಯವರಿಗೆ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ. ನಾಡಿನ ಜನತೆಯು ಕೊರೋನಾ ಕುರಿತು ಮುಂಜಾಗ್ರತೆ ವಹಿಸುವಂತೆ ಕೋರುತ್ತೇನೆ.

**ಈಗ ರಾಷ್ಟ್ರಗೀತೆಯೊಂದಿಗೆ ಸದನವನ್ನು ಅನಿರ್ದಿಷ್ಟ ಅವಧಿಗೆ ಮುಂದೂಡುತ್ತಿದ್ದೇನೆ.**

*****

## 139. ಕರ್ನಾಟಕ ವಿಧಾನಸಭೆ

## 15ನೇ ವಿಧಾನಸಭೆ

### ದಿನಾಂಕ:13.09.2021 ರಿಂದ 24.09.2021 ರವರೆಗೆ ನಡೆದ ಹತ್ತನೇ ಅಧಿವೇಶನದಲ್ಲಿ ಮಂಡಿಸಲಾದ/ಅಂಗೀಕರಿಸಲಾದ ವಿಧೇಯಕಗಳ ಪಟ್ಟಿ

| ಕ್ರ.ಸಂ. Sl.No | ವಿಧೇಯಕಗಳ ಹೆಸರು Name of the Bill | ವಿಧೇಯಕಗಳು | | | ಷರಾ Remarks |
|---|---|---|---|---|---|
| | | ವಿಧಾನಸಭೆ Legislative Assembly | | ವಿಧಾನ ಪರಿಷತ್ತು Legislative Council | |
| | | ಮಂಡಿಸಿದ ದಿನಾಂಕ Date of Introduction | ಅಂಗೀಕರಿಸಿದ ದಿನಾಂಕ Date of Passing | ಅಂಗೀಕರಿಸಿದ ದಿನಾಂಕ Date of Passing | |
| 1 | 2 | 3 | 4 | 6 | 7 |
| 1 | ಬೆಂಗಳೂರು ನೀರು ಸರಬರಾಜು ಮತ್ತು ಗ್ರಾಮಸಾರ ಚರಂಡಿ ವ್ಯವಸ್ಥೆ (ತಿದ್ದುಪಡಿ) ವಿಧೇಯಕ, 2021 (2021ರ ವಿ.ಸ.ವಿ. ಸಂಖ್ಯೆ:23)<br>The Bangalore Water Supply and Sewerage (Amendment) Bill, 2021 (L.A. Bill No. 23 of 2021) | **14.09.2021** | **16.09.2021** | **20.09.2021** | |
| 2 | ಬಂಧಿಗಳ ಗುರುತಿಸುವಿಕೆ (ಕರ್ನಾಟಕ ತಿದ್ದುಪಡಿ) ವಿಧೇಯಕ, 2021 (2021ರ ವಿ.ಸ.ವಿ. ಸಂಖ್ಯೆ:25)<br>Identification of Prisoners (Karnataka Amendment) Bill, 2021 (L.A. Bill No. 25 of 2021) | **14.09.2021** | **17.09.2021** | **20.09.2021** | |
| 3 | ದಂಡ ಪ್ರಕ್ರಿಯಾ ಸಂಹಿತೆ (ಕರ್ನಾಟಕ ತಿದ್ದುಪಡಿ) ವಿಧೇಯಕ, 2021 (2021ರ ವಿ.ಸ.ವಿ. ಸಂಖ್ಯೆ:26)<br>The Code of Criminal Procedure (Karnataka Amendment) Bill, 2021 (L.A. Bill No. 26 of 2021) | **14.09.2021** | **17.09.2021** | **20.09.2021** | |
| 4 | ಕರ್ನಾಟಕ ಬಂಧೀಖಾನೆ ಅಭಿವೃದ್ಧಿ ಮಂಡಳಿ ವಿಧೇಯಕ, 2021 (2021ರ ವಿ.ಸ.ವಿ. ಸಂಖ್ಯೆ:27)<br>The Karnataka Prision Development Board Bill, | **14.09.2021** | **17.09.2021** | **20.09.2021** | |

| ಕ್ರ.ಸಂ.<br>Sl.No | ವಿಧೇಯಕಗಳ ಹೆಸರು<br>Name of the Bill | ವಿಧೇಯಕಗಳು | | | ಷರಾ<br>Remarks |
|---|---|---|---|---|---|
| | | ವಿಧಾನಸಭೆ<br>Legislative Assembly | | ವಿಧಾನ ಪರಿಷತ್ತು<br>Legislative Council | |
| | | ಮಂಡಿಸಿದ ದಿನಾಂಕ<br>Date of Introduction | ಅಂಗೀಕರಿಸಿದ ದಿನಾಂಕ<br>Date of Passing | ಅಂಗೀಕರಿಸಿದ ದಿನಾಂಕ<br>Date of Passing | |
| 1 | 2 | 3 | 4 | 6 | 7 |
| | 2021 (L.A. Bill No. 27 of 2021) | | | | |
| 5 | ಕರ್ನಾಟಕ ಕೃಷಿ ಸಂಬಂಧಿ ಕೀಟಗಳು ಮತ್ತು ರೋಗಗಳ (ತಿದ್ದುಪಡಿ) ವಿಧೇಯಕ, 2021 (2021ರ ವಿ.ಸ.ವಿ. ಸಂಖ್ಯೆ:28)<br>The Karnataka Agricultural Pests and Diseases (Amendment) Bill, 2021 (L.A. Bill No. 28 of 2021) | **14.09.2021** | **16.09.2021** | **20.09.2021** | |
| 6 | ಕರ್ನಾಟಕ ಸ್ಟಾಂಪು (ತಿದ್ದುಪಡಿ) ವಿಧೇಯಕ, 2021 (2021ರ ವಿ.ಸ.ವಿ. ಸಂಖ್ಯೆ:29)<br>The Karnataka Stamp (Amendment) Bill, 2021 (L.A. Bill No. 29 of 2021) | **14.09.2021** | **20.09.2021** | **22.09.2021** | |
| 7 | ಕರ್ನಾಟಕ ಖಾದಿ ಮತ್ತು ಗ್ರಾಮೋದ್ಯೋಗಗಳ (ತಿದ್ದುಪಡಿ) ವಿಧೇಯಕ, 2021 (2021ರ ವಿ.ಸ.ವಿ. ಸಂಖ್ಯೆ:30)<br>The Karnataka Khadi and village Industries (Amendment) Bill, 2021 (L.A. Bill No. 30 of 2021) | **14.09.2021** | **22.09.2021** | **23.09.2021** | |
| 8 | ಕರ್ನಾಟಕ ಪೌರಸಭೆಗಳು ಮತ್ತು ಕೆಲವು ಇತರ ಕಾನೂನು (ಎರಡನೇ ತಿದ್ದುಪಡಿ) ವಿಧೇಯಕ, 2021 (2021ರ ವಿ.ಸ.ವಿ. ಸಂಖ್ಯೆ:31)<br>The Karnataka Muncipalities and Certain Other Law (Second Amendment) Bill, 2021 (L.A. Bill No. 31 of 2021) | **14.09.2021** | **22.09.2021** | **23.09.2021** | |

| ಕ್ರ.ಸಂ.<br>Sl.No | ವಿಧೇಯಕಗಳ ಹೆಸರು<br>Name of the Bill | ವಿಧೇಯಕಗಳು | | | ಷರಾ<br>Remarks |
|---|---|---|---|---|---|
| | | ವಿಧಾನಸಭೆ<br>Legislative Assembly | | ವಿಧಾನ ಪರಿಷತ್ತು<br>Legislative Council | |
| | | ಮಂಡಿಸಿದ ದಿನಾಂಕ<br>Date of Introduction | ಅಂಗೀಕರಿಸಿದ ದಿನಾಂಕ<br>Date of Passing | ಅಂಗೀಕರಿಸಿದ ದಿನಾಂಕ<br>Date of Passing | |
| 1 | 2 | 3 | 4 | 6 | 7 |
| 9 | ಕರ್ನಾಟಕ ಸ್ಥಳೀಯ ನಿಧಿ ಪ್ರಾಧಿಕಾರಗಳ ಆರ್ಥಿಕ ಹೊಣೆಗಾರಿಕೆ (ತಿದ್ದುಪಡಿ) ವಿಧೇಯಕ, 2021 (2021ರ ವಿ.ಸ.ವಿ. ಸಂಖ್ಯೆ:32)<br>The Karnataka Local Fund Authorities Fiscal Responsibility ( Amendment) Bill, 2021 (L.A. Bill No. 32 of 2021) | **14.09.2021** | **20.09.2021** | **21.09.2021** | |
| 10 | ಕರ್ನಾಟಕ ಪಟ್ಟಣ ಮತ್ತು ಗ್ರಾಮಾಂತರ ಯೋಜನೆ (ತಿದ್ದುಪಡಿ) ವಿಧೇಯಕ, 2021 (2021ರ ವಿ.ಸ.ವಿ. ಸಂಖ್ಯೆ:33)<br>The Karnataka Town and Country Planning (Amendment) Bill, 2021 (L.A. Bill No. 33 of 2021) | **20.09.2021** | **21.09.2021** | **23.09.2021** | |
| 11 | ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳು (ಶಿಕ್ಷಕರ ವರ್ಗಾವಣೆ ನಿಯಂತ್ರಣ) (ತಿದ್ದುಪಡಿ) ವಿಧೇಯಕ, 2021 (2021ರ ವಿ.ಸ.ವಿ. ಸಂಖ್ಯೆ:34)<br>The Karnataka State Civil Services (Regulation of Transfer of Teachers) (Amendment) Bill, 2021 (L.A. Bill No. 34 of 2021) | **16.09.2021** | **22.09.2021** | **23.09.2021** | |
| 12 | ಕರ್ನಾಟಕ ಗ್ರಾಮ ಸ್ವರಾಜ್ ಮತ್ತು ಪಂಚಾಯತ್ ರಾಜ್ (ತಿದ್ದುಪಡಿ) ವಿಧೇಯಕ, 2021 (2021ರ ವಿ.ಸ.ವಿ. ಸಂಖ್ಯೆ:35)<br>The Karnataka Gram Swaraj and Panchayat Raj (Amendment) Bill, 2021 (L.A. Bill No. 35 of 2021) | **14.09.2021** | **16.09.2021** | **17.09.2021** | |

| ಕ್ರ.ಸಂ.<br>Sl.No | ವಿಧೇಯಕಗಳ ಹೆಸರು<br>Name of the Bill | ವಿಧೇಯಕಗಳು<br>ವಿಧಾನಸಭೆ<br>Legislative Assembly | | ವಿಧಾನ ಪರಿಷತ್ತು<br>Legislative Council | ಷರಾ<br>Remarks |
|---|---|---|---|---|---|
| | | ಮಂಡಿಸಿದ ದಿನಾಂಕ<br>Date of Introduction | ಅಂಗೀಕರಿಸಿದ ದಿನಾಂಕ<br>Date of Passing | ಅಂಗೀಕರಿಸಿದ ದಿನಾಂಕ<br>Date of Passing | |
| 1 | 2 | 3 | 4 | 6 | 7 |
| 13 | ಕರ್ನಾಟಕ ಸರಕು ಮತ್ತು ಸೇವೆಗಳ ತೆರಿಗೆ (ತಿದ್ದುಪಡಿ) ವಿಧೇಯಕ, 2021 (2021ರ ವಿ.ಸ.ವಿ. ಸಂಖ್ಯೆ:36)<br>The Karnataka Goods and Services Tax (Amendment) Bill, 2021 (L.A. Bill No. 36 of 2021) | 20.09.2021 | 21. 09.2021 | 23.09.2021 | |
| 14 | ಕರ್ನಾಟಕ ಪೊಲೀಸು (ತಿದ್ದುಪಡಿ) ವಿಧೇಯಕ, 2021 (2021ರ ವಿ.ಸ.ವಿ. ಸಂಖ್ಯೆ:37)<br>The Karnataka Police (Amendment) Bill, 2021 (L.A. Bill No. 37 of 2021) | 17.09.2021 | 21.09.2021 | 23.09.2021 | |
| 15 | ಕರ್ನಾಟಕ ಧನವಿನಿಯೋಗ (ಸಂಖ್ಯೆ:3) ವಿಧೇಯಕ, 2021 (2021ರ ವಿ.ಸ.ವಿ. ಸಂಖ್ಯೆ:38)<br>The Karnataka Appropriation (No:3) Bill, 2021 (L.A. Bill No -38of 2021) | 23.09.2021 | 23.09.2021 | 23.09.2021 | |
| 16 | ಕರ್ನಾಟಕ ಧಾರ್ಮಿಕ ಕಟ್ಟಡಗಳ (ಸಂರಕ್ಷಣೆ) ವಿಧೇಯಕ, 2021 (2021ರ ವಿ.ಸ.ವಿ. ಸಂಖ್ಯೆ:39)<br>The Karnataka Religious Structures (Protection) Bill, 2021 (L.A. Bill No -39 of 2021) | 20.09.2021 | 21.09.2021 | 24.09.2021 | |
| 17 | ಚಾಣಕ್ಯ ವಿಶ್ವವಿದ್ಯಾಲಯ ವಿಧೇಯಕ, 2021 (2021ರ ವಿ.ಸ.ವಿ. ಸಂಖ್ಯೆ:40)<br>The Chanakya University Bill, 2021 (L.A. Bill No -40 of 2021) | 20.09.2021 | 21.09.2021 | 22.09.2021 | |
| 18 | ಕರ್ನಾಟಕ ಸೌಹಾರ್ದ ಸಹಕಾರಿ (ತಿದ್ದುಪಡಿ) ವಿಧೇಯಕ, 2021 (2021ರ ವಿ.ಸ.ವಿ. ಸಂಖ್ಯೆ:21)<br>The Karnataka Souharda Sahakari (Amendment) Bill, | 23.03.2021 | 20.09.2021 | 22.09.2021 | ವಿಧಾನಸಭೆಯಲ್ಲಿ ದಿನಾಂಕ: 23.03.2021ರಂದು ಮಂಡನೆಯಾಗಿದ್ದ ಸದರಿ ವಿಧೇಯಕವನ್ನು |

| ಕ್ರ.ಸಂ. Sl.No | ವಿಧೇಯಕಗಳ ಹೆಸರು Name of the Bill | ವಿಧೇಯಕಗಳು ವಿಧಾನಸಭೆ Legislative Assembly | | ವಿಧಾನ ಪರಿಷತ್ತು Legislative Council | ಷರಾ Remarks |
|---|---|---|---|---|---|
| | | ಮಂಡಿಸಿದ ದಿನಾಂಕ Date of Introduction | ಅಂಗೀಕರಿಸಿದ ದಿನಾಂಕ Date of Passing | ಅಂಗೀಕರಿಸಿದ ದಿನಾಂಕ Date of Passing | |
| **1** | **2** | **3** | **4** | **6** | **7** |
| | 2021 (L.A. Bill No. 21 of 2021) | | | | ದಿನಾಂಕ: 20.09.20201 ರಂದು ವಿಧಾನಸಭೆಯಲ್ಲಿ ಮತ್ತು ದಿನಾಂಕ: 22.09.2021ರಂದು ವಿಧಾನ ಪರಿಷತ್ತಿನಲ್ಲಿ ಅಂಗೀಕರಿಸಲಾಗಿದೆ. |
| 19 | ಕರ್ನಾಟಕ ಸಹಕಾರ ಸಂಘಗಳ (ತಿದ್ದುಪಡಿ) ವಿಧೇಯಕ, 2021 (2021ರ ವಿ.ಸ.ವಿ. ಸಂಖ್ಯೆ:22)<br>The Karnataka Co-Operative Societies (Amendment) Bill, 2021 (L.A. Bill No. 22 of 2021) | **23.03.2021** | **20.09.2021** | **23.09.2021** | ವಿಧಾನಸಭೆಯಲ್ಲಿ ದಿನಾಂಕ: 23.03.2021 ರಂದು ಮಂಡನೆಯಾಗಿದ್ದ ಸದರಿ ವಿಧೇಯಕವನ್ನು ದಿನಾಂಕ: 20.09.20201 ರಂದು ವಿಧಾನಸಭೆಯಲ್ಲಿ ಮತ್ತು ದಿನಾಂಕ: 23.9.2021ರಂದು ವಿಧಾನ ಪರಿಷತ್ತಿನಲ್ಲಿ ಅಂಗೀಕರಿಸಲಾಗಿದೆ. |
| 20 | ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ (ತಿದ್ದುಪಡಿ) ವಿಧೇಯಕ, 2020 (2020ರ ವಿ.ಸ.ವಿ. ಸಂಖ್ಯೆ:61)<br>The Karnataka State Civil Services (Amendment) Bill, 2020 (L.A. Bill No. 61 of 2020) | **25.09.2020** | **25.09.2020** | **23.09.2021** | **ವಿಧಾನಸಭೆಯಲ್ಲಿ ದಿನಾಂಕ: 25.09.2020-ರಂದು ಅಂಗೀಕಾರಗೊಂಡಿದ್ದ ಸದರಿ ವಿಧೇಯಕವನ್ನು ದಿನಾಂಕ: 23.9.2021ರಂದು ವಿಧಾನ ಪರಿಷತ್ತಿನಲ್ಲಿ ಅಂಗೀಕರಿಸಲಾಗಿದೆ.** |

*******

## 140. ವಿಧಾನ ಪರಿಷತ್ತಿನ 144ನೇ ಅಧಿವೇಶನದ ಕಾರ್ಯಕಲಾಪಗಳ ಸಂಕ್ಷಿಪ್ತ ವರದಿ

**ಮಾನ್ಯ ಸಭಾಪತಿಯವರು:**

ವಿಧಾನ ಪರಿಷತ್ತಿನ 144ನೇ ಅಧಿವೇಶದಲ್ಲಿ ನಡೆದಿರುವ ಕಾರ್ಯಕಲಾಪಗಳ ವಿವರವನ್ನು ಸದನಕ್ಕೆ ತಿಳಿಸಲು ಇಚ್ಛಿಸುತ್ತೇನೆ. ಪ್ರಸ್ತುತ ಅಧಿವೇಶನವು ದಿನಾಂಕ:13.09.2021ರಿಂದ24.09.2021 ರವರೆಗೆ ಒಟ್ಟು 10 ದಿನಗಳು ಅಂದರೆ, 62 ಗಂಟೆ 30 ನಿಮಿಷಗಳ ಕಾಲ ನಡೆಸಲಾಗಿರುತ್ತದೆ.

ದಿನಾಂಕ:13.09.2021ರಂದು ಬೆಳಗ್ಗೆ 11.00 ಗಂಟೆಗೆ ಪ್ರಾರಂಭವಾಗಿ ಕಳೆದ ಅಧಿವೇಶನದಿಂದೀಚೆಗೆ ನಿಧನರಾದ ಗಣ್ಯರುಗಳಿಗೆ ಸದನವು ತನ್ನ ಸಂತಾಪವನ್ನು ವ್ಯಕ್ತಪಡಿಸಿತು.

ಕಳೆದ ಅಧಿವೇಶನದಲ್ಲಿ ವರದಿಯನ್ನು ಒಪ್ಪಿಸಿದ ನಂತರ ರಾಷ್ಟ್ರಪತಿಯವರಿಂದ ಹಾಗೂ ರಾಜ್ಯಪಾಲರಿಂದ ಒಪ್ಪಿಗೆ ಪಡೆದ ವಿಧೇಯಕಗಳ ಪಟ್ಟಿಯನ್ನು ಕಾರ್ಯದರ್ಶಿಯವರು ಮಂಡಿಸಿದರು.

ಭಾರತ ಲೆಕ್ಕನಿಯಂತ್ರಕರು ಮತ್ತು ಮಹಾಲೆಕ್ಕಪರಿಶೋಧಕರು ರಾಜ್ಯ ಸರ್ಕಾರದ ಹಣಕಾಸಿನ ವ್ಯವಹಾರಗಳ ಮೇಲೆನೀಡಿರುವ 2021 ವರ್ಷದ ವರದಿ ಸಂಖ್ಯೆ–1, ಬೆಂಗಳೂರು ನಗರ ಪ್ರದೇಶದಲ್ಲಿ ಮಳೆ ನೀರು ನಿರ್ವಹಣೆಯ ಮೇಲಿನ ಕಾರ್ಯನಿರ್ವಹಣಾ ಲೆಕ್ಕಪರಿಶೋಧನಾ ವರದಿ ಸಂಖ್ಯೆ–02 ಹಾಗೂ ಅನುಪಾಲನಾ ಲೆಕ್ಕಪರಿಶೋಧನಾ ವರದಿ ಸಂಖ್ಯೆ–03ನ್ನು ಹಾಗೂ ಸಭೆಯ ಮುಂದಿಡಲಾಗುವ ಕಾಗದ ಪತ್ರಗಳ 01, 02 ಮತ್ತು 03ನೇ ಪಟ್ಟಿಗಳನ್ನು ಮಂಡಿಸಲಾಯಿತು.

ಸದಸ್ಯರುಗಳ ಖಾಸಗಿ ವಿಧೇಯಕ ಮತ್ತು ನಿರ್ಣಯಗಳ ಸಮಿತಿಯ ಮೊದಲನೇ ವರದಿ, ಮಹಿಳಾ ಮತ್ತು ಮಕ್ಕಳ ಕಲ್ಯಾಣ ಸಮಿತಿಯ 37ನೇ ವರದಿಯನ್ನು, ಅಧೀನ ಶಾಸನಾ ರಚನಾ ಸಮತಿಯ 51ನೇ ವರದಿಯನ್ನು, ಸ್ಥಳೀಯ ಸಂಸ್ಥೆಗಳ ಮತ್ತು ಪಂಚಾಯತ್‌ರಾಜ್ ಸಂಸ್ಥೆಗಳ ಸಮಿತಿಯ 34ನೇ ವರದಿಯನ್ನು ಹಾಗೂ ಅನುಸೂಚಿತ ಜಾತಿ ಮತ್ತು ಅನುಸೂಚಿತ ಪಂಗಡಗಳ ಕಲ್ಯಾಣ ಸಮಿತಿಯ 04ನೇ ವರದಿಗಳನ್ನು ಹಾಗೂ ಒಟ್ಟು 04 ಅರ್ಜಿಗಳನ್ನುಒಪ್ಪಿಸಲಾಯಿತು.

ಪ್ರಸ್ತುತ ಅಧಿವೇಶನದಲ್ಲಿ 1582 ಪ್ರಶ್ನೆಗಳನ್ನು ಸ್ವೀಕರಿಸಿದ್ದು, ಅದರಲ್ಲಿ 150 ಪ್ರಶ್ನೆಗಳನ್ನು ಚುಕ್ಕೆ ಗುರುತಿನ ಪ್ರಶ್ನೆಗಳನ್ನಾಗಿ ಅಂಗೀಕರಿಸಿದ್ದು, ಅವುಗಳ ಪೈಕಿ 147 ಪ್ರಶ್ನೆಗಳಿಗೆ ಸದನದಲ್ಲಿ ಉತ್ತರಿಸಲಾಯಿತು. ಲಿಖಿತ ಮೂಲಕ ಉತ್ತರಿಸುವ ಒಟ್ಟು 1432 ಪ್ರಶ್ನೆಗಳ ಪೈಕಿ 606 ಪ್ರಶ್ನೆಗಳಿಗೆ ಸದನದಲ್ಲಿ ಉತ್ತರವನ್ನು ಮಂಡಿಸಲಾಯಿತು.

ನಿಯಮ 72ರಡಿಯಲ್ಲಿ 194 ಸೂಚನೆಗಳನ್ನು ಸ್ವೀಕರಿಸಿದ್ದು, ಅವುಗಳ ಪೈಕಿ 10 ಸೂಚನೆಗಳಿಗೆ ಉತ್ತರಿಸಲಾಯಿತು ಹಾಗೂ 42 ಸೂಚನೆಗಳಿಗೆ ಉತ್ತರಗಳನ್ನು ಮಂಡಿಸಲಾಯಿತು.

ನಿಯಮ 330ರಡಿಯಲ್ಲಿ 130 ಸೂಚನೆಗಳನ್ನು ಸ್ವೀಕರಿಸಿದ್ದು, ಅವುಗಳ ಪೈಕಿ 12ಪ್ರಸ್ತಾವಗಳಿಗೆ ಉತ್ತರಿಸಲಾಯಿತು ಹಾಗೂ 27 ಪ್ರಸ್ತಾವಗಳಿಗೆ ಉತ್ತರಗಳನ್ನು ಮಂಡಿಸಲಾಯಿತು.

ಶೂನ್ಯ ವೇಳೆಯ ಒಟ್ಟು 78 + ಪ್ರಸ್ತಾವಗಳ ಪೈಕಿ 16 ಪ್ರಸ್ತಾವಕ್ಕೆ ಸದನದಲ್ಲಿ ಉತ್ತರಿಸಲಾಗಿದ್ದು, 26 ಪ್ರಸ್ತಾವಗಳಿಗೆ ಉತ್ತರಗಳನ್ನು ಸದನದಲ್ಲಿ ಮಂಡಿಸಲಾಯಿತು.

ನಿಯಮ 59ರ ಅಡಿಯಲ್ಲಿ 06 ಸೂಚನೆಗಳನ್ನು ಸ್ವೀಕರಿಸಲಾಗಿದ್ದು, ಒಂದು ಸೂಚನೆಯನ್ನು ನಿಯಮ 68ಕ್ಕೆ ಪರಿವರ್ತಿಸಿ ಚರ್ಚಿಸಿ ಉತ್ತರಿಸಲಾಗಿರುತ್ತದೆ.

ನಿಯಮ 68ರ ಅಡಿಯಲ್ಲಿ 05 ಸೂಚನೆಗಳನ್ನು ಸ್ವೀಕರಿಸಲಾಗಿದ್ದು, ಒಂದು ಸೂಚನೆಯನ್ನು ಚರ್ಚಿಸಿ ಉತ್ತರಿಸಲಾಯಿತು

ನಿಯಮ 58ರ ಅಡಿಯಲ್ಲಿ 07 ಸೂಚನೆಗಳನ್ನು ಸ್ವೀಕರಿಸಲಾಗಿದ್ದು, 07 ಸೂಚನೆಗಳಿಗೆ ಉತ್ತರಗಳನ್ನು ಮಂಡಿಸಲಾಯಿತು.

ವಿಧಾನ ಸಭೆಯಿಂದ ಅಂಗೀಕೃತ ರೂಪದಲ್ಲಿರುವ 20 ವಿಧೇಯಕಗಳಿಗೆ ವಿಧಾನ ಪರಿಷತ್ತು ತನ್ನ ಸಹಮತಿಯನ್ನು ನೀಡಿರುತ್ತದೆ.

ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಅಧಿನಿಯಮ (ಮೊದಲನೇ ತಿದ್ದುಪಡಿ) ವಿಧೇಯಕ, 2020ಕ್ಕೆ ಸಂಬಂಧಿಸಿದ ಖಾಸಗಿ ವಿಧೇಯಕವನ್ನು ಮಂಡಿಸಲಾಯಿತು.

ರಾಜ್ಯದಲ್ಲಿರುವ ಕ್ಲಬ್‌ಗಳ ಕಾರ್ಯವೈಖರಿ ಪರಿಶೀಲಿಸಲು ರಚಿಸಲಾಗಿರುವ ವಿಶೇಷ ಸದನ ಸಮಿತಿ ಹಾಗೂ ಗ್ರಾಮೀಣಾಭಿವೃದ್ಧಿ ಇಲಾಖೆಯಲ್ಲಿ ಕುಡಿಯುವ ನೀರು ಹಾಗೂ ನೈರ್ಮಲ್ಯ ಯೋಜನೆಯಡಿ ಬಿಡುಗಡೆಯಾದ ಹಣ ಬಳಕೆಯಾಗದಿರುವ ಬಗ್ಗೆ ಪರಿಶೀಲಿಸಲು ರಚಿಸಲಾಗಿರುವ ವಿಶೇಷ ಸದನ ಸಮಿತಿಗಳ ಕಾಲಾವಧಿಯನ್ನು ವಿಸ್ತರಿಸುವ ಪ್ರಸ್ತಾವವನ್ನು ಮಂಡಿಸಿ ಅಂಗೀಕರಿಸಲಾಯಿತು.

2021–2022ನೇ ಸಾಲಿನ ಪೂರಕ ಅಂದಾಜುಗಳ ಮೊದಲನೇ ಕಂತನ್ನು ಮಂಡಿಸಲಾಯಿತು.

**ಮಾನ್ಯ ಸಭಾನಾಯಕರು ಹಾಗೂ ವಿರೋಧ ಪಕ್ಷದ ನಾಯಕರು ಮಾತನಾಡಿದ ನಂತರ:–**

ಮಾನ್ಯ ಮುಖ್ಯಮಂತ್ರಿಗಳಿಗೆ, ಸಭಾನಾಯಕರಿಗೆ, ವಿರೋಧ ಪಕ್ಷದ ನಾಯಕರಿಗೆ, ಎಲ್ಲಾ ಮಂತ್ರಿ ವರ್ಗದವರಿಗೆ, ಸರ್ಕಾರದ ಮುಖ್ಯ ಸಚೇತಕರಿಗೆ, ವಿರೋಧ ಪಕ್ಷದ ಮುಖ್ಯಸಚೇತಕರಿಗೆ, ಪತ್ರಿಕಾ ಹಾಗೂ ಮಾಧ್ಯಮ ವರದಿಗಾರರಿಗೆ, ವಿಧಾನ ಪರಿಷತ್ತಿನಸಚಿವಾಲಯದಅಧಿಕಾರಿ/ನೌಕರವರ್ಗದವರಿಗೆ ಮತ್ತು ಸರ್ಕಾರದಎಲ್ಲಾಅಧಿಕಾರಿ/ನೌಕರ ವೃಂದದವರಿಗೆ ಸದನದ ಕಾರ್ಯಕಲಾಪಗಳನ್ನು ಸುಗಮವಾಗಿ ನಡೆಸಲು ಸಹಕರಿಸಿದ್ದಕ್ಕೆ ತುಂಬು ಹೃದಯದ ಧನ್ಯವಾದಗಳನ್ನು ಸಲ್ಲಿಸುತ್ತಾ, **ಸದನವನ್ನು ಅನಿರ್ದಿಷ್ಟಕಾಲದವರೆಗೆ ಮುಂದೂಡುತ್ತಿದ್ದೇನೆ.**

* * * * *

# 141. ಕರ್ನಾಟಕ ವಿಧಾನ ಪರಿಷತ್ತು

## ನೂರನಲವತ್ತ ನಾಲ್ಕನೆಯ ಅಧಿವೇಶನ

## (ದಿನಾಂಕ: 13.09.2021ರಿಂದ24.09.2021ರವರೆಗೆ)

## ವಿಧಾನ ಸಭೆಯಲ್ಲಿ ಅಂಗೀಕೃತಗೊಂಡು ವಿಧಾನ ಪರಿಷತ್ತಿನ ಸಹಮತಿ ಪಡೆದಿರುವ ವಿಧೇಯಕಗಳ ವಿವರ

| ಕ್ರ ಸಂ | ವಿಧೇಯಕದ ಹೆಸರು | ಸಂಖ್ಯೆ | ವಿ ಸ ಅಂಗೀಕರಿಸಿರುವ ದಿನಾಂಕ | ವಿ ಪ ಅಂಗೀಕರಿಸಿರುವ ದಿನಾಂಕ |
|---|---|---|---|---|
| 1 | ಕರ್ನಾಟಕ ಸೌಹಾರ್ದ ಸಹಕಾರಿ (ತಿದ್ದುಪಡಿ) ವಿಧೇಯಕ, 2021<br>The Karnataka SouhardaSahakari (Amendment) Bill, 2021 | 21 | 20.09.2021 | 22.09.2021 |
| 2. | ಕರ್ನಾಟಕ ಸಹಕಾರ ಸಂಘಗಳ (ತಿದ್ದುಪಡಿ) ವಿಧೇಯಕ, 2021<br>The Karnataka Co-Operative Societies (Amendment) Bill, 2021 | 22 | 20.09.2021 | 23.09.2021 |
| 3. | ಬೆಂಗಳೂರು ನೀರು ಸರಬರಾಜು ಮತ್ತು ಗ್ರಾಮಸಾರ ಚರಂಡಿ ವ್ಯವಸ್ಥೆ (ತಿದ್ದುಪಡಿ) ವಿಧೇಯಕ, 2021<br>The Bengaluru Water Supply and Sewerage (Amendment) Bill, 2021 | 23 | 16.09.2021 | 20.09.2021 |
| 4. | ಬಂದಿಗಳ ಗುರುತಿಸುವಿಕೆ (ಕರ್ನಾಟಕ ತಿದ್ದುಪಡಿ) ವಿಧೇಯಕ, 2021<br>Identification of Prisioners (Karnataka Amendment) Bill, 2021 | 25 | 17.09.2021 | 20.09.2021 |
| 5. | ದಂಡ ಪ್ರಕ್ರಿಯಾ ಸಂಹಿತೆ (ಕರ್ನಾಟಕ ತಿದ್ದುಪಡಿ) ವಿಧೇಯಕ, 2021<br>The Code of Criminal Procedure (Karnataka Amendment) Bill, 2021 | 26 | 17.09.2021 | 20.09.2021 |
| 6 | ಕರ್ನಾಟಕ ಬಂಧೀಖಾನೆ ಅಭಿವೃದ್ಧಿ ಮಂಡಳಿ ವಿಧೇಯಕ, 2021<br>The Karnataka Prison Development Board Bill, 2021 | 27 | 17.09.2021 | 20.09.2021 |
| 7 | ಕರ್ನಾಟಕ ಕೃಷಿ ಸಂಬಂಧಿ ಕೀಟಗಳು ಮತ್ತು ರೋಗಗಳ (ತಿದ್ದುಪಡಿ) ವಿಧೇಯಕ, 2021<br>The Karnataka Agricultural Pests and Diseases (Amendment) Bill, 2021 | 28 | 16.09.2021 | 20.09.2021 |
| 8 | ಕರ್ನಾಟಕ ಸ್ಟಾಂಪು (ತಿದ್ದುಪಡಿ) ವಿಧೇಯಕ, 2021<br>The Karnataka Stamp (Amendment) Bill, 2021 | 29 | 20.09.2021 | 22.09.2021 |
| 9 | ಕರ್ನಾಟಕ ಖಾದಿ ಮತ್ತು ಗ್ರಾಮೋದ್ಯೋಗಗಳ (ತಿದ್ದುಪಡಿ) ವಿಧೇಯಕ, 2021<br>The Karnataka Khadi and Village Industries (Amendment) Bill, 2021 | 30 | 22.09.2021 | 23.09.2021 |

| ಕ್ರ ಸಂ | ವಿಧೇಯಕದ ಹೆಸರು | ಸಂಖ್ಯೆ | ವಿ ಸ ಅಂಗೀಕರಿಸಿರುವ ದಿನಾಂಕ | ವಿ ಪ ಅಂಗೀಕರಿಸಿರುವ ದಿನಾಂಕ |
|---|---|---|---|---|
| 10 | ಕರ್ನಾಟಕ ಪೌರಸಭೆಗಳು ಮತ್ತು ಕೆಲವು ಇತರ ಕಾನೂನು (ಎರಡನೇತಿದ್ದುಪಡಿ) ವಿಧೇಯಕ, 2021<br>The Karnataka Municipalities and Certain Other law (Second Amendment) Bill, 2021 | 31 | 22.09.2021 | 23.09.2021 |
| 11 | ಕರ್ನಾಟಕ ಸ್ಥಳೀಯ ನಿಧಿ ಪ್ರಾಧಿಕಾರಗಳ ಆರ್ಥಿಕ ಹೊಣೆಗಾರಿಕೆ (ತಿದ್ದುಪಡಿ) ವಿಧೇಯಕ, 2021<br>The Karnataka Local Fund Authorities Fiscal Responsibility (Amendment) Bill, 2021 | 32 | 20.09.2021 | 21.09.2021 |
| 12 | ಕರ್ನಾಟಕ ಪಟ್ಟಣ ಮತ್ತು ಗ್ರಾಮಾಂತರ ಯೋಜನೆ (ತಿದ್ದುಪಡಿ) ವಿಧೇಯಕ, 2021<br>The Karnataka Town and Country Planning (Amendment) Bill, 2021 | 33 | 21.09.2021 | 23.09.2021 |
| 13 | ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳು (ಶಿಕ್ಷಕರ ವರ್ಗಾವಣೆ ನಿಯಂತ್ರಣ) (ತಿದ್ದುಪಡಿ) ವಿಧೇಯಕ, 2021<br>The Karnataka State Civil Services (Regulation of Transfer of Teachers)(Amendment) Bill, 2021 | 34 | 22.09.2021 | 23.09.2021 |
| 14 | ಕರ್ನಾಟಕ ಗ್ರಾಮ ಸ್ವರಾಜ್ ಮತ್ತು ಪಂಚಾಯತ್‌ರಾಜ್ (ತಿದ್ದುಪಡಿ) ವಿಧೇಯಕ, 2021<br>The Karnataka Gram Swaraj and Panchayat Raj (Amendment) Bill, 2021 | 35 | 16.09.2021 | 17.09.2021 |
| 15 | ಕರ್ನಾಟಕ ಸರಕು ಮತ್ತು ಸೇವೆಗಳ ತೆರಿಗೆ (ತಿದ್ದುಪಡಿ) ವಿಧೇಯಕ, 2021<br>The Karnataka Goods and Services Tax (Amendment) Bill, 2021 | 36 | 21.09.2021 | 23.09.2021 |
| 16 | ಕರ್ನಾಟಕ ಪೊಲೀಸು (ತಿದ್ದುಪಡಿ) ವಿಧೇಯಕ, 2021<br>The Karnataka Police (Amendment) Bill, 2021 | 37 | 21.09.2021 | 23.09.2021 |
| 17 | ಕರ್ನಾಟಕ ಧನವಿನಿಯೋಗ (ಸಂಖ್ಯೆ:3) ವಿಧೇಯಕ, 2021<br>The Karnataka Appropriation (No.3) Bill, 2021 | 38 | 23.09.2021 | 23.09.2021 |
| 18 | ಕರ್ನಾಟಕ ಧಾರ್ಮಿಕ ಕಟ್ಟಡಗಳ (ಸಂರಕ್ಷಣೆ) ವಿಧೇಯಕ, 2021<br>The Karnataka Religious Structures (Protection) Bill, 2021 | 39 | 21.09.2021 | 24.09.2021 |
| 19 | ಚಾಣಕ್ಯ ವಿಶ್ವವಿದ್ಯಾಲಯ ವಿಧೇಯಕ, 2021<br>The Chanakya University Bill, 2021 | 40 | 21.09.2021 | 22.09.2021 |
| 20 | **ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳ (ತಿದ್ದುಪಡಿ) ವಿಧೇಯಕ, 2020**<br>**The Karnataka State Civil Services (Amendment) Bill, 2020** | 61 | **25.09.2020** | 23.09.2021 |

**ದಿನಾಂಕ: 06.07.2021 ರಂದು ಸನ್ಮಾನ್ಯ ಸಭಾಧ್ಯಕ್ಷರು ಭಾರತದ ಮಾಜಿ ಉಪ ಪ್ರಧಾನಿ ಡಾ: ಬಾಬು ಜಗಜೀವನರಾಂ ರವರ 35ನೇ ಪುಣ್ಯ ಸ್ಮರಣೆಯ ನಿಮಿತ್ತ ಅವರ ಪ್ರತಿಮೆಗೆ ಮಾಲಾರ್ಪಣೆ ಮಾಡಿ ಗೌರವ ಸಲ್ಲಿಸುತ್ತಿರುವ ಸಂದರ್ಭ:**



**ದಿನಾಂಕ: 06.07.2021ರಂದು ಕರ್ನಾಟಕ ಸರ್ಕಾರ ಸಚಿವಾಲಯದ ಗ್ರಂಥಾಲಯ ಸಮಿತಿ ಸಭೆಯು, ಕರ್ನಾಟಕ ವಿಧಾನ ಪರಿಷತ್ತಿನ ಸಭಾಪತಿಗಳು ಹಾಗೂ ಗ್ರಂಥಾಲಯ ಸಮಿತಿಯ ಅಧ್ಯಕ್ಷರು ಆದ ಶ್ರೀ ಬಸವರಾಜ ಹೊರಟ್ಟಿಯವರ ಅಧ್ಯಕ್ಷತೆಯಲ್ಲಿ ನಡೆಯಿತು. ಸದರಿ ಸಮಿತಿ ಸಭೆಯಲ್ಲಿ ಸದಸ್ಯರುಗಳಾದ ಶ್ರೀ ಹೆಚ್.ವಿಶ್ವನಾಥ್ ಮತ್ತು ಗೋವಿಂದರಾಜು, ಶ್ರೀ ಯು.ಟಿ ಖಾದರ್ ಹಾಗೂ ವಿಧಾನಪರಿಷತ್ತು ಮತ್ತು ವಿಧಾನಸಭೆಯ ಕಾರ್ಯದರ್ಶಿಗಳು, ಗ್ರಂಥಾಲಯ ಅಧಿಕಾರಿ ಮತ್ತು ಸಿಬ್ಬಂದಿ ವರ್ಗದವರು ಭಾಗವಹಿಸಿದ್ದರು.**



**ದಿನಾಂಕ: 07.07.2021 ರಂದು ಗೌರವಾನ್ವಿತ ರಾಜ್ಯಪಾಲರಾದ ಶ್ರೀ ವಜುಭಾಯಿ ವಾಲಾರವರನ್ನು ರಾಜಭವನದಲ್ಲಿ ಸನ್ಮಾನ್ಯ ಸಭಾಧ್ಯಕ್ಷರು ಭೇಟಿ ಮಾಡಿದ ಸಂದರ್ಭ:**



**ದಿನಾಂಕ: 08.07.2021 ರಂದು ಸನ್ಮಾನ್ಯ ಸಭಾಧ್ಯಕ್ಷರು ಎಲ್ಲೆಡೆ ಬಾಧಿಸುತ್ತಿರುವ ಕೊರೋನಾ ರೋಗದ ಹಿನ್ನೆಲೆಯಲ್ಲಿ ಸಾಕಷ್ಟು ಮುನ್ನೆಚ್ಚರಿಕೆಯನ್ನು ಕೈಗೊಂಡು ಲಾಕಡೌನ್ ಸಂದರ್ಭದಲ್ಲಿ ಬಾಕಿ ಉಳಿದ ಕೆಲಸ ಕಾರ್ಯಗಳನ್ನು ತ್ವರಿತವಾಗಿ ಹಾಗೂ ಸಮರ್ಪಕವಾಗಿ ನಿರ್ವಹಿಸುವಂತೆ ವಿಧಾನ ಸಭೆಯ ಎಲ್ಲಾ ಅಧಿಕಾರಿಗಳೊಂದಿಗೆ ಚರ್ಚಿಸಿ ನಿರ್ದೇಶನ ನೀಡುತ್ತಿರುವ ಸಂದರ್ಭ:**





ದಿನಾಂಕ: 08.07.2021 ರಂದು ಕರ್ನಾಟಕ ರಾಜ್ಯದ ರಾಜ್ಯಪಾಲರಾಗಿ ಸೇವೆ ಸಲ್ಲಿಸಿ ನಿರ್ಗಮಿಸುತ್ತಿರುವ ವಜೂಬಾಯಿ ವಾಲಾರವರನ್ನು ರಾಜಭವನದಲ್ಲಿ ಭೇಟಿ ಮಾಡಿ ವಿಧಾನ ಪರಿಷತ್ತಿನ ಸಭಾಪತಿ ಬಸವರಾಜ ಹೊರಟ್ಟಿಯವರು ನಿರ್ಗಮಿತ ರಾಜ್ಯಪಾಲರಿಗೆ ಶುಭ ಹಾರೈಸಿದ ಸಂದರ್ಭ.





ದಿನಾಂಕ: 11.07.2021 ರಂದು ಕರ್ನಾಟಕ ವಿಧಾನ ಪರಿಷತ್ತಿನ ಸಭಾಪತಿ ಮಾನ್ಯ ಶ್ರೀ ಬಸವರಾಜ ಹೊರಟ್ಟಿ ಅವರು ರೋಟರಿ ಕ್ಲಬ್ ಧಾರವಾಡ, ಇದರ 2021–2022 ನೇ ಸಾಲಿನ ಪದಾಧಿಕಾರಿಗಳ ಪದಗ್ರಹಣ ಕಾರ್ಯಕ್ರಮವನ್ನು ಉದ್ಘಾಟಿಸಿದರು. ಇದೇ ಸಂದರ್ಭದಲ್ಲಿ ಮಾನ್ಯ ಸಭಾಪತಿಯವರನ್ನು ರೋಟರಿ ಕ್ಲಬ್ ಪದಾಧಿಕಾರಿಗಳು ಸನ್ಮಾನಿಸಿ ಅಭಿನಂದಿಸಿದರು. ಸಮಾರಂಭದಲ್ಲಿ ಎಲ್ಲಾ ಪದಾಧಿಕಾರಿಗಳು ಉಪಸ್ಥಿತರಿದರು.




ದಿನಾಂಕ: 12.07.2021 ರಂದು ಧಾರವಾಡದ ಪ್ರಾದೇಶಿಕ ವಿಜ್ಞಾನ ಕೇಂದ್ರದಲ್ಲಿ ವಿಶೇಷ ಅಭಿವೃದ್ಧಿ ಯೋಜನೆಯಡಿ, ಬಳ್ಳಾರಿ ಜಿಲ್ಲೆಯ ತಾಲ್ಲೂಕುಗಳ ಸರ್ಕಾರಿ ಪ್ರೌಢಶಾಲೆಗಳಿಗೆ ವಿಜ್ಞಾನ ಮತ್ತು ಗಣಿತ ಬೋಧನೆಯ ಪ್ರಾಯೋಗಿಕ ಕಿಟ್ ಹಾಗೂ ಕೈಪಿಡಿಯನ್ನು ಹಸ್ತಾಂತರಿಸುವ ಕಾರ್ಯಕ್ರಮಕ್ಕೆ ಕರ್ನಾಟಕ ಸರ್ಕಾರದ ಉಪ ಮುಖ್ಯಮಂತ್ರಿಗಳ ಮತ್ತು ಉನ್ನತ ಶಿಕ್ಷಣ ಸಚಿವರಾದ ಶ್ರೀ ಡಾ. ಅಶ್ವಥ್ ನಾರಾಯಣ್‌ರವರು ಹಾಗೂ ವಿಧಾನ ಪರಿಷತ್ ಸಭಾಪತಿಗಳಾದ ಸನ್ಮಾನ್ಯ ಶ್ರೀ ಬಸವರಾಜ ಹೊರಟ್ಟಿಯವರು ಹಸಿರು ನಿಶಾನೆ ತೋರಿಸುವ ಮೂಲಕ ಸಮಾರಂಭಕ್ಕೆ ಚಾಲನೆ ನೀಡಿದರು.



**ದಿನಾಂಕ: 12.07.2021** ರಂದು ಹುಬ್ಬಳ್ಳಿ ಗೋಕುಲ ಕೈಗಾರಿಕಾ ವಸಾಹತು ಪ್ರದೇಶದಲ್ಲಿ ಸ್ಮಾರ್ಟ್‌ಸಿಟಿ ಯೋಜನೆಯ ರಸ್ತೆ ನಿರ್ಮಾಣ ಕಾಮಗಾರಿಯನ್ನು ಕರ್ನಾಟಕ ವಿಧಾನ ಪರಿಷತ್ತಿನ ಸಭಾಪತಿಗಳಾದ ಶ್ರೀ ಬಸವರಾಜ ಹೊರಟ್ಟಿಯವರು ಉದ್ಘಾಟಿಸಿ, ಗುದ್ದಲಿ ಪೂಜೆಯ ಮುಖಾಂತರ ಲೋಕಾರ್ಪಣೆಗೊಳಿಸಿದರು.



**ದಿನಾಂಕ: 15.07.2021** ರಂದು ಕರ್ನಾಟಕ ವಿಧಾನ ಪರಿಷತ್ತಿನ ಸಭಾಪತಿಗಳು ಶ್ರೀ ಬಸವರಾಜ ಹೊರಟ್ಟಿಯವರು ಕಬ್ಬನ್ ಉದ್ಯಾನವನದಲ್ಲಿರುವ ಶತಮಾನೋತ್ಸವ ಸರ್ಕಾರಿ ನೌಕರರ ಭವನಕ್ಕೆ ಭೇಟಿ ನೀಡಿದರು. ಜೊತೆಯಲ್ಲಿ ಸಚಿವರುಗಳಾದ ಶ್ರೀ ಅಶ್ವತ್ ನಾರಾಯಣ್‌ರವರು ಹಾಗೂ ಕೆ.ಸಿ. ನಾರಾಯಣಗೌಡರವರು ಮತ್ತು ಕರ್ನಾಟಕ ಸರ್ಕಾರ ನೌಕರರ ಸಂಘದ ಅಧ್ಯಕ್ಷರಾದ ಶ್ರೀ ಷಡಕ್ಷರಿರವರು ಮತ್ತು ಹಲವಾರು ನೌಕರ ಸಿಬ್ಬಂದಿ ವರ್ಗದವರು ಉಪಸ್ಥಿತರಿದ್ದರು. ಸರ್ಕಾರಿ ನೌಕರರ ಸಂಘದ ವತಿಯಿಂದ ಶ್ರೀಯುತರನ್ನು ಅಭಿನಂದಿಸಲಾಯಿತು.



ದಿನಾಂಕ 16.07.2021ರಂದು ಕರ್ನಾಟಕ ವಿಧಾನ ಪರಿಷತ್ತಿನ ಸಭಾಪತಿಯವರ ಕಚೇರಿಯಲ್ಲಿ, ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರ ಅಧ್ಯಕ್ಷತೆಯಲ್ಲಿ, ಅಂಗವಿಕಲರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆಯ ಸಿಬ್ಬಂದಿಗಳನ್ನು ಹೆಚ್.ಆರ್.ಎಂ.ಎಸ್‌ಗೆ ಒಳಪಡಿಸುವ ಬಗ್ಗೆ ಮತ್ತು ಕ್ರೆಡಲ್ ಗುತ್ತಿಗೆ ನೌಕರರ ಖಾಯಂಗೊಳಿಸುವ ಸಂಬಂಧ ಏರ್ಪಡಿಸಿದ್ದ 2 ಇಲಾಖೆಗಳ ಸಭೆಯಲ್ಲಿ, ಸಮಸ್ಯೆಗಳ ತಾರ್ಕಿಕ ಅಂತ್ಯಕ್ಕೆ ಮಾನ್ಯರು ಇಲಾಖೆಯ ಅಧಿಕಾರಿಗಳೊಂದಿಗೆ ಚರ್ಚಿಸುತ್ತಿರುವುದು. ಸಭೆಯಲ್ಲಿ ಇಂಧನ ಇಲಾಖೆಯ ಹಾಗೂ ಅಂಗವಿಕಲರ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆಯ ಅಧಿಕಾರಿಗಳೊಂದಿಗೆ, ಮಾನ್ಯ ಸಭಾಪತಿಗಳ ಆಪ್ತ ಕಾರ್ಯದರ್ಶಿಗಳಾದ ಶ್ರೀ ಡಾ. ಜಿ. ವಿಶ್ವನಾಥ್‌ರವರು ಮತ್ತು ಸಭಾಪತಿಗಳ ವಿಶೇಷ ಕರ್ತವ್ಯಾಧಿಕಾರಿಗಳಾದ ಶ್ರೀ ಡಾ. ಮಹೇಶ್ ವಾಳ್ವೇಕರ್ ರವರು ಭಾಗವಹಿಸಿರುವುದು.





**ಹುಬ್ಬಳ್ಳಿ ನಗರದಲ್ಲಿ ಕರ್ನಾಟಕ ರಾಜ್ಯ ಮಾಧ್ಯಮಿಕ ಶಾಲಾ ನೌಕರರ ಸಂಘ, ರಾಜ್ಯ ಘಟಕ ಹುಬ್ಬಳ್ಳಿ ಇವರು ಕರ್ನಾಟಕದ ವಿಧಾನ ಪರಿಷತ್ತಿನ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರು, ಕರ್ನಾಟಕ ವಿಧಾನ ಪರಿಷತ್ತಿನ ಸದಸ್ಯರಾಗಿ ದಿನಾಂಕ: 18.07.2021ಕ್ಕೆ 41 ವಸಂತಗಳನ್ನು ಪೂರೈಸಿದ ಹಿನ್ನೆಲೆಯಲ್ಲಿ ಹಮ್ಮಿಕೊಂಡಿದ್ದ ಅಭಿನಂದನಾ ಸಮಾರಂಭದಲ್ಲಿ ರಾಜ್ಯ ಮಾಧ್ಯಮಿಕ ಶಾಲಾ ನೌಕರರ ಸಂಘದ ಪದಾಧಿಕಾರಿಗಳು ಮಾನ್ಯರನ್ನು ಅಭಿನಂದಿಸಿ ಗೌರವಿಸುತ್ತಿರುವುದು. ಕಾರ್ಯಕ್ರಮದಲ್ಲಿ ಅಪಾರ ಶಿಕ್ಷಕ ವೃಂದದವರು ಉಪಸ್ಥಿತರಿರುವುದು.**



ಕಾರ್ಗಿಲ್ ವಿಜಯೋತ್ಸವದ ಸ್ಮರಣಾರ್ಥ ದಿನಾಂಕ: 23.07.2021 ರಂದು ಮಾಜಿ ಸೈನಿಕರ ನಿಯೋಗವು ಕರ್ನಾಟಕ ವಿಧಾನ ಪರಿಷತ್ತಿನ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರನ್ನು ವಿಧಾನಸೌಧದ ಕಚೇರಿಯಲ್ಲಿ ಭೇಟಿ ಮಾಡಿ ರಾಷ್ಟ್ರಧ್ವಜ ಹಾಗೂ ರಾಷ್ಟ್ರಲಾಂಛನವುಳ್ಳ ಸ್ಮರಣಿಕೆಯನ್ನು ನೀಡಿ ಗೌರವಿಸಿತು. ಈ ಸಂದರ್ಭದಲ್ಲಿ ಕರ್ನಾಟಕ ವಿಧಾನ ಪರಿಷತ್ತಿನ ಕಾರ್ಯದರ್ಶಿ ಶ್ರೀಮತಿ ಕೆ.ಆರ್. ಮಹಾಲಕ್ಷ್ಮಿಯವರು ಉಪಸ್ಥಿತರಿದ್ದರು.




ಕಾರ್ಗಿಲ್ ವಿಜಯೋತ್ಸವದ ಸ್ಮರಣಾರ್ಥ ದಿನಾಂಕ: 23.07.2021 ರಂದು ವಿಧಾನಸೌಧದ ಸಭಾಂಗಣದಲ್ಲಿ ಆಯೋಜಿಸಿದ್ದ ಸಭೆಯಲ್ಲಿ, ಕರ್ನಾಟಕ ವಿಧಾನ ಪರಿಷತ್ತಿನ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರು ಪಾಲ್ಗೊಂಡಿದ್ದು, ಕಾರ್ಗಿಲ್ ಯುದ್ಧದಲ್ಲಿ ವೀರಮರಣ ಹೊಂದಿದ ಸೈನಿಕರಿಗೆ 'ಕಾರ್ಗಿಲ್ ವಿಜಯೋತ್ಸವ ದಿವಸ್' ಹೆಸರಿನಲ್ಲಿ ಸ್ಮರಿಸಿ ನಮಿಸಿದರು. ಈ ಕಾರ್ಯಕ್ರಮದಲ್ಲಿ ಕಾರ್ಗಿಲ್ ಯುದ್ಧದಲ್ಲಿ ಭಾಗಿಯಾಗಿದ್ದ ಕೆಲವು ಮಾಜಿ ಸೈನಿಕರುಗಳು ಹಾಗೂ ಇತರೆ ಮಾಜಿ ಸೈನಿಕರುಗಳು ಪಾಲ್ಗೊಂಡಿದ್ದರು.



ದಿನಾಂಕ: **26.07.2021** ರಂದು ಕರ್ನಾಟಕ ವಿಧಾನ ಪರಿಷತ್ತಿನ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರ ಅಧ್ಯಕ್ಷತೆಯಲ್ಲಿ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಇಲಾಖೆಗೆ ಸಂಬಂಧಿಸಿದ ಹಲವು ಸಮಸ್ಯೆಗಳ ಪರಿಹಾರೋಪಾಯಕ್ಕಾಗಿ ಸಭೆ ಆಯೋಜಿಸಲಾಗಿತ್ತು. ಈ ಸಭೆಯಲ್ಲಿ ವಿಧಾನ ಪರಿಷತ್ ಸದಸ್ಯರುಗಳಾದ ಶ್ರೀ ಆಯನೂರು ಮಂಜುನಾಥ್ ಮತ್ತು ಹನುಮಂತ ಆರ್. ನಿರಾಣಿಯವರು ಭಾಗಿಯಾಗಿ ಚರ್ಚಿಸಿದರು. ಇಲಾಖೆಯ ಆಯುಕ್ತರಾದ ಶ್ರೀ ಅನ್ಬುಕುಮಾರ್ ಮತ್ತು ಇಲಾಖಾಧಿಕಾರಿಗಳು ಉಪಸ್ಥಿತರಿದ್ದರು.



ನೂತನ ಮುಖ್ಯಮಂತ್ರಿಗಳಾಗಿ ಶ್ರೀ ಬಸವರಾಜ ಬೊಮ್ಮಾಯಿಯವರು ಪ್ರಥಮ ಬಾರಿಗೆ ದಿನಾಂಕ: **29.07.2021**ರಂದು ಹುಬ್ಬಳ್ಳಿ ನಗರಕ್ಕೆ ಆಗಮಿಸುವ ಪೂರ್ವದಲ್ಲಿ, ಕರ್ನಾಟಕ ವಿಧಾನ ಪರಿಷತ್ತಿನ ಸಭಾಪತಿಗಳಾದ ಶ್ರೀ ಬಸವರಾಜ ಹೊರಟ್ಟಿಯವರು, ಹುಬ್ಬಳ್ಳಿ ವಿಮಾನ ನಿಲ್ದಾಣದಲ್ಲಿ ನೂತನ ಮುಖ್ಯಮಂತ್ರಿಗಳನ್ನು ಭೇಟಿಯಾಗಿ ಅಭಿನಂದಿಸಿದರು. ಈ ಸಂದರ್ಭದಲ್ಲಿ ಶಾಸಕರಾದ ಅಮೃತ್ ದೇಸಾಯಿ ಹಾಗೂ ಹಲವು ಮುಖಂಡರುಗಳು ಉಪಸ್ಥಿತರಿದ್ದರು.



**ದಿನಾಂಕ: 30.07.2021ರಂದು ಗದಗ ಜಿಲ್ಲಾ ಸಮಸ್ತ ಶಿಕ್ಷಕ, ಶಿಕ್ಷಕೇತರ ಬಂಧುಗಳು ಹಾಗೂ ಶ್ರೀ ಬಸವರಾಜ ಹೊರಟ್ಟಿ ಅಭಿಮಾನಿಗಳ ಬಳಗ ಗದಗ ಇವರ ಸಂಯುಕ್ತಾಶ್ರಯದಲ್ಲಿ ಕರ್ನಾಟಕ ವಿಧಾನ ಪರಿಷತ್ತಿನ ಸಭಾಪತಿಗಳಾದ ಶ್ರೀ ಬಸವರಾಜ ಹೊರಟ್ಟಿಯವರು ಕರ್ನಾಟಕ ವಿಧಾನ ಪರಿಷತ್ ಪ್ರವೇಶಕ್ಕೆ 41ನೇ ವರ್ಷದ ಸಂಭ್ರಮದ ಅಭಿನಂದನಾ ಸಮಾರಂಭದಲ್ಲಿ ಭಾಗವಹಿಸಿರುವುದು.**



**ದಿನಾಂಕ: 31.07.2021ರಂದು ಜೆ.ಕೆ. ಶಿಕ್ಷಣ ಸಂಸ್ಥೆ, ಹುಬ್ಬಳ್ಳಿ ಇವರ ವತಿಯಿಂದ ಕರ್ನಾಟಕ ವಿಧಾನ ಪರಿಷತ್ತಿನ ಸಭಾಪತಿಗಳಾದ ಶ್ರೀ ಬಸವರಾಜ ಹೊರಟ್ಟಿಯವರಿಗೆ ಕರ್ನಾಟಕ ವಿಧಾನ ಪರಿಷತ್ ಪ್ರವೇಶಕ್ಕೆ 41ನೇ ವರ್ಷದ ಸಂಭ್ರಮದ ಅಭಿನಂದನಾ ಸಮಾರಂಭದಲ್ಲಿ, ಶಿಕ್ಷಣ ಸಂಸ್ಥೆಯ ಆಡಳಿತಮಂಡಳಿ ಮತ್ತು ಸಿಬ್ಬಂದಿ ವರ್ಗದವರು ಮಾನ್ಯರಿಗೆ ಪೂರ್ಣಕುಂಭ ಸ್ವಾಗತದೊಂದಿಗೆ ಬರಮಾಡಿಕೊಂಡು, ಸನ್ಮಾನಿಸಿ ಅಭಿನಂದಿಸಿದರು.**





ಕರ್ನಾಟಕ ರಾಜ್ಯ ಬಡ್ತಿ ಸರ್ಕಾರಿ ಶಿಕ್ಷಕರ ಸಂಘ, ಬೆಂಗಳೂರು ಧಾರವಾಡ ಘಟಕ, ಇವರು ಹುಬ್ಬಳ್ಳಿಯ ಲ್ಯಾಮಿಂಗ್ಟನ್ ಹೈಸ್ಕೂಲ್ ಆವರಣದಲ್ಲಿ ಹಮ್ಮಿಕೊಂಡಿದ್ದ, ಕರ್ನಾಟಕ ವಿಧಾನ ಪರಿಷತ್ತಿನ ಸಭಾಪತಿಗಳಾದ ಶ್ರೀ ಬಸವರಾಜ ಹೊರಟ್ಟಿಯವರು, ಕರ್ನಾಟಕ ವಿಧಾನ ಪರಿಷತ್ ಪ್ರವೇಶಕ್ಕೆ 41ನೇ ವರ್ಷದ ಸಂಭ್ರಮದ ಅಭಿನಂದನಾ ಸಮಾರಂಭದಲ್ಲಿ, ಮಾನ್ಯರನ್ನು ಅಭಿನಂದಿಸಿ ಸನ್ಮಾನಿಸುತ್ತಿರುವುದು.



ದಿನಾಂಕ : 01.08.2021 ರಂದು ಸೌಹಾರ್ದ ಸಾಹಿತ್ಯ ವೇದಿಕೆ, ಹುಬ್ಬಳ್ಳಿ ಇವರು ಆಯೋಜಿಸಿದ್ದ, ಕವಿ ಎಂ.ಡಿ ಗೋಗೆರಿಯವರಿಗೆ ನುಡಿ ನಮನ ಕಾರ್ಯಕ್ರಮದಲ್ಲಿ ಕರ್ನಾಟಕ ವಿಧಾನ ಪರಿಷತ್ತಿನ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರು ಭಾಗವಹಿಸಿ ನುಡಿ ನಮನ ಸಲ್ಲಿಸಿದರು ಮತ್ತು ಕವಿ ಎಂ.ಡಿ ಗೋಗೆರಿಯವರ ಸ್ಮರಣಾರ್ಥ ಹೊರತಂದಿರುವ ಸಂಚಿಕೆಯನ್ನು ಅನಾವರಣಗೊಳಿಸಿದರು. ಕಾರ್ಯಕ್ರಮದಲ್ಲಿ ಲೇಖಕರು, ಸಾಹಿತ್ಯಾಸಕ್ತರು ಮತ್ತು ಸೌಹಾರ್ದ ಸಾಹಿತ್ಯ ವೇದಿಕೆಯ ಪದಾಧಿಕಾರಿಗಳು ಭಾಗಿಯಾಗಿದ್ದರು.



ದಿನಾಂಕ: **01.08.2021** ರಂದು ಕರ್ನಾಟಕ ರಾಜ್ಯ ಮದ್ಯಪಾನ ಸಂಯಮ ಮಂಡಳಿ ಮತ್ತು ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಇಲಾಖೆ, ಬಾಗಲಕೋಟೆ ಹಾಗೂ ಕರ್ನಾಟಕ ಗಾಂಧಿ ಸ್ಮಾರಕ ನಿಧಿ, ಬೆಂಗಳೂರು ಇವರ ಸಂಯುಕ್ತಾಶ್ರಯದಲ್ಲಿ, ಪೂಜ್ಯ ಶ್ರೀ ಶ್ರೀ ಶ್ರೀ ಮ.ನಿ.ಪ್ರ ಡಾ॥ ಮಹಾಂತ ಶಿವಯೋಗಿಗಳ ಜಯಂತಿ ಪ್ರಯುಕ್ತ ಇಳಕಲ್‌ನಲ್ಲಿ ಆಯೋಜಿಸಿದ್ದ, ವ್ಯಸನಮುಕ್ತ ದಿನಾಚರಣೆ ಕಾರ್ಯಕ್ರಮದಲ್ಲಿ ಕರ್ನಾಟಕ ವಿಧಾನ ಪರಿಷತ್ತಿನ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರು ಪಾಲ್ಗೊಂಡಿದ್ದು. ಸಭೆಯನ್ನು ಕುರಿತು ಇಂದಿನ ಆಧುನಿಕ ಯುಗದ ಯುವ ಪೀಳಿಗೆ ವ್ಯಸನಮುಕ್ತ ಜೀವನ ಶೈಲಿಯನ್ನು ಅಳವಡಿಸಿಕೊಂಡರೆ ಭವಿಷ್ಯದಲ್ಲಿ ಉತ್ತಮ ಜೀವನ ಸಾಗಿಸಬಹುದು ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದರು.




ಕರ್ನಾಟಕ ವಿಧಾನಪರಿಷತ್ತಿನ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರ ಅಧ್ಯಕ್ಷತೆಯಲ್ಲಿ ದಿ.**03.08.2021** ರಂದು ವಿಧಾನಸೌಧದ ಕೊಠಡಿ ಸಂಖ್ಯೆ. **334** ರ ಸಭಾಂಗಣದಲ್ಲಿ ನಡೆದ ಸ್ಥಳೀಯ ಶಾಸಕರ ಪ್ರದೇಶಾಭಿವೃದ್ದಿ ಯೋಜನೆಯ ಅನುದಾನ ಕಡಿತ ಸಂಬಂಧ ವಿಧಾನಪರಿಷತ್ತಿನ ಸದಸ್ಯರುಗಳಿಗೆ ಕರೆದ ಸಭೆಯಲ್ಲಿ, ಮಾನ್ಯ ಉಪ ಸಭಾಪತಿಗಳಾದ ಶ್ರೀ ಎಂ.ಕೆ ಪ್ರಾಣೇಶ್‌ರವರು ವಿಧಾನಪರಿಷತ್ತಿನ ವಿರೋಧ ಪಕ್ಷದ ನಾಯಕರಾದ ಶ್ರೀ ಎಸ್.ಆರ್. ಪಾಟೀಲ್ ರವರು, ವಿರೋಧ ಪಕ್ಷದ ಮುಖ್ಯ ಸಚೇತಕರಾದ ಶ್ರೀ ಎಂ. ನಾರಾಯಣ ಸ್ವಾಮಿಯವರು, ಹಾಗೂ ವಿಧಾನ ಪರಿಷತ್ತಿನ ಸದಸ್ಯರುಗಳಾದ ಶ್ರಿ ಕೆ.ಟಿ. ಶ್ರೀಕಂಠೇಗೌಡ, ಶ್ರೀ ಎನ್. ಅಪ್ಪಾಜಿಗೌಡ ಮತ್ತು ಇತರೆ ಎಲ್ಲಾ ಮಾನ್ಯ ಸದಸ್ಯರುಗಳು ಮತ್ತು ಆರ್ಥಿಕ ಇಲಾಖೆಯ ಅಪರ ಮುಖ್ಯ ಕಾರ್ಯದರ್ಶಿಗಳಾದ ಶ್ರೀ ಐ.ಎನ್.ಎಸ್ ಪ್ರಸಾದ್ ರವರು, ಯೋಜನಾ ಇಲಾಖೆಯ ಅಪರ ಮುಖ್ಯ ಕಾರ್ಯದರ್ಶಿಗಳಾದ ಶ್ರೀಮತಿ ಶಾಲಿನಿ ರಜನೀಶ್ ರವರು ಉಪಸ್ಥಿತರಿದ್ದರು.



**ದಿನಾಂಕ: 05.08.2021 ರಂದು ಕರ್ನಾಟಕ ವಿಧಾನಪರಿಷತ್ತಿನ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರು, ಕರ್ನಾಟಕದ ನೂತನ ಮುಖ್ಯಮಂತ್ರಿ ಶ್ರೀ ಬಸವರಾಜ ಬೊಮ್ಮಾಯಿಯವರ ನೂತನ ಸಚಿವ ಸಂಪುಟಕ್ಕೆ ಸಚಿವರಾಗಿ ಸೇರ್ಪಡೆಗೊಂಡ ಶ್ರೀ ಗೋವಿಂದ ಕಾರಜೋಳ ಅವರನ್ನು ಭೇಟಿ ಮಾಡಿ ಅಭಿನಂದಿಸಿದರು.**



# ಕಲಿಸಿದ ಗುರುಗಳನ್ನು ಮರೆಯದ ಸಭಾಪತಿಗಳು

ದಿನಾಂಕ: 07.08.2021 ರಂದು 1971–74ನೇ ಸಾಲಿನಲ್ಲಿ ಕಾಡಶಿದ್ದೇಶ್ವರ ಆರ್ಟ್ಸ್ ಕಾಲೇಜು ಹುಬ್ಬಳ್ಳಿ ಇಲ್ಲಿನ ವಿದ್ಯಾರ್ಥಿಯಾದ ಶ್ರೀ ಬಸವರಾಜ ಹೊರಟ್ಟಿ ಸನ್ಮಾನ್ಯ ಸಭಾಪತಿಗಳು ವಿಧಾನ ಪರಿಷತ್ ಇಂದು ಅವರಿಗೆ ಇಂಗ್ಲೀಷ್ ಕಲಿಸಿದ ಪ್ರೊ. ಎಸ್.ಎ.ಅಬ್ದುಲ್ ಕರೀಂ ಅವರನ್ನು ಭೇಟಿಯಾಗಿ ಆರೋಗ್ಯ ವಿಚಾರಿಸಿ ಆಶೀರ್ವಾದ ಪಡೆದರು.





ದಿನಾಂಕ:07.08.2021ರಂದು ಕರ್ನಾಟಕ ವಿಧಾನ ಪರಿಷತ್ತಿನ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರು ಇಂದು ಹುಬ್ಬಳ್ಳಿಯ ನವನಗರದಲ್ಲಿರುವ ಚಿಕೇನಕೊಪ್ಪದ ಶ್ರೀ ಚನ್ನವೀರ ಶರಣರ ಅಂಧರ ಕಲ್ಯಾಣ ಆಶ್ರಮದ ವತಿಯಿಂದ ಏರ್ಪಡಿಸಿದ್ದ ಶ್ರೀ ಗುರುಬಸವ ಚಾರಿಟಬಲ್ ಟ್ರಸ್ಟ್ ಉದ್ಘಾಟನಾ ಸಮಾರಂಭದಲ್ಲಿ ಭಾಗಿಯಾಗಿದ್ದು, ಶ್ರೀ ಮಠದ ವತಿಯಿಂದ ಸನ್ಮಾನಿತರಾದರು. ಕಾರ್ಯಕ್ರಮದಲ್ಲಿ ಸುಕ್ಷೇತ್ರ ಬಳಗನೂರು ಪೀಠದ ಶ್ರೀ ಶಿವ ಶಾಂತವೀರ ಶರಣರೊಂದಿಗೆ ಚರ್ಚಿಸುತ್ತಿರುವುದು.



ದಿನಾಂಕ: **09.08.2021** ರಂದು ವಿಶ್ವಶಾಂತಿ ಕೃಷಿ ಸಂಶೋಧನಾ ಕೇಂದ್ರ ಅಣ್ಣಿಗೇರಿ ಗದಗ ಜಿಲ್ಲೆ ಇವರು ಆಯೋಜಿಸಿದ್ದ ಹೊಸ ಟೆಕ್ನಾಲಜಿ ನಡಕಟ್ಟಿನ ಕೂರಿಗೆ ಮತ್ತು ನಡಕಟ್ಟಿನ ರೊಟವೇಟರ್ ಉದ್ಘಾಟನಾ ಸಮಾರಂಭದಲ್ಲಿ ವಿಧಾನ ಪರಿಷತ್ತಿನ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರು ಭಾಗವಹಿಸಿ ಸನ್ಮಾನ ಸ್ವೀಕರಿಸಿದರು. ಕಾರ್ಯಕ್ರಮದಲ್ಲಿ ಶಾಸಕರಾದ ಶ್ರೀ ಹೆಚ್.ಕೆ ಪಾಟೀಲ್ ಮಾಜಿ ಶಾಸಕರಾದ ಶ್ರೀ ಕೋನರೆಡ್ಡಿ ಹಾಗೂ ಕೃಷಿ ವಿಜ್ಞಾನಿ ಎ.ಅಯ್ ನಡಕಟ್ಟಿ ಇತರರು ಉಪಸ್ಥಿತರಿದ್ದರು.




ದಿನಾಂಕ:**09.08.2021**ರಂದು ಹುಬ್ಬಳ್ಳಿಯ ಏಕತಾ ನಗರ ಸುಧಾರಣಾ ಸಮಿತಿ ವತಿಯಿಂದ ಆಯೋಜಿಸಿದ್ದ, ಅಭಿನಂದನಾ ಸಮಾರಂಭ ಹಾಗೂ ಪ್ರತಿಭಾವಂತ ಮಕ್ಕಳು ಕಿರುಚಿತ್ರ ಬಿಡುಗಡೆ ಕಾರ್ಯಕ್ರಮದಲ್ಲಿ ಕರ್ನಾಟಕ ವಿಧಾನ ಪರಿಷತ್ತಿನ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರು ಭಾಗವಹಿಸಿದ್ದು, ಕಿರುಚಿತ್ರ ಅನಾವರಣಗೊಳಿಸಿ ಸಮಿತಿ ವತಿಯಿಂದ ಸನ್ಮಾನಿತರಾದರು. ಕಾರ್ಯಕ್ರಮದಲ್ಲಿ ಮಾಜಿ ಶಾಸಕರಾದ ಶ್ರೀ ಕೋನರೆಡ್ಡಿ ಹಾಗೂ ಏಕತಾ ನಗರ ಸುಧಾರಣಾ ಸಮಿತಿ ಅಧ್ಯಕ್ಷರಾದ ಶ್ರೀ ವೆಂಕಣ್ಣ ಕರಡಿ ಮತ್ತು ಪದಾಧಿಕಾರಿಗಳು ಹಾಗೂ ಮಕ್ಕಳ ಕಿರುಚಿತ್ರ ಚಿತ್ರತಂಡದ ವರ್ಗದವರು ಉಪಸ್ಥಿತರಿದ್ದರು



ದಿನಾಂಕ: 10.08.2021ರಂದು ಹೆಚ್. ಶಿವಪ್ಪ ಅಭಿಮಾನಿಗಳ ಸಾಂಸ್ಕೃತಿಕ ಬಳಗ (ರಿ.) ಹರಿಹರ ಇವರು ಹಮ್ಮಿಕೊಂಡಿದ್ದ ಪರಮಪೂಜ್ಯರ ದಿವ್ಯ ಸಾನಿಧ್ಯದಲ್ಲಿ ಶ್ರೀ ಹೆಚ್. ಶಿವಪ್ಪ, ಮಾಜಿ ಸಚಿವರು ಇವರ 8ನೇ ವರ್ಷದ ಪುಣ್ಯ ಸ್ಮರಣೆ ನೆನಪು–ನಮನ ಕಾರ್ಯಕ್ರಮದಲ್ಲಿ, ವಿಧಾನ ಪರಿಷತ್ತಿನ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರು ಮುಖ್ಯ ಅತಿಥಿಗಳಾಗಿ ಪಾಲ್ಗೊಂಡು ಕಾರ್ಯಕ್ರಮವನ್ನು ಉದ್ಘಾಟಿಸುತ್ತಿರುವುದು. ಈ ಕಾರ್ಯಕ್ರಮದಲ್ಲಿ ಮಾಜಿ ಶಾಸಕರಾದ ಶ್ರೀ ಹೆಚ್.ಎಸ್ ಶಿವಶಂಕರ್ ರವರು ಮತ್ತು ನಾಡಿನ ಶರಣ–ಸಂತರು ಗೌರವಾನ್ವಿತ ಸಭಾಪತಿಯವರಿಗೆ ಬುದ್ಧನ ಭಾವಚಿತ್ರದ ಸ್ಮರಣಿಕೆ ನೀಡಿ ಗೌರವಿಸಿದರು.



ದಿನಾಂಕ:12.08.2021ರಂದು ಕರ್ನಾಟಕ ವಿಧಾನ ಪರಿಷತ್ತಿನ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರು, ಇಂದು ಮಾಜಿ ಮುಖ್ಯಮಂತ್ರಿಗಳಾದ ಶ್ರೀ ಸಿದ್ದರಾಮಯ್ಯನವರನ್ನು ಅವರ ಹುಟ್ಟುಹಬ್ಬದ ನಿಮಿತ್ತ ಭೇಟಿ ಮಾಡಿ, ಕುಶಲೋಪರಿ ವಿಚಾರಿಸಿ ಹೂಗುಚ್ಛ ನೀಡಿ ಹುಟ್ಟು ಹಬ್ಬದ ಶುಭಾಶಯಗಳನ್ನು ಕೋರಿದರು.



ದಿನಾಂಕ: 12.08.2021 ರಂದು ಕರ್ನಾಟಕ ವಿಧಾನಪರಿಷತ್ತಿನ ಸರ್ಕಾರಿ ಮುಖ್ಯ ಸಚೇತಕರಾಗಿ ಮತ್ತೊಮ್ಮೆ ನೇಮಕಗೊಂಡ ಶ್ರೀ ಮಹಾಂತೇಶ ಕವಟಗಿ ಮಲ್ಲಿಕಾರ್ಜುನ ರವರು ಇಂದು ಕರ್ನಾಟಕ ವಿಧಾನ ಪರಿಷತ್ತಿನ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರನ್ನು ಭೇಟಿ ಮಾಡಿದರು. ಈ ಸಂದರ್ಭದಲ್ಲಿ ಮಾನ್ಯ ಸಭಾಪತಿಯವರು ಹೂಗುಚ್ಛ ನೀಡಿ ಶುಭಾಶಯ ಕೋರಿದರು.




ದಿನಾಂಕ: 12.08.2021 ರಂದು ಮಾಜಿ ಶಾಸಕರಾದ ಕೆ.ಎನ್ ರಾಜಣ್ಣನವರು ಕರ್ನಾಟಕ ವಿಧಾನ ಪರಿಷತ್ತಿನ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರನ್ನು ಇಂದು ವಿಧಾನಸೌಧದ ಕಚೇರಿಯಲ್ಲಿ ಭೇಟಿ ಮಾಡಿ ಕುಶಲೋಪರಿ ವಿಚಾರಿಸಿ ಶುಭ ಹಾರೈಸಿದರು.



**ದಿನಾಂಕ: 13.08.2021 ರಂದು ಸನ್ಮಾನ್ಯ ಸಭಾಧ್ಯಕ್ಷರು ರಾಜ್ಯ ಸಭೆಯ ಅಧಿವೇಶನದಲ್ಲಿ ನಡೆದ ಅಹಿತಕರ ಘಟನೆಗೆ ಸಂಬಂಧಿಸಿದಂತೆ ವಿಧಾನಸೌಧದಲ್ಲಿ ಪತ್ರಿಕಾಗೋಷ್ಠಿ ನಡೆಸಿದ ಸಂದರ್ಭ:**



**ದಿನಾಂಕ: 13.08.2021 ರಂದು ಸನ್ಮಾನ್ಯ ಸಭಾಧ್ಯಕ್ಷರನ್ನು ಮಾನ್ಯ ಗೃಹ ಸಚಿವರಾದ ಶ್ರೀ ಆರಗ ಜ್ಞಾನೇಂದ್ರರವರು ಭೇಟಿ ಮಾಡಿದ ಸಂದರ್ಭ:**



ದಿನಾಂಕ: **15.08.202021** ರಂದು ಕರ್ನಾಟಕ ವಿಧಾನ ಮಂಡಲದ ವತಿಯಿಂದ ವಿಧಾನಸೌಧದ ಬ್ಯಾಂಕ್ವೆಟ್ ಹಾಲ್‌ನಲ್ಲಿ ಹಮ್ಮಿಕೊಂಡಿದ್ದ 75ನೇ ಭಾರತದ ಸ್ವಾತಂತ್ರ್ಯೋತ್ಸವದ ಅಮೃತಮಹೋತ್ಸವದ ಕಾರ್ಯಕ್ರಮದಲ್ಲಿ ವಿಧಾನಪರಿಷತ್ತಿನ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರೊಂದಿಗೆ ಮುಖ್ಯಮಂತ್ರಿ ಶ್ರೀ ಬಸವರಾಜ ಬೊಮ್ಮಾಯಿಯವರು ಮುಕ್ತ ಸಮಾಲೋಚನೆಯಲ್ಲಿ ತೊಡಗಿರುವುದು.



ಕರ್ನಾಟಕ ವಿಧಾನಮಂಡಲದ ವತಿಯಿಂದ ಹಮ್ಮಿಕೊಂಡಿದ್ದ 75ನೇ ಭಾರತದ ಸ್ವಾತಂತ್ರ್ಯೋತ್ಸವದ ಅಮೃತ ಮಹೋತ್ಸವದಲ್ಲಿ ಮಾನ್ಯ ವಿಧಾನಪರಿಷತ್ತಿನ ಸಭಾಪತಿಗಳಾದ ಶ್ರೀ ಬಸವರಾಜ ಹೊರಟ್ಟಿರವರು ವಿಧಾನಸೌಧದ ಮುಂಭಾಗದಲ್ಲಿ ರಾಷ್ಟ್ರಧ್ವಜಾರೋಹಣ ಮಾಡಿದರು. ಈ ಸಂದರ್ಭದಲ್ಲಿ ವಿಧಾನಸಭೆಯ ಅಧ್ಯಕ್ಷರಾದ ಶ್ರೀ ವಿಶ್ವೇಶ್ವರ ಹೆಗಡೆ ಕಾಗೇರಿರವರು ಉಪಸ್ಥಿತರಿದ್ದರು.



ದಿನಾಂಕ: **23.08.2021**ರಂದು ಕರ್ನಾಟಕ ವಿಧಾನ ಪರಿಷತ್ತಿನ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರ ಅಧ್ಯಕ್ಷತೆಯಲ್ಲಿ ಉನ್ನತ ಶಿಕ್ಷಣ ಇಲಾಖೆಯ ಪ್ರಾಧ್ಯಾಪಕರ, ಸಹಾಯಕ ಪ್ರಾಧ್ಯಾಪಕರು/ಉಪನ್ಯಾಸಕರು ಹಾಗೂ ಅತಿಥಿ ಉಪನ್ಯಾಸಕರುಗಳ ಕುಂದುಕೊರತೆಗಳ ಬಗ್ಗೆ ಚರ್ಚಿಸಲು ಸಭೆ ಅಯೋಜಿಸಲಾಗಿತ್ತು. ಸಭೆಯಲ್ಲಿ ಉನ್ನತ ಶಿಕ್ಷಣ ಸಚಿವರಾದ ಶ್ರೀ ಡಾ. ಅಶ್ವಥ್ ನಾರಾಯಣರವರು ಮತ್ತು ವಿಧಾನಪರಿಷತ್ತಿನ ಸದಸ್ಯರಾದ ಆಯನೂರು ಮಂಜುನಾಥ್, ಉನ್ನತ ಶಿಕ್ಷಣ ಇಲಾಖೆಯ ಪ್ರಧಾನ ಕಾರ್ಯದರ್ಶಿಗಳಾದ ಶ್ರೀ ಜಿ. ಕುಮಾರ್ ನಾಯ್ಕ್‌ರವರು ಮತ್ತು ಆಯುಕ್ತರಾದ ಶ್ರೀ ಪ್ರದೀಪ್ ಹಾಗೂ ಇತರೆ ಅಧಿಕಾರಿಗಳು ಉಪಸ್ಥಿತರಿದ್ದರು.



**ದಿನಾಂಕ: 23.08.2021ರಂದು ಸನ್ಮಾನ್ಯ ಸಭಾಧ್ಯಕ್ಷರು ಸೆಪ್ಟೆಂಬರ್ 13 ರಿಂದ ಪ್ರಾರಂಭವಾಗಲಿರುವ ವಿಧಾನ ಸಭೆ ಅಧಿವೇಶನದ ಕುರಿತು ಪೂರ್ವಸಿದ್ಧತೆಗಳ ಬಗ್ಗೆ ವಿಧಾನ ಸಭೆಯ ಅಧಿಕಾರಿಗಳೊಂದಿಗೆ ಚರ್ಚಿಸುತ್ತಿರುವ ಸಂದರ್ಭ:**





**ದಿನಾಂಕ:24.08.2021ರಂದು ಸನ್ಮಾನ್ಯ ಸಭಾಧ್ಯಕ್ಷರು ರಾಜಭವನದಲ್ಲಿ ಸನ್ಮಾನ್ಯ ಉಪ ರಾಷ್ಟ್ರಪತಿಗಳಾದ ಶ್ರೀ ಎಂ. ವೆಂಕಯ್ಯನಾಯ್ಡು ಅವರನ್ನು ಭೇಟಿ ಮಾಡಿದ ಸಂದರ್ಭ:**



**ದಿನಾಂಕ: 25.08.2021ರಂದು ಸನ್ಮಾನ್ಯ ಸಭಾಧ್ಯಕ್ಷರು ಸಂಸದೀಯ ವ್ಯವಹಾರಗಳ ಮತ್ತು ಶಾಸನ ರಚನಾ ಇಲಾಖೆಯ ಕಾರ್ಯದರ್ಶಿರವರೊಂದಿಗೆ ಚರ್ಚಿಸುತ್ತಿರುವ ಸಂದರ್ಭ:**



**ದಿನಾಂಕ: 25.08.2021ರಂದು ಸನ್ಮಾನ್ಯ ಸಭಾಧ್ಯಕ್ಷರು ಸಂಸದೀಯ ಮೌಲ್ಯಗಳ ಕುಸಿತ ತಡೆಯುವ ನಿಟ್ಟಿನಲ್ಲಿ "ಆತ್ಮಾವಲೋಕನ ಕಾರ್ಯಕ್ರಮ"ದ ಮುಂದುವರೆದ ಭಾಗವಾಗಿ ಬೆಂಗಳೂರಿನ ಕುಮಾರ ಕೃಪ ಅತಿಥಿ ಗೃಹದಲ್ಲಿ ಸಂಸದೀಯ ಗಣ್ಯರುಗಳೊಂದಿಗೆ ಸಭೆ ನಡೆಸಿ ಚರ್ಚಿಸುತ್ತಿರುವ ಸಂದರ್ಭ:**





**ದಿನಾಂಕ: 25.08.2021ರಂದು ಮಾನ್ಯ ಮಹಿಳಾ ಮತ್ತು ಮಕ್ಕಳ ಕಲ್ಯಾಣ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಸಚಿವರಾದ ಶ್ರೀ ಆಚಾರ್ ಹಾಲಪ್ಪ ಸನ್ಮಾನ್ಯ ಸಭಾಧ್ಯಕ್ಷರನ್ನು ವಿಧಾನಸೌಧದಲ್ಲಿ ಭೇಟಿ ಮಾಡಿದ ಸಂದರ್ಭ:**




**ದಿನಾಂಕ: 25.08.2021ರಂದು ಕ್ಲಾಸಿಕ್ ಇಂಟರ್ ನ್ಯಾಷನಲ್ ಪಬ್ಲಿಕ್ ಸ್ಕೂಲ್ ಧಾರವಾಡದಲ್ಲಿ ಗಣಿತ ಪ್ರಯೋಗಾಲಯವನ್ನು ಕರ್ನಾಟಕ ವಿಧಾನಪರಿಷತ್ತಿನ ಸಭಾಪತಿ ಶ್ರೀ ಬಸವರಾಜ ಹೊರಟ್ಟಿರವರು ಉದ್ಘಾಟಿಸಿ ಅನಾವರಣಗೊಳಿಸಿ, ನಂತರ ಕಾರ್ಯಕ್ರಮವನ್ನುದ್ದೇಶಿಸಿ ಮಾತನಾಡಿದರು.**



ದಿನಾಂಕ: 27.08.2021ರಂದು ಗೋವಾದಲ್ಲಿ ನಡೆದ ವರ್ಲ್ಡ್‌ವೈಡ್ ಅಚೀವರ್ಸ್ ಸಂಸ್ಥೆಯವರು ಆಯೋಜಿಸಿದ್ದ ವಿವಿಧ ಕ್ಷೇತ್ರಗಳಲ್ಲಿ ಸಾಧನೆ ಮೆರೆದ ಜಾಗತಿಕ ಸಾಧಕರಿಗೆ ಪ್ರಶಸ್ತಿ ಪ್ರಧಾನ ಕಾರ್ಯಕ್ರಮದಲ್ಲಿ ಕರ್ನಾಟಕ ವಿಧಾನಪರಿಷತ್ತಿನ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರಿಗೆ ಕಳೆದ ನಾಲ್ಕು ದಶಕಗಳಿಂದ ರಾಜಕಾರಣದಲ್ಲಿ ಸಕ್ರಿಯರಾಗಿ ಸತತ 7 ಬಾರಿ ವಿಧಾನಪರಿಷತ್ತಿನ ಸದಸ್ಯರಾಗಿ ಆಯ್ಕೆಯಾಗಿ, ಸಭಾಪತಿಯಾಗಿರುವ ಶ್ರೀಯುತರ ಸಾಧನೆಯನ್ನು ಪರಿಗಣಿಸಿ ವರ್ಲ್ಡ್‌ವೈಡ್ ಅಚೀವರ್ಸ್ ಸಂಸ್ಥೆಯು ವಿಶೇಷ ಪುರಸ್ಕಾರ ನೀಡಿ ಗೌರವಿಸಿತು.



**ದಿನಾಂಕ: 29.08.2021ರಂದು ಗದಗ ಜಿಲ್ಲಾ ಪತ್ರಕರ್ತರ ಭವನ ಉದ್ಘಾಟನಾ ಸಮಾರಂಭದಲ್ಲಿ ಕರ್ನಾಟಕ ವಿಧಾನಪರಿಷತ್ತಿನ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರು ಭಾಗವಹಿಸಿ, ಪತ್ರಕರ್ತರ ಭವನದ ಕಟ್ಟಡದ ಶಂಕುಸ್ಥಾಪನೆ ನೆರವೇರಿಸಿದರು. ಕಾರ್ಯಕ್ರಮದಲ್ಲಿ ಲೋಕೋಪಯೋಗಿ ಸಚಿವ ಶ್ರೀ ಸಿ.ಸಿ. ಪಾಟೀಲ್, ಸಂಸದ ಶಿವಕುಮಾರ್ ಉದಾಸಿ, ಮಾಜಿ ಸಚಿವ ಹೆಚ್.ಕೆ ಪಾಟೀಲ್, ವಿಧಾನ ಪರಿಷತ್ ಸದಸ್ಯರಾದ ಶ್ರೀ ಎಸ್.ವಿ. ಸಂಕನೂರುರವರು ಹಾಗೂ ಕಾರ್ಯನಿರತ ಪತ್ರಕರ್ತರ ಸಂಘದ ಅಧ್ಯಕ್ಷ ಶಿವಾನಂದ ತಗಡೂರು ಮತ್ತು ಇನ್ನಿತರೆ ಮಾಧ್ಯಮ ಪ್ರತಿನಿಧಿಗಳು ಉಪಸ್ಥಿತರಿದ್ದರು**





ದಿನಾಂಕ: 29.08.2021ರಂದು ಹುಬ್ಬಳ್ಳಿಯಲ್ಲಿ ಮೇಜರ್ ಧ್ಯಾನ್‌ಚಂದ್ ರವರ 161ನೇ ಜನ್ಮದಿನಾಚರಣೆ ಪ್ರಯುಕ್ತ ವರ್ಚುವಲ್ ಜೂಮ್ ಮೀಟ್ ಮೂಲಕ ಆಯೋಜಿಸಿದ್ದ, ರಾಷ್ಟ್ರೀಯ ಕ್ರೀಡಾ ದಿನಾಚರಣೆಯನ್ನು ಕರ್ನಾಟಕ ವಿಧಾನ ಪರಿಷತ್ತಿನ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರು ಉದ್ಘಾಟಿಸಿ. ಮೇಜರ್ ಧ್ಯಾನ್ ಚಂದ್‌ರವರ ಭಾವಚಿತ್ರಕ್ಕೆ ಪುಷ್ಪ ನಮನ ಸಲ್ಲಿಸಿದರು.




ಶಾಸಕರ ಭವನದ ಗೃಹ ಕಚೇರಿಯಲ್ಲಿ ರಾಜ್ಯದ ನಾನಾ ಜಿಲ್ಲೆಗಳಿಂದ ಬಂದಿದ್ದ, ಶಿಕ್ಷಕರ ಸಮೂಹ ಮತ್ತು ಸಾರ್ವಜನಿಕರು ತಮ್ಮ ಸಮಸ್ಯೆಗಳನ್ನು ಬಗೆಹರಿಸಲು ನೆರವಾಗುವಂತೆ ಕರ್ನಾಟಕ ವಿಧಾನ ಪರಿಷತ್ತಿನ ಸಭಾಪತಿ ಶ್ರಿ ಬಸವರಾಜ ಹೊರಟ್ಟಿಯವರನ್ನು ಭೇಟಿ ಮಾಡಿ ತಮ್ಮ ಮನವಿಗಳನ್ನು ಸಲ್ಲಿಸಿದರು.



ದಿನಾಂಕ:01.09.2021ರಂದು ಹಾವೇರಿ ಜಿಲ್ಲೆ, ಶಿಗ್ಗಾಂವ ಪುರಸಭೆ ನೂತನ ಕಟ್ಟಡ ಉದ್ಘಾಟನಾ ಕಾರ್ಯಕ್ರಮದಲ್ಲಿ ಮುಖ್ಯಮಂತ್ರಿ ಶ್ರೀ ಬಸವರಾಜ ಬೊಮ್ಮಾಯಿಯವರೊಂದಿಗೆ ವಿಧಾನಪರಿಷತ್ತಿನ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರು ಭಾಗಿಯಾಗಿರುವುದು. ಕಾರ್ಯಕ್ರಮದಲ್ಲಿ ಶ್ರೀಯುತರನ್ನು ಆಯೋಜಕರು ಸನ್ಮಾನಿಸುತ್ತಿರುವುದನ್ನು ಕಾಣಬಹುದು.



ದಿನಾಂಕ: 03.09.2021ರಂದು ನಡೆದ ಹುಬ್ಬಳ್ಳಿ–ಧಾರವಾಡ ಮಹಾನಗರ ಪಾಲಿಕೆಯ ಚುನಾವಣೆಯಲ್ಲಿ ಕರ್ನಾಟಕ ವಿಧಾನ ಪರಿಷತ್ತಿನ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರು ತಮ್ಮ ಮತದಾನದ ಹಕ್ಕನ್ನು ಚಲಾಯಿಸಿದರು.



ದಿನಾಂಕ: **04.09.2021** ರಂದು ಕರ್ನಾಟಕ ವಿಧಾನ ಪರಿಷತ್ತಿನ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರ ಅಧ್ಯಕ್ಷತೆಯಲ್ಲಿ ಇಂದು ಶಾಸಕರ ಸ್ಥಳೀಯ ಪ್ರದೇಶಾಭಿವೃದ್ದಿ ಅನುದಾನ ಬಿಡುಗಡೆ ಬಗ್ಗೆ ಚರ್ಚಿಸಲು ಆರ್ಥಿಕ ಇಲಾಖೆ, ಯೋಜನಾ ಇಲಾಖೆ, ಗ್ರಾಮೀಣಾಭಿವೃದ್ದಿ ಮತ್ತು ಪಂಚಾಯತ್ ರಾಜ್ ಇಲಾಖೆ ಹಾಗೂ ಜಿಲ್ಲಾಧಿಕಾರಿಗಳು ಮತ್ತು ಇತರ ಅಧಿಕಾರಿಗಳೊಂದಿಗೆ 4 ಸದಸ್ಯರನ್ನೊಳಗೊಂಡ ಸಮಿತಿಸಭೆ ಏರ್ಪಡಿಸಲಾಗಿತ್ತು. ಸಭೆಯಲ್ಲಿ ವಿಧಾನ ಪರಿಷತ್ ಸದಸ್ಯರುಗಳಾದ, ಶ್ರೀ ಕೆ.ಸಿ ಕೊಂಡಯ್ಯ ರವರು, ಶ್ರೀ ಎಸ್, ರವಿ, ಶ್ರೀ ನಿರಾಣಿ ಹಣಮಂತ ರುದ್ರಪ್ಪ, ಶ್ರೀ ಎನ್ ಅಪ್ಪಾಜಿಗೌಡ, ಶ್ರೀಮತಿ ತೇಜಸ್ವಿನಿ ಗೌಡ ರವರು ಹಾಗೂ ಯೋಜನಾ ಇಲಾಖೆಯ ಅಪರ ಮುಖ್ಯ ಕಾರ್ಯದರ್ಶಿ ಶ್ರೀಮತಿ ಶಾಲಿನಿ ರಜನೀಶ್ ರವರು ಮತ್ತು ಪಂಚಾಯತ್ ರಾಜ್ ಇಲಾಖಾ ಪ್ರಧಾನ ಕಾರ್ಯದರ್ಶಿ ಶ್ರೀಮತಿ ಉಮಾ ಮಹದೇವನ್, ಆರ್ಥಿಕ ಇಲಾಖೆಯ ಕಾರ್ಯದರ್ಶಿ(ವೆಚ್ಚ) ಶ್ರೀ ಪಿ.ಸಿ ಜಾಫರ್ ರವರು ಮತ್ತು ಸಂಬಂಧಿಸಿದ ಜಿಲ್ಲಾಧಿಕಾರಿಗಳು ಉಪಸ್ಥಿತರಿದ್ದರು.



ದಿನಾಂಕ: **04.09.202021**ರಂದು ಕರ್ನಾಟಕ ವಿಧಾನ ಪರಿಷತ್ತಿನ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರ ಅಧ್ಯಕ್ಷತೆಯಲ್ಲಿ ಇಂದು ಶಾಸಕರ ಸ್ಥಳೀಯ ಪ್ರದೇಶಾಭಿವೃದ್ದಿ ಅನುದಾನ ಕಡಿತದ ಬಗ್ಗೆ ಚರ್ಚಿಸಲು ಆರ್ಥಿಕ ಇಲಾಖೆ ಹಾಗೂ ಯೋಜನಾ ಇಲಾಖೆಯ ಅಧಿಕಾರಿಗಳೊಂದಿಗೆ 4 ಸದಸ್ಯರನ್ನೊಳಗೊಂಡ ಸಮಿತಿ ಸಭೆ ಏರ್ಪಡಿಸಲಾಗಿತ್ತು. ಸಭೆಯಲ್ಲಿ ವಿಧಾನ ಪರಿಷತ್ ಸದಸ್ಯರುಗಳಾದ, ಶ್ರೀ ಕೆ.ಸಿ. ಕೊಂಡಯ್ಯರವರು, ಶ್ರೀ ಎಸ್, ರವಿ, ಶ್ರೀ ನಿರಾಣಿ ಹಣಮಂತ ರುದ್ರಪ್ಪ, ಶ್ರೀ ಎನ್ ಅಪ್ಪಾಜಿಗೌಡ ರವರು ಹಾಗೂ ಆರ್ಥಿಕ ಇಲಾಖೆಯ ಕಾರ್ಯದರ್ಶಿ(ವೆಚ್ಚ) ಶ್ರೀ ಪಿ.ಸಿ ಜಾಫರ್ ರವರು ಯೋಜನಾ ಇಲಾಖೆಯ ನಿರ್ದೇಶಕರು (ಯೋಜನಾ) ಶ್ರೀ ಡಿ. ಚಂದ್ರಶೇಖರಯ್ಯ ರವರೊಂದಿಗೆ ಸಭೆ ನಡೆಸಿ, ಚರ್ಚಿಸಿದ ಸಂದರ್ಭ.



**ದಿನಾಂಕ: 06.09.2021ರಂದು ಕರ್ನಾಟಕ ವಿಧಾನ ಪರಿಷತ್ತಿನ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರು ಉತ್ತರ ಕನ್ನಡ ಜಿಲ್ಲೆ, ಶಿರಸಿಯಲ್ಲಿರುವ ಕೆನರಾ ಡಿಸ್ಟ್ರಿಕ್ಟ್ ಸೆಂಟ್ರಲ್ ಕೋ–ಅಪರೇಟಿವ್ ಬ್ಯಾಂಕ್ ಲಿಮಿಟಿಡ್‌ನ ಶತಮಾನೋತ್ಸವ ಕಾರ್ಯಕ್ರಮದಲ್ಲಿ ಪಾಲ್ಗೊಂಡು, ಬ್ಯಾಂಕಿನವರು ಹೊರತಂದಿರುವ ಸಂಚಿಕೆಯನ್ನು ಅನಾವರಣಗೊಳಿಸಿದರು. ಕಾರ್ಯಕ್ರಮದಲ್ಲಿ ವಿಧಾನಸಭಾಧ್ಯಕ್ಷರಾದ ಶ್ರೀ ವಿಶ್ವೇಶ್ವರ ಹೆಗಡೆ ಕಾಗೇರಿ, ನಗರಾಭಿವೃದ್ದಿ ಸಚಿವರಾದ ಶ್ರೀ ಬಿ.ಎ. ಬಸವರಾಜ, ಸಹಕಾರ ಸಚಿವರಾದ ಶ್ರೀ ಎಸ್.ಟಿ ಸೋಮಶೇಖರ್, ಕೃಷಿ ಸಚಿವರಾದ ಶ್ರೀ ಬಿ.ಸಿ. ಪಾಟೀಲ್ ಹಾಗೂ ಕಾರ್ಮಿಕ ಸಚಿವರಾದ ಶ್ರೀ ಅರೆಬೈಲ್ ಶಿವರಾಮ್ ಹೆಬ್ಬಾರ್ ರವರುಗಳು ಮತ್ತು ಶಾಸಕರಾದ ಆರ್.ವಿ ದೇಶಪಾಂಡೆರವರು ಉಪಸ್ಥಿತರಿದ್ದರು.**



**ದಿನಾಂಕ: 07.09.2021ರಂದು ಸನ್ಮಾನ್ಯ ಸಭಾಧ್ಯಕ್ಷರು ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಸಚಿವರಾದ ಶ್ರೀ ಬಿ.ಸಿ. ನಾಗೇಶ್ ಹಾಗೂ ಪದವಿ ಪೂರ್ವ ಶಿಕ್ಷಣದ ನಿರ್ದೇಶಕರಾದ ಶ್ರೀಮತಿ ಸ್ನೇಹಾಲ್‌ರವರೊಂದಿಗೆ ವಿಧಾನಸೌಧದ ಸನ್ಮಾನ್ಯ ಸಭಾಧ್ಯಕ್ಷರ ಕಚೇರಿಯಲ್ಲಿ ಚರ್ಚಿಸುತ್ತಿರುವ ಸಂದರ್ಭ:**



**ದಿನಾಂಕ: 07.09.2021ರಂದು ಸನ್ಮಾನ್ಯ ಸಭಾಧ್ಯಕ್ಷರು ಮಹಿಳಾ ಮತ್ತು ಮಕ್ಕಳ ಕಲ್ಯಾಣ ಹಾಗೂ ಹಿರಿಯ ನಾಗರಿಕರ ಸಬಲೀಕರಣ ಇಲಾಖೆಯ ಅಪರ ಮುಖ್ಯ ಕಾರ್ಯದರ್ಶಿ ಶ್ರೀಮತಿ ಉಮಾ ಮಹದೇವನ್ ರವರೊಂದಿಗೆ ವಿಧಾನಸೌಧದ ಸನ್ಮಾನ್ಯ ಸಭಾಧ್ಯಕ್ಷರ ಕಚೇರಿಯಲ್ಲಿ ಚರ್ಚಿಸುತ್ತಿರುವ ಸಂದರ್ಭ:**



**ದಿನಾಂಕ: 13.09.2021ರಿಂದ ಪ್ರಾರಂಭವಾಗಲಿರುವ ವಿಧಾನಸಭೆ ಅಧಿವೇಶನದ ಪೂರ್ವಸಿದ್ಧತೆಯ ಕುರಿತು ಸನ್ಮಾನ್ಯ ಸಭಾಧ್ಯಕ್ಷರು ದಿನಾಂಕ: 07.09.2021ರಂದು ಅಧಿಕಾರಿಗಳೊಂದಿಗೆ ಸಭೆ ನಡೆಸಿ, ವಿಧಾನ ಸಭೆಯ ಸಭಾಂಗಣವನ್ನು ಪರಿವೀಕ್ಷಣೆ ನಡೆಸಿದ ಸಂದರ್ಭ:**






**ದಿನಾಂಕ:07.09.2021ರಂದು ಸನ್ಮಾನ್ಯ ಸಭಾಧ್ಯಕ್ಷರು ದಿನಾಂಕ: 13.09.2021ರಿಂದ ಪ್ರಾರಂಭವಾಗಲಿರುವ ಅಧಿವೇಶನದ ಕುರಿತು ವಿಧಾನಸೌಧದಲ್ಲಿ ಪತ್ರಿಕಾಗೋಷ್ಠಿ ನಡೆಸಿದ ನಡೆಸಿದ ಸಂದರ್ಭ:**





**ದಿನಾಂಕ: 07.09.2021ರಂದು ಸನ್ಮಾನ್ಯ ಸಭಾಧ್ಯಕ್ಷರವರನ್ನು ಕರ್ನಾಟಕ ಹಿಂದುಳಿದ ವರ್ಗಗಳ ಆಯೋಗದ ಅಧ್ಯಕ್ಷರು ಹಾಗೂ ಮಾಜಿ ಸಂಸದರಾದ ಶ್ರೀ ಜಯಪ್ರಕಾಶ್ ಹೆಗಡೆರವರು ಭೇಟಿ ಮಾಡಿದ ಸಂದರ್ಭ:**



**ದಿನಾಂಕ: 13.09.2021ರಂದು ಮಾನ್ಯ ಸಹಕಾರ, ಅರಣ್ಯ, ಅಬಕಾರಿ ಮತ್ತು ಕಾರ್ಮಿಕ ಸಚಿವರುಗಳು, ಸಂಸದರು, ಶಾಸಕರು ಹಾಗೂ ಕ್ಷೇತ್ರದ ಸಹಕಾರಿ ಮುಖಂಡರುಗಳು ಸನ್ಮಾನ್ಯ ಸಭಾಧ್ಯಕ್ಷರನ್ನು ವಿಧಾನಸೌಧದ ಕಛೇರಿಯಲ್ಲಿ ಭೇಟಿ ಮಾಡಿದ ಸಂದರ್ಭ:**






**ದಿನಾಂಕ: 13.09.2021 ರಿಂದ ನಡೆಯುವ ವಿಧಾನಪರಿಷತ್ತಿನ ಅಧಿವೇಶನಕ್ಕೆ ಸಿದ್ಧತೆಗೊಳ್ಳುತ್ತಿರುವ ಪರಿಷತ್ತಿನ ಸಭಾಂಗಣದ ಒಳಾಂಗಣ ತಯಾರಿಯನ್ನು ಮಾನ್ಯ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರು ದಿ: 12.09.2021 ರಂದು ಪರಿವೀಕ್ಷಿಸಿದರು.**



**ದಿನಾಂಕ:14.09.2021ರಂದು ಸನ್ಮಾನ್ಯ ಸಭಾಧ್ಯಕ್ಷರು ವಿಧಾನಸೌಧದಲ್ಲಿ, ವಿಧಾನ ಸಭೆಯ ಕಾರ್ಯಕಲಾಪಗಳ ಸಲಹಾ ಸಮಿತಿ ಸಭೆಯನ್ನು ನಡೆಸಿ ಚರ್ಚಿಸುತ್ತಿರುವ ಸಂದರ್ಭ:**



ದಿನಾಂಕ: **14.09.2021**ರಂದು ಸದನದ ಅಡಿಯೋ ವಿಡಿಯೋ ತುಣುಕುಗಳನ್ನು ಮಾನ್ಯ ಶಾಸಕರುಗಳಿಗೆ ನೀಡುವ ಸಂಬಂಧ ಕರ್ನಾಟಕ ವಿಧಾನ ಪರಿಷತ್ತಿನ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರ ಅಧ್ಯಕ್ಷತೆಯಲ್ಲಿ ಸಭೆ ನಡೆಯಿತು. ಸದರಿ ಸಭೆಯಲ್ಲಿ ಮಾನ್ಯ ಉಪ ಸಭಾಪತಿ ಶ್ರೀ ಎಂ.ಕೆ. ಪ್ರಾಣೇಶ್‌ರವರು ಮಾನ್ಯ ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವರಾದ ಶ್ರೀ ಜೆ.ಸಿ. ಮಾಧುಸ್ವಾಮಿರವರು ಮತ್ತು ವಿಧಾನ ಪರಿಷತ್ತಿನ ಸದಸ್ಯರುಗಳಾದ ಶ್ರೀ ಕೆ.ಎ. ತಿಪ್ಪೇಸ್ವಾಮಿ, ಶ್ರೀ ಆಯನೂರು ಮಂಜುನಾಥ್, ಶ್ರೀ ಯು.ಬಿ. ವೆಂಕಟೇಶ್, ಶ್ರೀಮತಿ ತೇಜಸ್ವಿನಿಗೌಡರವರ ಉಪಸ್ಥಿತರಿದ್ದರು.




ದಿನಾಂಕ: **15.09.2021** ರಂದು ಕರ್ನಾಟಕ ವಿಧಾನಪರಿಷತ್ತಿನ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರ ಅಧ್ಯಕ್ಷತೆಯಲ್ಲಿ ಪದವಿಪೂರ್ವ ಶಿಕ್ಷಣ ಇಲಾಖೆಗಳಿಗೆ ಸಂಬಂಧಿಸಿದ ಹಲವು ಸಮಸ್ಯೆಗಳ ಇತ್ಯರ್ಥಕ್ಕಾಗಿ ಪದವಿಪೂರ್ವ ಶಿಕ್ಷಣ ಇಲಾಖೆಯ ನಿರ್ದೇಶಕರಾದ ಶ್ರೀಮತಿ ಆರ್. ಸ್ನೇಹಲ್ ಅವರೊಂದಿಗೆ ಸಭೆಯನ್ನು ಆಯೋಜಿಸಿರುವ ಸಂದರ್ಭ.



**ದಿನಾಂಕ: 18.09.2021 ರಂದು ಕರ್ನಾಟಕ ರಾಜ್ಯ ದೈಹಿಕ ಶಿಕ್ಷಣ ಶಿಕ್ಷಕರ ಸಂಘ ಹಾವೇರಿ ಮತ್ತು ರಾಜ್ಯ ಮಾಧ್ಯಮಿಕ ಶಾಲಾ ನೌಕರರ ಸಂಘ ಹುಬ್ಬಳ್ಳಿ ಇವರ ಸಂಯುಕ್ತಾಶ್ರಯದಲ್ಲಿ ಹಾವೇರಿಯಲ್ಲಿ ಆಯೋಜಿಸಿದ್ದ, ಡ್ರೀಮ್ ಒಲಿಂಪಿಕ್ ದೈಹಿಕ ಶಿಕ್ಷಣ ಶಿಕ್ಷಕರ ಕಾರ್ಯಾಗಾರದಲ್ಲಿ ವಿಧಾನಪರಿಷತ್ತಿನ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರ ರವರು ಭಾಗವಹಿಸಿ ಕಾರ್ಯಾಗಾರವನ್ನುದ್ದೇಶಿಸಿ ಮಾತನಾಡಿದರು.**




**ದಿನಾಂಕ: 20.09.2021ರಂದು ಸನ್ಮಾನ್ಯ ಸಭಾಧ್ಯಕ್ಷರು ಮಾನ್ಯ ಇಂಧನ ಸಚಿವರಾದ ಶ್ರೀ ವಿ. ಸುನೀಲ್ ಕುಮಾರ್, ಮಾನ್ಯ ಕಾರ್ಮಿಕ ಸಚಿವರಾದ ಶ್ರೀ ಅರಬೈಲ್ ಶಿವರಾಮ್ ಹೆಬ್ಬಾರ್ ಹಾಗೂ ಶಾಸಕರೊಂದಿಗೆ (ವಿಧಾನಸೌಧದ ಸನ್ಮಾನ್ಯ ಸಭಾಧ್ಯಕ್ಷರ ಚಹಾ ಕೊಠಡಿಯಲ್ಲಿ) ಚರ್ಚಿಸುತ್ತಿರುವ ಸಂದರ್ಭ:**





ದಿನಾಂಕ: 20.09.2021ರಂದು ವಿಧಾನಪರಿಷತ್ತಿನ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರ ಅಧ್ಯಕ್ಷತೆಯಲ್ಲಿ ನಡೆದ ಕರ್ನಾಟಕ ರಾಜ್ಯ ಮಕ್ಕಳ ಹಕ್ಕುಗಳಿಗಾಗಿ ಶಾಸಕರ ವೇದಿಕೆ, ವೇದಿಕೆ ಚಟುವಟಿಕೆಗಳ ಪರಿಚಯ ಮತ್ತು ಮುಂಬರುವ ದಿನಗಳಲ್ಲಿ ಕೈಗೊಳ್ಳಬಹುದಾದ ಚಟುವಟಿಕೆಗಳ ಕುರಿತು ಸಭೆಯನ್ನು ಹಮ್ಮಿಕೊಳ್ಳಲಾಗಿತ್ತು. ಸಭೆಯಲ್ಲಿ ಮಾಜಿ ಸರ್ಕಾರಿ ಮುಖ್ಯ ಸಚೇತಕರಾದ ಶ್ರೀ ಕ್ಯಾಪ್ಟನ್ ಗಣೇಶ್ ಕಾರ್ಣಿಕ್, ಮಾನ್ಯ ವಿಧಾನಪರಿಷತ್ತಿನ ಸದಸ್ಯರುಗಳಾದ ಶ್ರೀ ಶಾಂತರಾಮ ಸಿದ್ದಿ, ಶ್ರೀ ಪ್ರತಾಪ ಸಿಂಹ ನಾಯಕ್, ಯುನಿಸೆಫ್ ಪ್ರತಿನಿಧಿ ಶ್ರೀ ವಾಸುದೇವ ಶರ್ಮ, ಶ್ರೀ ಪ್ರಸೂನ್ ಸೇನ್ ರವರು ಉಪಸ್ಥಿತರಿದ್ದರು.




ದಿನಾಂಕ: 22.09.2021ರಂದು ಕರ್ನಾಟಕ ವಿಧಾನಮಂಡಲದ ಅಧಿವೇಶನದ ವಿರಾಮದ ವೇಳೆಯಲ್ಲಿ ಮಾನ್ಯ ಮುಖ್ಯಮಂತ್ರಿ ಶ್ರೀ ಬಸವರಾಜ ಬೊಮ್ಮಾಯಿಯವರು ವಿಧಾನಪರಿಷತ್ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರನ್ನು ತಮ್ಮ ವಿಧಾನಸೌಧದ ಕಚೇರಿಯಲ್ಲಿ ಭೇಟಿ ಮಾಡಿ ಸದನದ ಕಾರ್ಯಕಲಾಪಗಳ ಬಗ್ಗೆ ವಿಸ್ತೃತ ಚರ್ಚೆ ನಡೆಸಿದರು.



**ದಿನಾಂಕ:21.09.2021ರಂದು ವಿಧಾನಸೌಧದಲ್ಲಿ ಸನ್ಮಾನ್ಯ ಸಭಾಧ್ಯಕ್ಷರು, ಸನ್ಮಾನ್ಯ ಮುಖ್ಯಮಂತ್ರಿಯವರು ಹಾಗೂ ಸನ್ಮಾನ್ಯ ಕಾನೂನು, ಸಂಸದೀಯ ವ್ಯವಹಾರಗಳು ಹಾಗೂ ಸಣ್ಣ ನೀರಾವರಿ ಸಚಿವರೊಂದಿಗೆ ಇಸ್ಕಾನ್ ಸಂಸ್ಥೆಯ ಪರಮಪೂಜ್ಯ ಶ್ರೀ ಭಕ್ತಿವೇದಾಂತ ಸ್ವಾಮಿ ಪ್ರಭುಪಾದರು ಇವರ 125ನೇ ಜನ್ಮದಿನೋತ್ಸವದ ಸ್ಮರಣಾರ್ಥ ನಾಣ್ಯ ಬಿಡುಗಡೆ ಕಾರ್ಯಕ್ರಮದಲ್ಲಿ 125 ರೂ. ಬೆಲೆಯ ನಾಣ್ಯವನ್ನು ಬಿಡುಗಡೆಗೊಳಿಸಿ ನಂತರ ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಇಲಾಖೆ ಹಾಗೂ ಭಾಷಾಂತರ ನಿರ್ದೇಶನಾಲಯದಿಂದ ಹೊರತಂದ "ಕಾನೂನು ಪದಕೋಶ ಹಾಗೂ 15 ಕೇಂದ್ರ ಅಧಿನಿಯಮಗಳ ಪುಸ್ತಕಗಳನ್ನು ಬಿಡುಗಡೆ ಮಾಡಿದ ಸಂದರ್ಭ:**






ದಿನಾಂಕ: 22.09.2021ರಂದು ಸನ್ಮಾನ್ಯ ಸಭಾಧ್ಯಕ್ಷರು ಅರಣ್ಯ ಪ್ರದೇಶದಲ್ಲಿ ಬಹಳಷ್ಟು ವರ್ಷಗಳಿಂದ ಅತಿಕ್ರಮಣ ಮಾಡಿ ನೆಲೆಸಿರುವ ಜನರಿಗೆ ಮೂಲಭೂತ ಸೌಲಭ್ಯಗಳನ್ನು ಕಲ್ಪಿಸಿಕೊಡಲು ಅನುಕೂಲವಾಗುವಂತೆ ಪರಿಹಾರ ಕ್ರಮಗಳನ್ನು ಕೈಗೊಳ್ಳುವ ಕುರಿತು ಅರಣ್ಯ ಸಚಿವರು, ಶಾಸಕರುಗಳು ಹಾಗೂ ಅಧಿಕಾರಿಗಳೊಂದಿಗೆ ಸನ್ಮಾನ್ಯ ಸಭಾಧ್ಯಕ್ಷರು ಚರ್ಚಿಸುತ್ತಿರುವ ಸಂದರ್ಭ (ಸ್ಥಳ: ವಿಧಾನ ಸಭೆ ಸಭಾಂಗಣದ ಸನ್ಮಾನ್ಯ ಸಭಾಧ್ಯಕ್ಷರ ಚಹಾ ಕೊಠಡಿ):



ದಿನಾಂಕ: 23.09.2021ರಂದು ಸನ್ಮಾನ್ಯ ಸಭಾಧ್ಯಕ್ಷರು ರಾಜ್ಯದ ಹೆದ್ದಾರಿಗಳಲ್ಲಿರುವ ಟೋಲ್ ವ್ಯವಸ್ಥೆ ಹಾಗೂ ಇತರೆ ಅಭಿವೃದ್ಧಿ ವಿಷಯಗಳ ಕುರಿತು ಲೋಕೋಪಯೋಗಿ ಸಚಿವರು, ಶಾಸಕರುಗಳು ಹಾಗೂ ಅಧಿಕಾರಿಗಳೊಂದಿಗೆ ಸನ್ಮಾನ್ಯ ಸಭಾಧ್ಯಕ್ಷರು ಚರ್ಚಿಸುತ್ತಿರುವ ಸಂದರ್ಭ (ಸ್ಥಳ: ವಿಧಾನ ಸಭೆ ಸಭಾಂಗಣದ ಸನ್ಮಾನ್ಯ ಸಭಾಧ್ಯಕ್ಷರ ಚಹಾ ಕೊಠಡಿ):



ದಿನಾಂಕ: **24.09.2021** ರಂದು ನಡೆದ ಕರ್ನಾಟಕ ವಿಧಾನಮಂಡಲದ ಜಂಟಿ ಅಧಿವೇಶನದಲ್ಲಿ ಮುಖ್ಯ ಅತಿಥಿಗಳಾಗಿ ಪಾಲ್ಗೊಂಡಿದ್ದ, ಲೋಕಸಭಾಧ್ಯಕ್ಷರಾದ ಶ್ರೀ ಓಂ ಬಿರ್ಲಾರವರಿಗೆ ಕರ್ನಾಟಕ ವಿಧಾನ ಪರಿಷತ್ತಿನ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರು ನೂತನವಾಗಿ ನಿರ್ಮಾಣಗೊಳ್ಳುತ್ತಿರುವ ಸಂಸತ್ ಭವನದ ಒಂದು ಕಟ್ಟಡಕ್ಕೆ "ಅನುಭವ ಮಂಟಪ" ಎಂದು ಹೆಸರಿಡಲು ಮನವಿ ಪತ್ರವನ್ನು ಸಲ್ಲಿಸಿದರು. ಚಿತ್ರದಲ್ಲಿ ವಿಧಾನಸಭಾಧ್ಯಕ್ಷರಾದ ಶ್ರೀ ವಿಶ್ವೇಶ್ವರ ಹೆಗಡೆ ಕಾಗೇರಿಯವರನ್ನು ಕಾಣಬಹುದು.



**ದಿನಾಂಕ: 24.09.2021 ರಂದು ನಡೆದ ಕರ್ನಾಟಕ ವಿಧಾನಮಂಡಲದ ಜಂಟಿ ಅಧಿವೇಶನದಲ್ಲಿ ಮುಖ್ಯ ಅತಿಥಿಗಳಾಗಿ ಪಾಲ್ಗೊಳ್ಳಲು ಆಗಮಿಸಿದ್ದ, ಲೋಕಸಭಾಧ್ಯಕ್ಷರಾದ ಶ್ರೀ ಓಂ ಪ್ರಕಾಶ್ ಬಿರ್ಲಾ ರವರು ಗಾಂಧಿ ಪುತ್ಥಳಿಗೆ ನಮಸ್ಕರಿಸಿ, ನಂತರ ಗಾಂಧಿ ಪ್ರತಿಮೆ ಮುಂದೆ ಕರ್ನಾಟಕ ರಾಜ್ಯ ಸಚಿವಸಂಪುಟದೊಂದಿಗೆ ಮಾಧ್ಯಮಗಳ ಛಾಯಾಚಿತ್ರಕ್ಕೆ ಸೆರೆಯಾದರು. ಈ ಸಂದರ್ಭದಲ್ಲಿ ವಿಧಾನ ಪರಿಷತ್ತಿನ ಸಭಾಪತಿ ಶ್ರೀ ಬಸವರಾಜ ಹೊರಟ್ಟಿ, ವಿಧಾನ ಸಭಾಧ್ಯಕ್ಷರಾದ ಶ್ರೀ ವಿಶ್ವೇಶ್ವರ ಹೆಗಡೆ ಕಾಗೇರಿ, ಮುಖ್ಯಮಂತ್ರಿಗಳಾದ ಶ್ರೀ ಬಸವರಾಜ ಬೊಮ್ಮಾಯಿ, ಮಾಜಿ ಮುಖ್ಯ ಮಂತ್ರಿಗಳಾದ ಶ್ರೀ ಬಿ.ಎಸ್ ಯಡಿಯೂರಪ್ಪ ನವರು, ಮಂತ್ರಿಗಳಾದ ಶ್ರೀ ಗೋವಿಂದ ಕಾರಜೋಳ, ಶ್ರೀ ಅರಗ ಜ್ಞಾನೇಂದ್ರ ಶ್ರೀ ಆರ್ ಅಶೋಕ್ ರವರು ಸಂಸದರಾದ ಶ್ರೀ ಉಮೇಶ್ ಜಾಧವ್ ಮತ್ತು ಇತರರು ಸಾಕ್ಷಿಯಾದರು.**




**ದಿನಾಂಕ: 25.09.2021ರಂದು ಸನ್ಮಾನ್ಯ ಸಭಾಧ್ಯಕ್ಷರೊಂದಿಗೆ ಸನ್ಮಾನ್ಯ ಲೋಕಸಭಾ ಅಧ್ಯಕ್ಷರು ವಿಧಾನ ಮಂಡಲದ ಗ್ರಂಥಾಲಯಕ್ಕೆ ಭೇಟಿ ನೀಡಿದ ಸಂದರ್ಭ:**



ದಿನಾಂಕ: **26.09.2021** ರಂದು ಉಣಕಲ್ ರೈಲು ನಿಲ್ದಾಣದ ಕೆಳ ಸೇತುವೆ ಉದ್ಘಾಟನಾ ಸಮಾರಂಭದಲ್ಲಿ ವಿಧಾನಪರಿಷತ್ತಿನ ಸಭಾಪತಿ ಶ್ರೀ ಬಸವರಾಜ ಹೊರಟ್ಟಿಯವರು ಪಾಲ್ಗೊಂಡಿರುವುದು. ಕಾರ್ಯಕ್ರಮದಲ್ಲಿ ಕೇಂದ್ರ ಸಚಿವರಾದ ಶ್ರೀ ಪ್ರಹ್ಲಾದ ಜೋಶಿ ಮತ್ತು ಮಾಜಿ ಮುಖ್ಯಮಂತ್ರಿ ಹಾಗೂ ಶಾಸಕರಾದ ಶ್ರೀ ಜಗದೀಶ್ ಶೆಟ್ಟರ್ ಮತ್ತು ಅನೇಕ ಜನಪ್ರತಿನಿಧಿಗಳು ಹಾಗೂ ರೈಲ್ವೆ ಇಲಾಖೆಯ ಅಧಿಕಾರಿಗಳು ಉಪಸ್ಥಿತರಿದ್ದರು.



ದಿನಾಂಕ: **30.09.2021**ರಂದು ಪದವಿಪೂರ್ವ ಶಿಕ್ಷಣ ಇಲಾಖೆ ಹಾಗೂ ಧಾರವಾಡ ಜಿಲ್ಲಾ ಪದವಿಪೂರ್ವ ಕಾಲೇಜುಗಳ ಪ್ರಾಚಾರ್ಯರ ಸಂಘ (ರಿ) ಇವರುಗಳ ಸಂಯುಕ್ತ ಆಶ್ರಯದಲ್ಲಿ ಹಮ್ಮಿಕೊಳ್ಳಲಾಗಿದ್ದ, ಶಿಕ್ಷಕರ ದಿನಾಚರಣೆ ಹಾಗೂ ನಿವೃತ್ತರಿಗೆ ಸನ್ಮಾನ ಸಮಾರಂಭದಲ್ಲಿ ವಿಧಾನ ಪರಿಷತ್ತಿನ ಸಭಾಪತಿ ಶ್ರೀ ಬಸವರಾಜ ಹೊರಟ್ಟಿ ಯವರು ಭಾಗವಹಿಸಿ ಆಯೋಜಕರಿಂದ ಸನ್ಮಾನವನ್ನು ಸ್ವೀಕರಿಸಿದರು. ಕಾರ್ಯಕ್ರಮದಲ್ಲಿ ವಿಧಾನಪರಿಷತ್ತಿನ ಸದಸ್ಯರಾದ ಶ್ರೀ ಎಸ್.ವಿ ಸಂಕನೂರು ರವರು ಉಪಸ್ಥಿತರಿದ್ದರು.



# ಭಾಗ–2

# ಸಂಸತ್ ಸುದ್ದಿಗಳು

## 1. ಅಕ್ರಮ ಗಣಿಗಾರಿಕೆ : ಸಂಸತ್ತಿನಲ್ಲಿ ಪ್ರಸ್ತಾಪ

ಮಂಡ್ಯ ಜಿಲ್ಲೆಯಲ್ಲಿ ನಡೆದಿರುವ ಅಕ್ರಮ ಗಣಿಗಾರಿಕೆ ಕುರಿತು ಲೋಕಾಸಭಾ ಅಧಿವೇಶನದಲ್ಲಿ ಪ್ರಸ್ತಾಪಿಸಿ, ಕಠಿಣ ಕ್ರಮಕ್ಕೆ ಒತ್ತಾಯಿಸಲಾಗುವುದು ಎಂದು ಸಂಸದೆ ಸುಮಲತಾ ಅಂಬರೀಷ್ ಹೇಳಿದರು.

ರಾಜಭವನದಲ್ಲಿ ನೂತನ ರಾಜ್ಯಪಾಲರ ಪ್ರಮಾಣವಚನ ಸಮಾರಂಭದಲ್ಲಿ ಪಾಲ್ಗೊಂಡ ಬಳಿಕ ಮಾಧ್ಯಮ ಪ್ರತಿನಿಧಿಗಳ ಜೊತೆ ಮಾತನಾಡಿದ ಅವರು, 'ಅಕ್ರಮ ಗಣಿಗಾರಿಕೆ ಕುರಿತು ಈಗಾಗಲೇ ಎರಡು ಬಾರಿ ಸಂಸತ್ತಿನಲ್ಲಿ ಪ್ರಸ್ತಾಪಿಸಿದ್ದೇನೆ. ಮುಂದಿನ ಅಧಿವೇಶನದಲ್ಲೂ ಪ್ರಸ್ತಾಪಿಸುವೆ' ಎಂದರು.

'ನನ್ನದು ವೈಯುಕ್ತಿಕವಾಗಿ ಹೆಚ್.ಡಿ.ಕುಮಾರಸ್ವಾಮಿ ಸೇರಿದಂತೆ ಯಾರದ್ದೇ ವಿರುದ್ಧದ ಹೋರಾಟ ಅಲ್ಲ. ದ್ವೇಷದ ರಾಜಕಾರಣ ಮಾಡುವುದಿಲ್ಲ. ಅಕ್ರಮ ಗಣಿಗಾರಿಕೆಯಿಂದ ಜಿಲ್ಲೆಯಲ್ಲಿ ಆಗುತ್ತಿರುವ ತೊಂದರೆ ವಿರುದ್ಧದ ಹೋರಾಟ' ಎಂದು ಹೇಳಿದರು. 'ಕುಮಾರಸ್ವಾಮಿ ಅಥವಾ ಅವರ ಬೆಂಬಲಿಗರ ದಾರಿಯಲ್ಲಿ ನಾವು ಸಾಗುವುದು ಬೇಡ ಎಂದು ಅಂಬರೀಷ್ ಅಭಿಮಾನಿಗಳಲ್ಲಿ ಮನವಿ ಮಾಡುವೆ. ಶಾಂತಿಯುತ ಹೋರಾಟದ ಹಾದಿಯಲ್ಲಿ ಸಾಗೋಣ ಎಂಬುದು ನನ್ನ ಮನವಿ' ಎಂದು ಹೇಳಿದರು.

ಅಕ್ರಮ ಗಣಿಗಾರಿಕೆ ವಿರುದ್ಧ ಕ್ರಮ ಜರುಗಿಸುವ ಸಂಬಂಧ ಮುರುಗೇಶ ನಿರಾಣಿ ಅವರೊಂದಿಗೂ ಚರ್ಚಿಸಲಾಗಿದೆ. ಅಗತ್ಯ ಕಂಡುಬಂದರೆ ಮತ್ತೊಮ್ಮೆ ಮುಖ್ಯಮಂತ್ರಿ ಅವರನ್ನು ಭೇಟಿ ಮಾಡಲಾಗುವುದು ಎಂದು ಸುಮಲತಾ ಪ್ರತಿಕ್ರಿಯಿಸಿದರು.

ಆಧಾರ: ಪ್ರಜಾವಾಣಿ, ದಿನಾಂಕ:02.07.2021.

## 2. ಮಳೆಗಾಲ ಅಧಿವೇಶನದಲ್ಲಿ 20 ಮಸೂದೆ ಮಂಡನೆ

ಸಂಸತ್ತಿನ ಮಳೆಗಾಲ ಅಧಿವೇಶನದಲ್ಲಿ ಐದು ಸುಗ್ರೀವಾಜ್ಞೆ ಸೇರಿ ಒಟ್ಟು 20 ಮಸೂದೆಗಳನ್ನು ಮಂಡಿಸಲಾಗುತ್ತದೆ. ಸುಗಮ ಕಲಾಪ ನಿಟ್ಟಿನಲ್ಲಿ ಪ್ರಧಾನಿ ಜೂನ್ 18 ರಂದು ಸರ್ವಪಕ್ಷಗಳ ಪ್ರಮುಖರ ಸಭೆ ಕರೆದಿದ್ದಾರೆ ಎಂದು ಕೇಂದ್ರ ಸಂಸದೀಯ ವ್ಯವಹಾರಗಳ ಸಚಿವ ಪ್ರಹ್ಲಾದ ಜೋಶಿ ತಿಳಿಸಿದರು. ಸುದ್ದಿಗಾರರೊಂದಿಗೆ ಮಾತನಾಡಿದ ಅವರು ಸಂಸತ್ತಿನ ಮಳೆಗಾಲ ಅಧಿವೇಶನದಲ್ಲಿ ರಚನಾತ್ಮಕ ಚರ್ಚೆಗೆ ಕೇಂದ್ರ ಸರ್ಕಾರ ಸಿದ್ಧವಿದೆ. ಕಲಾಪದಲ್ಲಿ ಅರ್ಥಪೂರ್ಣ ಚರ್ಚೆ ಅಭಿವೃದ್ಧಿ ಹಾಗೂ ಸಮಸ್ಯೆಗಳ ಮೇಲೆ ಬೆಳಕು ಚೆಲ್ಲುವ ಕೆಲಸವಾಗಲಿ ಎಂಬುದು ಕೇಂದ್ರ ಸರ್ಕಾರದ ಆಶಯ. ಕೊರೋನಾ 2ನೇ ಅಲೆಯನ್ನು ಕೇಂದ್ರ ಸರ್ಕಾರ ಯಶಸ್ವಿಯಾಗಿ ನಿಭಾಯಿಸಿದೆ. ವಿಶ್ವದಲ್ಲೇ ಅತಿ ದೊಡ್ಡ ಲಸಿಕಾ ಅಭಿಯಾನ ಕೈಗೊಂಡಿದ್ದು, ಇದುವರೆಗೆ ದೇಶದಲ್ಲಿ ಸುಮಾರು 37 ಕೋಟಿ ಜನರಿಗೆ ಲಸಿಕೆ ನೀಡಲಾಗಿದೆ. ಲಸಿಕೆ ನೀಡಿಕೆಯನ್ನು ಇನ್ನಷ್ಟು ಚುರುಕುಗೊಳಿಸಲಾಗುವುದು ಎಂದರು.

ಆಧಾರ:ಉದಯವಾಣಿ, ದಿನಾಂಕ:11.07.2021

## 3. ಜುಲೈ 19 ರಿಂದ ಸಂಸತ್ತಿನ ಮುಂಗಾರು ಅಧಿವೇಶನ

ಸಂಸತ್ತಿನ ಮುಂಗಾರು ಅಧಿವೇಶನವು ಜುಲೈ 19ರಿಂದ ಆರಂಭವಾಗಲಿದೆ ಎಂದು ಲೋಕಸಭಾ ಸ್ಪೀಕರ್ ಓಂ ಬಿರ್ಲಾ ತಿಳಿಸಿದ್ದಾರೆ. 19 ದಿನಗಳ ಕಾಲ ನಡೆಯಲಿರುವ ಅಧಿವೇಶನವು ಆಗಸ್ಟ್ 13ಕ್ಕೆ ಅಂತ್ಯಗೊಳ್ಳಲಿದೆ. ಅಧಿವೇಶನದ ಅವಧಿಯಲ್ಲಿ ಕೋವಿಡ್ ಸಂಬಂಧಿತ ಎಲ್ಲ ಮಾರ್ಗಸೂಚಿಗಳನ್ನು

ಪಾಲಿಸಲು ಸಂಸತ್ತಿನ ಆವರಣವನ್ನು ಸಿದ್ಧಗೊಳಿಸಲಾಗಿದೆ. ಸಂಸತ್ತು ಭವನದ ಆವರಣ ಪ್ರವೇಶಿಸುವವರು ಕನಿಷ್ಠ ಒಂದು ಡೋಸ್ ಕೋವಿಡ್ ಲಸಿಕೆ ತೆಗೆದುಕೊಂಡಿರಬೇಕು ಎಂದು ಬಿರ್ಲಾ ಹೇಳಿದ್ದಾರೆ.

ಆಧಾರ: ವಿಶ್ವವಾಣಿ, ದಿನಾಂಕ:13.07.2021.

## 4. 323 ಸಂಸದರಿಗೆ ಎರಡೂ ಡೋಸ್ ಲಸಿಕೆ: ಕೋವಿಡ್ ನಿಯಮದ ಅಡಿ ಕಲಾಪ

ಇದೇ ತಿಂಗಳ 19ರಿಂದ ಆರಂಭವಾಗಲಿರುವ ಮುಂಗಾರು ಅಧಿವೇಶನದ ವೇಳೆ ಕೋವಿಡ್‌ಗೆ ಸಂಬಂಧಿಸಿದ ಮಾರ್ಗಸೂಚಿಗಳನ್ನು ಕಟ್ಟುನಿಟ್ಟಾಗಿ ಪಾಲನೆ ಮಾಡಲಾಗುತ್ತದೆ ಎಂದು ಲೋಕಸಭಾ ಸ್ಪೀಕರ್ ಓಂ ಬಿರ್ಲಾ ಅವರು ಹೇಳಿದ್ದಾರೆ. ಸಂಸತ್ತಿನ ಆವರಣದಲ್ಲಿ ಸುದ್ದಿಗೋಷ್ಠಿ ಉದ್ದೇಶಿಸಿ ಮಾತನಾಡಿದ ಓಂ ಬಿರ್ಲಾ ಅವರು, 'ಈವರೆಗೆ ಸಂಸತ್ತಿನ 323 ಸಂಸದರು ಲಸಿಕೆ ಪಡೆದಿದ್ದಾರೆ. ಇನ್ನು 23 ಸಂಸದರು ಕೆಲ ವೈದ್ಯಕೀಯ ಕಾರಣಗಳಿಗಾಗಿ ಮೊದಲ ಡೋಸ್ ಪಡೆಯಲು ಸಾಧ್ಯವಾಗಿಲ್ಲ. ಈವರೆಗೆ ಕೋರೋನಾ ಲಸಿಕೆ ಪಡೆಯದವರು ಕಲಾಪ ನಡೆಯುವ ವೇಳೆ ಸಂಸತ್ತಿನ ಆವರಣ ಪ್ರವೇಶಕ್ಕೂ ಮುನ್ನ ಆರ್‌ಟಿ–ಪಿಸಿಆರ್ ಪರೀಕ್ಷೆ ಮಾಡಿಸಿಕೊಳ್ಳುವಂತೆ ಸೂಚಿಸಲಾಗುತ್ತದೆ' ಎಂದರು.

ಆಧಾರ: ಕನ್ನಡ ಪ್ರಭ, ದಿನಾಂಕ:13.07.2021

## 5. RT-PCR tests not mandatory

With 311 Members of Parliament vaccinated fully and another 127 having taken one dose of their vaccines, RT-PCR tests will not be a mandatory prerequisite for entry in to the Parliament House complex, Lok Sabha speaker OM Birla said. Birla said all Covid-related protocols will be in place during the monsoon session, scheduled to begin on July 19 and those who have not been vaccinated will be requested to undergo an RT-PCR test before entry. It will not, however, be compulsory for anyone.

Of the 543 Lok Sabha MPs, 29 have not been vaccinated and 12 among them have not taken the just for medical reasons or because they are infected with corona.

Along with this, parliament staff has also been vaccinated. Birla also highlighted that Parliament conducted record breaking business despite the pandemic and a total of 107 laws were enacted by the 17$^{th}$ Lok Sabha in its first five sittings. Birla also said the start of monsoon session will mark the first time when the Government will have responded to all matters of importance (under Rule 377) raised by MPs during Zero Hour.

Parliament, he said, has also undertaken an ambitious programme to digitalise parliamentary records dating back to 1854, and develop an app, likely to be ready by the end of the month, which will give access to all parliamentary matters, including live telecast of House proceedings, at the click of a button.

Birla also said that construction of the new Parliament building was on course, but running behind schedule by 10 days, which he said was likely to be made up.

Courtesy:Times of India, Dated:13.07.2021

## 6. Now, Parl proceedings from 1854 on fingertips

Lok Sabha has bet big on digistisation by making available legislative council proceedings dating back to 1854 online for researchers and history buffs and soon plans to roll our a special mobile app for members to keep track of parliamentary proceedings.

Lok Sabha Speaker Om Birla said proceedings of the first meeting of the Legislative Council of India, held on May 20, 1854 and the subsequent years that trace the egoulution of Parlimentary democracy in the country have been made available on the website of the Parliamentary library.

LokSabha secretariat officials said the total pages available online exceed 40 lakh and almost every page available of Parliament proceedings has been scanned, indexed and uploaded on a dedicated website www.eparlib.nic.in.

"It took almost five yerars to digitize these documents to place them on this portal which acts more like a search engine. There are more than 4.2 lakh documents comprising nearly 45 lakh pages," a senior Lok Sabha official said.

Birla said a meta-data search was now possible for the proceedings of the 11th Lok Sabha to the 17th Lok Sabha and efforts were on to make a similar search facility available for the proceedings of the first Lok Sabha to the 10th Lok Sabha.

The Speaker said a special mobile app was being developed for members to access Parliament papers, debates, question hour submissions and even live-streaming of proceedings.

"This app will be a one-stop solution for all matters related to Parliament," he said. A senior Lok Sabha officer said a beta version of the app would be available by next month for use to members and later for the general public.

Plans were also afoot to link the libraries of Parliament and that of state Assemblies to ensure seamless access to debates for members as well as researchers.

Courtesy:Deccan Herlad, Dated:13.07.2021

## 7. Restore access to all media persons for coverage of monsoon session

Representative bodies of journalists including the Press Club of India, Press Association, the Editors Guild of India, Delhi Union of Journalists and the Working News Cameramen's Association have written to Lok Sabha Speaker Om Birla seeking restoration of access to all media persons to cover the proceedings of the monsoon session of Parliament.

Following two day deliberation the media bodies wrote to Birla saying that media was restricted from covering parliamentary proceedings during the budget session of Parliament in 2020 in order to stop the spread of corona virus. While a handful of media persons representing news agencies and newspapers were given access, most media person's could not do so.

Pointing to the pattern of isolating Parliament and parliamentarians from media scrutiny, the media organisations in their letter to Birla said the restricted access has badly isolated the tradition of Parliament coverage in the name of following Covid restrictions. The advent of the pandemic has seen unprecedented barriers on those who can access parliamentary proceedings and its work in committees, the bodies said.

It is cur humble submission that the Press Advisory Committee of Lok Sabha meeting be held before the Monsoon session beginning on July 19 for disposal of pending applications and it must be actively associated with the process of streaming media access to the press gallery they added.

Courtesy:Times of India, Dated: 15.07.2021

## 8. ರಾಜ್ಯ ಸಭೆಯಲ್ಲಿ ಗೋಯಲ್ ನಾಯಕ

ಜುಲೈ 19 ರಿಂದ ಸಂಸತ್, ಮುಂಗಾರು ಅಧಿವೇಶನ ಶುರುವಾಗಲಿದೆ. ಅದಕ್ಕೆ ಪೂರಕವಾಗಿ ರಾಜ್ಯಸಭೆಯಲ್ಲಿ ಆಡಳಿತ ಪಕ್ಷದ ನಾಯಕರಾಗಿ ಕೈಗಾರಿಕೆ ಮತ್ತು ವಾಣಿಜ್ಯ ಸಚಿವ ಪಿಯೂಷ್ ಗೋಯಲ್‌ರನ್ನು ನೇಮಕ ಮಾಡಲಾಗಿದೆ. ಇದುವರೆಗೆ ಆ ಹೊಣೆಯಲ್ಲಿದ್ದ ಸಾಮಾಜಿಕ ಗೆಹಲೋತ್ ಕರ್ನಾಟಕದ ರಾಜ್ಯಪಾಲರಾಗಿ ನೇಮಕವಾದ್ದರಿಂದ ಈ ಬದಲಾವಣೆಯಾಗಿದೆ.

ಗೋಯಲ್ ರಾಜ್ಯಸಭೆಯಲ್ಲಿ ಪ್ರಮುಖ ವಿಧೇಯಕಗಳ ಅಂಗೀಕಾರದ ಸಂದರ್ಭದಲ್ಲಿ ಬಿಜೆಡಿ, ಎಐಎಡಿಎಂಕೆ, ವೈಎಸ್‌ಆರ್ ಕಾಂಗ್ರೆಸ್ ಸೇರಿದಂತೆ ಹಲವು ಪ್ರತಿಪಕ್ಷಗಳ ಬೆಂಬಲ ಗಳಿಸಿಕೊಡುವಲ್ಲಿ ಯಶಸ್ವಿಯಾಗಿದ್ದರು. ಜೊತೆಗೆ ತೃಣಮೂಲ ಕಾಂಗ್ರೆಸ್ ಜೊತೆಗೂ ಉತ್ತಮ ಬಾಂಧವ್ಯ ಹೊಂದಿದ್ದಾರೆ.

**ರಾಹುಲ್‌ಗೆ ನಾಯಕ ಸ್ಥಾನ:** ಇದೇ ವೇಳೆ ಲೋಕಸಭೆಯಲ್ಲಿ ಕಾಂಗ್ರೆಸ್ ನಾಯಕರಾಗಿರುವ ಅಧಿರ್ ರಂಜನ್ ಚೌಧರಿ ಸ್ಥಾನದಲ್ಲಿ ವಯನಾಡ್ ಸಂಸದ ರಾಹುಲ್ ಗಾಂಧಿ ಅವರನ್ನೇ ನೇಮಿಸುವ ಸಾಧ್ಯತೆಗಳು ಹೆಚ್ಚಾಗಿವೆ. ಇದನ್ನು ಕಾಂಗ್ರೆಸ್ ಅಲ್ಲಗಳೆಯುತ್ತಿದೆ. ಲೋಕಸಭೆಯಲ್ಲಿ ಪಕ್ಷವನ್ನು ಮುನ್ನಡೆಸಲು ಸಂಸದ ಮನೀಶ್ ತಿವಾರಿ, ಶಶಿ ತರೂರ್, ಗೌರವ್ ಗೊಗೊಯ್, ರನ್ವಿತ್ ಸಿಂಗ್ ಬಿಟ್ಟು ಉತ್ತಮ ಕುಮಾರ ರೆಡ್ಡಿ ಅವರ ಹೆಸರುಗಳನ್ನು ಪರಿಶೀಲಿಸಲಾಗಿದ್ದರೂ, ಅಂತಿಮವಾಗಿ ರಾಹುಲ್‌ರನ್ನೇ ನೇಮಕ ಮಾಡುವ ಸಾಧ್ಯತೆಯಿದೆ ಎನ್ನಲಾಗಿದೆ. ಇದೇ ವೇಳೆ ಅಧಿವೇಶನ ಹಿನ್ನೆಲೆಯಲ್ಲಿ ಮುಂದಿನ ಸರ್ವಪಕ್ಷ ಸಭೆ ನಡೆಯಲಿದೆ.

ಆಧಾರ:ಉದಯವಾಣಿ, ದಿನಾಂಕ:15.07.2021

## 9. Notice issued to 3 MPs under anti-defection law

The Lok Sabha Secretariat has issued notices to MPs Sisir Adhikari, Sunil Kumar Mondal and K.Raghu Rama Krishna Raju under the anti defection law.

Mr.Adhikari and Mr.Mondal had switched over to the BJP from the Trinamool Congress while YSR Congress Party's Mr.Raju has been speaking against the party's supremo. The Trinamool Congress and the YSRCP had approached Lok Sabha Speaker Om Birla, seeking their disqualification. The three leaders have been asked to respond within 15 days of the receipt of letters a source told The Hindu on Thursday.

The timing of the notices are significant as it not only comes just days before the Parliament session but also ahead of a proposal visit by West Bengal Chief Minister Mamata Banerjee to Delhi later this month. The ruling YSR Congress Party in Andhra Pradesh had questioned the delay as well as the neutrality of the Speaker.

In an interview Mr. Birla had explained the procedure.

They (TMC) have written to me with their complaints. I have said that the complaint be taken on board as per form required. I shall ask the two named for their version and later refer it to the Privileges Committee which will then hear the matter, Mr. Birla had said.

Well the anti-defection law doesn't specify a timeline in dealing with such complaints. All I can say is that the process will be carries out in the most transparent way he added.

Courtesy: The Hindu, Dated: 16.07.2021

## 10. Akalis to move adjournment motion in LS on farm laws

Ahead of the monsoon session of Parliament, set to begin on July 19, the Shiromani Akali Dal (SAD) has decided to move an adjournment motion in the Lok Sabha against the government on the three farm laws. The party had walked out of the NDA government over the controversial laws.

Senior SAD MP Naresh Gujral told that his party would be reaching out to the leaders of all regional parties to seek support for the motion which requires the signature of 50 MPs to be admitted.

As of now the Shiv Sena, our allies the Bahujan Samaj Party, the Nationalist Congress Party, the Dravida Munnetra Kazhagam and the Trinmool Congress have agreed to support it. Mr. Gujral said, adding that they were reaching out to more regional parties such as the Biju Janata Dal, the YSR Congress Party and the Telanagana Rastra Samithi.

While adjournment motions are not allowed in the Rajya Sabha. Mr. Gujral said his party would hold discussion with supporting parties to come up with a device to register their feelings against the farm laws.

Interestingly, the Congress the main rival of the SAD in the poll bound State of Punjab has not been included in this effort and is not likely to be. According to sources, the tug of was between the two parties to be the sole spoken person for the agitating farmers, especially in Punjab and Haryana is the reason for this distance.

The protests and the mobilisation of farmers on the issue is expected to have a huge impact on voter behaviour in the upcoming poll.

Courtesy:The Hindu, Dated: 16.07.2021

## 11. Opposition to adjournment of LS over Pegasus

Former Congress president Rahul Gandhi and other Opposition leaders including from DMK and Shiv Sena, will submit a joint adjournment motion on Pegasus issue in Lok Sabha on Wednesday while a meeting of all likeminded parties in Parliament will be held to decide on the next course of action if the government ignores its demand.

Meeting prior to the sitting of Lok Sabha and Rajya Sabha will be chaired by Leader of Opposition in Rajya Sabha Mallikarjun Kharge and attended by UPA parties as well as likeminded parties. Rahul will attend the meeting source said.

Evening floor leaders of ten parties in Lok Sabha-Congress, CMK, NCP, Shiva Sena, CPM, RSP, Kerala Congress, Muslim League, National Conference and BSP met in Parliament House to chalk out the future strategy BSP which was keeping away from Opposition meetings, interestingly sent its representative Ritesh Pandey for the meeting chaired by Rahul.

Those who attended the meeting also included T.R.Baalu and Kanimozhi (DMK) Supriya Sule (NCP), Arvind Sawant Shiva Sena), S.Venkatesan and AM Ariff (CPI-M), ET Mohammed Basheer (Muslim League) Thomas Chazhik kadan (Kerala Congress) Hasnain Masoodi (National Conference) NK Premachandran (RSP).

Sources said leaders of these parties including Rahul will move a joint adjournment motion in Lok Sabha in show of strength, seeking an immediate discussion on the Pegasus issue. Sources said the BSP leader told them that he would first discuss with his party leadership on joint motion and convey the decision on Wednesday while emphasising that they stand with the Opposition on the issue otherwise.

Before the House assembles, the leaders of all like-minded parties in Parliament will meet to decide the strategy to be adopted if the government refuses to hold discussion on the issue. Sources said the Opposition parties are mulling two options-to meet and petition President. Ram Nath Kovind or hold a joint press conference on the issue.

The meeting to be chaired by Kharge who has been assigned by Congress president Sonia Gandhi to coordinate with other Opposition parties-will see the attendance of more parties, including TMC, AAP and SP among others.

Courtesy:-The Hindu, Dated: 18.07.2021

## 12. ರಾಜ್ಯಸಭಾ ಸದಸ್ಯತ್ವಕ್ಕೆ ಗೆಹಲೋತ್ ರಾಜೀನಾಮೆ

ಕರ್ನಾಟಕ ರಾಜ್ಯಪಾಲರಾಗಿ ನೇಮಕಗೊಂಡಿರುವ ಕೇಂದ್ರದ ಸಾಮಾಜಿಕ ನ್ಯಾಯ ಮತ್ತು ಸಬಲೀಕರಣ ಖಾತೆಯ ಮಾಜಿ ಸಚಿವ ಥಾವರಚಂದ್ ಗೆಹಲೋತ್ ಅವರು ತಮ್ಮ ರಾಜ್ಯಸಭಾ ಸದಸ್ಯತ್ವಕ್ಕೆ ರಾಜೀನಾಮೆ ಸಲ್ಲಿಸಿದ್ದಾರೆ. ಉಪ ರಾಷ್ಟ್ರಪತಿ ಎಂ.ವೆಂಕಯ್ಯನಾಯ್ಡು ಅವರನ್ನು ಭೇಟಿ ಮಾಡಿದ ಗೆಹಲೋತ್ ಅವರ ರಾಜೀನಾಮೆಯನ್ನು ಉಪ ರಾಷ್ಟ್ರಪತಿ ಅಂಗೀಕರಿಸಿದ್ದಾರೆ ಎಂದು ಉಪ ರಾಷ್ಟ್ರಪತಿ ಸಚಿವಾಲಯವು ಮಾಡಿರುವ ಟ್ವೀಟ್‌ನಲ್ಲಿ ತಿಳಿಸಲಾಗಿದೆ. ಗೆಹಲೋತ್ ಅವರನ್ನು ಕರ್ನಾಟಕದ ರಾಜ್ಯಪಾಲರಾಗಿ ನೇಮಕ ಮಾಡಲಾಗಿತ್ತು.

ಆಧಾರ:ವಿಶ್ವವಾಣಿ, ದಿನಾಂಕ:18.07.2021

## 13. ಇಂದಿನಿಂದ ಮುಂಗಾರು ಸಮರ

ಸಂಸತ್ತಿನ ಮುಂಗಾರು ಅಧಿವೇಶನ ಆರಂಭವಾಗಲಿದೆ. ಮೊದಲ ದಿನವೇ ಅಧಿವೇಶನವೂ ಕಾವೇರುವ ಸಾಧ್ಯತೆ ಇದ್ದು, ಪೆಟ್ರೋಲ್–ಡೀಸೆಲ್ ದರ ಏರಿಕೆ ಹಾಗೂ ಕೋವಿಡ್ ನಿರ್ವಹಣೆ ವೈಫಲ್ಯ–ಮೊದಲಾದ ವಿಷಯಗಳನ್ನು ಇಟ್ಟುಕೊಂಡು ಮೋದಿ ಸರ್ಕಾರವನ್ನು ಇಕ್ಕಟ್ಟಿಗೆ ಸಿಲುಕಿಸಲು ಪ್ರತಿಪಕ್ಷಗಳು ಸಜ್ಜಾಗಿವೆ.

ಇದೇ ವೇಳೆ, ಸರ್ಕಾರವು 17 ವಿಧೇಯಕಗಳನ್ನು ಮಂಡಿಸಲು ಸಿದ್ಧತೆ ನಡೆಸಿದೆ. ಇದರಲ್ಲಿ 3 ಸುಗ್ರೀವಾಜ್ಞೆಗಳು ಕೂಡ ಸೇರಿವೆ.

ಶಸ್ತ್ರಾಸ್ತ್ರ ಉತ್ಪಾದಿಸುವ ಕಾರ್ಖಾನೆಗಳ ನೌಕರರು ಮುಷ್ಕರ ನಡೆಸುವಂತಿಲ್ಲ ಎಂದು ನಿರ್ಬಂಧ ವಿಧಿಸುವ ಸುಗ್ರೀವಾಜ್ಞೆಯು ಇವುಗಳಲ್ಲಿ ಮಹತ್ವವಾದುದು. ದಿಲ್ಲಿ ವಾಯುಗುಣಮಟ್ಟ ಕಾಯುವ ಸುಗ್ರೀವಾಜ್ಞೆ ಕೂಡ ಇದರಲ್ಲಿ ಸೇರಿದೆ. ಆಗಸ್ಟ್ 13ರಂದು ಮುಗಿಯಲಿರುವ ಈ ಅಧಿವೇಶನದಲ್ಲಿ ಪೆಟ್ರೋಲ್ ಹಾಗೂ ಡೀಸೆಲ್ ಬೆಲೆ ರೂ. 100.00 ದಾಟಿರುವುದು ಪ್ರಮುಖ ವಿಷಯವಾಗುವ ಸಾಧ್ಯತೆ ಇದೆ. ಇದನ್ನು ಪ್ರಮುಖವಾಗಿ ಪ್ರಸ್ತಾಪಿಸಿ ಸರ್ಕಾರದಿಂದ ಉತ್ತರ ಬಯಸಲು ಕಾಂಗ್ರೆಸ್ ಆದಿಯಾಗಿ ವಿವಿಧ ಪ್ರತಿಪಕ್ಷಗಳು ತೀರ್ಮಾನಿಸಿವೆ.

ಇನ್ನು ಕೋವಿಡ್ 2ನೇ ಅಲೆ ವೇಳೆ ಅಪಾರ ಸಾವು ನೋವು ಸಂಭವಿಸಿದ್ದು, ಇದಕ್ಕೆ ಸರ್ಕಾರವು ಆರೋಗ್ಯ ವ್ಯವಸ್ಥೆ ವೈಫಲ್ಯವೇ ಕಾರಣ ಎಂಬುದು ಪ್ರತಿಪಕ್ಷಗಳ ಮುಖ್ಯ ಆರೋಪ. ಇದು ಪ್ರಮುಖ ಚರ್ಚಾ ವಿಷಯ ಆಗುವುದು ನಿಶ್ಚಿತ. ಇನ್ನು ಪಶ್ಚಿಮ ಬಂಗಾಳದಲ್ಲಿ ಟಿಎಂಸಿ–ಬಿಜೆಪಿ ರಾಜಕೀಯ ಸಂಘರ್ಷ ಕೂಡ ಕೋಲಾಹಲ ಎಬ್ಬಿಸುವ ಸಾಧ್ಯತೆ ಇದೆ.

**ಸಹಕಾರ ನೀಡಿ–ಪ್ರಧಾನಿ ಮನವಿ:** ಈ ನಡುವೆ ಸುಗಮ ಸಂಸತ್ ಕಲಾಪಕ್ಕೋಸ್ಕರ ಸರ್ವಪಕ್ಷ ಸಭೆ ನಡೆಯಿತು. ಈ ವೇಳೆ ಮಾತನಾಡಿದ ಪ್ರಧಾನಿ ನರೇಂದ್ರ ಮೋದಿ, ಪ್ರತಿಪಕ್ಷಗಳ ರಚನಾತ್ಮಕ ಸಲಹೆಗಳನ್ನು ಸ್ವೀಕರಿಸಲು ಸರ್ಕಾರ ಮುಕ್ತ ಮನಸ್ಸು ಹೊಂದಿದೆ. ಕಲಾಪವನ್ನು ಸುಗಮವಾಗಿ ನಡೆಯಲು ಅವಕಾಶ ನೀಡಬೇಕು ಎಂದು ಮನವಿ ಮಾಡಿದರು.

**ಹೊಸ ಸಚಿವರ ಪರಿಚಯ:** ಮೋದಿ ಮಂತ್ರಿಮಂಡಲದ ಸದಸ್ಯರಾಗಿ 43 ಸಚಿವರು ಪ್ರಮಾಣ ವಚನ ಸ್ವೀಕರಿಸಿದ್ದು, ಅವರ ಪರಿಚಯ ಕೂಡ ಅಧಿವೇಶನದ ಆರಂಭದಲ್ಲಿ ನಡೆಯಲಿದೆ.

**ಕೋವಿಡ್ ನಿಯಮ ಪಾಲನೆ:** ಕೋವಿಡ್ ನಿಯಮಗಳಿಗೆ ಅನುಸಾರವಾಗಿ ಕಲಾಪ ನಡೆಯಲಿದೆ 444 ಲೋಕಸಭೆ ಹಾಗೂ 218 ರಾಜ್ಯಸಭೆ ಸದಸ್ಯರು ಕನಿಷ್ಠ ಪಕ್ಷ 1 ಡೋಸ್ ಲಸಿಕೆ ಹಾಕಿಸಿಕೊಂಡಿದ್ದಾರೆ. ಲಸಿಕೆ ಹಾಕಿಸಿಕೊಳ್ಳದವರಿಗೆ ಆರ್‌ಟಿಪಿಸಿಆರ್ ಟೆಸ್ಟ್ ವ್ಯವಸ್ಥೆ ಮಾಡಲಾಗಿದೆ.

ಆಧಾರ:ಕನ್ನಡ ಪ್ರಭ, ದಿನಾಂಕ:19.07.2021

## 14. ಸಂಸದರ ನಿಧಿ ಮತ್ತೆ ಆರಂಭಿಸಲು ಒತ್ತಾಯ

ಕೊರೋನಾ ಕಾರಣದಿಂದ ತಾತ್ಕಾಲಿಕವಾಗಿ ರದ್ದುಪಡಿಸಿರುವ ಸಂಸದರ ಪ್ರದೇಶಾಭಿವೃದ್ಧಿ ನಿಧಿಯನ್ನು ಮತ್ತೆ ಆರಂಭಿಸಬೇಕು ಎಂದು ಪ್ರತಿಪಕ್ಷಗಳು ಆಗ್ರಹಿಸಿವೆ.

ಸಂಸತ್‌ನ ಮುಂಗಾರು ಅಧಿವೇಶನ ಹಿನ್ನೆಲೆಯಲ್ಲಿ ಲೋಕಸಭೆ ಸ್ಪೀಕರ್ ಓಂ ಬಿರ್ಲಾ ಕರೆದಿದ್ದ ಸದನದ ನಾಯಕನ ಸಭೆಯಲ್ಲಿ ಭಾಗವಹಿಸಿದ್ದ ಪ್ರತಿಪಕ್ಷಗಳ ನಾಯಕರು. ಎರಡು ವರ್ಷಗಳಿಂದ ಪ್ರದೇಶಾಭಿವೃದ್ಧಿ ನಿಧಿ ಇಲ್ಲದ ಕಾರಣ ಸಂಸದರು ತಮ್ಮ ಕ್ಷೇತ್ರಗಳಲ್ಲಿ ಯಾವುದೇ ಅಭಿವೃದ್ಧಿ ಕಾರ್ಯಕೈಗೊಳ್ಳಲು ಸಾಧ್ಯವಾಗುತ್ತಿಲ್ಲ. ಈ ನಿಧಿಯನ್ನು ಮತ್ತೆ ಆರಂಭಿಸುವಂತೆ ಸರ್ಕಾರಕ್ಕೆ ನಿರ್ದೇಶನ

ನೀಡಿ ಎಂದು ಮನವಿ ಮಾಡಿದರು. ಸರ್ಕಾರದ ಜೊತೆ ಈ ಕುರಿತು ಚರ್ಚೆ ನಡೆಸುವ ಭರವಸೆಯನ್ನು ಸ್ಪೀಕರ್ ನೀಡಿದರು.

**ಆರೋಗ್ಯಕರ ಚರ್ಚೆಗೆ ಸಿದ್ದ ಎಂದ ಪ್ರಧಾನಿ:** ಇದಕ್ಕೂ ಮೊದಲು ಕೇಂದ್ರ ಸರ್ಕಾರವು ಸರ್ವಪಕ್ಷಗಳ ಸಭೆ ನಡೆಸಿತು. ಸಭೆಯಲ್ಲಿ ಮಾತನಾಡಿದ ಪ್ರಧಾನಿ ನರೇಂದ್ರ ಮೋದಿ ಸದನದಲ್ಲಿ ಆರೋಗ್ಯಕರ ಚರ್ಚೆಗೆ ಸರ್ಕಾರ ಸಿದ್ದ ಎಂದು ಭರವಸೆ ನೀಡಿದರು. ಕಲಾಪ ನಿಯಮಗಳು ಹಾಗೂ ಪ್ರಕ್ರಿಯೆಗಳ ಅನ್ವಯ ಸಂಸತ್ತಿನಲ್ಲಿ ಆರೋಗ್ಯಕರ ಮತ್ತು ಅರ್ಥಪೂರ್ಣ ಕಲಾಪ ನಡೆಸಲು ಸಹಕರಿಸಬೇಕು ಎಂದು ಕೋರಿದರು. ಲೋಕಸಭೆಯಲ್ಲಿ ಕಾಂಗ್ರೆಸ್ ಸದನ ನಾಯಕ ಅಧೀರ್ ರಂಜನ್ ಚೌಧರಿ ಸೇರಿ ಟಿಎಂಸಿ, ಡಿಎಂಕೆ, ಬಿಎಸ್‌ಪಿ ಸೇರಿ 33 ಪಕ್ಷಗಳ 40 ನಾಯಕರು ಸರ್ವಪಕ್ಷ ಸಭೆಯಲ್ಲಿ ಭಾಗವಹಿಸಿದ್ದರು ಎಂದು ಸಭೆ ಬಳಿಕ ಸಚಿವ ಪ್ರಹ್ಲಾದ್ ಜೋಷಿ ಸುದ್ದಿಗಾರರಿಗೆ ತಿಳಿಸಿದರು.

**ನಿಲುವಳಿ ಸೂಚನೆಗೆ ಪ್ರತಿಪಕ್ಷಗಳ ನಿರ್ಧಾರ:** ಶತಾಯಗತಾಯ ಕೇಂದ್ರ ಸರ್ಕಾರವನ್ನು ಇಕ್ಕಟ್ಟಿಗೆ ಸಿಲುಕಿಸಬೇಕು ಎಂದು ಪ್ರತಿಪಕ್ಷಗಳು ನಿರ್ಧರಿಸಿದ್ದು, ಸಂಸತ್ತಿನ ಉಭಯ ಸದನಗಳಲ್ಲಿ ರೈತರ ಸಮಸ್ಯೆಗಳ ಕುರಿತು ನಿಲುವಳಿ ಮಂಡಿಸಲು ಮುಂದಾಗಿವೆ. ಸರ್ವಪಕ್ಷ ಸಭೆ ಬಳಿಕ ಪ್ರತಿಪಕ್ಷಗಳು ಪ್ರತ್ಯೇಕವಾಗಿ ಸಭೆ ನಡೆಸಿದ ಬಳಿಕ ರೆವ್ಯೊಲ್ಯೂಷನರಿ ಸೋಷಿಯಲಿಸ್ಟ್ ಪಕ್ಷ (ಆರ್‌ಎಸ್‌ಪಿ) ನಾಯಕ ಎನ್.ಕೆ.ಪ್ರೇಮಚಂದ್ರನ್ ಮಾಹಿತಿ ನೀಡಿದ್ದು, ಸಂಸತ್ತಿನ ಉಭಯ ಸದನಗಳಲ್ಲಿ ರೈತರ ಸಮಸ್ಯೆಗಳ ಕುರಿತು ನಿಲುವಳಿ ಸೂಚನೆ ಮಂಡಿಸಲಾಗುವುದು ಎಂದು ತಿಳಿಸಿದ್ದಾರೆ. ಸರ್ವಪಕ್ಷ ಸಭೆಯಲ್ಲಿ ಪ್ರಧಾನಿ ಕೇವಲ 10 ನಿಮಿಷ ಭಾಗವಹಿಸಿದ್ದರು ಎಂದು ಟಿಎಂಸಿ ಸಂಸದ ಡೆರೆಕ್ ಒ ಬ್ರಿಯಾನ್ ಆರೋಪಿಸಿದ್ದಾರೆ.

ಆಧಾರ:ಕನ್ನಡ ಪ್ರಭ, ದಿನಾಂಕ:19.07.2021

## 15. ಕಾದಿವೆ 23 ವಿಧೇಯಕಗಳು

1. **ನ್ಯಾಯ ಮಂಡಳಿ ಸುಧಾರಣೆ ವಿಧೇಯಕ:** ನ್ಯಾಯಾಂಗ ವ್ಯವಸ್ಥೆಯಲ್ಲಿ ಕೆಲವು ಮಹತ್ವದ ಬದಲಾವಣೆ ತರುವುದು ಈ ವಿಧೇಯಕದ ಉದ್ದೇಶ. ಹಾಲಿ ಇರುವ ಕೆಲವು ನ್ಯಾಯಾಧೀಕರಣ ಮತ್ತು ಮೇಲ್ಮನವಿ ಪ್ರಾಧಿಕಾರಗಳನ್ನು ವಿಸರ್ಜಿಸಿ ಮತ್ತು ಇನ್ನು ಕೆಲವು ಮಂಡಳಿಗಳನ್ನು ಹಾಲಿ ಇರುವುದಕ್ಕೆ ವರ್ಗವಾಗಲಿದೆ. ಉದಾ: ಸಿನಿಮಾಟೋಗ್ರಾಫ್ ಕಾಯ್ದೆ 1952ರನ್ನು ರದ್ದುಪಡಿಸಿ ಸಿನಿಮಾ ಪ್ರಮಾಣಪತ್ರ ಮಂಡಳಿಯ ಅಧಿಕಾರವನ್ನು ಹೈಕೋರ್ಟ್‌ಗೆ ನೀಡುವುದು.
2. **ಡಿಎನ್‌ಎ ತಂತ್ರಜ್ಞಾನ ವಿಧೇಯಕ 2019:** ಕ್ರಿಮಿನಲ್ ಪ್ರಕರಣಗಳ ವಿಚಾರಣೆಗೆ ಡಿಎನ್‌ಎ ಬಲ ನೀಡುವುದು ಈ ಮಸೂದೆಯ ಉದ್ದೇಶ. ಅಪರಾಧಿಗಳು ಸಂಶಯಿತರು, ವಿಚಾರಣಾಧೀನ ಖೈದಿಗಳು ಮತ್ತು ನಿಗೂಢವಾಗಿ ಅಸುನೀಗಿದ ಅಪರಿಚಿತರ ವಿವರ ಪತ್ತೆ ಹಚ್ಚಲು ಇದರಿಂದ ಅನುಕೂಲ. ಪ್ರಾದೇಶಿಕವಾಗಿ ಡಿಎನ್‌ಎ ಬ್ಯಾಂಕ್ ಸ್ಥಾಪನೆ ಪ್ರಯೋಗಾಲಯಗಳ ಸ್ಥಾಪನೆ ಮತ್ತು ನಿಯಂತ್ರಣ ಅವುಗಳಿಗೆ ಮಾನ್ಯತೆ ನೀಡುವಿಕೆ. ಡಿಎನ್‌ಎ ಮಾದರಿ ಸಂಗ್ರಹ. ಅವುಗಳನ್ನು ನಿರ್ಮೂಲನಗೊಳಿಸುವಿಕೆ ಹೀಗೆ ಸಮಗ್ರ ವಿಚಾರಗಳನ್ನು ಈ ವಿಧೇಯಕ ಒಳಗೊಂಡಿದೆ.
3. **ಸಂತಾನೋತ್ಪತ್ತಿ ಪೂರಕ ತಂತ್ರಜ್ಞಾನ (ನಿಯಂತ್ರಣ) ವಿಧೇಯಕ 2020:** ಲೋಕಸಭೆಯಲ್ಲಿ 2020ರ ಸೆಪ್ಟೆಂಬರ್ 14 ರಂದು ಮಂಡಿಸಲಾಗಿತ್ತು. ಐವಿಎಫ್ ತಂತ್ರಜ್ಞಾನದಿಂದ ಮಕ್ಕಳನ್ನು ಪಡೆಯುವ ವ್ಯವಸ್ಥೆಗೆ ಇದು ನಿಯಂತ್ರಣ ಹೇರಲಿದೆ. ಇಂಥ ಸೌಲಭ್ಯ ಒದಗಿಸುವ ಕ್ಲಿನಿಕ್‌ಗಳು ಮತ್ತು ಇತರ ವೈದ್ಯಕೀಯ ವ್ಯವಸ್ಥೆಗಳನ್ನು ಕಾನೂನು ವ್ಯಾಪ್ತಿಗೆ ಒಳಪಡಿಸುವ ನಿಟ್ಟಿನಲ್ಲಿ ಇದು ನೆರವಾಗಲಿದೆ. ಹೊಸ ವಿಧೇಯಕದಲ್ಲಿ ಉಲ್ಲೇಖಿಸಿರುವಂತೆ

ಐವಿಎಫ್ ಕ್ಲಿನಿಕ್ ನಿಯಂತ್ರಿಸಲು ರಾಷ್ಟ್ರೀಯ ಮಂಡಳಿ ರಚಿಸಬೇಕಾಗುತ್ತದೆ. ಭ್ರೂಣ ಮಾರಾಟದಲ್ಲಿ ತೊಡಗಿರುವವರಿಗೆ ಶಿಕ್ಷೆ ವಿಧಿಸಲಾಗುತ್ತದೆ.

4. **ಹೆತ್ತವರ ಹಿರಿಯ ನಾಗರಿಕರ ಕ್ಷೇಮಪಾಲನೆ ವಿಧೇಯಕ:** 2019ರ ಡಿಸೆಂಬರ್ 11 ರಂದು ಲೋಕಸಭೆಯಲ್ಲಿ ಅದನ್ನು ಮಂಡಿಸಲಾಗಿತ್ತು. ಹಿರಿಯ ನಾಗರಿಕರ ಪಾಲನಾ ಕೇಂದ್ರಗಳನ್ನು ಮನೆಯಲ್ಲಿಯೇ ಆರೈಕೆ ಸೇವೆ ನೀಡುವ ಸಂಸ್ಥೆಗಳನ್ನು ನೋಂದಣಿ, ಪ್ರತಿ ಪೊಲೀಸ್ ಠಾಣೆಗಳಲ್ಲಿ ನೋಡಲ್ ಅಧಿಕಾರಿ ನೇಮಿಸುವ ಅಂಶವಿದೆ. ಸಾಮಾಜಿಕ ನ್ಯಾಯ ಖಾತೆ ಮತ್ತು ಸಬಲೀಕರಣಕ್ಕಾಗಿ ಸಂಸತ್ ಸ್ಥಾಯಿ ಸಮಿತಿ ವರದಿ ಸಲ್ಲಿಸಿತ್ತು. ಅದನ್ನು ಜನವರಿ 29ರಂದು ಲೋಕಸಭೆಯಲ್ಲಿ ಮಂಡಿಸಲಾಗಿತ್ತು.

5. **ಅಗತ್ಯ ರಕ್ಷಣಾ ಸೇವೆಗಳ ವಿಧೇಯಕ 2021:** ಹಾಲಿ ಇರುವ ಸುಗ್ರಿವಾಜ್ಞೆ ಸ್ಥಾನದಲ್ಲಿ ವಿಧೇಯಕ ಕಾಯ್ದೆಯಾಗಿ ಅನುಷ್ಠಾನಗೊಳ್ಳಲಿದೆ. ಸೇನಾಪಡೆಗಳಿಗೆ ಅಡೆ–ತಡೆ ಇಲ್ಲದೆ ಶಸ್ತ್ರಾಸ್ತ್ರಗಳು ಮದ್ದುಗುಂಡುಗಳು ಮತ್ತು ಇತರ ಅಗತ್ಯ ವಸ್ತುಗಳು ನಿರಂತರವಾಗಿ ಪೂರೈಕೆ ಮಾಡಲು ಇದರಿಂದ ನೆರವಾಗುತ್ತದೆ. ಸರ್ಕಾರಿ ಸ್ವಾಮ್ಯದಲ್ಲಿರುವ ಶಸ್ತ್ರಾಸ್ತ್ರ ತಯಾರಿಕಾ ಕಾರ್ಖಾನೆಯನ್ನು ಖಾಸಗೀಕರಣಗೊಳಿಸಿದ್ದರಿಂದ ಉಂಟಾಗುವ ವಿಳಂಬ ತಡೆಯಲು ಈ ವಿಧೇಯಕ ನೆರವಾಗಲಿದೆ.

6. **ಕಲ್ಲಿದ್ದಲು ಪ್ರದೇಶಗಳ ವಿಧೇಯಕ 2021:** ಕಲ್ಲಿದ್ದಲು ಇರುವ ಬ್ಲಾಕ್‌ಗಳನ್ನು ಭೋಗ್ಯಕ್ಕೆ ನೀಡಿ ಅವುಗಳನ್ನು ಅಭಿವೃದ್ಧಿಪಡಿಸಲು ಹಾಗೂ ಕಲ್ಲಿದ್ದಲು ಹೊರತೆಗೆಯುವ ಹಕ್ಕುಗಳನ್ನು ಕಂಪನಿಗೆ ನೀಡುವ ಅಧಿಕಾರ ಈ ವಿಧೇಯಕ ಅಂಗೀಕಾರಗೊಂಡ ಬಳಿಕ ಸಿಗುತ್ತದೆ.

7. **ದಂಡು ವಿಧೇಯಕ 2021:** ಬ್ರಿಟಿಷ್ ಅವಧಿಯಲ್ಲಿ ಸೇನೆಯ ತುಕಡಿಗಳನ್ನು ಮತ್ತು ಅಧಿಕಾರಿಗಳು ಸಿಬ್ಬಂದಿಯ ವಾಸ್ತವ್ಯಕ್ಕಾಗಿಯೇ ಪ್ರತ್ಯೇಕ ಸ್ಥಳ ಮೀಸಲಾಗಿ ಇರಿಸಲಾಗುತ್ತಿತ್ತು. ಅವುಗಳನ್ನು ದಂಡು ಪ್ರದೇಶ ಎಂದು ಕರೆಯಲಾಗುತ್ತದೆ. ಪ್ರಜಾಪ್ರಭುತ್ವ ಬಂದ ಬಳಿಕ ದಂಡು ಪ್ರದೇಶಗಳ ವ್ಯವಸ್ಥೆಗಳನ್ನು ಇತರ ನಾಗರಿಕರ ಬಳಕೆಗೆ ಅನುಕೂಲ ಮಾಡಿಕೊಡಲು ಸಾಧ್ಯವಾಗಲಿದೆ.

8. **ಠೇವಣಿದಾರರ ವಿಮೆ ಮತ್ತು ಸಾಲ ಖಾತರಿ ನಿಗಮ ವಿಧೇಯಕ 2021:** ಪುಣೆ ಮತ್ತು ಮಹಾರಾಷ್ಟ್ರ ಸಹಕಾರ ಬ್ಯಾಂಕ್ ಬಿಕ್ಕಟ್ಟಿನ ಬಳಿಕ ಗ್ರಾಹಕರ ಹಿತರಕ್ಷಣೆ ಕಾಯ್ದುಕೊಳ್ಳಲು 1961ರಲ್ಲಿ ಜಾರಿಯಾಗಿದ್ದ ಠೇವಣಿ ವಿಮೆ ಮತ್ತು ಸಾಲ ಖಾತರಿ ನಿಗಮ ಕಾಯ್ದೆಗೆ ತಿದ್ದುಪಡಿ ತರಲು ಸರ್ಕಾರ ಮುಂದಾಯಿತು. ಸರ್ಕಾರಿ ಸ್ವಾಮ್ಯದ ಬ್ಯಾಂಕ್ ಯಾವುದೇ ಕಾರಣದಿಂದಾಗಿ ವಹಿವಾಟು ಸ್ಥಗಿತಗೊಳಿಸಿದರೆ ಬ್ಯಾಂಕ್ ಅನ್ನು ದಿವಾಳಿ ಎಂದು ಘೋಷಿಸುವುದಕ್ಕಿಂತ ಮೊದಲೇ ಠೇವಣಿದಾರರು ತಮ್ಮ ಮೊತ್ತವನ್ನು ಪಡೆದುಕೊಳ್ಳಲು ಅವಕಾಶವಿದೆ. ಬ್ಯಾಂಕ್‌ಗಳಲ್ಲಿ ವಹಿವಾಟು ನಿಷೇಧ ಇದ್ದರೂ ಠೇವಣಿದಾರರಿಗೆ ಮೊತ್ತವನ್ನು ವಾಪಸ್ ಪಡೆಯಲು ಅವಕಾಶ ಕಲ್ಪಿಸಲಾಗಿದೆ. ಪರಿಷ್ಕೃತ ಠೇವಣಿದಾರರಿಗೆ ರೂ. 5 ಲಕ್ಷ ಪರಿಹಾರ ಸಿಗಲಿದೆ.

9. **ಕಡಲ ಮೀನುಗಾರಿಕೆ ವಿಧೇಯಕ:** ಈ ವಿಧೇಯಕ 1981ರಲ್ಲಿ ಜಾರಿಗೊಳಿಸಲಾಗಿದ್ದ ವಿದೇಶಿ ನಾವೆಗಳಿಂದ ಮೀನುಗಾರಿಕೆ ನಿಯಂತ್ರಣ ಸ್ಥಾನದಲ್ಲಿ ಬರಲಿದೆ. ದೇಶಿಯ ಮೀನುಗಾರರಿಗೆ ಅನುಕೂಲವಾಗುವ ನಿಟ್ಟಿನಲ್ಲಿ ಭಾರತದ ನಿಯಂತ್ರಣ ಪ್ರದೇಶದಲ್ಲಿ ಸುಲಭವಾಗಿ ಮೀನುಗಾರಿಕೆ ನಡೆಸಲು ಅವಕಾಶ ಕಲ್ಪಿಸುವ ಅಂಶ ಉಲ್ಲೇಖಿಸಲಾಗಿದೆ.

10. **ವಿದ್ಯುತ್ ವಿಧೇಯಕ 2021**: ವಿದ್ಯುತ್ ವಿತರಣಾ ಕಂಪನಿಗೆ ನೀಡಲಾಗಿದ್ದ ಪರವಾನಿಗಿಯನ್ನು ರದ್ದುಮಾಡಲು ಮತ್ತು ಈ ಕ್ಷೇತ್ರದಲ್ಲಿ ಹೆಚ್ಚಿನ ಸ್ಪರ್ಧಾತ್ಮಕ ವ್ಯವಸ್ಥೆ ತರುವ ನಿಟ್ಟಿನಲ್ಲಿ ಈ ವಿಧೇಯಕ ನೆರವಾಗಲಿದೆ. ವಿದ್ಯುತ್ ವಿತರಣಾ ಕಂಪನಿಗೆ ಕಾನೂನು ಹಿನ್ನೆಲೆ ಹೊಂದಿರುವ ಸದಸ್ಯರ ನೇಮಕಕ್ಕೂ ಅನುಕೂಲವಾಗಲಿದೆ.

ಆಧಾರ:ಉದಯವಾಣಿ,ದಿನಾಂಕ:19.07.2021

## 16. ಮೊದಲ ದಿನವೇ ಗದ್ದಲಕ್ಕೆ ಬಲಿ

ಕೃಷಿ ಕಾಯಿದೆಗಳ ರದ್ದತಿ ಮತ್ತು ಇಂಧನ ಬೆಲೆ ಇಳಿಕೆಗೆ ಅಗ್ರಹಿಸಿ ಸಂಸತ್‌ನ ಉಭಯ ಸದನಗಳಲ್ಲಿಯೂ ಪ್ರತಿಭಟನೆ ನಡೆಸಿದ ಪ್ರತಿಪಕ್ಷಗಳು ಪ್ರಧಾನಿಯವರು ನೂತನ ಸಚಿವರನ್ನು ಸದನಕ್ಕೆ ಪರಿಚಯಿಸಲೂ ಅವಕಾಶ ನೀಡಲಿಲ್ಲ. ಕೊರೋನಾ ಸಾಂಕ್ರಾಮಿಕದ ಎರಡನೇ ಅಲೆ ಸಂದರ್ಭದಲ್ಲಿ ಆರಂಭವಾದ ಸಂಸತ್‌ನ ಮುಂಗಾರು ಅಧಿವೇಶನದ ಮೊದಲ ದಿನ ಎರಡೂ ಸದನಗಳಲ್ಲಿ ಕಲಾಪ ನಡೆಸದೇ ಮುಂದೂಡಲಾಯಿತು.

ಲೋಕಸಭೆಯಲ್ಲಿ ಕಲಾಪ ಆರಂಭವಾಗುತ್ತಿದ್ದಂತೆಯೇ ಅಗಲಿದ ಮಾಜಿ ಸದಸ್ಯರಿಗೆ ಸಂತಾಪ ಸೂಚಿಸಲಾಯಿತು. ಲೋಕಸಭೆಯ 40 ಮಾಜಿ ಸದಸ್ಯರು ಹಾಗೂ ರಾಜ್ಯಸಭೆಯ ಇಬ್ಬರು ಹಾಲಿ, 14 ಮಾಜಿ ಸದಸ್ಯರು ಸೇರಿದಂತೆ ಒಟ್ಟು 56 ಜನರಿಗೆ ಸಂತಾಪ ಸಲ್ಲಿಸಲಾಯಿತು. ಬಳಿಕ ನೂತನ ಸಚಿವರನ್ನು ಸದನಕ್ಕೆ ಪರಿಚಯಿಸುವಂತೆ ಸ್ಪೀಕರ್ ಓಂ ಬಿರ್ಲಾ ಅವರು ಪ್ರಧಾನಿಯವರಿಗೆ ಸೂಚಿಸಿದರು. ಸಾಮಾನ್ಯವಾಗಿ ಸಂಪುಟ ವಿಸ್ತರಣೆ ಅಥವಾ ಪುನರ್ ರಚನೆ ಆದ ಬಳಿಕ ನಡೆಯುವ ಅಧಿವೇಶನದ ಮೊದಲ ದಿನ ನೂತನ ಸಚಿವರನ್ನು ಪ್ರಧಾನಿಯವರು ಉಭಯ ಸದನಗಳಿಗೆ ಪರಿಚಯಿಸುವುದು ವಾಡಿಕೆ.

ಪ್ರಧಾನಿಯವರು ಎದ್ದು ನಿಲ್ಲುತ್ತಿದ್ದಂತೆಯೇ ಕಾಂಗ್ರೇಸ್ ನಾಯಕ ಅಧೀರ್ ರಂಜನ್ ಚೌಧರಿ, "ಹಲವು ವಿಷಯಗಳ ಕುರಿತು ಚರ್ಚೆಗೆ ನೋಟಿಸ್ ನೀಡಿದ್ದೇವೆ. ಮೊದಲು ಮಹತ್ವದ ವಿಷಯಗಳ ಬಗ್ಗೆ ಚರ್ಚೆಯಾಗಲಿ," ಎಂದು ಆಗ್ರಹಿಸಿದರು. ಸ್ಪೀಕರ್ ಅದಕ್ಕೆ ಅವಕಾಶ ನೀಡದಿದ್ದಾಗ ಪ್ರತಿಪಕ್ಷಗಳ ಸದಸ್ಯರು ಬಾವಿಗೆ ಇಳಿದು ಧರಣಿ ಆರಂಭಿಸಿದರು. ನೂತನ ಸಚಿವರ ಪಟ್ಟಿಯನ್ನು ಮೇಜಿನ ಮೇಲಿರಿಸಿದರು.

ಹಲವು ಮುಂದೂಡಿಕೆಗಳ ಬಳಿಕ ಅಂತಿಮವಾಗಿ ಸದನವನ್ನು ಮೂಂದೂಡಲಾಯಿತು.

**ರಾಷ್ಟ್ರೀಯತೆ ಪ್ರಸ್ತಾಪ:** ರಾಜ್ಯಸಭೆಯಲ್ಲಿ ನೂತನ ಸಚಿವರನ್ನು ಪರಿಚಯಿಸಲು ಪ್ರಧಾನಿ ಮುಂದಾದಾಗ, ಪ್ರತಿಪಕ್ಷಗಳ ಗೃಹ ಖಾತೆ ಸಹಾಯಕ ಸಚಿವರೊಬ್ಬರ ರಾಷ್ಟ್ರೀಯತೆ ಕುರಿತು ಸ್ಪಷ್ಟಪಡಿಸಬೇಕು ಎಂದು ಆಗ್ರಹಿಸಿದವು.

ತೃಣಮೂಲ ಕಾಂಗ್ರೆಸ್‌ನ ಸುಖೇಂದು ಶೇಖರ್ ಅವರು, "ಸಚಿವರೊಬ್ಬರು ಬಾಂಗ್ಲಾ ದೇಶಿ ಪ್ರಜೆ ಎಂಬುದಾಗಿ ವಿಕಿಪೀಡಿಯಾ ಹೇಳುತ್ತದೆ. ಈ ಕುರಿತು ಸ್ಪಷ್ಟಪಡಿಸಿ," ಎಂದು ಒತ್ತಾಯಿಸಿದರು. ಧ್ವನಿಗೂಡಿಸಿದ ಪ್ರತಿಪಕ್ಷ ನಾಯಕ ಮಲ್ಲಿಕಾರ್ಜುನ್ ಖರ್ಗೆ ಅವರು, "ಸಚಿವರ ರಾಷ್ಟ್ರೀಯತೆ ಕುರಿತು ತಿಳಿಯುವ ಹಕ್ಕು ಸದನಕ್ಕೆ ಇದೆ," ಎಂದು ಹೇಳಿದರು. "ಪ್ರತಿಪಕ್ಷಗಳು ಆಧಾರ ರಹಿತ ಆರೋಪ ಮಾಡುತ್ತಿವೆ," ಎಂದು ಸದನ ನಾಯಕರಾದ ವಾಣಿಜ್ಯ ಸಚಿವ ಪಿಯೂಷ್ ಗೋಯಲ್ ಸ್ಪಷ್ಟನೆ.

ಸಚಿವರ ಹೇಳಿಕೆಯಿಂದ ಮತ್ತಷ್ಟು ಸಿಟ್ಟಿನಿಂದ ಪ್ರತಿಪಕ್ಷ ಸದಸ್ಯರು ಬಾವಿಗೆ ಇಳಿದು ಧರಣಿ ಆರಂಭಿಸಿದರು. ನೂತನ ಸಚಿವರ ಪಟ್ಟಿಯು ಪ್ರಧಾನಿ ಮೇಜಿನ ಮೇಲಿರಿಸಿದರೆ ಇಲ್ಲಿಯು ಹಲವು ಸಲ ಕಲಾಪ ಮುಂದೂಡಿದ ಬಳಿಕ ಅಂತಿಮವಾಗಿ ದಿನದ ಮಟ್ಟಿಗೆ ಮುಂದೂಡಲಾಯಿತು.

"ಗೃಹ ಖಾತೆ ಸಹಾಯಕ ಸಚಿವ ನಿಶಿ ಪ್ರಾಮಾಣಿಕ್ ಅವರು ಬಾಂಗ್ಲಾದ ಪ್ರಜೆಯೆ, ಭಾರತೀಯ ಪ್ರಜೆಯೆ ಎಂಬ ಬಾರಿ ಗೊಂದಲ ಹುಟ್ಟಿಕೊಂಡಿದೆ. ಈ ಕುರಿತು ಸತ್ಯಾಂಶ ತಿಳಿಯಲು ತನಿಖೆ ನಡೆಸಬೇಕು. ಎಂದು ಅಸ್ಸಾಂ ಪ್ರದೇಶ ಕಾಂಗ್ರೆಸ್ ಸಂವಿಧಾನದ ಅಧ್ಯಕ್ಷರೂ ಆಗಿರುವ ರಾಜ್ಯಸಭೆ ಸದಸ್ಯ ರಿಪುನ್ ಬೋರಾ ಅವರು ಪ್ರಧಾನಿಯವರಿಗೆ ಪತ್ರ ಬರೆದಿದ್ದರು.

ಆಧಾರ: ವಿಜಯಕರ್ನಾಟಕ,ದಿನಾಂಕ:20.07.2021.

## 17. ರಾಜ್ಯಸಭೆ ಉಪನಾಯಕರಾಗಿ ಮುಖ್ತಾರ್ ಅಬ್ಬಾಸ್ ನಖ್ವಿ

ಕೇಂದ್ರ ಅಲ್ಪಸಂಖ್ಯಾತ ವ್ಯವಹಾರಗಳ ಸಚಿವ ಮುಖ್ತಾರ್ ಅಬ್ಬಾಸ್ ನಖ್ವಿ ಅವರು ರಾಜ್ಯಸಭೆಯಲ್ಲಿ ಸದನದ ಹೊಸ ಉಪನಾಯಕರಾಗಲಿದ್ದಾರೆ.

ಥಾವರ್ ಚಂದ್ ಗೆಹಲೋತ್ ಅವರನ್ನು ಕರ್ನಾಟಕದ ರಾಜ್ಯಪಾಲರನ್ನಾಗಿ ನೇಮಿಸಿದ ನಂತರ ರಾಜ್ಯಸಭೆಯಲ್ಲಿ ಸದನದ ನಾಯಕರಾಗಿ ಪೀಯೂಷ್ ಗೋಯಲ್ ನೇಮಕಗೊಂಡರು. ಉಪ ನಾಯಕರಾಗಿದ್ದ ಗೋಯಲ್ ಅವರಿಂದ ತೆರವಾದ ಸ್ಥಾನಕ್ಕೆ ನಖ್ವಿ ನೇಮಕಗೊಂಡಿದ್ದಾರೆ.

ಆಧಾರ: ಪ್ರಜಾವಾಣಿ, ದಿನಾಂಕ:20.07.2021.

## 18. ಪ್ರತಿಧ್ವನಿಸಿದ ಪೆಗಾಸಸ್ ವಿವಾದ

ಸಂಸತ್ತಿನ ಮುಂಗಾರು ಅಧಿವೇಶನದ ಕಲಾಪ ಪೆಗಾಸಸ್ ವಿವಾದಕ್ಕೆ ಬಲಿಯಾಗಿದೆ. ಪ್ರತಿಪಕ್ಷ ಸದಸ್ಯರು ಪೆಗಾಸಸ್ ವಿವಾದವನ್ನು ಜಂಟಿ ಸಂಸದೀಯ ಸಮಿತಿ ತನಿಖೆಗೆ ಒಪ್ಪಿಸಬೇಕು ಎಂದು ಪಟ್ಟು ಹಿಡಿದು ಹಲವು ಬಾರಿ ಕಲಾಪಕ್ಕೆ ಅಡ್ಡಿ ಉಂಟುಮಾಡಿದ ಪರಿಣಾಮ ಲೋಕಸಭೆಯಲ್ಲಿ ಕಲಾಪವನ್ನು ದಿನದ ಮಟ್ಟಿಗೆ ಮುಂದೂಡಲಾಯಿತು. ಬಕ್ರೀದ್ ಕಾರಣ ರಜೆ, ಲೋಕಸಭೆ ಕಲಾಪ ನಡೆಯಲಿದೆ. ಕಲಾಪ ಸುಸೂತ್ರವಾಗಿ ನಡೆದಿರಲಿಲ್ಲ. ಪೆಗಾಸಸ್, ಕೃಷಿ ಕಾನೂನು ಮತ್ತು ಬೆಲೆ ಏರಿಕೆ ವಿಚಾರವಾಗಿ ವಿಪಕ್ಷ ಸದಸ್ಯರು ಪ್ರತಿಭಟನೆ ವ್ಯಕ್ತಪಡಿಸಿದ್ದರು.

**ಅನರ್ಹರ ಖಾತೆಗೆ ಪಿಎಂ ಕಿಸಾನ್ ನಿಧಿ:** ಪಿಎಂ ಕಿಸಾನ್ ಸ್ಕೀಮ್‌ನ 2,992 ಕೋಟಿ ರೂಪಾಯಿ 42.16 ಲಕ್ಷ ಅನರ್ಹ ಫಲಾನುಭವಿಗಳ ಖಾತೆಗೆ ಜಮೆಯಾಗಿತ್ತು. ಈಗ ಅದನ್ನು ವಸೂಲಿ ಮಾಡುವ ಕೆಲಸ ಪ್ರಗತಿಯಲ್ಲಿದೆ. ಪ್ರತಿ ವರ್ಷ ಕೇಂದ್ರ ಸರ್ಕಾರ ಈ ಯೋಜನೆ ಪ್ರಕಾರ ಫಲಾನುಭವಿ ರೈತರ ಖಾತೆಗೆ 6,000 ರೂಪಾಯಿ ಪಾವತಿಸುತ್ತದೆ. ಈ ಪೈಕಿ ಅಸ್ಸಾಂ (3.35 ಲಕ್ಷ), ತಮಿಳುನಾಡು (7.22 ಲಕ್ಷ), ಪಂಜಾಬ್ (5.62 ಲಕ್ಷ) ಮಹಾರಾಷ್ಟ್ರ (4.45 ಲಕ್ಷ), ಉತ್ತರ ಪ್ರದೇಶ (2.65 ಲಕ್ಷ), ಗುಜರಾತ್ (2.36 ಲಕ್ಷ) ಫಲಾನುಭವಿಗಳ ಖಾತೆಗೆ ಹಣ ಜಮೆಯಾಗಿದೆ. ಈ ಪೈಕಿ ಅಸ್ಸಾಂನಿಂದ ರೂ.554 ಕೋಟಿ, ಪಂಜಾಬ್‌ನಿಂದ ರೂ.437 ಕೋಟಿ, ಮಹಾರಾಷ್ಟ್ರದಿಂದ ರೂ.358 ಕೋಟಿ, ತಮಿಳುನಾಡಿನಿಂದ ರೂ.340 ಕೋಟಿ, ಉತ್ತರ ಪ್ರದೇಶದಿಂದ ರೂ.258 ಕೋಟಿ, ಗುಜರಾತ್‌ನಿಂದ ರೂ.220 ಕೋಟಿ ವಸೂಲಿ ಮಾಡಲಾಗಿದೆ ಎಂದು ಸರ್ಕಾರ ಸಂಸತ್ತಿಗೆ ತಿಳಿಸಿದೆ.

ಆಧಾರ: ವಿಜಯವಾಣಿ, ದಿನಾಂಕ:20.07.2021.

## 19. ಪೆಗಾಸಸ್ ಕದ್ದಾಲಿಕೆ ಕೇಸ್ ತನಿಖೆಗೆ ಕಾಂಗ್ರೆಸ್ ಆಗ್ರಹ

ಕೇಂದ್ರ ಸರ್ಕಾರವು ಇಸ್ರೇಲ್‌ನ ಪೆಗಾಸಸ್ ಸಾಫ್ಟ್‌ವೇರ್ ಬಳಸಿ ದೇಶದ ಗಣ್ಯರ ಮೊಬೈಲ್ ಮೇಲೆ ಕಣ್ಗಾವಲು ಇಟ್ಟಿರುವುದು ಬಹಿರಂಗಗೊಂಡಿದ್ದು, ಈ ಬಗ್ಗೆ ನ್ಯಾಯಾಂಗ ತನಿಖೆ ನಡೆಸಬೇಕು ಎಂದು ಒತ್ತಾಯಿಸಿ ಭಾರತೀಯ ಯುವ ಕಾಂಗ್ರೆಸ್ ಕಾರ್ಯಕರ್ತರು ಅಧ್ಯಕ್ಷ ಬಿ.ವಿ.ಶ್ರೀನಿವಾಸ್ ನೇತೃತ್ವದಲ್ಲಿ ದೆಹಲಿಯಲ್ಲಿ ಬೃಹತ್ ಪ್ರತಿಭಟನೆ ನಡೆಸಿದರು.

ದೆಹಲಿಯಲ್ಲಿ ಬಿಜೆಪಿ ಕೇಂದ್ರ ಕಛೇರಿಗೆ ಮುತ್ತಿಗೆ ಹಾಕಲು ಯತ್ನಿಸಿದ ಬಿ.ವಿ.ಶ್ರೀನಿವಾಸ್, ಕೇಂದ್ರ ಸರ್ಕಾರ ಅಧಿಕಾರಕ್ಕಾಗಿ ಇಂತಹ ಕೀಳು ಮಟ್ಟಕ್ಕೆ ಇಳಿದಿರುವುದು ಖೇದಕರ. ಕೇಂದ್ರ ಸರ್ಕಾರವು ವಿಪಕ್ಷ ನಾಯಕರು, 40 ಮಂದಿ ಪತ್ರಕರ್ತರು ಚುನಾವಣಾ ಆಯೋಗ, ಒಬ್ಬರು ಹಾಲಿ ನ್ಯಾಯಾಧೀಶರ ಫೋನ್ ಕದ್ದಾಲಿಕೆ, ಬೇಹುಗಾರಿಕೆ ಮಾಡಿದೆ.

ಈ ಹಿನ್ನೆಲೆಯಲ್ಲಿ ಸುಪ್ರೀಂಕೋರ್ಟ್ ಹಾಲಿ ನ್ಯಾಯಾಧೀಶರ ನೇತೃತ್ವದಲ್ಲಿ ನ್ಯಾಯಾಂಗ ತನಿಖೆ ನಡೆಸಬೇಕು ಎಂದು ಒತ್ತಾಯ ಮಾಡಿದರು. ಬಿಜೆಪಿ ದಮನಕಾರಿ ನಡೆ ಈಗ ಬಹಿರಂಗಗೊಂಡಿದೆ. ಸ್ವತಃ ಕೇಂದ್ರ ಸರ್ಕಾರವೇ ಗೂಢಚರ್ಯೆಯಲ್ಲಿ ಸಿಲುಕಿಕೊಂಡಿದೆ. ಸಂವಿಧಾನ ವಿರೋಧಿ, ಮಾನವ ಹಕ್ಕುಗಳ ವಿರುದ್ಧವಾಗಿ ಸರ್ಕಾರ ನಡೆದುಕೊಂಡಿದೆ. ಮುಂದೊಂದು ದಿನ ಅಗತ್ಯ ಬಿದ್ದಾಗ ಜನರ ವೈಯಕ್ತಿಕ ಬದುಕಿನಲ್ಲೂ ಇಣುಕುತ್ತದೆ. ಬಿಜೆಪಿಯ ಇಂತಹ ಕೃತ್ಯಗಳ ಜನರು ಜಾಗೃತರಾಗಬೇಕು ಎಂದರು.

**ಪ್ರಧಾನಿಗಳೇ ಉತ್ತರಿಸಿ**: ಬೇಹುಗಾರಿಕೆ ಅವಕಾಶ ಇರುವುದು ಭಯೋತ್ಪಾದನೆ ಅಪರಾಧ ಚಟುವಟಿಕೆಯನ್ನು ತಡೆದು ದೇಶದ ರಕ್ಷಣೆ ಮಾಡಲೇ ಹೊರತು ವಿಪಕ್ಷಗಳ ಮೇಲೆ ಕಣ್ಗಾವಲು ಇಡಲು ಅಲ್ಲ. ಕಾಂಗ್ರೆಸ್ ನಾಯಕ ರಾಹುಲ್‌ಗಾಂಧಿ, ಪತ್ರಕರ್ತರ ನ್ಯಾಯಾಧೀಶರ ದೂರವಾಣಿ ಕದ್ದಾಲಿಕೆ ಮೂಲಕ ಯಾವ ಭಯೋತ್ಪಾದನೆ ನಿಯಂತ್ರಿಸಲು ಹೊರಟಿದ್ದೀರಿ ಪ್ರಧಾನಮಂತ್ರಿಗಳೇ ಎಂದು ಪ್ರಧಾನಿ ಮೋದಿ ಅವರನ್ನು ಪ್ರಶ್ನಿಸಿದರು. ಪೊಲೀಸರು ಹಾಕಿದ್ದ ಬ್ಯಾರಿಕೇಡ್ ತಳ್ಳಿಕೊಂಡು ಬಿಜೆಪಿ ಕೇಂದ್ರ ಕಛೇರಿಯತ್ತ ನುಗ್ಗಲು ಯತ್ನಿಸಿದ ಬಿ.ವಿ.ಶ್ರೀನಿವಾಸ್ ಹಾಗೂ ಪೊಲೀಸ್ ಠಾಣೆಗೆ ಕರೆದೊಯ್ದು ಬಳಿಕ ಬಿಡುಗಡೆ ಮಾಡಿದರು.

ಆಧಾರ:ಕನ್ನಡ ಪ್ರಭ, ದಿನಾಂಕ:21.07.2021

## 20. ಮೈತ್ರಿ ಸರ್ಕಾರ ಪತನದಲ್ಲೂ ಪೆಗಾಸಸ್

ಎರಡು ವರ್ಷಗಳ ಹಿಂದೆ ಕರ್ನಾಟಕದಲ್ಲಿ ಕಾಂಗ್ರೆಸ್–ಜೆಡಿಎಸ್ ಸದಸ್ಯರೇ ಬಂಡಾಯ ಎದ್ದು ಹೆಚ್.ಡಿ.ಕುಮಾರಸ್ವಾಮಿ ನೇತೃತ್ವದ ಸರ್ಕಾರ ಪತನಗೊಳಿಸಿದ್ದರಾದರೂ ಅದರ ಹಿಂದೆ ಪೆಗಾಸಸ್ ಪಿತೂರಿ ಅಡಗಿತ್ತು ಎನ್ನುವ ಸಂಗತಿ ಈಗ ಚರ್ಚೆಯ ಮುನ್ನೆಲೆಗೆ ಬಂದಿದೆ.

ರಾಜ್ಯದಲ್ಲಿ 2019ರ ಜುಲೈ ತಿಂಗಳಲ್ಲಿ ಜೆಡಿಎಸ್–ಕಾಂಗ್ರೆಸ್ ಸರ್ಕಾರ ಪತನಗೊಂಡಿತ್ತು. ಅಂದಿನ ಮುಖ್ಯಮಂತ್ರಿ ಹೆಚ್.ಡಿ.ಕುಮಾರಸ್ವಾಮಿ ವಿರುದ್ಧ ಮಿತ್ರಪಕ್ಷ ಮತ್ತು ಸ್ವಪಕ್ಷದ 17 ಶಾಸಕರು ಬಂಡಾಯ ಸಾರಿ ಬಿಜೆಪಿ ಜತೆ ಕೈಜೋಡಿಸಿದ್ದರು. ಪರಿಣಾಮವಾಗಿ ಕೆಲವು ವಾರಗಳ ಹೈಡ್ರಾಮಾ ನಡೆದು ಮೈತ್ರಿ ಸರ್ಕಾರ ಪತನವಾಯಿತು. ಬಳಿಕ ಬಿ.ಎಸ್.ಯಡಿಯೂರಪ್ಪ ನೇತೃತ್ವದಲ್ಲಿ ಬಿಜೆಪಿ ಸರ್ಕಾರ ರಚಿಸಿತು. ಶಾಸಕರ ಈ ಬಂಡಾಯದ ಆಳದಲ್ಲಿ ಪೆಗಾಸಸ್ ಸ್ಪೈವೇರ್ ಕರಾಮತ್ತು ಮಾಡಿದೆ ಎಂದು ಹೇಳಲಾಗುತ್ತಿದೆ. ಅಂದು ಕಾಂಗ್ರೆಸ್–ಜೆಡಿಎಸ್ ಶಾಸಕರು ಹಾಗೂ ಪ್ರಮುಖ ಮುಖಂಡರ ಚಟುವಟಿಕೆಗಳ ಮೇಲೆ ಪೆಗಾಸಸ್ ಮೂಲಕ ನಿಗಾ ಇರಿಸಲಾಗಿತ್ತು ಎಂದು ನ್ಯೂಸ್ ವೆಬ್‌ಸೈಟ್‌ವೊಂದು ವರದಿ ಮಾಡಿದೆ.

**ಟಾರ್ಗೆಟ್ ಆಗಿದ್ದ ಮುಖಂಡರು**: ಅಂದು ಮುಖ್ಯಮಂತ್ರಿಯಾಗಿದ್ದ ಹೆಚ್.ಡಿ.ಕುಮಾರಸ್ವಾಮಿ ಮತ್ತು ಉಪ ಮುಖ್ಯಮಂತ್ರಿಯಾಗಿದ್ದ ಡಾ:ಜಿ.ಪರಮೇಶ್ವರ್ ಅವರ ಆಪ್ತ ಕಾರ್ಯದರ್ಶಿಗಳ ಫೋನ್ ನಂಬರ್‌ಗಳನ್ನು ಮುಖ್ಯವಾಗಿ ಟಾರ್ಗೆಟ್ ಮಾಡಿಕೊಳ್ಳಲಾಗಿತ್ತು. ಮಾಜಿ ಮುಖ್ಯಮಂತ್ರಿ ಸಿದ್ದರಾಮಯ್ಯ ಅವರ ಚಟುವಟಿಕೆ ಮೇಲೂ ಅಂದು ಪೆಗಾಸಸ್ ಸ್ಪೈವೇರ್ ಬಳಸಿ ನಿಗಾ ಇರಿಸಲಾಗಿತ್ತು. ಇವರ ಚರ್ಚೆ ಮತ್ತು ಚಟುವಟಿಕೆಯ ನಿಖರ ಮಾಹಿತಿ ಪಡೆದೇ ಎದುರಾಳಿ ಬಣ ಸುಲಭದ ಪ್ರತಿತಂತ್ರ ರೂಪಿಸಿತ್ತು. ಕುಮಾರಸ್ವಾಮಿ ಅವರ ಆಪ್ತ ಕಾರ್ಯದರ್ಶಿ ಸತೀಶ್ ಮತ್ತು ಸಿದ್ದರಾಮಯ್ಯ ಅವರ ಆಪ್ತ ಕಾರ್ಯದರ್ಶಿ

ವೆಂಕಟೇಶ್ ಅವರ ಫೋನ್ ನಂಬರ್‌ಗಳು ಕೂಡ ಪೆಗಾಸಸ್ ಪಿತೂರಿಗೆ ಒಳಪಟ್ಟಿದ್ದವು ಎಂದು ವೆಬ್‌ಸೈಟ್ ತಿಳಿಸಿದೆ.

ಕಾಂಗ್ರೆಸ್–ಜೆಡಿಎಸ್ ಮೈತ್ರಿಕೂಟ ಸರ್ಕಾರದ ವಿರುದ್ಧ ಪೆಗಾಸಸ್ ಮೂಲಕ ಸಂಚು ರೂಪಿಸಲಾಗಿತ್ತು ಎನ್ನುವುದಕ್ಕೆ ನಿರ್ದಿಷ್ಟ ದಾಖಲೆಗಳು ಇದುವರೆಗೆ ಲಭ್ಯವಾಗಿಲ್ಲ.

**ಕದ್ದಾಲಿಕೆಗೆ ಬಳಕೆ ಇಲ್ಲ ಎನ್‌ಎಸ್‌ಒ ಸ್ಪಷ್ಟನೆ:** ಭಾರತದಲ್ಲಿ ಬಿರುಗಾಳಿ ಎಬ್ಬಿಸಿರುವ ಇಸ್ರೇಲಿ ನಿರ್ಮಿತ ಪೆಗಾಸಸ್ ಸ್ಪೈವೇರ್ ತಯಾರಕ ಇಸ್ರೇಲಿನ ಸಾಫ್ಟ್‌ವೇರ್ ಕಂಪನಿ ಎನ್‌ಎಸ್‌ಒ ಸ್ಪಷ್ಟನೆ ನೀಡಿದೆ. "ಭಾರತ ಸರ್ಕಾರಕ್ಕೆ ನಾವು ಆ ಗೂಢಚಾರಿಕೆ ಸಾಫ್ಟ್‌ವೇರ್ ಅನ್ನು ಮಾರಾಟ ಮಾಡಿರುವುದು ನಿಜ. ಆದರೆ, ಇಂಥವರ ವಿರುದ್ಧವೇ ಅದನ್ನು ಬಳಕೆ ಮಾಡಬೇಕು ಎಂದು ನಾವು ಮಾಡುವುದೂ ಇಲ್ಲ. ಈಗ ಪೆಗಾಸಸ್ ಸ್ಪೈಗೆ ಒಳಪಟ್ಟಿವೆ ಎನ್ನಲಾಗುತ್ತಿರುವ ಭಾರತೀಯ ಫೋನ್ ನಂಬರ್‌ಗಳ ಬಗ್ಗೆ ನಮಗೆ ಯಾವುದೇ ಖಚಿತ ಮಾಹಿತಿ ಇಲ್ಲ. ಅವರ ಫೋನ್ ಕದ್ದಾಲಿಕೆ ಮಾಡಲು ಬಳಸಿರುವ ಸಾಫ್ಟ್‌ವೇರ್ ನಮ್ಮದಲ್ಲ" ಎಂದು ಎನ್‌ಎಸ್‌ಒ ತಿಳಿಸಿದೆ. ಪೆಗಾಸಸ್ ಸ್ಪೈಗೆ ಒಳಪಟ್ಟಿವೆ ಎನ್ನಲಾದ ಜಗತ್ತಿನ 50 ಸಾವಿರ ಪ್ರಮುಖರ ಫೋನ್ ನಂಬರ್‌ಗಳ ವಿವರವನ್ನು ಪ್ಯಾರಿಸ್ ಮೂಲಕದ ಎನ್‌ಎಸ್‌ಒವೊಂದು ಪಟ್ಟಿ ಮಾಡಿದೆ. "ಅದು ಎನ್‌ಎಸ್‌ಒ ಲಿಸ್ಟ್ ಅಲ್ಲ. ಆ ರೀತಿ ನಾವು ಮಾಡುವುದಿಲ್ಲ. ಇದು ದುರುದ್ದೇಶದಿಂದ ಸಿದ್ದಪಡಿಸಿದ ಪಟ್ಟಿ ನಮ್ಮ ಗ್ರಾಹಕರ ಬಳಿಕ ಅಂತಹ ಸಂಚಿನ ಯಾವುದೇ ಲಿಸ್ಟ್ ಇರುವುದಿಲ್ಲ. ಭಾರತದಲ್ಲಿ ಎದ್ದಿರುವ ವಿವಾದಕ್ಕೂ ನಮ್ಮ ಸಾಫ್ಟ್‌ವೇರ್‌ಗೂ ಯಾವುದೇ ಸಂಬಂಧ ಇಲ್ಲ", ಎಂದು ಎನ್‌ಎಸ್‌ಒ ವಕ್ತಾರರು ತಿಳಿಸಿದ್ದಾರೆ.

**ಪ್ರಜಾಪ್ರಭುತ್ವದ ಕಗ್ಗೊಲೆ ಕಾಂಗ್ರೆಸ್‌ನಿಂದ ಕಿಡಿ:** ಪೆಗಾಸಸ್ ಸ್ಪೈವೇರ್ ಬಳಸಿ ಕರ್ನಾಟಕದಲ್ಲಿ ಚುನಾಯಿತ ಸರ್ಕಾರವನ್ನು ಕೆಡವುವ ಮೂಲಕ ಪ್ರಜಾಪ್ರಭುತ್ವದ ಕಗ್ಗೊಲೆ ಮಾಡಲಾಗಿದೆ ಎಂದು ಕಾಂಗ್ರೆಸ್ ಆರೋಪ ಮಾಡಿದೆ.

ರಾಜ್ಯಸಭೆಯಲ್ಲಿ ಪಕ್ಷದ ನಾಯಕ ಮಲ್ಲಿಕಾರ್ಜುನ ಖರ್ಗೆ, ಕರ್ನಾಟಕ ವಿಧಾನಸಭೆ ಪ್ರತಿಪಕ್ಷ ನಾಯಕ ಸಿದ್ಧರಾಮಯ್ಯ, ಕೆಪಿಸಿಸಿ ಅಧ್ಯಕ್ಷ ಡಿ.ಕೆ.ಶಿವಕುಮಾರ್ ಜೊತೆಗೂಡಿ ಜಂಟಿ ಸುದ್ದಿಗೋಷ್ಠಿ ನಡೆಸಿದ ಪಕ್ಷದ ವಕ್ತಾರ ರಣದೀಪ್ ಸುರ್ಜೀವಾಲಾ, ಕರ್ನಾಟಕದಲ್ಲಿ ಇದ್ದ ಜನಪರ ಚುನಾಯಿತ ಸರ್ಕಾರವನ್ನು ಸಹಿಸದ ನರೇಂದ್ರ ಮೋದಿ ಅವರು ಸ್ಪೈವೇರ್ ಬಳಸಿ ಗೂಢಚರ್ಯೆ ನಡೆಸುವ ಮೂಲಕ ಕೆಡವಿದ್ದಾರೆ. ಇದು ಪ್ರಜಾಪ್ರಭುತ್ವದ ಕಗ್ಗೊಲೆ ಎನ್ನುವುದು ಸ್ಪಷ್ಟ ಎಂದರು.

ಈ ಪಿತೂರಿಯ ಹಿಂದೆ ಕೇಂದ್ರ ಕೇಂದ್ರ ಗೃಹ ಸಚಿವರ ನೇರ ಪಾತ್ರ ಇದೆ. ಅವರು ಈಗ ಅಧಿಕಾರದಲ್ಲಿ ಮುಂದುವರಿಯುವ ನೈತಿಕ ಹಕ್ಕು ಕಳೆದುಕೊಂಡಿದ್ದಾರೆ. ಬಿಕ್ಕಟ್ಟು ಜಟಿಲಗೊಂಡಿರುವುದರಿಂದಲೇ ಸಂಸತ್ತಿನಲ್ಲಿ ಈ ವಿಷಯ ಕುರಿತ ಚರ್ಚೆಗೆ ಪ್ರಧಾನಿ ಮೋದಿ ಅವಕಾಶ ನೀಡುತ್ತಿಲ್ಲ ಎಂದು ಸುರ್ಜೆವಾಲಾ ದೂರಿದರು.

ಕರ್ನಾಟಕದಲ್ಲಿ ಮಾತ್ರವಲ್ಲ ಮಧ್ಯಪ್ರದೇಶ, ಅರುಣಾಚಲ ಪ್ರದೇಶ, ಮಣಿಪುರ ಮತ್ತು ಗೋವಾದಲ್ಲಿ ಕೂಡ ಸರ್ಕಾರಗಳನ್ನು ಕೆಡವಲಾಗಿದೆ. ಮೋದಿ–ಶಾ ಜೋಡಿ ಸರ್ವಾಧಿಕಾರಿ ಧೋರಣೆ ಮೂಲಕ ದೇಶದ ಪ್ರಜಾಪ್ರಭುತ್ವ ಸಂಸ್ಥೆಗಳನ್ನು ನಾಶಗೊಳಿಸುತ್ತಿದೆ ಎಂದು ಮಲ್ಲಿಕಾರ್ಜುನ ಖರ್ಗೆ ಆರೋಪಿಸಿದರು.

**ಪ್ರತಿಭಟನೆ:** ಪ್ರಕರಣ ಕುರಿತು ಸುಪ್ರೀಂಕೋರ್ಟ್ ನ್ಯಾಯಮೂರ್ತಿಗಳ ನೇತೃತ್ವದ ತನಿಖೆಗೆ ಒತ್ತಾಯಿಸಿ ಕಾಂಗ್ರೆಸ್ ಜುಲೈ 22 ರಂದು ದೇಶಾದ್ಯಂತ ಪ್ರತಿಭಟನೆ ನಡೆಸಲು ನಿರ್ಧರಿಸಿದೆ.

**ಬಿಜೆಪಿ ಆಕ್ರೋಶ:** ಪ್ರಗತಿಯ ಅಜೆಂಡಾದಿಂದ ದೂರವಾಗಿರುವ ಅಸಮರ್ಥ ಪ್ರತಿಪಕ್ಷಗಳು ಪೆಗಾಸಸ್ ಎನ್ನುವ ನಕಲಿ ವಿಷಯವನ್ನು ಕೈಗೆತ್ತಿಕೊಂಡು ಸರ್ಕಾರದ ವಿರುದ್ಧ ಹುಸಿ ಆರೋಪಕ್ಕಿಳಿದಿವೆ ಎಂದು ಬಿಜೆಪಿ ಗುಡುಗಿದೆ. ಪ್ರತಿಪಕ್ಷಗಳ ಪೆಗಾಸಸ್ ಆರೋಪಕ್ಕೆ ತಿರುಗೇಟು ನೀಡಲು ದೇಶಾದ್ಯಂತ ಹಿರಿಯ ನಾಯಕರನ್ನು ನಿಯೋಜಿಸಲು ಪಕ್ಷ ಮುಂದಾಗಿದೆ. ಉತ್ತರಪ್ರದೇಶದ ಸಿಎಂ ಯೋಗಿ ಆದಿತ್ಯನಾಥ್, ಹರಿಯಾಣ ಎಇಸಂ ಮನೋಹರ್ ಲಾಲ್ ಖಟ್ಟರ್, ಶಿವರಾಜ್ ಸಿಂಗ್ ಚೌಹಾಣ್ (ಮಧ್ಯಪ್ರದೇಶ), ಹಿಮಂತ್‌ಬಿಶ್ವ ಶರ್ಮಾ (ಅಸ್ಸಾಂ), ಜೈರಾಮ್ ಠಾಕೂರ್ (ಹಿಮಾಚಲಪ್ರದೇಶ) ಮತ್ತು ಪುಷ್ಕರ್ ಸಿಂಗ್ ಧಮಿ (ಉತ್ತರಪ್ರದೇಶ) ಅವರು ಪತ್ರಿಕಾಗೋಷ್ಠಿ ನಡೆಸಿ ಕಾಂಗ್ರೆಸ್ ಆರೋಪಕ್ಕೆ ತಿರುಗೇಟು ನೀಡಲಿದ್ದಾರೆ. ಉಳಿದ ರಾಜ್ಯಗಳಲ್ಲೂ ವಿಷಯ ತಜ್ಞರು ಆರೋಪಕ್ಕೆ ಪ್ರತ್ಯುತ್ತರ ನೀಡಲಿದ್ದಾರೆ ಎಂದು ಬಿಜೆಪಿ ಮೂಲಗಳು ತಿಳಿಸಿವೆ.

ಆಧಾರ:ವಿಜಯಕರ್ನಾಟಕ, ದಿನಾಂಕ:21.07.2021

## 21. Pegasus spyware row rocks Parliament

The Pegasus snooping controversy led to multiple disruptions in the Lok Sabha before the House was adjourned for the day.

In what seemed to be different strategy by the Opposition parties for the two Houses, proceedings in the Lower House got washed out while the Rajya Sabha discussed the COVID-19 situation after a couple of hours of disruptions in the morning.

The government on its own had moved for a discussion on COVID-19 after it was discussed in the Business Advisory Committee (BAC). We didn't want to give them a chance to say the Opposition doesn't even want to discuss the pandemic. But the government will find itself cornered in the Lok Sabha. On planned some action outside the House and we will raise their voices inside the House a senior Congress leader told .

**Multiple notices**: With multiple notices from Lok Sabha members, such as Manish Tewari, Manickam Tagore and Gaurav Gogoi, for the suspension of routine business to discuss the snooping controversy, the Opposition made its intensions clear on the second day of the monsoon session.

Trinamool Congress leaders too had given an adjournment notice after the name of the party's Lok Sabha member Abhishek Banerjee, who is also the nephew of West Bengal Chief Minister Mamta Banerjee, figured in the list of potential targets for hacking.

As soon as the Lok Sabha proceedings started at 11 a.m the Congress and the Trinamool started raising slogans and showed placards targeting the government. While some placards showed former Congress chief Rahul Gandhi being in the list targets, another was about Mr.Banerjee. One of the placards read that while people were suffering from unemployment the government was busy with jassosi(spying).

The proceedings lasted for the minute before the House was adjourned until 2 p.m. When it reconvened, similar scenes were witnessed, prompting the Chair to adjourn it for an hour. After the House assembled at 3 p.m. the Opposition member's again started raising slogans and the Chair adjourned it for the day.

Courtesy: The Hindu, Dated:21.07.2021

## 22. ಚುನಾವಣಾ ಬಾಂಡ್ ಮಾಹಿತಿ: ಆರ್‌ಟಿಐಗೆ ಇದೆ, ಸಂಸತ್ತಿಗೆ ಇಲ್ಲ

ಚುನಾವಣಾ ಬಾಂಡ್‌ಗಳ 15 ಹಾಗೂ 16ನೇ ಹಂತದ ಮಾರಾಟದ ಬಗ್ಗೆ ಮಾಹಿತಿ ಹಕ್ಕು ಕಾಯ್ದೆ (ಆರ್‌ಟಿಐ) ಅಡಿಯಲ್ಲಿ ನೀಡಿದ ಮಾಹಿತಿಯು ಸಾರ್ವಜನಿಕರಿಗೆ ಈಗಾಗಲೇ ಲಭ್ಯವಾಗಿದೆ. ಇದೇ ಮಾಹಿತಿಯನ್ನು ಸಂಸತ್ತಿನಲ್ಲಿ ಒದಗಿಸಲು ಇನ್ನೂ ಸಮಯ ಹಿಡಿಯುವುದಾಗಿ ಹಣಕಾಸು ಸಚಿವಾಲಯವು ತಿಳಿಸಿದೆ. ಈ ಬಗ್ಗೆ ರಾಜ್ಯಸಭಾ ಸಂಸದ ತೃಣಮೂಲ ಕಾಂಗ್ರೆಸ್‌ನ ಶಂತನು ಸೇನ್ ಅವರು ಕೇಳಿದ್ದ ಪ್ರಶ್ನೆಗೆ ಸರ್ಕಾರ ಈ ಉತ್ತರ ನೀಡಿದೆ.

ಪ್ರಶ್ನೆಗಳ ಸರಣಿಯನ್ನೇ ಮುಂದಿಟ್ಟಿದ್ದ ಸಂಸದ ಸೇನ್, ಶಾಖಾವಾರು ಮಾರಾಟವಾದ ಚುನಾವಣಾ ಬಾಂಡ್‌ಗಳು ಅವುಗಳ ಮೊತ್ತ ನಗದೀಕರಣಗೊಂಡ ಬಾಂಡ್‌ಗಳು ಯಾವ ಪಕ್ಷಗಳಿಗೆ ಎಷ್ಟು ಹಣ ಸಂದಾಯವಾಗಿದೆ. ಬಾಂಡ್ ನೀಡಿಕೆ ಯೋಜನೆಯು ಆರಂಭವಾದ 2018ನೇ ವರ್ಷದಿಂದ ಚುನಾವಣಾ ಬಾಂಡ್‌ಗಳು ಎಷ್ಟು ಹಾಗೂ ಅವುಗಳ ಮಾರಾಟದಿಂದ ಎಸ್‌ಬಿಐ ಪಡೆದ ಕಮೀಷನ್ ಎಷ್ಟು ಎಂಬ ವಿವರ ಕೇಳಿದ್ದರು.

ಈ ಬಗ್ಗೆ ಸದನಕ್ಕೆ ಲಿಖಿತ ಉತ್ತರ ನೀಡಿದ ಹಣಕಾಸು ಇಲಾಖೆಯ ರಾಜ್ಯ ಸಚಿವ ಪಂಕಜ್ ಚೌಧರಿ ಈ ವಿವರ ಸಲ್ಲಿಸಲು ಸರ್ಕಾರಕ್ಕೆ ಇನ್ನಷ್ಟು ಕಾಲಾವಕಾಶ ಬೇಕು ಎಂದಿದ್ದಾರೆ.

ಪಶ್ಚಿಮ ಬಂಗಾಳವೂ ಸೇರಿದಂತೆ ಐದು ರಾಜ್ಯಗಳಲ್ಲಿ ನಡೆದ ವಿಧಾನಸಭಾ ಚುನಾವಣೆಯ ಸಂದರ್ಭದಲ್ಲಿ ಜನವರಿ 1 ರಿಂದ ಜನವರಿ 10ರ ವರೆಗೆ (15ನೇ ಹಂತ) ಹಾಗೂ ಏಪ್ರಿಲ್ 1 ರಿಂದ ಏಪ್ರಿಲ್ 10ರ ಅವಧಿಯಲ್ಲಿ (16ನೇ ಹಂತ) ಮಾರಾಟವಾದ ಚುನಾವಣಾ ಬಾಂಡ್‌ಗಳ ಬಗ್ಗೆ ಮಾಹಿತಿ ಹಕ್ಕು ಕಾಯ್ದೆಯಡಿ ವಿವರ ಕೋರಿದ್ದ ಲೋಕೇಶ್ ಬಾತ್ರಾ ಎಂಬುವವರಿಗೆ ಸಚಿವಾಲಯದ ಆರ್ಥಿಕ ವ್ಯವಹಾರಗಳ ಇಲಾಖೆ ಹಾಗೂ ಎಸ್‌ಬಿಐ ಈಗಾಗಲೇ ವಿಸ್ತೃತ ವರದಿ ನೀಡಿವೆ.

15ನೇ ಹಂತದಲ್ಲಿ ರೂ. 42.10 ಕೋಟಿ ಮೊತ್ತದ ಚುನಾವಣಾ ಬಾಂಡ್‌ಗಳು ಮಾರಾಟವಾಗಿದ್ದು, ರೂ.42.07 ಕೋಟಿ ಮೊತ್ತವು ರಾಜಕೀಯ ಪಕ್ಷಗಳಿಗೆ ಸಂದಾಯವಾಗಿದೆ. 16ನೇ ಹಂತದಲ್ಲಿ ರೂ. 695.34 ಕೋಟಿ ಮೊತ್ತದ ಬಾಂಡ್‌ಗಳು ಮಾರಾಟವಾಗಿದ್ದು, ರೂ.1,000 ಮೌಲ್ಯದ ಎರಡು ಬಾಂಡ್‌ಗಳು ಮಾತ್ರ ಯಾವ ಪಕ್ಷಕ್ಕೂ ಸಂದಾಯವಾಗಿಲ್ಲ. ಏಪ್ರಿಲ್‌ನಲ್ಲಿ ಕೋಲ್ಕತ್ತಾದ ಎಸ್‌ಬಿಐ ಮುಖ್ಯ ಶಾಖೆಯೊಂದರಲ್ಲಿಯೇ ರೂ.176.19 ಕೋಟಿ ಮೊತ್ತದ ಚುನಾವಣಾ ಬಾಂಡ್‌ಗಳು ಮಾರಾಟವಾಗಿವೆ. ನವದೆಹಲಿ, ಚೆನ್ನೈ ಹಾಗೂ ಮುಂಬೈನ ಮುಖ್ಯ ಶಾಖೆಯಿಂದ ಕ್ರಮವಾಗಿ ರೂ.167.5 ಕೋಟಿ, ರೂ 141.5 ಕೋಟಿ ಹಾಗೂ ರೂ.91.5 ಕೋಟಿ ಮೊತ್ತದ ಬಾಂಡ್‌ಗಳು ಮಾರಾಟವಾಗಿವೆ ಎಂಬುದು ಭಾತ್ರಾ ಅವರು ಪಡೆದ ಮಾಹಿತಿಯಿಂದ ತಿಳಿದುಬಂದಿದೆ. ಈ ಎರಡೂ ಹಂತಗಳ ಮಾಹಿತಿಯನ್ನು ಅವರು ಕ್ರಮವಾಗಿ ಫೆಬ್ರವರಿ 17ರಂದು ಏಪ್ರಿಲ್ 27 ರಂದು ಪಡೆದಿದ್ದಾರೆ.

ಆಧಾರ:ಪ್ರಜಾವಾಣಿ, ದಿನಾಂಕ:22.07.2021

## 23. ಪೆಗಾಸಸ್ ಕೋಲಾಹಲ

ಪೆಗಾಸಸ್ ವಿವಾದ ಸಂಸತ್ತಿನ ಉಭಯ ಸದನಗಳ ಕಲಾಪವನ್ನು ವ್ಯರ್ಥಗೊಳಿಸಿತ್ತು. ಪೆಗಾಸಸ್ ವಿವಾದ, ದೈನಿಕ ಭಾಸ್ಕರ್ ಗ್ರೂಪ್ ಮೇಲೆ ಆದಾಯ ತೆರಿಗೆ ದಾಳಿ ಖಂಡಿಸಿ ಪ್ರತಿಪಕ್ಷ ಸದಸ್ಯರು ಗದ್ದಲ ಉಂಟುಮಾಡಿದ್ದರು. ಇದರೊಂದಿಗೆ ಸತತ ಮೂರನೇ ದಿನವೂ ಲೋಕಸಭೆ ಮತ್ತು ರಾಜ್ಯಸಭೆಯಲ್ಲಿ ಮುಂಗಾರು ಅಧಿವೇಶನದ ಕಲಾಪ ವಿಪಕ್ಷ ಸದಸ್ಯರ ಪ್ರತಿಭಟನೆಗೆ ಬಲಿಯಾಯಿತು.

ರಾಜ್ಯಸಭೆಯಲ್ಲಿ ಹೇಳಿಕೆ ನೀಡುತ್ತಿದ್ದ ಮಾಹಿತಿ ತಂತ್ರಜ್ಞಾನ ಸಚಿವ ಅಶ್ವಿನಿ ವೈಷ್ಣವ್ ಮೇಲೆರಗಿದ ತೃಣಮೂಲ ಕಾಂಗ್ರೆಸ್ (ಟಿಎಂಸಿ) ಸಂಸದ ಶಂತನು ಸೇನ್, ಅವರ ಹೇಳಿಕೆ ಪತ್ರವನ್ನು ಸೆಳೆದು ಹರಿದು

ಗಾಳಿಗೆ ತೂರಿದರು. ಸಚಿವ ಅಶ್ವಿನಿ ವೈಷ್ಣವ್ ಇಸ್ರೇಲ್ ಮೂಲದ ಪೆಗಾಸಸ್ ಸ್ಪೈವೇರ್ ವಿಚಾರ ಸಂಬಂಧ ಹೇಳಿಕೆ ನೀಡುತ್ತಿದ್ದರು. ಇದೇ ವೇಳೆ, ಟಿಎಂಸಿ, ಕಾಂಗ್ರೆಸ್ ಮತ್ತು ಇತರೆ ವಿಪಕ್ಷಗಳ ಸದಸ್ಯರು ಸ್ಪೀಕರ್ ಪೀಠ ಎದುರು ಜಮಾಯಿಸಿ ಸರ್ಕಾರದ ವಿರುದ್ಧ ಘೋಷಣೆ ಕೂಗಲಾರಂಭಿಸಿದ್ದರು.

ರಾಜ್ಯ ಸಭೆಯ ಅಧ್ಯಕ್ಷರ ಪೀಠದಲ್ಲಿದ್ದ ಡೆಪ್ಯೂಟಿ ಚೇರ್ಮನ್ ಹರಿವಂಶ್ ಅವರು, ಎಲ್ಲ ಸದಸ್ಯರ ಟೇಬಲ್ ಮೇಲೆ ಹೇಳಿಕೆಯ ಪ್ರತಿ ಇದೆ. ಅದರ ಬಗ್ಗೆ ಚರ್ಚೆ ನಡೆಯಲಿ. ನೀವೆಲ್ಲ ಚರ್ಚೆಗೆ ಸಿದ್ಧರಾಗದೆ ಪ್ರತಿಭಟನೆ ಮಾಡುತ್ತ ಪ್ರಜಾಪ್ರಭುತ್ವ ವಿರೋಧಿ ನಡವಳಿಕೆ ತೋರುತ್ತಿದ್ದೀರಿ. ಈ ರೀತಿ ಅಸಂಸದೀಯ ನಡವಳಿಕೆ ತೋರಬೇಡಿ ಎಂದು ಮನವಿ ಮಾಡಿ, ಕಲಾಪವನ್ನು ದಿನದ ಮಟ್ಟಿಗೆ ಮುಂದೂಡಿದರು. ಸಚಿವರು ಓದುತ್ತಿದ್ದ ಹೇಳಿಕೆಯಲ್ಲಿ ಜುಲೈ 19 ರಂದು ನೀಡಿದ ಹೇಳಿಕೆಯ ಅಂಶಗಳೇ ಇದ್ದವು. ರಾಜ್ಯಸಭೆಯ ಕಲಾಪ ಆರಂಭದಲ್ಲಿ ಒಂದು ಗಂಟೆ ಕಾಲ 12 ಗಂಟೆ ತನಕ ಮುಂದೂಡಲ್ಪಟ್ಟಿತ್ತು. ಬಳಿಕ ಅಪರಾಹ್ನ 2 ಗಂಟೆ ತನಕ ಮುಂದೂಡಿಕೆಯಾಯಿತು. ಇದಾಗಿ ಕೆಲವೇ ನಿಮಿಷಗಳಲ್ಲಿ ದಿನದ ಮಟ್ಟಿಗೆ ಮುಂದೂಡಲ್ಪಟ್ಟಿತ್ತು.

ಆಧಾರ: ವಿಜಯವಾಣಿ, ದಿನಾಂಕ:23.07.2021.

## 24. ಅಗತ್ಯ ಸೇವೆ: ಮುಷ್ಕರ ನಿಷೇಧಿಸುವ ಮಸೂದೆ ಮಂಡನೆ

ಅಗತ್ಯ ರಕ್ಷಣಾ ಸೇವೆಗಳಲ್ಲಿ ತೊಡಗಿಸಿಕೊಂಡಿರುವವರು ಧರಣಿ ಮತ್ತು ಮುಷ್ಕರ ನಡೆಸುವುದನ್ನು ನಿಷೇಧಿಸುವ ಮಸೂದೆಯನ್ನು ಕೇಂದ್ರ ಸರ್ಕಾರ ಲೋಕಸಭೆಯಲ್ಲಿ ಮಂಡಿಸಿದೆ.

ಪೆಗಾಸಸ್ ಬೇಹುಗಾರಿಕೆ ವಿಚಾರದ ತನಿಖೆಗೆ ಮತ್ತು ಮೂರು ಕೃಷಿ ಕಾಯ್ದೆ ಹಿಂತೆಗೆದುಕೊಳ್ಳುವಂತೆ ಒತ್ತಾಯಿಸಿ ವಿರೋಧ ಪಕ್ಷದ ಸದಸ್ಯರು ಕೋಲಾಹಲ ಸೃಷ್ಟಿಸಿದ ನಡುವೆಯೂ ರಕ್ಷಣಾ ರಾಜ್ಯ ಸಚಿವ ಅಜಯ್ ಭಟ್ ಅವರು ಅಗತ್ಯ ರಕ್ಷಣಾ ಸೇವೆಗಳ ಮಸೂದೆ 2021 ಅನ್ನು ಸದನದ ಮುಂದಿಟ್ಟರು. ಜೂನ್‌ನಲ್ಲಿ ಹೊರಡಿಸಿದ್ದ ಸುಗ್ರೀವಾಜ್ಞೆಯ ಬದಲಿಗೆ ಈ ಮಸೂದೆಯನ್ನು ಸರ್ಕಾರ ತರಲು ಉದ್ದೇಶಿಸಿದೆ.

ಆಧಾರ: ಪ್ರಜಾವಾಣಿ, ದಿನಾಂಕ:23.07.2021.

## 25. ಟಿಎಂಸಿ ಸಂಸದರ ಅನುಚಿತ ವರ್ತನೆ

ಲೋಕಸಭೆ ಮತ್ತು ರಾಜ್ಯಸಭೆಯಲ್ಲಿ ಕಲಾಪ ನಡೆಸಲು ಪ್ರತಿಪಕ್ಷಗಳು ಮತ್ತೆ ಅಡ್ಡಿಪಡಿಸಿವೆ. ಹೆಚ್ಚಿನ ಅವಧಿ ಗದ್ದಲದಲ್ಲಿಯೇ ಮುಕ್ತಾಯವಾದ್ದರಿಂದ ಕಲಾಪಗಳನ್ನು ಮುಂದೂಡಿಕೆ ಮಾಡಲಾಗಿದೆ. ರಾಜ್ಯಸಭೆಯಲ್ಲಿ ನಡೆದ ಘಟನೆಯಲ್ಲಿ ಪೆಗಾಸಸ್ ವಿಚಾರದ ಬಗ್ಗೆ ಹೇಳಿಕೆ ನೀಡಲು ಮುಂದಾದ ಮಾಹಿತಿ ತಂತ್ರಜ್ಞಾನ ಮತ್ತು ದೂರ ಸಂಪರ್ಕ ಖಾತೆ ಸಚಿವ ಅಶ್ವಿನಿ ವೈಷ್ಣವ್ ಕೈಯ್ಯಲ್ಲಿದ್ದ ದಾಖಲೆಗಳನ್ನು ತೃಣಮೂಲ ಕಾಂಗ್ರೆಸ್ ಸಂಸದರು ಎಳೆದು ಪಡೆದುಕೊಂಡರಲ್ಲದೆ, ಹರಿದು ಹಾಕಿದ್ದರೆ. ಟಿಎಂಸಿ ಸಂಸದ ಶಂತನು ಸೇನ್ ಈ ಕೃತ್ಯವೆಸಗಿದ್ದಾರೆ. ಇದಾದ ಬಳಿಕ ಕಾಂಗ್ರೆಸ್ ತಮ್ಮ ಇತರೆ ಸಂಸದರು ಸದನದ ಬಾವಿಗೆ ನುಗ್ಗಿ ಪ್ರತಿಭಟನೆ ನಡೆಸಿದರು.

ಕಲಾಪ ನಿರ್ವಹಿಸುತ್ತಿದ್ದ ಉಪ ಸಭಾಪತಿ ಹರಿವಂಶ ನಾರಾಯಣ ಸಿಂಗ್ ಸದಸ್ಯರ ವರ್ತನೆಗೆ ಆಕ್ಷೇಪ ಮಾಡಿದರೂ ಲಕ್ಷಿಸಲಿಲ್ಲ. ಗದ್ದಲದ ನಡುವೆಯೇ ಹೇಳಿಕೆ ನೀಡಿದ ಸಚಿವ ವೈಷ್ಣವ್ ದೇಶದ ಪ್ರಜಾ ಪ್ರಭುತ್ವದ ವರ್ಚಸ್ಸಿಗೆ ಧಕ್ಕೆ ತರಲು ಯತ್ನ ಎಂದರು. ಇದಾದ ಬಳಿಕ ಕಲಾಪವನ್ನು ಮುಂದೂಡಲಾಯಿತು.

**ಪುರಿ ಜೊತೆಗೂ ಜಗಳ:** ಸಚಿವ ವೈಷ್ಣವ್ ಜೊತೆಗೆ ಅನುಚಿತವಾಗಿ ವರ್ತಿಸಿದ ಟಿಎಂಸಿ ಸಂಸದ ಶಂತನು ಸೇನ್, ಕೇಂದ್ರ ಪೆಟ್ರೋಲಿಯಂ ಮತ್ತು ನೈಸರ್ಗಿಕ ಅನಿಲ ಸಚಿವ ಹರ್‌ದೀಪ್ ಸಿಂಗ್ ಪುರಿಗೆ

ನಿಂದಿಸಿದ್ದಾರೆ. ಇನ್ನೇನು, ಸಚಿವರ ಮೇಲೆ ಹಲ್ಲೆ ನಡೆಸಲು ಮುಂದಾಗುತ್ತಿದ್ದಂತಯೇ ಇತರ ಸಂಸದರು ಮತ್ತು ಸಚಿವರು ಅವರನ್ನು ಪಾರು ಮಾಡಿದ್ದಾರೆ. ಪುರಿ ನನಗೆ ಬೆದರಿಕೆಯೊಡ್ಡಿದ್ದರು ಎಂದು ನಂತರ ಸೇನ್ ಹೇಳಿಕೊಂಡರು. ಸದನದಲ್ಲಿ ಅನುಚಿತವಾಗಿ ವರ್ತಿಸಿದ ಸಂಸದರ ವಿರುದ್ಧ ಶಿಸ್ತಿನ ಕ್ರಮ ಕೈಗೊಳ್ಳಬೇಕು ಎಂದು ಸಭಾಪತಿಗೆ ಕೇಂದ್ರ ಮನವಿ ಸಲ್ಲಿಸಲಿದೆ.

ಆಧಾರ: ಉದಯವಾಣಿ, ದಿನಾಂಕ:23.07.2021

## 26. ಸ್ಪೈವೇರ್ ದುರ್ಬಳಕೆ ಮಾಡಿಕೊಳ್ಳುತ್ತಿರುವ ಆರೋಪ

ವಿಶ್ವಾದ್ಯಂತ ಭಾರಿ ಗದ್ದಲ ಸೃಷ್ಟಿಸಿರುವ ಪೆಗಾಸಸ್ ಗೂಢಚರ್ಯೆ ಸಾಫ್ಟವೇರ್ ದುರ್ಬಳಕೆ ಪ್ರಕರಣ ಕುರಿತು ತನಿಖೆ ನಡೆಸಲು ಇಸ್ರೇಲ್ ಸರ್ಕಾರ ಮುಂದಾಗಿದೆ.

“ಎನ್‌ಎಸ್‌ಒ ಗ್ರೂಪ್ ಸಿದ್ದಪಡಿಸಿರುವ ಪೆಗಾಸಸ್ ಸ್ಪೈವೇರ್ ಉದ್ದೇಶ ಸ್ಪಷ್ಟವಾಗಿದೆ. ಅದನ್ನು ದೇಶ ರಕ್ಷಣೆಗೆ ಮಾತ್ರ ಬಳಸುವಂತೆ ಷರತ್ತು ವಿಧಿಸಲಾಗಿತ್ತು. ಈಗ ಅನೇಕ ಕಡೆಗಳಲ್ಲಿ ಅದನ್ನು ದುರ್ಬಳಕೆ ಮಾಡಿಕೊಂಡ ಆರೋಪ ಕೇಳಿ ಬಂದಿದೆ. ಅದರ ಸತ್ಯಾಸತ್ಯತೆ ತಿಳಿಯಲು ಸಮಿತಿಯೊಂದನ್ನು ರಚಿಸಲಾಗಿದೆ. ಸಾಫ್ಟವೇರ್ ಬಳಕೆಯ ಇಡೀ ಪರವಾನಿಗಿ ಪ್ರಕ್ರಿಯೆಯನ್ನೇ ಈ ಸಮಿತಿ ಪರಿಶೀಲನೆಗೆ ಒಳಪಡಿಸಲಿದೆ,” ಎಂದು ಇಸ್ರೇಲ್ ವಿದೇಶಾಂಗ ವ್ಯವಹಾರಗಳ ಇಲಾಖೆ ಮುಖ್ಯಸ್ಥರಾದ ಬೆನ್ ಬರಾಕ್ ತಿಳಿಸಿದ್ದಾರೆ.

ಭಾರತ ಸೇರಿದಂತೆ ಅನೇಕ ದೇಶಗಳಲ್ಲಿ ಪತ್ರಕರ್ತರು, ರಾಜಕಾರಣಿಗಳು, ಮಾನವ ಹಕ್ಕುಗಳ ಹೋರಾಟಗಾರರ ಫೋನ್‌ಗಳನ್ನು ಸ್ಪೈವೇರ್ ಬಳಸಿ ಸರ್ಕಾರಗಳು ಬೇಹುಗಾರಿಕೆ ನಡೆಸಿದೆ ಎಂದು ಆರೋಪಿಸಲಾಗಿದೆ.

“ಪೆಗಾಸಸ್ ದುರ್ಬಳಕೆ ಆಗಿದೆಯೋ ಇಲ್ಲವೋ ಎನ್ನುವುದು ಈಗಲೂ ಅಸ್ಪಷ್ಟ ಬರೀ ಆರೋಪಗಳು ಮಾತ್ರ ಕೇಳಿ ಬಂದಿವೆ. ಖಚಿತ ಪುರಾವೆಗಳೂ ಇಲ್ಲ. ಸದ್ಯದ ತನಿಖೆ ಮುಗಿಯಲಿ ಅದರ ಫಲಿತಾಂಶ ನೋಡಿಕೊಂಡು ಮುಂದಿನ ಕ್ರಮ ಕೈಗೊಳ್ಳಲಾಗುವುದು. ಈಗಿನ ಪೆಗಾಸಸ್ ಪರವಾನಿಗಿ ವ್ಯವಸ್ಥೆಯಲ್ಲಿ ತಪ್ಪು ತಿದ್ದಿಕೊಳ್ಳುವ ಅಗತ್ಯ ಎದುರಾದರೆ, ಯಾವುದೇ ಹಿಂಜರಿಕೆ ಇಲ್ಲದೇ ಸರ್ಕಾರ ಅದನ್ನು ಮಾಡಲಿದೆ,” ಎಂದು ಬರಾಕ್ ತಿಳಿಸಿದ್ದಾರೆ.

ಸರ್ಕಾರದ ತನಿಖಾ ಆದೇಶವನ್ನು ಪೆಗಾಸಸ್ ನಿರ್ಮಾತೃ ಸಂಸ್ಥೆ ಎನ್‌ಎಸ್‌ಒ ಮುಖ್ಯಸ್ಥ ಸಲೆವ್ ಹುಲಿಯೋ ಸ್ವಾಗತಿಸಿದ್ದಾರೆ. “ಸದ್ಯದ ಆರೋಪಗಳಿಂದ ಸಂಸ್ಥೆಯ ಸಾಫ್ಟವೇರ್‌ಗೆ ಕಳಂಕ ಅಂಟಿದೆ. ಸರ್ಕಾರವೇ ಆಸಕ್ತಿ ವಹಿಸಿ ತನಿಖೆಗೆ ಮುಂದಾಗಿರುವುದರಿಂದ ಆ ಕಳಂಕದ ಸತ್ಯಾಸತ್ಯತೆ ಬಯಲಾಗಲಿದೆ. ಆ ಬಳಿಕವಾದರೂ ನಮ್ಮ ಸದಾಶಯ ಜನರಿಗೆ ತಿಳಿಯುತ್ತದೆ,” ಎಂದಿದ್ದಾರೆ.

**ರಾಹುಲ್ ವರ್ಸಸ್ ಬಿಜೆಪಿ:** ಇನ್ನು ಭಾರತದಲ್ಲಿ ಪೆಗಾಸಸ್ ದುರ್ಬಳಕೆ ಕುರಿತು ರಾಜಕೀಯ ಜಟಾಪಟಿ ಮುಂದುವರೆದಿದೆ. “ನನ್ನ ಫೋನ್ ಅನ್ನು ಕದ್ದಾಲಿಸಲಾಗಿದೆ,” ಎಂದು ಕಾಂಗ್ರೇಸ್ ನಾಯಕ ರಾಹುಲ್ ಗಾಂಧಿ ಆರೋಪಿಸಿದರೆ, “ರಾಹುಲ್‌ಗೆ ಅನುಮಾನವಿದ್ದರೆ ತನಿಖೆಗಾಗಿ ತಮ್ಮ ಫೋನ್ ಅನ್ನು ಒಪ್ಪಿಸಲಿ,” ಎಂದು ಬಿಜೆಪಿ ಸವಾಲು ಹಾಕಿದೆ.

“ಪ್ರಧಾನಿ ನರೇಂದ್ರ ಮೋದಿ ಮತ್ತು ಗೃಹ ಸಚಿವ ಅಮಿತ್ ಶಾ ಅವರು ಪೆಗಾಸಸ್ ಸ್ಪೈವೇರ್ ಅನ್ನು ಭಾರತದ ವಿರುದ್ಧ ಸೇಡಿನ ಅಸ್ತ್ರವಾಗಿ ಬಳಕೆ ಮಾಡಿದ್ದಾರೆ. ಇದು ನಿಜವಾದ ದೇಶದ್ರೋಹ” ಎಂದು ಕಿಡಿಕಾರಿರುವ ರಾಹುಲ್,” ಹಿಂದೆ ನನ್ನ ಎಲ್ಲ ಫೋನ್‌ಗಳನ್ನು ಈ ಸರ್ಕಾರ ಕದ್ದಾಲಿಕೆ ಮಾಡಿತ್ತು,” ಎಂದು ಆರೋಪಿಸಿದ್ದಾರೆ.

"ಪೆಗಾಸಸ್ ನಿರ್ಮಾತೃ ದೇಶ ಇಸ್ರೇಲ್ 'ಪೆಗಾಸಸ್ ಅನ್ನು 'ಅಸ್ತ್ರ' ಎನ್ನುವ ವರ್ಗೀಕರಣ ಮಾಡಿದೆ. ಆ ಅಸ್ತ್ರವನ್ನು ಸದುದ್ದೇಶ ಅಥವಾ ದುರುದ್ದೇಶ ಎರಡಕ್ಕೂ ಬಳಸಬಹುದಾಗಿದೆ. ಭಯೋತ್ಪಾದಕರ ವಿರುದ್ಧ ಅದನ್ನು ಬಳಸಿದರೆ ಸದುದ್ದೇಶ ಎನಿಸುತ್ತದೆ. ಆದರೆ ಮೋದಿ ಅವರು ಆ ಅಸ್ತ್ರವನ್ನು ಭಾರತ ದೇಶದ ದುರ್ಬಳಕೆಗೆ ಬಳಸಿದ್ದಾರೆ. ಅದು ರಾಜಕೀಯಕ್ಕೆ ಬಳಸಲಾಗಿದೆ. ಕರ್ನಾಟಕ ಸೇರಿದಂತೆ ಕೆಲವು ರಾಜ್ಯ ಸರ್ಕಾರ ಕೆಡವಲೂ ಇದರ ದುರಪಯೋಗಯಾಗಿದೆ," ಎಂದು ಕಿಡಿಕಾರಿದರು.

ರಾಹುಲ್ ಆರೋಪಕ್ಕೆ ತಿರುಗೇಟು ನೀಡಿದ ಬಿಜೆಪಿ ವಕ್ತಾರ ರಾಜ್ಯವರ್ಧನ್ ರಾಥೋಡ್ "ಪೆಗಾಸಸ್ ಬಳಸಿ ತಮ್ಮ ಮೊಬೈಲ್ ಕದ್ದಾಲಿಕೆ ಮಾಡಲಾಗಿದೆ ಎಂದು ಬೊಬ್ಬೆಯಾಗಿರುವ ಕಾಂಗ್ರೆಸ್ ನಾಯಕ ರಾಹುಲ್ ಅವರು ಸಂಶಯ ನಿವಾರಿಸಿಕೊಳ್ಳಲು ಫೋನ್ ಅನ್ನು ತನಿಖಾ ಸಂಸ್ಥೆಗಳಿಗೆ ಒಪ್ಪಿಸಿ ಎಂದು ಸವಾಲು ಹಾಕಿದ್ದಾರೆ.

"ಮೋದಿ ಸರ್ಕಾರ ಯಾರೊಬ್ಬರ ಫೋನ್ ಅನ್ನು ಅಕ್ರಮವಾಗಿ ಕದ್ದಾಲಿಕೆ ಮಾಡಿಲ್ಲ. ಸಂಸತ್ ಕಲಾಪಗಳನ್ನು ತಡೆಯಲು ಕಾಂಗ್ರೆಸ್‌ಗೆ ಏನಾದರೂ ಒಂದು ನೆಪ ಒಡ್ಡಿ ಸತತ ಎರಡು ಲೋಕಸಭೆ ಚುನಾವಣೆ ಮುಖಭಂಗ ಅನುಭವಿಸಿದರೂ ಕಾಂಗ್ರೆಸ್ ಬುದ್ಧಿ ಕಲಿತಿಲ್ಲ." ಎಂದು ವಾಗ್ದಾಳಿ ಮಾಡಿದರು.

ಆಧಾರ: ವಿಜಯಕರ್ನಾಟಕ, ದಿನಾಂಕ:24.07.2021.

## 27. ಲಸಿಕೆ ನೀಡಿಕೆಗೆ ಕಾಲ ಮಿತಿ ಇಲ್ಲ

ಹದಿನೆಂಟು ವರ್ಷಕ್ಕಿಂತ ಮೇಲ್ಪಟ್ಟವರಿಗೆ ಲಸಿಕೆ ನೀಡಿ, ಮುಕ್ತಾಯಗೊಳಿಸುವುದಕ್ಕೆ ನಿಗದಿತ ಕಾಲಮಿತಿ ಹಾಕಿಕೊಳ್ಳಲಾಗಿಲ್ಲ ವರ್ಷಾಂತ್ಯದ ಒಳಗಾಗಿ ಎಲ್ಲರಿಗೂ ಲಸಿಕೆ ನೀಡುವ ಗುರಿಯನ್ನು ತಲುಪುವ ವಿಶ್ವಾಸವನ್ನು ಸರ್ಕಾರ ಹೊಂದಿದೆ ಎಂದು ಕೇಂದ್ರದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಖಾತೆ ಸಹಾಯಕ ಸಚಿವೆ ಡಾ. ಭಾರತಿ ಪ್ರವೀಣ್ ಪವಾರ್ ಲೋಕಸಭೆಗೆ ನೀಡಿದ ಲಿಖಿತ ಉತ್ತರದಲ್ಲಿ ತಿಳಿಸಿದ್ದಾರೆ. ವಯನಾಡ್‌ನ ಕಾಂಗ್ರೆಸ್ ಸಂಸದ ರಾಹುಲ್ ಗಾಂಧಿ ಮತ್ತು ಟಿಎಂಸಿಯ ಸಂಸದೆ ಮಾಲಾ ರಾಯ್ ಕೇಳಿದ್ದ ಪ್ರಶ್ನೆಗೆ ಸಚಿವೆ ಈ ಮಾಹಿತಿ ನೀಡಿದ್ದಾರೆ.

ಕೊರೊನಾದ ಬದಲಾಗುತ್ತಿರುವ ಪರಿಸ್ಥಿತಿಯಿಂದಾಗಿ ಲಸಿಕೆ ನೀಡಿ ಪೂರ್ತಿಗೊಳಿಸುವುದಕ್ಕೆ ಕಾಲಮಿತಿ ಹಾಕಿಕೊಳ್ಳಲಾಗದು. ಸದ್ಯ ಕೇಂದ್ರ ಗುರಿ ಹಾಕಿಕೊಂಡಿರುವ ಪ್ರಕಾರ ವರ್ಷಾಂತ್ಯಕ್ಕೆ ಮುಕ್ತಾಯವಾಗಲಿದೆ ಎಂದು ಪವಾರ್ ಹೇಳಿದ್ದಾರೆ.

**9,725 ಕೋಟಿ:** ಲಸಿಕೆ ಖರೀದಿ, ಉತ್ಪಾದನೆ ಮತ್ತು ವಿತರಣೆಗೆ ಸಂಬಂಧಿಸಿದಂತೆ ಕೇಂದ್ರ ಸರ್ಕಾರದ ವತಿಯಿಂದ ಇದುವರೆಗೆ ರೂ.9,725.15 ಕೋಟಿ ಖರ್ಚು ಮಾಡಲಾಗಿದೆ. ವರ್ಷಾಂತ್ಯದ ವರೆಗೆ 135 ಕೋಟಿ ಡೋಸ್ ಲಸಿಕೆ ಬೇಕಾಗುತ್ತದೆ. 43.87 ಕೋಟಿ ಡೋಸ್ ಲಸಿಕೆಯನ್ನು ಇದುವರೆಗೆ ನೀಡಲಾಗಿದೆ ಎಂದು ಸಚಿವೆ ಲಖಿತ ಉತ್ತರದಲ್ಲಿ ತಿಳಿಸಿದ್ದಾರೆ. ಲಸಿಕೆ ಖರೀದಿಸುವಲ್ಲಿ ವಿಳಂಬವಾಗುತ್ತಿಲ್ಲ ದೇಶದಲ್ಲಿನ ಒಟ್ಟು ಪ್ರಕರಣಗಳ ಪೈಕಿ ಶೇ.11ರಷ್ಟು 20 ವರ್ಷಕ್ಕಿಂತ ಕಡಿಮೆ ವಯಸ್ಸಿನವರದ್ದು ಎಂದು ಹೇಳಿದ್ದಾರೆ.

ಆಧಾರ: ಉದಯವಾಣಿ, ದಿನಾಂಕ:24.07.2021.

## 28. ಪೆಗಾಸಸ್‌ಗೆ ವಾರವಿಡೀ ಕಲಾಪ ಬಲಿ

ಪೆಗಾಸಸ್ ಹಗರಣ ಮತ್ತು ಕೃಷಿ ಕಾಯ್ದೆಗಳು ಸೇರಿದಂತೆ ಇನ್ನಿತರ ವಿಚಾರಗಳ ಕುರಿತಾಗಿ ವಿಪಕ್ಷಗಳ ಕೋಲಾಹಲ ಮತ್ತು ಉಭಯ ಕಾಲಪಗಳು ಬಲಿಯಾಗಿವೆ. ಇದರೊಂದಿಗೆ ಮುಂಗಾರು ಅಧಿವೇಶನದ ಮೊದಲ ವಾರ ಪೂರ್ಣ ಈ ವಿಷಯಗಳ ಗದ್ದಲದಲ್ಲೇ ಮುಕ್ತಾಯವಾಗಿದೆ.

ಸಂಸತ್ತಿನ ಉಭಯ ಸದನಗಳಲ್ಲೂ ಪೆಗಾಸಸ್ ಕುರಿತು ಜಂಟಿ ಸಂಸದೀಯ ತನಿಖೆ ನಡೆಸಬೇಕು, ಕೃಷಿ ಕಾಯ್ದೆ ರದ್ದು ಪಡಿಸಬೇಕೆಂದು ವಿಪಕ್ಷಗಳು ಗದ್ದಲ ಎಬ್ಬಿಸುವ ಮೂಲಕ ಕಲಾಪಕ್ಕೆ ಅಡ್ಡಿ ಮಾಡಿದವು. 4 ಬಾರಿ ಕಲಾಪ ಮುಂದೂಡಲಾಗಿತ್ತು. ಆದರೂ ಪರಿಸ್ಥಿತಿ ತಿಳಿಗೊಳ್ಳದ ಕಾರಣ, ಉಭಯ ಸದನಗಳ ಕಲಾಪ ಮುಂದೂಡಲಾಯಿತು.

**ಪ್ರತಿಭಟನೆ:** ಪೆಗಾಸಸ್ ಹಗರಣ ಸಂಬಂಧ ಸುಪ್ರೀಂಕೋರ್ಟ್ ನೇತೃತ್ವದಲ್ಲಿ ತನಿಖೆಗೆ ಆಗ್ರಹಿಸಿ ರಾಹುಲ್ ಗಾಂಧಿ ಸೇರಿದಂತೆ ವಿಪಕ್ಷದ ಸಂಸದರು ಸಂಸತ್ತಿನ ಆವರಣದಲ್ಲಿರುವ ರಾಷ್ಟ್ರಪಿತ ಮಹಾತ್ಮ ಗಾಂಧೀಜಿ ಅವರ ಪ್ರತಿಮೆ ಎದುರು ಪ್ರತಿಭಟನೆ ನಡೆಸಿದರು.

ಆಧಾರ: ಕನ್ನಡ ಪ್ರಭ, ದಿನಾಂಕ:24.07.2021.

## 29. ಟಿಎಂಸಿ ಸಂಸದನ ಅಮಾನತು

ಪೆಗಾಸಸ್ ಗೂಢಚರ್ಯೆ ವಿವಾದದ ಹಿನ್ನೆಲೆಯಲ್ಲಿ ರಾಜ್ಯಸಭೆಯಲ್ಲಿ ಮಾಹಿತಿ ತಂತ್ರಜ್ಞಾನ ಸಚಿವ ಅಶ್ವಿನಿ ವೈಷ್ಣವ್ ಉತ್ತರ ನೀಡುವ ವೇಳೆ ಅವರಿಂದ ಹೇಳಿಕೆ ಪ್ರತಿ ಕಸಿದು ಹರಿದು, ಚೂರುಗಳನ್ನು ಉಪ ಸಭಾಧ್ಯಕ್ಷರ ಕಡೆಗೆ ತೂರಿ ಅನುಚಿತ ವರ್ತನೆ ತೋರಿದ ತೃಣ ಮೂಲ ಕಾಂಗ್ರೆಸ್ ಪಕ್ಷದ ಸಂಸದ ಶಂತನು ಸೇನ್‌ರನ್ನು ಅಮಾನತ್ತುಗೊಳಿಸಲಾಗಿದೆ.

ಸಂಸದೀಯ ನಡಾವಳಿಗೆ ಅಪಚಾರ ಬಗೆದು ಶಿಸ್ತು ಉಲ್ಲಂಘಿಸುವ ಮೂಲಕ ಶಂತನು ವರ್ತಿಸಿದ ರೀತಿಗೆ ಸಭಾಧ್ಯಕ್ಷ ವೆಂಕಯ್ಯ ನಾಯ್ಡು ಅತೀವ ಬೇಸರ ವ್ಯಕ್ತಪಡಿಸಿದರು. ಸಂಸತ್ತಿನ ಆಗಸ್ಟ್ 13 ರವರೆಗೆ ನಡೆಯಲಿರುವ ಮುಂಗಾರು ಅಧಿವೇಶನದಿಂದ ದೂರವುಳಿಯುವಂತೆ ನಾಯ್ಡು ಆದೇಶಿಸಿದ್ದಾರೆಂದು ತಿಳಿದುಬಂದಿದೆ.

ಆಧಾರ: ಸಂಯುಕ್ತ ಕರ್ನಾಟಕ, ದಿನಾಂಕ:24.07.2021

## 30. CPI (M) moves privilege motion against Law Minister

Communist Party of India (Marxist) MP John Brittas moved a privilege motion against the Law Minister Kiren Rijiju for a misleading reply to a question raised by him on the filling up of vacancies in the High courts. Mr. Brittas in a starred question in the Rajya Sabha had asked the Law Minister to provide details of the number of High Court judges recommended by the supreme court collegiums for appointment during the last one year, and how many of these recommendations had been implemented.

In response, Mr. Rijiju in formed the house that our of 80 recommendations by the Sc collegium between July 1 2020 to july 15, 2021, only 45 of had been appointed as judges and the remaining were “under various stages of processing”.

The Minister had pointed out that filling up vacancies in the higher Judiciary was a continuous, integrated and collaborative process between the Executive and the judiciary, requiring consultation and approval from Constitutional authorities at the State as well as central level. No timeline could be given for filling up the vacancies, he had said.

Mr. Brittas in a letter to Rajya sabha Chariman Venkaiah Naidu said that the reply given by the Minister was “in contravention of the order of the Hon’ble Supreme Court”. The top court has said, “If the Supreme Court collegiums after consideration of the aforesaid

inputs, still reiterates the recommendation(s) unanimously, such appointments should be processed and appointment should be made within 3 to 4 weeks".

Courtesy: The Hindu, Dated:24.07.2021

## 31. Pegasus: Rajya Sabha MP moves apex court for probe

CPM MP from Rajya Sabha John Brittas has filed a PIL in the Supreme Court seeking a direction to the Union government to conduct an immediate investigation through an SIT under its monitoring into recent allegations related to the use of Pegasus spyware for snooping activists, journalists and other prominent people.

The plea claimed the recent Pegasus snooping allegations were causing huge apprehensions and great agony for the citizens as it violated freedom of speech under Article 19 (1) (a) as well as personal liberty under Article 21 of the Constitution. Only a proper court-monitored investigation can alleviate these apprehensions and agonies the plea by Brittas, senior journalist and managing director of Kairali TV added.

Courtesy: Deccan Herald, Dated: 26.07.2021

## 32. Session rocked by many issues

Pegasus farmer's protest and price rise among other issues rocked the Parliament in the first week of Monsoon Session. Lok Sabha and Rajya Sabha were to hold proceedings for 21.5 hours in four days. However, Lok Sabha sat for just 120 minutes while the Rajya Sabha has an improved record because the government and the Opposition arrived at a consensus to discuss Covid-19 situation for four hours besides a 55 minute-reply by Health Minister Mansukh Mandaviya. The first week of Rajya Sabha also witnessed the suspension of Trinamool Congress MP Santanu Sen for snatching and tearing papers from Information Techinology Minister Ashwini Vaishnaw.

Courtesy: Deccan Hearald, Dated: 26.07.2021

## 33. PM calls for a unite India movement

Prime Minister Narendra Modi had urged Indians to participate in the Amrit Mahotsav launched to mark the 75$^{th}$ year of Independence, asking citizens to forge a unity of purpose or Bharat Jodo Andolan in the same manner as Mahatma Gandhi's "Quit India" or "Bharat Chhodo Andolan".

Just like Bapu (Mahatma Gandhi) led the Bharat Chhodo Andolan (Quit India movement), every Indian must lead the "Bharat Jodo Andolan (unite India movement). It is our responsibility that we do our work in such a manner that it helps in uniting our country which is full of diversities", Mr.Modi said adding "We have to move forward with Nation first Always first".

Many programmes in connection with Amrit Mahotsav Minister said adding that the Ministry of Culture had started an initiative to have maximum number of Indian sing the national anthem together. For this a website too has been created.

**Cautions on COVID:** While greeting citizens on the upcoming festival season, he cautioned that the threat of COVID-19 still loorned large and that all precautions must be taken to prevent its spread.

Noting that on July 26 the nation would mark Kargil Vijay Divas the people of the country to pay tributes to those who made the nation proud in 1999.

In the broadcast he also cited a study done by My Government to highlight that out of those sending messages and suggestions for *Mann Ki Baat*, close to 75% were below 35 years. I view this as a very good indicator. *Mann Ki Baat* is a medium which has positivity, sensitivity. In *Mann Ki Baat*, we talk about positive things; its character is collective he said.

Courtesy:The Hindu, Date: 26.07.2021

## 34. ಕಲಾಪಕ್ಕೆ ಅಡ್ಡಿ: ನಾಯ್ಡು ಅಸಹಾಯಕತೆ

ಸಂಸತ್ತಿನ ಕಲಾಪಕ್ಕೆ ನಿರಂತರ ಅಡ್ಡಿಯಾಗುತ್ತಿರುವ ಬಗ್ಗೆ ರಾಜ್ಯ ಸಭೆ ಸಭಾಪತಿ ಎಂ.ವೆಂಕಯ್ಯನಾಯ್ಡು ಕಳವಳ ವ್ಯಕ್ತಪಡಿಸಿದ್ದಾರೆ. ಗದ್ದಲದಿಂದಾಗಿ, ಸಾರ್ವಜನಿಕ ಹಿತಾಸಕ್ತಿಯ ಪ್ರಮುಖ ವಿಷಯಗಳನ್ನು ಪ್ರಸ್ತಾಪಿಸಲಿದ್ದ 90ಕ್ಕೂ ಹೆಚ್ಚು ಸಂಸದರಿಗೆ ಅವಕಾಶ ಸಿಗದೇ ಹೋಯಿತು. ಇದರಿಂದಾಗಿ ನಾವು ದಿನದಿಂದ ದಿನಕ್ಕೆ ಅಸಹಾಯಕರಾಗುತ್ತಿದ್ದೇವೆ ಎಂದು ತಿಳಿಸಿದರು.

ಪೆಗಾಸಸ್, ನೂತನ ಕೃಷಿ ಕಾಯ್ದೆಗಳು ಸೇರಿದಂತೆ ಹಲವು ವಿಷಯಗಳನ್ನು ಪ್ರಸ್ತಾಪಿಸಿ ಪ್ರತಿಪಕ್ಷಗಳ ಸಂಸದರು ಘೋಷಣೆ ಕೂಗುತ್ತ ಸಭಾಧ್ಯಕ್ಷರ ಪೀಠದ ಮುಂಭಾಗಕ್ಕೆ ನುಗ್ಗಿದರು. ಈ ಸಂದರ್ಭದಲ್ಲಿ ಉಂಟಾದ ಗದ್ದಲದಿಂದ ಅಸಮಾಧಾನ ವ್ಯಕ್ತಪಡಿಸಿದ ಅವರು ಮುಂಗಾರು ಅಧಿವೇಶನ ಆರಂಭವಾದ ಜುಲೈ 19 ರಿಂದ ಇಲ್ಲಿಯವರೆಗೆ, 12 ಪ್ರಸ್ತಾಪಗಳು ಸೇರಿದಂತೆ ಶೂನ್ಯ ವೇಳೆಯ 69 ಪ್ರಸ್ತಾಪಗಳು ಹಾಗೂ 23 ವಿಶೇಷ ಪ್ರಸ್ತಾಪಗಳನ್ನು ಚರ್ಚೆಗೆ ಅಂಗೀಕರಿಸಲಾಗಿತ್ತು. ನಿಲ್ಲದ ಗದ್ದಲದಿಂದಾಗಿ ಅದಕ್ಕೆ ಅವಕಾಶವಾಗಲಿಲ್ಲ ಎಂದರು. ಸಂಜೆ ಏಳರವರೆಗೆ ನಾಲ್ಕು ಬಾರಿ ಕಲಾಪವನ್ನು ಮುಂದೂಡಲಾಯಿತು. ಮತ್ತೆ ಸದನ ಸೇರಿದಾಗಲೂ ಗದ್ದಲ ಮುಂದುವರಿದಿದ್ದರಿಂದ, ರಾಜ್ಯ ಸಭಾಧ್ಯಕ್ಷ ಸ್ಥಾನದಲ್ಲಿದ್ದ ಸಸ್ಮಿತ ಪಾತ್ರಾ ಕಲಾಪವನ್ನು ಮುಂದೂಡಿದರು.

ಪ್ರತಿಪಕ್ಷಗಳ ಸದಸ್ಯರು ಸಂಸತ್ತಿನ ಉಭಯ ಸದನಗಳಲ್ಲಿ ಸರ್ಕಾರದ ವಿರುದ್ಧ ಘೋಷಣೆ ಕೂಗಿ, ಪ್ರತಿಭಟನೆ ನಡೆಸಿದ್ದರಿಂದ ಪದೇ ಪದೇ ಕಲಾಪವನ್ನು ಮುಂದೂಡಬೇಕಾಯಿತು.

**ಉನ್ನತ ಶಿಕ್ಷಣ ಆಯೋಗ ಸ್ಥಾಪನೆಗೆ ಮಸೂದೆ ರಚನೆ:** ಭಾರತ ಉನ್ನತ ಶಿಕ್ಷಣ ಆಯೋಗವನ್ನು (ಹೆಚ್‌ಇಸಿಐ) ಸ್ಥಾಪಿಸುವ ಸಲುವಾಗಿ ಶಿಕ್ಷಣ ಸಚಿವಾಲಯವು ಮಸೂದೆಯನ್ನು ರೂಪಿಸುವ ಕಾರ್ಯದಲ್ಲಿ ತೊಡಗಿದೆ ಎಂದು ಕೇಂದ್ರ ಶಿಕ್ಷಣ ಸಚಿವ ಧರ್ಮೇಂದ್ರ ಪ್ರಧಾನ್ ಅವರು ಲೋಕಸಭೆಗೆ ಮಾಹಿತಿ ನೀಡಿರುತ್ತಾದರೆ.

ಶಿಕ್ಷಣ ಸಚಿವಾಲಯವು ಸಂಪುಟದ ಅನುಮೋದನೆ ಪಡೆದು ರಾಷ್ಟ್ರೀಯ ಶಿಕ್ಷಣ ನೀತಿ 2020 (ಎನ್‌ಇಪಿ) ಅನ್ನು 2020ರ ಜುಲೈ 29 ರಂದು ಘೋಷಿಸಿದೆ. ನೂತನ ನೀತಿಯು ಭಾರತ ಉನ್ನತ ಶಿಕ್ಷಣ ಆಯೋಗವನ್ನು ಸ್ಥಾಪಿಸುವಂತೆ ಸೂಚಿಸಿದೆ. ನಿಯಂತ್ರಣ, ಮಾನ್ಯತೆ, ಧನಸಹಾಯ ಮತ್ತು

ಶೈಕ್ಷಣಿಕ ಗುಣಮಟ್ಟದ ವಿನ್ಯಾಸ ಎನ್ನುವ ನಾಲ್ಕು ಸ್ವತಂತ್ರ ಅಂಗಗಳು ಭಾರತ ಶಿಕ್ಷಣ ಆಯೋಗದ ಅಡಿಯಲ್ಲಿ ಕಾರ್ಯನಿರ್ವಹಿಸುತ್ತದೆ ಎಂದು ಅವರು ಲಿಖಿತ ಉತ್ತರ ನೀಡಿದ್ದಾರೆ.

ಆಧಾರ:ಪ್ರಜಾವಾಣಿ, ದಿನಾಂಕ:27.07.2021

## 35. ಸತತ ಆರನೇ ದಿನ ಸಂಸತ್ ಕಲಾಪ ವ್ಯರ್ಥ

ಪೆಗಾಸಸ್ ವಿವಾದವನ್ನು ಸಂಸದೀಯ ತನಿಖೆ ಮತ್ತು ನ್ಯಾಯಾಂಗ ತನಿಖೆಗೆ ಒಪ್ಪಿಸಬೇಕು. ಮೂರು ಕೃಷಿ ಮಸೂದೆ ರದ್ದುಗೊಳಿಸಬೇಕು ಎಂಬಿತ್ಯಾದಿ ವಿಚಾರ ಮುಂದಿಟ್ಟು ಪ್ರತಿಪಕ್ಷ ಸದಸ್ಯರು ನಡೆಸುತ್ತಿರುವ ಪ್ರತಿಭಟನೆಗೆ ಸಂಸತ್ತಿನ ಉಭಯ ಸದನಗಳ ಕಲಾಪ ಬಲಿಯಾಯಿತು. ಸತತ ಆರನೇ ದಿನವೂ ಕಲಾಪ ನಡೆಯದ ಕಾರಣ, ಪ್ರತಿಪಕ್ಷ ಸದಸ್ಯರ ನಡೆಗೆ ಪ್ರಧಾನ ಮಂತ್ರಿ ತೀವ್ರ ಆಕ್ಷೇಪ ವ್ಯಕ್ತಪಡಿಸಿದರು. ಲೋಕಸಭೆಯಲ್ಲಿ ಬೆಳಿಗ್ಗೆ 11 ಕ್ಕೆ ಕಲಾಪ ಆರಂಭವಾಗಿ ಸ್ವಲ್ಪ ಹೊತ್ತಿನಲ್ಲೇ ಮುಂದೂಡಲ್ಪಟ್ಟಿತು. ಬಳಿಕ ಸದನ ಸಮಾವೇಶಗೊಂಡರೂ ಪದೇ ಪದೇ ಗದ್ದಲದ ಕಾರಣ ಮುಂದೂಡಲ್ಪಟ್ಟು ಕೊನೆಗೆ ಸಂಜೆ 4.30ರ ಹೊತ್ತಿಗೆ ಸ್ಪೀಕರ್ ಓಂ ಬಿರ್ಲಾ ದಿನದ ಮಟ್ಟಿಗೆ ಕಲಾಪ ಮುಂದೂಡಿದರು.

ರಾಜ್ಯಸಭೆಯಲ್ಲಿ ಕೂಡ ಪೆಗಾಸಸ್ ಮತ್ತು ಕೃಷಿ ಕಾನೂನು ಸಂಬಂಧ ಪ್ರತಿಪಕ್ಷ ಸದಸ್ಯರು ಗದ್ದಲವೆಬ್ಬಿಸಿ ಪ್ರತಿಭಟನೆ ನಡೆಸಿದರು. ಇದರಿಂದ ಹಲವು ಬಾರಿ ಕಲಾಪ ಮುಂದೂಡಿಕೆಯಾಗಿ ಕಡೆಗೆ ದಿನದ ಮಟ್ಟಿಗೆ ಕಲಾಪ ಮುಂದಕ್ಕೆ ಹಾಕಲಾಯಿತು.

**ಮಸೂದೆ ಅಂಗೀಕಾರ:** ರಾಜ್ಯ ಸಭೆಯಲ್ಲಿ ಪ್ರತಿಪಕ್ಷ ಸದಸ್ಯರ ಪ್ರತಿಭಟನೆಯ ನಡುವೆ ಮೆರೀನ್ ಏಯ್ಡ್ಸ್ ಟು ನ್ಯಾವಿಗೇಶನ್ ಬಿಲ್, 2021 ಅನ್ನು ಸದನ ಅಂಗೀಕರಿಸಿದೆ. ಇದು 9 ದಶಕ ಹಳೆಯ ಕಾನೂನನ್ನು ಬದಲಾಯಿಸಲಿದೆ. ಲೈಟ್ ಹೌಸ್ ನಿರ್ವಹಣೆ, ಹಡಗು ಸಂಚಾರ ಸೇವೆಗಳಿಗೆ ಸಂಬಂಧಿಸಿದ ನಿರ್ವಹಣೆ ಮತ್ತು ಸ್ಥಾಪನೆಗಾಗಿ ಹೊಸ ಚೌಕಟ್ಟು ನಿರ್ಮಿಸಲು ಇದು ನೆರವಾಗಲಿದೆ. ಈ ನಡುವೆ ದಿನದ ಕಲಾಪದ ಕೊನೆಯಲ್ಲಿ ಮಹಿಳಾ (ಕೇರ್ ಆ್ಯಂಡ್ ಪ್ರೊಟೆಕ್ಷನ್ ಆಫ್ ಚಿಲ್ಡ್ರನ್) ಅಮೆಂಡ್‌ಮೆಂಟ್ ಬಿಲ್ 2021 ಕುರಿತು ನಿಲುವಳಿಯನ್ನು ಮಂಡಿಸಿದರು.

**ಸಿಎಎ ಅನುಷ್ಠಾನಕ್ಕೆ ಅವಧಿ ಕೇಳಿದ ಸರ್ಕಾರ:** ಪೌರತ್ವ ತಿದ್ದುಪಡಿ ಕಾಯ್ದೆ (ಸಿಎಎ)ಯನ್ನು 2019ರಲ್ಲೇ ಅಂಗೀಕರಿಸಿದೆ. ಆದರೆ, ಅನುಷ್ಠಾನ ವಿಳಂಬವಾಗಿದೆ. ಇದನ್ನು ಅನುಷ್ಠಾನಗೊಳಿಸುವುದಕ್ಕೆ ಗೃಹ ಸಚಿವಾಲಯ ಈ ಸಂಬಂಧ ಜನವರಿ 9ರ ತನಕ ಕಾಲಾವಕಾಶ ಕೋರಿದೆ.

**ನಕ್ಸಲ್ ಪಡೆಗೆ ಮಕ್ಕಳು:** ಜಾರ್ಖಂಡ್ ಮತ್ತು ಛತ್ತೀಸ್‌ಗಡದಲ್ಲಿ ಮಾವೋವಾದಿಗಳು ಮಕ್ಕಳಿಗೆ ಸೇನಾ ಶೈಲಿಯ ತರಬೇತಿ ನೀಡುತ್ತಿದೆ. 2020ರಲ್ಲಿ ವಿಧ್ವಂಸಕ ಪ್ರಕರಣ 665 ಮತ್ತು ಮೃತ ಪಟ್ಟವರ ಸಂಖ್ಯೆ 183 ಆಗಿತ್ತು ಎಂದು ಸರ್ಕಾರ ತಿಳಿಸಿದೆ.

ಆಧಾರ:ವಿಜಯವಾಣಿ, ದಿನಾಂಕ:28.07.2021

## 36. Speaker Om Birla is mulling suspension of repeat offenders

Upset over incidents of tearing papers and throwing on the chair and also on ministers, speakers Om Birla is contemplating suspension of atleast 13 MPs belonging to the Congress and the TMC who have been identified as repeat offenders. It was an insult to the chair as torn papers rained for several minutes when Rajendra Agarwal was the presiding officer. Therefore, we expect that the speaker will initiate action against the MP’s who have misbehaved with the presiding officers said a source.

It was learnt that the Speaker summoned some of the opposition leaders in his chamber and conveyed his displeasure and warned that such behaviour will not be tolerated anymore. Sources said some of the MPs have been identified as video of the proceedings was scrutinised and their behaviour was found to be against the parliament ethics and derogatory to the chair.

In Lok Sabha, Congress and TMC MPs tore papers and threw it at the chair and towards parliamentary affairs minister Prahalad Joshi.

Courtesy: The Hindu, Date: 29.07.2021

## 37. ಪೆಗಾಸಸ್ ಬಿಡದ ವಿಪಕ್ಷಗಳು

ಪೆಗಾಸಸ್ ವಿವಾದವನ್ನು ಸಂಸತ್ತಿನಲ್ಲಿ ಪ್ರಧಾನಿ ಮತ್ತು ಗೃಹ ಸಚಿವರ ಉಪಸ್ಥಿತಿಯಲ್ಲಿ ಚರ್ಚೆಗೆ ಒಳಪಡಿಸಬೇಕು ಅಥವಾ ಅದನ್ನು ಸುಪ್ರೀಂಕೋರ್ಟ್ ನಿಗಾದಲ್ಲಿ ತನಿಖೆಗೆ ಒಪ್ಪಿಸಬೇಕು ಎಂದು ಪ್ರತಿಪಕ್ಷ ಸದಸ್ಯರು ಪಟ್ಟುಹಿಡಿದ್ದಾರೆ. ಈ ವಿಚಾರದಲ್ಲಿ ಕಾಂಗ್ರೆಸ್ ಸೇರಿ 14 ಪಕ್ಷಗಳು ಒಮ್ಮತ ತೋರಿಸಿದ್ದು, ಸಂಸತ್ ಕಲಾಪ ನಡೆಸದಂತೆ ಪ್ರತಿಭಟನೆ ನಡೆಸಿದವು.

ಹದಿನಾಲ್ಕು ಪ್ರತಿಪಕ್ಷ ನಾಯಕರು ಸಭೆ ಸೇರಿದ್ದು, ರಾಹುಲ್ ಗಾಂಧಿ ಕೂಡ ಭಾಗವಹಿಸಿದ್ದರು. ಸಭೆಯಲ್ಲಿ ತೃಣಮೂಲ ಕಾಂಗ್ರೆಸ್ ನಾಯಕರು ಪಾಲ್ಗೊಂಡಿರಲಿಲ್ಲ. ಸಭೆಯ ಬಳಿಕ ಸುದ್ದಿಗಾರರ ಜೊತೆಗೆ ಮಾತನಾಡಿದ ರಾಹುಲ್ ಗಾಂಧಿ ಸಂಸತ್ತಿನಲ್ಲಿ ಈ ಬಗ್ಗೆ ಚರ್ಚೆ ನಡೆಸುವುದಕ್ಕೆ ಅವಕಾಶ ನೀಡುವ ತನಕ ನಾವು ಎಲ್ಲೂ ಹೋಗುವುದಿಲ್ಲ. ಸಂಸತ್ ಕಲಾಪ ಹಾಳುಗೆಡುವುತ್ತಿರುವ ಆರೋಪ ಸರಿಯಲ್ಲ. ಪ್ರತಿಪಕ್ಷ ಮಾತ್ರವೇ ತನ್ನ ಹೊಣೆಗಾರಿಕೆಯನ್ನು ನಿಭಾಯಿಸುತ್ತಿದೆ ಎಂದು ಸಮಜಾಯಿಷಿ ನೀಡಿದರು.

**ಚರ್ಚೆಗೆ ಬಾರದೆ ಕಾಂಗ್ರೆಸ್ ಪಲಾಯನ:** ಸಂಸತ್ ಕಲಾಪಕ್ಕೆ ಅಡ್ಡಿ ಉಂಟುಮಾಡುತ್ತ ಪ್ರತಿಭಟನೆ ನಡೆಸುತ್ತಿರುವ ಕಾಂಗ್ರೆಸ್ ಮತ್ತು ಇತರೆ ಪ್ರತಿಪಕ್ಷ ಸದಸ್ಯರು ಚರ್ಚೆಗೆ ಬಾರದೆ ಪಲಾಯನವಾದ ಅನುಸರಿಸುತ್ತಿದ್ದಾರೆ. ಪೆಗಾಸಸ್ ವಿಚಾರಕ್ಕೆ ಸಂಬಂಧಿಸಿ ಸಚಿವರು ಹೇಳಿಕೆ ನೀಡುವಾಗಲೇ ಅವರ ಹೇಳಿಕೆ ಪ್ರತಿ ಹಿಡಿದೆಳೆದು ಹರಿದು ಹಾಕಿದ ಪ್ರಸಂಗಕ್ಕೂ ಸಂಸತ್ ಸಾಕ್ಷಿಯಾಗಿದೆ. ಸಚಿವರ ಹೇಳಿಕೆ ಬಳಿಕ ಚರ್ಚೆ ಆರಂಭಿಸಬಹುದಾಗಿತ್ತು. ಆದರೆ ಚರ್ಚೆಯಲ್ಲಿ ಪಾಲ್ಗೊಳ್ಳುವುದು ಪ್ರತಿಪಕ್ಷ ಸದಸ್ಯರಿಗೆ ಬೇಕಾಗಿಲ್ಲ ಎಂದು ಆಡಳಿತಾರೂಢ ಬಿಜೆಪಿ ಆರೋಪಿಸಿದೆ. ಕೇಂದ್ರ ಸಚಿವ ಅನುರಾಗ್ ಠಾಕೂರ್ ಪ್ರತಿಪಕ್ಷಗಳ ನಡೆಯನ್ನು ಕಟುವಾಗಿ ಟೀಕಿಸಿದ್ದು, ಸಂಸತ್ತಿನ ನಡವಳಿಕೆಯನ್ನು ಮೀರಿ ಪ್ರತಿಪಕ್ಷ ಸದಸ್ಯರು ನಡೆದುಕೊಳ್ಳುತ್ತಿರುವುದೇಕೆ ಚರ್ಚೆಗೆ ವಿಷಯವೇ ಇಲ್ಲವೇ ಜಗತ್ತಿನ ಎದುರು ಪ್ರತಿಪಕ್ಷಗಳು ಭಾರತದ ಮಾನವನ್ನು ಹರಾಜು ಹಾಕುತ್ತಿದ್ದಾರೆ. ಸ್ಪೀಕರ್ ಮತ್ತು ಸಚಿವರ ಮೇಲೆ ಪೇಪರ್ ಹರಿದೆಸೆಯುವ ಪ್ರವೃತ್ತಿ ಯಾವ ರೀತಿಯ ಪ್ರತಿಭಟನೆ ಎಂದು ಪ್ರಶ್ನಿಸಿದರು.

ಆಧಾರ:ವಿಜಯವಾಣಿ, ದಿನಾಂಕ:29.07.2021

## 38. ಕಾಗದ ಹರಿದು ಸ್ಪೀಕರ್‌ರತ್ತ ಎಸೆದ ಕಾಂಗ್ರೆಸ್ ಸಂಸದರು

ಪೆಗಾಸಸ್ ಬೇಹುಗಾರಿಕೆ ಮತ್ತು ಕೃಷಿ ಕಾಯ್ದೆಗಳ ವಿಚಾರಗಳ ಚರ್ಚೆಗೆ ಕಲಾಪ ಆರಂಭವಾದಾಗಿನಿಂದಲೂ ಆಗ್ರಹಿಸುತ್ತಿರುವ ಕಾಂಗ್ರೆಸ್ ಸದಸ್ಯರು ಸದನದ ಪ್ರತಿಗಳು ಹಾಗೂ ಭಿತ್ತಿಪತ್ರಗಳನ್ನು ಹರಿದು ಸ್ಪೀಕರ್ ಪೀಠದತ್ತ ಎಸೆದು ಪೀಠಕ್ಕೆ ಅಗೌರವ ತಂದಿದ್ದಾರೆ. ಈ ಹಿನ್ನೆಲೆಯಲ್ಲಿ ಇಂಥ ಕೃತ್ಯದಲ್ಲಿ ಭಾಗಿಯಾದ ಕಾಂಗ್ರೆಸ್‌ನ 10 ಸಂಸದರ ವಿರುದ್ಧ ಕೇಂದ್ರ ಸರ್ಕಾರ ಅಮಾನತ್ತು ಗೊತ್ತುವಳಿ ಮಂಡಿಸಲು ಸಿದ್ಧತೆ ನಡೆಸಿದೆ.

ಕಾಂಗ್ರೆಸ್ ಸಂಸದರಾದ ಟಿ.ಎನ್.ಪ್ರತಾಪನ್, ಹಿಬಿ ಎಡನ್, ಗುರ್ಜೀತ್ ಸಿಂಗ್ ಔಜ್ಲಾ, ಮಾಣಿಕ್ಯಂ ಠಾಗೋರ್, ದೀಪಕ್ ಬೈಜ್, ಎ.ಎಂ.ಆರಿಫ್ ಮತ್ತು ಜ್ಯೋತಿಮಣಿ ಸೇರಿದಂತೆ ಮುಂದಿನ ಕಲಾಪಗಳಿಂದ ಅಮಾನತ್ತು ಆಗುವ ಭೀತಿಯಲ್ಲಿದ್ದಾರೆ. ಆದರೆ ಅಮಾನತ್ತು ಮಾಡಬೇಡಿ ಎಂದು ಸ್ಪೀಕರ್ ಓಂ ಬಿರ್ಲಾರನ್ನು ಕಾಂಗ್ರೆಸ್ ಸಂಸದೀಯ ನಾಯಕ ಅಧೀರ್ ಚೌಧರಿ ಕೋರಿದ್ದಾರೆ.

ಕಲಾಪ ಆರಂಭವಾಗುತ್ತಿದ್ದಂತೆ ವಿಪಕ್ಷ ನಾಯಕರು ಪೆಗಾಸಸ್ ಮತ್ತು ರೈತರ ವಿಚಾರಕ್ಕೆ ಸಂಬಂಧಿಸಿ ಭಿತ್ತಿಪತ್ರ ಪ್ರದರ್ಶಿಸಿ ಸದನದ ಬಾವಿಗಿಳಿದು ಕೇಂದ್ರ ಸರ್ಕಾರದ ವಿರುದ್ಧ ಘೋಷಣೆ ಕೂಗಿದರು. ಸ್ಪೀಕರ್ ಸ್ಥಾನದಲ್ಲಿದ್ದ ರಾಜೇಂದ್ರ ಅಗರ್ ವಾಲ್‌ರತ್ತ ಕಾಂಗ್ರೆಸ್ ಸದಸ್ಯರು ಸದನದ ಪ್ರತಿಗಳು ಮತ್ತು ಭಿತ್ತಿಪತ್ರಗಳನ್ನು ಹರಿದು ಎಸೆದರು. ಕೆಲವು ಕಾಗದಗಳು ಸಚಿವ ಪ್ರಹ್ಲಾದ್ ಜೋಶಿ ಅವರ ಸಮೀಪ ಬಿದ್ದವು.

**ಇಡೀ ದಿನ ನಡೆಯದ ಕಲಾಪ:** ಗದ್ದಲದ ಲೋಕಸಭೆ, ರಾಜ್ಯಸಭೆ ಕಲಾಪಗಳು ಸತತ 7ನೇ ದಿನವೂ ಕೂಡ ದಿನದ ಮಟ್ಟಿಗೆ ಮುಂದೂಡಿಕೆ ಆದವು.

**ಕಾಂಗ್ರೆಸ್–ಬಿಜೆಪಿ ಪೆಗಾಸಸ್ ಜಟಾಪಟಿ:** ಇಸ್ರೇಲ್ ಮೂಲದ ಪೆಗಾಸಸ್ ಸಾಫ್ಟ್‌ವೇರ್ ಬಳಸಿ ಗಣ್ಯರ ಮೊಬೈಲ್ ಮೇಲೆ ಬೇಹುಗಾರಿಕೆ ನಡೆಸಲಾಗಿದೆ ಎಂಬ ವಿವಾದಕ್ಕೆ ಸಂಬಂಧಿಸಿದಂತೆ ಒಂದಾಗಿರುವ 14 ಪಕ್ಷಗಳು ಸಂಸತ್ತಿನಲ್ಲಿ ಪ್ರಧಾನಿ ಮತ್ತು ಗೃಹ ಸಚಿವರ ಸಮ್ಮುಖದಲ್ಲೇ ಚರ್ಚೆಗೆ ಆಗ್ರಹಿಸಿವೆ. 14 ವಿಪಕ್ಷಗಳು ಸಭೆ ಸೇರಿ ಒಂದಾಗಿ ಹೋರಾಟ ನಡೆಸುವ ನಿರ್ಣಯ ಕೈಗೊಂಡಿವೆ.

ಈ ಬಗ್ಗೆ ಸುದ್ದಿಗಾರರೊಂದಿಗೆ ಮಾತನಾಡಿದ ಕಾಂಗ್ರೆಸ್ ನಾಯಕ ರಾಹುಲ್ ಗಾಂಧಿ ಇಂಥದೊಂದು ಬೇಹುಗಾರಿಕೆ ಮೂಲಕ ಪ್ರಧಾನಿ ಮತ್ತು ಗೃಹ ಸಚಿವರು ಪ್ರಜಾಪ್ರಭುತ್ವದ ಆತ್ಮಕ್ಕೆ ಧಕ್ಕೆ ತಂದಿದ್ದಾರೆ. ಪೆಗಾಸಸ್ ಅನ್ನು ದೇಶದ ವಿರುದ್ಧ ದೇಶದ ಸಂಸ್ಥೆಗಳ ವಿರುದ್ಧ ಬಳಸಿದ್ದಾರೆ. ಇದು ದೇಶದ್ರೋಹ ಎಂದು ಕಿಡಿಕಾರಿದ್ದಾರೆ. ಇದಕ್ಕೆ ತಿರುಗೇಟು ನೀಡಿರುವ ಬಿಜೆಪಿ, ಇಂಥ ಸಂಕಷ್ಟದ ಹೊತ್ತಿನಲ್ಲಿ ಕೋವಿಡ್ ವಿಷಯ ಚರ್ಚೆ ಮಾಡದೇ ಇರುವುದು ದೇಶದ್ರೋಹ ಎಂದಿದೆ.

ಆಧಾರ:ಕನ್ನಡ ಪ್ರಭ, ದಿನಾಂಕ:29.07.2021

## 39. Officials skip House panel meet

The Standing Committee on Information Technology, headed by Congress leader Shashi Tharoor, could not deliberate on Citizens Data Security and Privacy as none of the officials of the Ministry of Home Affairs the Ministry of Electronics and Information Technology and the Department of Telecom attended the meeting citing various reasons for their absence.

A discussion on data security and privacy would have entailed questions on the allege Pegasus cyber attack.

The BJP members, for the second consecutive day, staged a walkout refusing to sign the attendance register, forcing the meeting to be cancelled in the absence of quorum.

BJP 4 India members come to the IT Committee & refuse to sign the attendance register to deny a quorum. Further all the witnesses called from MEITY & MHA write in excuses & didn’t appear as called to testify. It’s very clear that Pegasus is a no go area for this government. Congress MP Karti Chidambaram who is a member tweeted. The BJP he

said wanted to expunge Pegasus from any debate, security or enquiry. What are they so afraid of.

Sources said that right at the very beginning the BJP members started protesting. They accused Mr.Tharoor of running the Congress agenda and not discussing the subject of meetings with the members before finalising it. This led to a sharp exchange of words between the Opposition and BJP members.

BJP's Nishikant Dubey complained that TMC's Mahua Moitra called him Bihari goonda or hoodlum. Addressing Lok Sabha Speaker Om Birla, Mr. Dubey in a tweet in Hindi, said that in his 13 years as a parliamentarian for the first time he was abused in a meeting of a standing committee. TMC MP Mahua Moitra thrice called me a Bihari goonda Mr.Tharoor of having taken a contract to end the parliamentary tradition of standing committees.

Courtesy: The Hindu, Dated: 29.07.2021

## 40. Tharoor says privilege motion has no validity

Lok Sabha member Shashi Tharoor, who heads the Parliamentary Standing Committee on Information Techonology (IT) claimed that the privilege motion moved against him by BJP MP Nishikant Dubey had no validity as it didn't follow constituted procedure. Without naming Mr. Dubey he said some elements in the panel had reduced it to a ping-pong match that went against the spirit of Parliament and its committees.

Extremely amicable Recalling his previous stint as the Chairman of the Parliamentary Committee on External Affairs for five years, Mr.Tharoor said members worked in an extremely amicable and co-operative spirit even though that committee too had a strong BJP majority.

Asked about Mr.Dubey's allegation that a Trinamool Congress MP had resorted to name-calling when the panel members assembled for the meeting Mr.Tharoor pleaded ignorance.

How can I tell you about a meeting that never happened. I am completely unaware if somebody allegedly said something at a meeting that never took place to somebody who was not there. How am I to be concerned about it, he asked.

Though BJP members were present at the meeting venue, they refused to sign the register and the meeting had to be cancelled due to a lack of quorum. Mr.Dubey moved the privilege motion against Mr.Tharoor, seeking his removal.

Senior Congress leader Abhisek Singhvit told press persons, I have had the privilege of being a former Chairman of a committee. I have never heard of 10 people of a ruling party saying that we are present, but not marking our attendance... It is collectively an insult to all parliamentarians.

Courtesy: The Hindu, Dated: 30.07.2021

## 41. ಸರ್ವರಿಗೂ ಕೃತಕ ಬುದ್ಧಿಮತ್ತೆ ಶಿಕ್ಷಣ

ದೇಶದ ಶಿಕ್ಷಣ ವ್ಯವಸ್ಥೆಯಲ್ಲಿ ಆಮೂಲಾಗ್ರ ಬದಲಾವಣೆ ತರುವ ದಿಸೆಯಲ್ಲಿ ಜಾರಿಗೆ ತಂದಿರುವ ರಾಷ್ಟ್ರೀಯ ಶಿಕ್ಷಣ ನೀತಿ(ಎನ್‌ಇಪಿ)ಗೆ ಒಂದು ವರ್ಷ ತುಂಬಿರುವ ಬೆನ್ನಲ್ಲೇ ಪ್ರಧಾನಿ ನರೇಂದ್ರ ಮೋದಿ ಅವರು ಯಾವ ವಯಸ್ಸಿನವರು ಕಲಿಯಬಹುದಾದ ಸರ್ವರಿಗೂ ಕೃತಕ ಬುದ್ಧಿಮತ್ತೆ ಸೇರಿದಂತೆ ಹಲವು ಹೊಸ ಯೋಜನೆಗಳನ್ನು ಘೋಷಿಸಿದ್ದಾರೆ.

ಸರ್ವರಿಗೂ ಕೃತಕ ಬುದ್ಧಿಮತ್ತೆ (ಆರ್ಟಿಫಿಷಿಯಲ್ ಇಂಟಲಿಜೆನ್ಸ್ ಫಾರ್ ಆಲ್) ಅನ್ವಯ ದೇಶದ ಪ್ರತಿಯೊಬ್ಬರೂ ಕೃತಕ ಬುದ್ದಿಮತ್ತೆ ತಂತ್ರಜ್ಞಾನದ ಕುರಿತು ತಿಳಿದುಕೊಳ್ಳಬಹುದಾಗಿದೆ. ಇದರಲ್ಲೇ ಕೃತಕ ಬುದ್ಧಿಮತ್ತೆ ಕುರಿತ ಜಾಗೃತಿ ಹಾಗೂ ಕೃತಕ ಬುದ್ದಿಮತ್ತೆ ಗ್ರಹಿಕೆ ಎಂಬ ಎರಡು ಹಂತಗಳಿದ್ದು, ಮೊದಲನೇ ಹಂತದಲ್ಲಿ ನಿತ್ಯ ಆನ್‌ಲೈನ್‌ನಲ್ಲಿ ಒಂದೂವರೆ ಗಂಟೆ ಪಾಠ ಮಾಡಲಾಗುತ್ತದೆ. ಇನ್ನು ಎರಡನೇ ಹಂತದಲ್ಲಿ ಕೃತಕ ಬುದ್ಧಿಮತ್ತೆಯ ಸಾಮಾನ್ಯ ಕ್ಷೇತ್ರಗಳು, ಇದನ್ನು ಬಳಸಿ ವೈಯಕ್ತಿಕ ಏಳಿಗೆ ಸೇರಿ ಹಲವು ವಿಷಯದ ಕುರಿತು ಪ್ರತಿದಿನ ಎರಡೂವರೆ ಗಂಟೆ ಮಾಹಿತಿ ನೀಡಲಾಗುತ್ತದೆ. ಇದರಿಂದ ಬಡವರು ಹಿಂದುಳಿದವರು ಸೇರಿ ಎಲ್ಲ ಸಮುದಾಯದವರು, ಎಲ್ಲ ವಯಸ್ಸಿನವರು ಹೊಸ ತಂತ್ರಜ್ಞಾನದ ಅರಿವು ಮೂಡಿಸಿಕೊಳ್ಳಬಹುದಾಗಿದೆ.

ಕೇಂದ್ರೀಯ ಪ್ರೌಢ ಶಿಕ್ಷಣ ಮಂಡಳಿ (ಸಿಬಿಎಸ್‌ಇ) ಯೋಜನೆ ಜಾರಿಗೊಳಿಸಲಿದ್ದು, ಇದಕ್ಕಾಗಿ ಅಭಿವೃದ್ದಿಪಡಿಸಿರುವ ai-for-all.in ವೆಬ್‌ಸೈಟ್‌ಗೆ ಭೇಟಿ ನೀಡಿ ನಿತ್ಯ ಪಾಠ ಆಲಿಸಬಹುದು. ಪ್ರಾದೇಶಿಕ ಭಾಷೆಯಲ್ಲಿಯೇ ತರಗತಿ ನಡೆಯಲಿದ್ದು, ಇದರ ಅನ್ವಯ ಕನಿಷ್ಠ 10 ಲಕ್ಷ ಜನರಿಗೆ ತರಬೇತಿ ನೀಡುವ ಗುರಿ ಹೊಂದಲಾಗಿದೆ.

**ಮೋದಿ ಘೋಷಿಸಿದ ಹೊಸ ಕಾರ್ಯಕ್ರಮಗಳು:–**

- ವಿದ್ಯಾರ್ಥಿಗಳಲ್ಲಿ ಪ್ರಾಯೋಗಿಕ ಜ್ಞಾನ ಹೆಚ್ಚಿಸಲು ಸಫಲ್ ಯೋಜನೆ.
- 1ನೇ ತರಗತಿ ವಿದ್ಯಾರ್ಥಿಗಳನ್ನು ಸಜ್ಜುಗೊಳಿಸಲು 3 ತಿಂಗಳು ಆಟ ಆಧಾರಿತ 'ವಿದ್ಯಾಪ್ರವೇಶ' ಕಾರ್ಯಕ್ರಮ
- ಎನ್‌ಸಿಇಆರ್‌ಟಿ ಅಡಿಯಲ್ಲಿ ಶಿಕ್ಷಕರಿಗೆ ತರಬೇತಿ ನೀಡಲು ನಿಷ್ಠ 2.0
- ನ್ಯಾಷನಲ್ ಡಿಜಿಟಲ್ ಎಜುಕೇಶನ್ ಆರ್ಕಿಟೆಕ್ಚರ್ (ಎನ್‌ಡಿಇಎಆರ್)
- ನ್ಯಾಷನಲ್ ಎಜುಕೇಶನ್ ಟೆಕ್ನಾಲಜಿ ಪೋರಂ (ಎನ್‌ಇಟಿಎಫ್)
- ಯಾವುದೇ ಸಮಯದಲ್ಲಿ ಕೋರ್ಸ್ ಬದಲಾಯಿಸಲು ಅವಕಾಶ ಕಲ್ಪಿಸುವ ಅಕಾಡೆಮಿಕ್ ಬ್ಯಾಂಕ್ ಆಫ್ ಕ್ರೆಡಿಟ್ (ಎಬಿಸಿ).

**11 ಭಾಷೆಗಳಲ್ಲಿ ಎಂಜಿನಿಯರಿಂಗ್ ಕೋರ್ಸ್:** ಬಡವರು, ದಲಿತರು, ಹಿಂದುಳಿದವರು ಸಹ ಎಂಜಿನಿಯರಿಂಗ್ ಶಿಕ್ಷಣ ಪಡೆಯುವ ದಿಸೆಯಲ್ಲಿ ಎನ್‌ಇಪಿ ಅನ್ವಯ ಇನ್ನು ಮುಂದೆ 11 ಪ್ರಾದೇಶಿಕ ಭಾಷೆಗಳಲ್ಲಿ ಎಂಜಿನಿಯರಿಂಗ್ ಕೋರ್ಸ್ ಕಲ್ಪಿಸಲಾಗುತ್ತದೆ. ಇಂತಹ ಸೌಲಭ್ಯ ಪಡೆಯುತ್ತಿರುವ ವಿದ್ಯಾರ್ಥಿಗಳಿಗೆ ಅಭಿನಂದನೆ ಎಂದು ಪ್ರಧಾನಿ ಹೇಳಿದ್ದಾರೆ. ಈ 11 ಭಾಷೆಗಳಲ್ಲೂ ಆನ್‌ಲೈನ್ ಹಾಗೂ ಆಫ್ ಲೈನ್‌ನಲ್ಲಿ ಎಂಜಿನಿಯರಿಂಗ್ ನೋಟ್ಸ್ ಸಹ ಲಭ್ಯವಾಗಲಿದೆ. ಪದವಿಯನ್ನು ಸಹ ಪ್ರಾದೇಶಿಕ ಭಾಷೆಯಲ್ಲಿಯೇ ಓದಲು ಅವಕಾಶ ಕಲ್ಪಿಸಲಾಗುತ್ತದೆ.

**ಸಂಕೇತ ಭಾಷೆಗೂ ವಿಷಯ ಮಾನ್ಯತೆ:** ಕಿವುಡರ ಜೊತೆ ಸಂವಹನಕ್ಕೆ ಬಳಸುವ ಭಾರತೀಯ ಸಂಕೇತ ಭಾಷೆಗೂ ದೇಶದಲ್ಲೇ ಮೊದಲ ಬಾರಿಗೆ ವಿಷಯದ ಮಾನ್ಯತೆ ನೀಡಲಾಗಿದೆ. ಶಾಲೆಗಳಲ್ಲಿ ಇಂಗ್ಲೀಷ್, ಹಿಂದಿ ಜೊತೆಗೆ ಯಾವುದೇ ಪ್ರಾದೇಶಿಕ ಭಾಷೆಯಲ್ಲಿ ಇದನ್ನು ಕಲಿಸಲು ತೀರ್ಮಾನಿಸಲಾಗಿದೆ. ವಿದ್ಯಾರ್ಥಿಗಳು ಇದನ್ನು ಭಾಷಾ ವಿಷಯವಾಗಿ ಅಧ್ಯಯನ ಮಾಡಬಹುದು. ದೇಶದ ಸುಮಾರು 3 ಲಕ್ಷ ವಿಕಲಚೇತನರಿಗೆ ಸಾಂಕೇತ ಭಾಷೆ ಕಲಿಕೆಯು ಅನುಕೂಲವಾಗಲಿದೆ ಎಂದು ಪ್ರಧಾನಿ ಮೋದಿ ಹೇಳಿದ್ದಾರೆ.

ಆಧಾರ:ವಿಜಯ ಕರ್ನಾಟಕ, ದಿನಾಂಕ:30.07.2021

## 42. ಗದ್ದಲದ ನಡುವೆಯೇ ವಿಧೇಯಕಕ್ಕೆ ಅಸ್ತು

ಪೆಗಾಸಸ್ ಪ್ರಕರಣಕ್ಕೆ ಸಂಬಂಧಿಸಿ ಪ್ರತಿಪಕ್ಷಗಳ ಪ್ರತಿಭಟನೆ, ಗದ್ದಲದ ನಡುವೆಯೇ ಲೋಕಸಭೆಯಲ್ಲಿ 2 ಮತ್ತು ರಾಜ್ಯಸಭೆಯಲ್ಲಿ 1 ವಿಧೇಯಕಗಳಿಗೆ ಅಂಗೀಕಾರ ಪಡೆಯಲಾಗಿದೆ.

ಸೂಕ್ಷ್ಮ ಸಣ್ಣ ಮತ್ತು ಮಧ್ಯಮ ಕೈಗಾರಿಕಾ ವಲಯಕ್ಕೆ ಅನುಕೂಲ ಕಲ್ಪಿಸುವ ಅಪವರ್ತನ ನಿಯಂತ್ರಣ (ತಿದ್ದುಪಡಿ) ವಿಧೇಯಕಕ್ಕೆ ರಾಜ್ಯಸಭೆಯಲ್ಲಿ ಒಪ್ಪಿಗೆ ಸಿಕ್ಕಿದೆ. ದೇಶದ ಎಂಎಸ್ಎಂಇ ವಲಯಕ್ಕೆ ನೆರವಾಗುವಂತಹ ವಿಧೇಯಕ ಇದಾಗಿದೆ. ಈ ವಲಯದಲ್ಲಿ ಸುಗಮ ಬಂಡವಾಳ, ಆರೋಗ್ಯಕರ ನಗದು ಹರಿವಿಗೂ ಇದು ಸಹಾಯಕವಾಗಲಿದೆ ಎಂದು ವಿತ್ತ ಸಚಿವೆ ನಿರ್ಮಲಾ ಸೀತಾರಾಮನ್ ಹೇಳಿದ್ದಾರೆ.

ಬಿಜೆಪಿ, ಎಐಎಡಿಎಂಕೆ ಮತ್ತು ಟಿಆರ್ಎಸ್ ಸಂಸದರು ಚರ್ಚೆಯಲ್ಲಿ ಪಾಲ್ಗೊಂಡು ವಿಧೇಯಕಕ್ಕೆ ಬೆಂಬಲ ಸೂಚಿಸಿದರು. ಪ್ರತಿ ಪಕ್ಷಗಳ ಸದಸ್ಯರು ಭಾಗಿಯಾಗಲಿಲ್ಲ. ಇದೇ ವೇಳೆ ಲೋಕಸಭೆಯಲ್ಲೂ ಗದ್ದಲದ ನಡುವೆಯೇ ಎರಡು ವಿಧೇಯಕಗಳನ್ನು ಅಂಗೀಕರಿಸಲಾಗಿದೆ. ಭಾರತೀಯ ವಿಮಾನ ನಿಲ್ದಾಣಗಳ ಆರ್ಥಿಕ ನಿಯಂತ್ರಣ ಪ್ರಾಧಿಕಾರ ತಿದ್ದುಪಡಿ ವಿಧೇಯಕ 2021 ಮತ್ತು ಇನ್‌ಲ್ಯಾಂಡ್ ವೆಸೆಲ್ಸ್ ವಿಧೇಯಕ ಯಾವುದೇ ಚರ್ಚೆಯಿಲ್ಲದೆ ಅಂಗೀಕಾರಗೊಂಡವು.

**ಕೊಚ್ಚಿಹೋದ ಕಲಾಪ:** ಪೆಗಾಸಸ್ ಬೇಹು ವಿವಾದ ಸಂಬಂಧ ಪ್ರತಿಪಕ್ಷಗಳ ಗದ್ದಲ ಮುಂದುವರಿದ ಕಾರಣ ಸಂಸತ್‌ನ ಎರಡು ಸದನಗಳಲ್ಲಿ ಕಲಾಪ ನಡೆಯಲಿಲ್ಲ. ಕೊನೆಗೆ ಲೋಕಸಭೆ ಹಾಗೂ ರಾಜ್ಯಸಭೆ ಕಲಾಪಗಳನ್ನು ದಿನದ ಮಟ್ಟಿಗೆ ಮುಂದೂಡಿಕೆ ಮಾಡಲಾಯಿತು. ಈ ನಡುವೆ ಜೂನ್ 12 ರಿಂದ ಜೂನ್ 22ರವರೆಗೆ ಭಾರತವು ವಿದೇಶಗಳಿಗೆ 6:4 ಕೋಟಿ ಡೋಸ್ ಲಸಿಕೆಗಳನ್ನು ವಿತರಿಸಿದೆ ಎಂದು ಕೇಂದ್ರ ಸರ್ಕಾರ ಲೋಕಸಭೆಗೆ ಮಾಹಿತಿ ನೀಡಿದೆ.

- ರಾಜ್ಯಸಭೆಯಲ್ಲಿ ಅಪವರ್ತನ ನಿಯಂತ್ರಣ ಮಸೂದೆ ಅಂಗೀಕಾರ.
- ಲೋಕಸಭೆಯಲ್ಲು 2 ವಿಧೇಯಕಗಳು ಪಾಸ್.

**ಏರ್ ಇಂಡಿಯಾ 115 ಆಸ್ತಿ ಮಾರಾಟ:** ತನ್ನ ಸಾಲವನ್ನು ತೀರಿಸಿಕೊಳ್ಳುವ ಸಲುವಾಗಿ ಏರ್ ಇಂಡಿಯಾವು 2015 ರಿಂದ ಈವರೆಗೆ ರೂ.738 ಕೋಟಿಗಳಿಗೆ ತನ್ನ 1115 ಆಸ್ತಿಗಳನ್ನು ಮಾರಾಟ ಮಾಡಿದೆ. ಕೇಂದ್ರ ನಾಗರಿಕ ವಿಮಾನಯಾನ ಖಾತೆ ಸಹಾಯಕ ಸಚಿವ ವಿ.ಕೆ.ಸಿಂಗ್ ತಿಳಿಸಿದ್ದಾರೆ. ಮಾರ್ಚ್–2019ಕ್ಕೆ ಏರ್ ಇಂಡಿಯಾದ ಒಟ್ಟು ಸಾಲದ ಮೊತ್ತ ರೂ.60 ಕೋಟಿ ಆಗಿತ್ತು ಎಂದು ಹೇಳಿದ್ದಾರೆ. ಇದೇ ವೇಳೆ ಖಾಸಗಿ–ಸರ್ಕಾರಿ ಪಾಲುದಾರಿಕೆ (ಪಿಪಿಪಿ) ಮೂಲಕ ಏರ್ ಪೋರ್ಟ್‌ಗಳ ನಿರ್ವಹಣೆಯಿಂದಾಗೀ ಭಾರತೀಯ ವಿಮಾನಗಳ ನಿಲ್ದಾಣಗಳ ಪ್ರಾಧಿಕಾರ ರೂ.30,069 ಕೋಟಿಗಳ ಆದಾಯಗಳಿಸಿದೆ ಎಂದು ಅವರು ಮಾಹಿತಿ ನೀಡಿದ್ದಾರೆ.

ಆಧಾರ:ಉದಯವಾಣಿ, ದಿನಾಂಕ:30.07.2021

## 43. ಮುಂಗಾರು ಅಧಿವೇಶನ : ಸದನದಲ್ಲಿ ಗದ್ದಲವೋ ಗದ್ದಲ

ಪೆಗಾಸಸ್ ಗೂಢಾಚರ್ಯೆ ವಿಷಯದ ಬಗ್ಗೆ ಸಂಸತ್ ಅಧಿವೇಶನದಲ್ಲಿ ಗದ್ದಲವು ಮುಂದುವರಿದಿದೆ. ರಾಜ್ಯ ಸಭೆ, ಲೋಕಸಭೆ ಕಲಾಪವು ಮೂರಕ್ಕೂ ಹೆಚ್ಚು ಬಾರಿ ಸ್ಥಗಿತಗೊಳಿಸಲಾಗಿತ್ತು. ಕೊನೆಗೂ ಸದನದಲ್ಲಿ ಗದ್ದಲ ಕಡಿಮೆ ಆಗದ ಕಾರಣ ಕಲಾಪ ಮುಂದೂಡಲಾಯಿತು. ಸುಪ್ರಿಂಕೋರ್ಟ್ ನಿಗಾದಲ್ಲಿ ಗೂಢಾಚಾರ್ಯ ಬಗ್ಗೆ ತನಿಖೆ ನಡೆಸಬೇಕು ಎಂದು ಪ್ರತಿಪಕ್ಷಗಳು ತಮ್ಮ ಆಗ್ರಹ ಮುಂದುವರಿಸಿವೆ.

**ಕೇಂದ್ರದ ಸಮಜಾಯಿಷಿ:** ವಿಷಯವಲ್ಲದ ವಿಚಾರವನ್ನು ಅನಗತ್ಯವಾಗಿ ಸಮಸ್ಯೆ ಆಗುವಂತೆ ಮಾಡಲಾಗುತ್ತಿದೆ. ವಿಶ್ವದ ಸಾವಿರಾರು ಜನರನ್ನು ಬೇಹುಗಾರಿಕೆ ಮಾಡಲು ಸಾಧ್ಯವೇ ಎಂಬುದನ್ನು ರಾಹುಲ್ ಗಾಂಧಿ ಅಪ್ರಬುದ್ಧರಂತೆ ಮಾತನಾಡುತ್ತಿದ್ದಾರೆ. ದೇಶದಲ್ಲಿ ಎದುರಾಗಿರುವ ಕೊರೋನಾ ಸಾಂಕ್ರಾಮಿಕ ರೋಗ ಕುರಿತು ರಾಜ್ಯ ಸಭೆಯಲ್ಲಿ ಚರ್ಚೆಗಳು ನಡೆದಿವೆ. ಲೋಕಸಭೆಯಲ್ಲಿ ಈ ಕುರಿತು ಚರ್ಚೆಗೆ ಅವಕಾಶ ನೀಡಲಾಗುತ್ತಿಲ್ಲ, ಇದು ನಿಜಕ್ಕೂ ದುರಾದೃಷ್ಟಕರ ಸಂಗತಿ.

**ಗದ್ದಲದಲ್ಲೇ ಬಿಲ್ ಪಾಸ್:** ಪ್ರತಿಪಕ್ಷಗಳ ಭಾರಿ ಗದ್ದಲದ ನಡುವೆಯೇ ಎರಡು ಬಿಲ್‌ಗಳಿಗೆ ಅನುಮೋದನೆ ದೊರೆತಿದೆ. ಏರ್ ಪೋರ್ಟ್ ಎಕನಾಮಿಕ್ ರೆಗ್ಯುಲೇಟರಿ ಅಥಾರಿಟಿ ಬಿಲ್, ಇನ್‌ಲ್ಯಾಂಡ್ ವೆಸಲ್ ಬಿಲ್‌ಗಳಿಗೆ ಲೋಕಸಭೆ ಪಾಸ್ ಮಾಡಿದೆ. ಇನ್ನು ರಾಜ್ಯಸಭೆಯಲ್ಲಿ ಫ್ಯಾಕ್ಟರಿಂಗ್ ರೆಗ್ಯುಲೇಷನ್ ಬಿಲ್‌ಗೆ ಅನುಮೋದನೆ ದೊರೆತಿದೆ.

ಆಧಾರ:ವಿಶ್ವವಾಣಿ, ದಿನಾಂಕ:30.07.2021

## 44. LS passes 2 Bills without debate

Amid continuous Opposition protests, the Lok Sabha passed two Bills before it was adjourned for the day.

The Airports Economic Regulatory Authority of India (AERA) Amendment Bill, 2021 and the Inland Vessels Bill 2021 were passed in the day without debate.

Opposition members kept protesting over the three farm laws despite Lok Speaker Om Birla cautioning them, that he would be forced to take strict action against those who repeatedly disrupt the proceedings.

When the House began at 11.am Mr.Birla said he was deeply hurt by the Wednesday incident, when some members tore papers and threw at the Chair and Treasury benches, If you don't take care of the parliamentary process strengthen? My endeavour is that all members get adequate time to raise their issues and given them their due respect he said.

**Minister seeks apology**: When Parliamentary Affairs Minister Prahalad Joshi demanded an apology. Congress leader Adhir Ranjan Chowdhury said Opposition members were not able to put forth their views because of the stubborn attitude of the government.

Amid continuous sloganeering Mr.Birla adjourned the House until 11.30 am.

The BJP's Rajendra Agrawal ran the Question Hour proceedings for some time but had to adjourn twice in an hour. In between the interruptions, Business Advisory Committee

members met to discuss the agenda. When the House reconvened at 2.00.m. Kirit Premjibhai Solanki, who was in Chair, took up the two Bills.

Civil Aviation Minister Jyotiraditya Scindia moved the AERA Amendment Bill for passage after some scathing remarks on the Opposition benches. During the pandemic instead of discussion, the House is witnessing sloganeering. We will convert this crisis into an opportunity and provide all possible facilities to farmers and people. Let the people of the country know what great work the Prime Minister is doing and what they (Opposition) are doing he said.

The amendment will allow the Airports Economic Regularity Authority (AERA) to regular tariff and other charges for aeronautical services for not just airports with annual passenger traffic of more than 35 lakh but also a group of airports. Once the Bill becomes a law the government will be able to club profitable and non-profitable airports as a package in this year's Budget speech.

Soon after, Ports and Shipping Minister Sarbananda Sonowal moved the Inland Vessels Bill that seeks to introduce a uniform regulatory framework for navigation across the country. To prevent pollution the Bill also specifies safety standards.

Courtesy: The Hindu, Dated: 30.07.2021

## 45. List issues that couldn't taken up: Venkaiah

With the functioning of the Upper House curtailed for eight consecutive days due to protests by Opposition parties seeking clarification from the government on the Pegasus snooping issue, the Rajya Sabha Secretariat will now list all the issue that could not be taken up due to the disruptions.

Rajya Sabha Chairman M.Venkaiah Naidu directed the Secretariat to list our all Zero Hour submissions and special mentions permitted by him, which members could not raise because of adjournment force by the protests in the House bulletin that records the business transacted in a day.

Members can raise issues of public importance during the Zero Hour and via the special mention submissions. Rajya Sabha bulletin is to give a brief account of what has been transacted during the day, but in the prevailing situation, it has been decided to give an account of what couldn't be transacted due to disruptions a senior Rajya Sabha official said.

Wednesday's Bulletin was the first one to make this change. Due to continuous disruptions in the House, 14 matters to be raised with permission (Zero Hour submission) and 15 special mention notices permitted by the Chairman on matters of public importance could not be taken up it read.

So far, three Bills have been passed in the Rajya Sabha without discussions. Mr. Naidu said 90 members had been denied opportunity to raise issues of public importance.

Courtesy: The Hindu, Dated: 30.07.2021

## 46. ಸತತ 2ನೇ ವಾರವು ಸಂಸತ್ ಕಲಾಪ ಬಲಿ

ಪೆಗಾಸಸ್ ಬೇಹುಗಾರಿಕೆ ಹಗರಣ, ಕೃಷಿ ಕಾಯ್ದೆಗಳು ಮತ್ತು ಇನ್ನಿತರ ವಿಚಾರಗಳ ಬಗ್ಗೆ ಚರ್ಚೆಗೆ ಒತ್ತಾಯಿಸಿ ವಿರೋಧ ಪಕ್ಷಗಳ ನಾಯಕರು ಗದ್ದಲ ಮತ್ತು ಪ್ರತಿಭಟನೆ ನಡೆಸಿದ ಪರಿಣಾಮ ಸಂಸತ್ತಿನ ಉಭಯ ಕಲಾಪಗಳು ಸಹ ಬಲಿಯಾಗಿವೆ. ಇದರೊಂದಿಗೆ ಪೆಗಾಸಸ್ ಬೇಹುಗಾರಿಕೆ, ಕೃಷಿ ಕಾಯ್ದೆಗಳು ಮತ್ತು  ಬೆಲೆ ಏರಿಕೆ ವಿಚಾರಗಳು ಸತತ 2ನೇ ವಾರದ ಸಂಸತ್ತಿನ ಕಲಾಪಗಳಿಗೆ ಅಡ್ಡಿಪಡಿಸಿದಂತಾಗಿದೆ.

ಲೋಕಸಭೆ ಕಲಾಪದ ವೇಳೆ ಪೀಠದಲ್ಲಿದ್ದ ಸಂಸದ ರಾಜೇಂದ್ರ ಅಗರ್‌ವಾಲ್ ಅವರು ಕೋವಿಡ್ ಪರಿಸ್ಥಿತಿ ಬಗ್ಗೆ ಚರ್ಚೆ ನಿಗದಿಯಾದ ಹಿನ್ನೆಲೆಯಲ್ಲಿ ಪ್ರತಿಭಟನಾ ನಿರತ ಸದಸ್ಯರು ತಮ್ಮ ಆಸನಗಳಿಗೆ ಮರಳಬೇಕು ಎಂದು ಮನವಿ ಮಾಡಿದರು. ಇದಕ್ಕೆ ಕಿವಿಗೊಡದೆ ವಿರೋಧಪಕ್ಷಗಳ ನಾಯಕರು ಸದನದ ಬಾವಿಗಿಳಿದು ಸರ್ಕಾರದ ವಿರುದ್ಧ ಘೋಷಣೆಗಳನ್ನು ಕೂಗುತ್ತಾ ಪ್ರತಿಭಟನೆ ನಡೆಸಿ, ಕಲಾಪವನ್ನು ಮುಂದೂಡಿದರು.

ರಾಜ್ಯಸಭೆಯಲ್ಲೂ ವಿರೋಧಪಕ್ಷಗಳ ನಾಯಕರು ಪ್ರತಿಭಟನೆ ಮುಂದುವರಿಸಿದ ಕಾರಣ ಕಲಾಪವನ್ನು ಮೊದಲಿಗೆ 2 ಬಾರಿ ಮುಂದೂಡಲ್ಪಟ್ಟಿತ್ತು. ಆ ಬಳಿಕವು ಆರಂಭವಾದ ಕಲಾಪಕ್ಕೆ ವಿರೋಧಪಕ್ಷಗಳ ನಾಯಕರು ಸಹಕಾರ ನೀಡಿದ ಪರಿಣಾಮ ಕಲಾಪವನ್ನು ವಿಸ್ತರಿಸಲಾಗಿದೆ. ಕಳೆದ ವಾರ ಕೂಡಾ ಇದೇ ರೀತಿಯ ಯಾವುದೇ ಹೆಚ್ಚಿನ ಕಲಾಪ ನಡೆಯದೇ ಕಲಾಪಗಳನ್ನು ಮುಂದೂಡಲಾಗಿತ್ತು.

ಆಧಾರ: ಕನ್ನಡಪ್ರಭ, ದಿನಾಂಕ:31.07.2021

## 47. ಕಲಾಪ ಬಲಿ: ರೂ.133 ಕೋಟಿ ನಷ್ಟ

ಪೆಗಾಸಸ್ ಬೇಹುಗಾರಿಕೆ ಹಗರಣ ಕೃಷಿ ಕಾಯ್ದೆಗಳ ರದ್ದತಿ ಮತ್ತು ಬೆಲೆ ಏರಿಕೆ ವಿಚಾರವಾಗಿ ಚರ್ಚೆಗೆ ಆಗ್ರಹಿಸಿ ವಿಪಕ್ಷಗಳ ನಡೆಸಿದ ನಿರಂತರ ಪ್ರತಿಭಟನೆ ಮತ್ತು ಕೋಲಾಹಲಕ್ಕೆ ಸತತ 2ನೇ ವಾರದ ಸಂಸತ್ತಿನ ಉಭಯ ಕಲಾಪಗಳು ಬಲಿಯಾಗಿವೆ.  ಇದರಿಂದ ದೇಶದ ಸಾರ್ವಜನಿಕರ ರೂ. 133 ಕೋಟಿ ನೀರಲ್ಲಿ ಹುಣಸೆ ಹಣ್ಣು ತೊಳೆದಂತೆ ವ್ಯರ್ಥವಾಗಿದೆ

ಜುಲೈ 19 ರಿಂದ ಕಲಾಪ ಆರಂಭವಾದಾಗಿನಿಂದ ಪೆಗಾಸಸ್ ಹಗರಣ, ಕೃಷಿ ಕಾಯ್ದೆಗಳು ಸೇರಿ ಇನ್ನಿತರ ವಿಚಾರಗಳನ್ನು ಮುಂದಿಟ್ಟುಕೊಂಡು ನಿರಂತರ ಪ್ರತಿಭಟನೆ ನಡೆಸುತ್ತಿವೆ. ಇದರ ಪರಿಣಾಮದಿಂದ 54 ಗಂಟೆ ನಡೆಯಬೇಕಿದ್ದ ಲೋಕಸಭೆ ಕಲಾಪ ಕೇವಲ 7 ಗಂಟೆ ಮಾತ್ರವೇ ನಡೆದಿದ್ದು 53 ಗಂಟೆ ನಡೆಯಬೇಕಿದ್ದ ರಾಜ್ಯ ಸಭೆ ಕಲಾಪ ಕೇವಲ 11 ಗಂಟೆ ಸೀಮಿತವಾಗಿದೆ. ತನ್ಮೂಲಕ ಒಟ್ಟಾರೆ 107 ಗಂಟೆಗಳ ಪೈಕಿ ಸಂಸತ್ತಿನ ಉಭಯ ಕಲಾಪಗಳು 18 ಗಂಟೆ ಮಾತ್ರವೇ ನಡೆದಿವೆ.  ಉಳಿದ 89 ಗಂಟೆಗಳು ವ್ಯರ್ಥವಾಗಿದ್ದು ತೆರಿಗೆದಾರರ ರೂ. 133 ಕೋಟಿ ನಷ್ಟವಾಗಿದೆ ಎಂದು ಕೇಂದ್ರ ಸರ್ಕಾರ ಹೇಳಿದೆ.

ಆಧಾರ:ಕನ್ನಡ ಪ್ರಭ, ದಿನಾಂಕ:01.08.2021

## 48. Parl worked for 18 hours out of 107 in 2 weeks

As the dead lock over the Pegasus controversy continues in Parliament the two Houses are heading towards a less productive zone in terms of business with more than 85% of working hours being wasted in the first two weeks of the session.

Of the possible 107 hours in the past two weeks Parliament has functioned merely for 18 hours, wasting 89 hours because of ongoing disruptions due to the deadlock over the Opposition demand for a discussion and inquiry into the Pegasus affair.

According to government sources, more than Rs.133 crore have been wasted so far in the process with not much signs of a break it through as the Opposition remains firm on a debate on a subject which the government considers a non-issue.

Since the Monsoon session commenced on July 19 Lok Sabha has functioned for about seven hours of possible 54. Rajya Sabha has functioned for 11 hours out of a possible 53.

The opposition parties have made it clear that they will allow uninterrupted proceedings only if the government proceedings only if the government concedes to its demand of holding debate on the Pegasus controversy. However, the government has maintained that debate on issues like the Corona crisis are more important and that Pegasus controversy is hypothetical and a non-issue.

Parliamentary Affairs Minister Prahalad Joshi has also said that opposition parties could seek more details on the Pegasus controversy from IT Minister Ashwini Vaishnaw who has already spoken about on the subject.

Lok Sabha has passed five bills so far and the total times spend on discussing this bill was only 44 minutes. Rajya Sabha has so far passed three bills in this session and the total time spend was little over an hour (72 minutes).

Unlike the ongoing impasse, the Budget session this year had witnessed record productivity even as initial few days were affected by disruptions. During the Budget session Lok Sabha's productivity was 110% while it was 90% for Rajya Sabha.

Courtesy: Times of India, Dated: 01.08.2021

## 49. ಸಂಸದ ಸ್ಥಾನಕ್ಕೂ ರಾಜೀನಾಮೆ: ಬಾಬುಲ್: ಸುಪ್ರಿಯೊ

ಕೇಂದ್ರದ ಮಾಜಿ ಸಚಿವ, ಬಿಜೆಪಿ ನಾಯಕ ಬಾಬುಲ್ ಸುಪ್ರಿಯೊ ಅವರು ಸಕ್ರಿಯ ರಾಜಕೀಯದಿಂದ ದೂರ ಉಳಿಯಲು ನಿರ್ಧರಿಸಿದ್ದಾರೆ. ಸಂಸದ ಸ್ಥಾನಕ್ಕೂ ರಾಜೀನಾಮೆ ನೀಡುತ್ತೇನೆ ಎಂದೂ ಅವರು ಪ್ರಕಟಿಸಿದರು.

ಕೇಂದ್ರ ಸಂಪುಟದಿಂದ ತಮ್ಮನ್ನು ಕೈಬಿಟ್ಟಿದ್ದು ಹಾಗೂ ಪಕ್ಷದ ರಾಜ್ಯ ಘಟಕದ ನಾಯಕರ ಜೊತೆಗಿನ ಭಿನ್ನಮತ ಈ ನಿರ್ಧಾರಕ್ಕೆ ಕಾರಣ ಎಂಬ ಸುಳಿವು ನೀಡಿದ್ದಾರೆ. ಮೋದಿ ನೇತೃತ್ವದ ಕೇಂದ್ರ ಸಂಪುಟದಲ್ಲಿ 2014 ರಿಂದ ರಾಜ್ಯ ಸಚಿವರಾಗಿ ವಿವಿಧ ಖಾತೆಯನ್ನು ಅವರು ನಿಭಾಯಿಸಿದ್ದರು.

ಆಧಾರ:ಪ್ರಜಾವಾಣಿ, ದಿನಾಂಕ:01.08.2021

## 50. Naidu breaks down over opposition conduct in House

Rajya Sabha Chairman broke down while expressing deep anguish at the unruly conduct of Opposition MPs in the House. When some members had climbed at top of the

table where officers and reporters of House are seated and one MP even hurled an official file in the Chair's direction.

Making observations soon after the House reassembled he equated the disorderly events to sacrilege reminding the MPs that the reporters table is considered the sanctum of the temple of Parliament. As the Chairman of the House, I am scared to visualise the implications and consequences of such competitive acts of sacrilege on out temple of democracy he said.

Opposition MPs had created a ruckus in protest against the decision to allow a short duration discussion on agricultural problems and solution instead of taking up the discussion on three farm bills that they have been demanding since the start of the session.

Naidu, in his observations, said he had spent a sleepless night as the struggled to find the provocation or reason for forcing this August House to hit such a low. At this point he choked and had to take a brief moment to compose himself. Naidu said the discussion allowed was listed as agricultural problems and solutions in line with the tradition of notices of motion admitted by the Chair being listed in a manner that is acceptable to all sections of the House. The RS Chairman wondered how it could have prevented any member from raising any issue concerning the farm sector including the three farm bills that some members were keen to raise in the House including demanding their withdrawal.

Chiding the unruly members inflicting incalculable damage to the dignity and structure of the House, Naidu said he was deeply distressed over it and so is the nation. The Chairman also took exception to some MPs having filmed the moments of sacrilege in violation of rules and posting them on social media. While doing so they only ended up showing to the people the extent to which this August House can degenerate due to the new found competitive and aggressive disruptions by some sections he noted.

Courtesy:Times of India, Dated: 12.08.2021

## 51. ಮಸೂದೆ ಮೇಲಿನ ಚರ್ಚೆ ಮಧ್ಯೆ ಪೆಗಾಸಸ್, ರೈತರ ವಿಷಯ ಪ್ರಸ್ತಾಪ, ವಿಪಕ್ಷಗಳ ಹೊಸತಂತ್ರ

ಪೆಗಾಸಸ್ ಗೂಢಚರ್ಯೆ ಮತ್ತು ರೈತರ ಪ್ರತಭಟನೆ ಬಗ್ಗೆ ಸಂಸತ್ತಿನ ಸದನಗಳಲ್ಲಿ ಚರ್ಚಿಸಲು ಸರ್ಕಾರವು ಅವಕಾಶ ನೀಡುತ್ತಿಲ್ಲ. ಈ ಎರಡು ವಿಷಯಗಳ ಬಗ್ಗೆ ಸರ್ಕಾರದ ಗಮನ ಸೆಳೆಯಲು ವಿರೋಧ ಪಕ್ಷಗಳು ಹೊಸತಂತ್ರವನ್ನು ಅನುಸರಿಸುತ್ತಿವೆ. ಬೇರೆ ಮಸೂದೆಗಳ ಚರ್ಚೆಯ ಮಧ್ಯೆ ವಿರೋಧ ಪಕ್ಷಗಳ ನಾಯಕರು ಪೆಗಾಸಸ್ ಗೂಢಚರ್ಯೆ ಮತ್ತು ರೈತರ ಪ್ರತಿಭಟನೆ ಬಗ್ಗೆ ಪ್ರಸ್ತಾಪಿಸಿದ್ದಾರೆ.

ರಾಜ್ಯಸಭೆಯಲ್ಲಿ ವಿರೋಧ ಪಕ್ಷಗಳ ನಾಯಕರು ಅನುಸರಿಸುತ್ತಿರುವ ಈ ಭಿನ್ನ ತಂತ್ರದ ವಿಡಿಯೋವನ್ನು ಟಿಎಂಸಿ ಸಂಸದ ಡೆರೆಕ್ ಇಬ್ರಿಯಾನ್ ಟ್ವೀಟ್ ಮಾಡಿದ್ದಾರೆ. ವಿರೋಧ ಪಕ್ಷಗಳ ಹಲವು ನಾಯಕರು ಈ ವಿಡಿಯೋವನ್ನು ರಿಟ್ವೀಟ್ ಮಾಡಿದ್ದಾರೆ, ವಿಡಿಯೋವನ್ನು ಹಂಚಿಕೊಂಡಿದ್ದಾರೆ. "ಮಿಸ್ಟರ್ ಮೋದಿ, ನಮ್ಮ ಮಾತನ್ನು ಕೇಳಿಸಿಕೊಳ್ಳಿ' ಎಂಬ ಧ್ವನಿಯೊಂದಿಗೆ ವಿಡಿಯೋ

ಆರಂಭವಾಗುತ್ತದೆ, ಅನಂತರ ಯಾವ ಪಕ್ಷದ ನಾಯಕರು ಮಾತನಾಡಿದ್ದರೆ ಎಂಬುದರ ವಿವರ ಮತ್ತು ದೃಶ್ಯದ ತುಣಕನ್ನು ಈ ವಿಡಿಯೋ ಒಳಗೊಂಡಿದೆ.

ರಾಜ್ಯಸಭೆಯಲ್ಲಿ ವಿರೋಧ ಪಕ್ಷದ ನಾಯಕ, ಕಾಂಗ್ರೆಸ್‌ನ ಮಲ್ಲಿಕಾರ್ಜುನ್ ಖರ್ಗೆ, ಟಿಎಂಸಿಯ ಸುಖೇಂದು ಶೇಖರ್ ರಾಯ್, ಶಿವಸೇನಾದ ಪ್ರಿಯಾಂಕಾ ಚತುರ್ವೇದಿ, ಸಮಾಜವಾದಿ ಪಕ್ಷ, ಡಿಎಂಕೆ, ಟಿಆರ್‌ಎಸ್ ಮತ್ತು ಎಎಪಿಯ ಸಂಸದರು ರಾಜ್ಯಸಭೆಯಲ್ಲಿ ಮಾತನಾಡಿರುವ ದೃಶ್ಯಗಳ ತುಣುಕನ್ನು ಈ ವಿಡಿಯೋ ಒಳಗೊಂಡಿದೆ.

3 ನಿಮಿಷಕ್ಕೆ 44 ಸೆಕೆಂಡುಗಳ ಒಂದು ವಿಡಿಯೋ ಮತ್ತು 2 ನಿಮಿಷ 20 ಸೆಕೆಂಡುಗಳ ಎರಡು ವಿಡಿಯೋವನ್ನು ಒಬ್ರಿಯಾನ್ ಟ್ವೀಟ್ ಮಾಡಿದ್ದಾರೆ. ಖರ್ಗೆ ಸಹ ಒಂದು ವಿಡಿಯೋವನ್ನು ಟ್ವೀಟ್ ಮಾಡಿದ್ದಾರೆ.

'14 ದಿನಗಳಿಂದ ಕೇಳಿಸಿಕೊಳ್ಳುತ್ತಿದ್ದೇವೆ. ಆದರೆ ಚರ್ಚೆ ನಡೆಸಲು ನೀವು ಅವಕಾಶ ನೀಡುತ್ತಿಲ್ಲ. ಆದರೆ ಸುಮ್ಮನೆ ಮಸೂದೆಗಳನ್ನು ಅಂಗೀಕರಿಸುತ್ತಿದ್ದೀರಿ. ನಿಮಗೆ ಧೈರ್ಯ ಇದ್ದದ್ದೇ ಆದರೆ, ಪೆಗಾಸಸ್ ಚರ್ಚೆಯನ್ನು ಆರಂಭಿಸಿ' ಎಂದು ಖರ್ಗೆ ಅವರು ರಾಜ್ಯಸಭೆಯಲ್ಲಿ ಆಗ್ರಹಿಸುತ್ತಿರುವ ದೃಶ್ಯ ವಿಡಿಯೋದಲ್ಲಿ ಇದೆ. ಪೆಗಾಸಸ್ ಈಗ ಎಲ್ಲರ ಮನೆಯನ್ನು ಹೊಕ್ಕಿದೆ. ಅದರ ಬಗ್ಗೆ ನಾನು ಚರ್ಚೆ ನಡೆಸಲೇಬೇಕು' ಎಂದು ಆರ್‌ಜೆಡಿಯ ಮನೋಜ್ ಝಾ ಪ್ರತಿಪಾದಿಸಿದ್ದಾರೆ.

'ನಾನು ರೈತರ ಬಗ್ಗೆ ಮಾತನಾಡಬೇಕಿದೆ, ನೀವು ನನ್ನ ಮೈಕ್ ಆಫ್ ಮಾಡದೇ ಇದ್ದರೆ ಮಾತ್ರ ನಾನು ಮಾತನಾಡಲು ಸಾಧ್ಯವಾಗುತ್ತದೆ' ಎಂದು ಕಾಂಗ್ರೆಸ್‌ನ ದೀಪೆಂದರ್ ಹೂಡಾ ಹೇಳಿದ್ದಾರೆ. 'ಸಂಸತ್ತಿನಲ್ಲಿ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಸರ್ಕಾರ ಕೊಲ್ಲುತ್ತಿದೆ' ಎಂದು ಟಿಎಂಸಿಯ ಸುಖೇಂದು ಶೇಖರ್ ರಾಯ್ ಆರೋಪಿಸಿದ್ದಾರೆ.

'ಅದು ರೈತರ ವಿಚಾರವೇ ಆಗಿರಲಿ, ಆರ್ಥಿಕತೆಯೇ ಆಗಿರಲಿ, ಭದ್ರತೆ ಮತ್ತು ಪೆಗಾಸಸ್ ವಿಚಾರವಾಗಿರಲಿ. ವಿರೋಧ ಪಕ್ಷಗಳ ನಾಯಕರು ಈ ಬಗ್ಗೆ ಒಂದು ಪದ ಹೇಳಿದರೂ ಅವರ ದನಿಯನ್ನು ಅಡಗಿಸಲಾಗುತ್ತಿದೆ. ಕಲಾಪವನ್ನು ಸುಮ್ಮನೆ ಮುಂದೂಡಲಾಗುತ್ತದೆ, ನಮ್ಮ ಮೈಕ್‌ಗಳನ್ನು ಆಫ್ ಮಾಡಲಾಗುತ್ತದೆ' ಎಂದು ಶಿವಸೇನಾದ ಪ್ರಿಯಾಂಕಾ ಚತುರ್ವೆದಿ ಆರೋಪಿಸಿದ್ದಾರೆ.

ಆಧಾರ: ಪ್ರಜಾವಾಣಿ, ದಿನಾಂಕ:09.08.2021.

## 52. ಮುಚ್ಚಿದ ಶಾಲೆ ಪರಿಣಾಮ ತೀವ್ರ

ಕೋವಿಡ್–19 ಸಾಂಕ್ರಾಮಿಕದಿಂದಾಗಿ ದೀರ್ಘಕಾಲ ಶಾಲೆಗಳನ್ನು ಮುಚ್ಚಿದ್ದರಿಂದ ಆಗಿರುವ ಪ್ರತಿಕೂಲ ಪರಿಣಾಮಗಳು ನಿರ್ಲಕ್ಷಿಸಲು ಸಾಧ್ಯವಿಲ್ಲದಷ್ಟು ಗಂಭೀರವಾಗಿವೆ ಎಂದು ಶಿಕ್ಷಣ, ಮಹಿಳೆ, ಮಕ್ಕಳು, ಯುವಜನರು ಮತ್ತು ಕ್ರೀಡೆಯ ಕುರಿತ ಸಂಸತ್ ಸ್ಥಾಯಿ ಸಮಿತಿಯ ವರದಿಯು ಹೇಳಿದೆ.

ಶಾಲೆಗಳು ಮುಚ್ಚಿರುವುದು ಕುಟುಂಬಗಳ ಸಾಮಾಜಿಕ ಸಂಬಂಧದ ಮೇಲೆ ಪ್ರತಿಕೂಲ ಪರಿಣಾಮ ಬೀರಿದ್ದೇ ಅಲ್ಲದೆ, ಮಕ್ಕಳನ್ನು ಮನೆ ಕೆಲಸದಲ್ಲಿ ತೊಡಗಿಸಿಕೊಳ್ಳುವುದನ್ನು ಹೆಚ್ಚಿಸಿದೆ ಎಂದು ವರದಿಯಲ್ಲಿ ಹೇಳಲಾಗಿದೆ.

ವರ್ಷಕ್ಕೂ ಹೆಚ್ಚಿನ ಅವಧಿಯಿಂದ ಶಾಲೆಗಳನ್ನು ಮುಚ್ಚಿರುವುದು ವಿದ್ಯಾರ್ಥಿಗಳ ಮಾನಸಿಕ ಆರೋಗ್ಯದ ಮೇಲೆ ಪ್ರಭಾವ ಬೀರಿದೆ. ಮಕ್ಕಳು ನಾಲ್ಕು ಗೋಡೆಯ ಒಳಗೆ ಬಂಧಿಗಳಾಗಿರುವ ಸ್ಥಿತಿಯು ಹೆತ್ತವರು ಮತ್ತು ಮಕ್ಕಳ ನಡುವಣ ಸಂಬಂಧವನ್ನು ಬಾಧಿಸಿದೆ. ಬಾಲ್ಯ ವಿವಾಹ ಮತ್ತು ಅತ್ಯಂತ ಚಿಕ್ಕ ವಯಸ್ಸಿಗೆ ಮದುವೆ ಮಾಡಿಕೊಡುವುದಕ್ಕೂ ಶಾಲೆ ಮುಚ್ಚಿರುವುದು ಕಾರಣವಾಗಿದೆ. ಕಲಿಕಾ ಗುಣಮಟ್ಟ

ಕಡಿಮೆ ಎಂಬ ಸಮಸ್ಯೆಯು ಸಾಂಕ್ರಾಮಿಕವು ಕಲಿಕಾ ಬಿಕ್ಕಟ್ಟನ್ನು ತೀವ್ರವಾಗಿಸಿದೆ. ದುರ್ಬಲ ಮತ್ತು ಹಿಂದುಳಿದ ಮಕ್ಕಳ ಮೇಲೆ ಪರಿಣಾಮ ಇನ್ನು ಹೆಚ್ಚು ಎಂದು ವರದಿಯಲ್ಲಿ ವಿವರಿಸಲಾಗಿದೆ.

ಶಾಲೆ ಮುಚ್ಚಿದ್ದರಿಂದಾಗಿ ಉಂಟಾದ ಕಲಿಕಾ ಅಂತರ ತುಂಬುವ ಯೋಜನೆಗಳು, ಆನ್‌ಲೈನ್ ಮತ್ತು ಆಫ್‌ಲೈನ್ ಶಿಕ್ಷಣ ಹಾಗೂ ಪರೀಕ್ಷೆಯ ಪರಾಮರ್ಶೆ, ಶಾಲೆ ತೆರೆಯಲು ಯೋಜನೆ' ಎಂಬ ಹೆಸರಿನ ವರದಿಯನ್ನು ವಿನಯ ಪಿ.ಸಹಸ್ರಬುದ್ಧೆ ನೇತೃತ್ವದ ಸಮಿತಿಯು ಸಿದ್ಧಪಡಿಸಿದೆ. ವರದಿಯನ್ನು ಸಂಸತ್ತಿನಲ್ಲಿ ಮಂಡಿಸಲಾಗಿದೆ.

ಶಾಲಾ ಮಟ್ಟದ ವಿದ್ಯಾರ್ಥಿಗಳ ಗಣಿತ, ವಿಜ್ಞಾನ ವಿಷಯಗಳು ಮತ್ತು ಭಾಷಾ ಕಲಿಕೆಗೆ ದೊಡ್ಡ ರೀತಿಯಲ್ಲಿ ಹಿನ್ನಡೆ ಆಗಿದೆ. ಕಲಿಕಾ ನಷ್ಟವು ವಿದ್ಯಾರ್ಥಿಗಳ ಗ್ರಹಿಕೆಯ ಸಾಮರ್ಥ್ಯವನ್ನೇ ಕುಗ್ಗಿಸುವ ಅಪಾಯ ಇದೆ. ಬಡವರು, ಗ್ರಾಮೀಣ ಪ್ರದೇಶದ ವಿದ್ಯಾರ್ಥಿಗಳ ಮೇಲೆ ಇದರಿಂದ ಹೆಚ್ಚು ಪರಿಣಾಮ ಆಗಿದೆ. ಈ ಸಮಸ್ಯೆ ಪರಿಹಾರಕ್ಕೆ ಕ್ರಮಗಳನ್ನು ಕೈಗೊಳ್ಳಬೇಕು ಎಂದು ವರದಿಯು ಶಿಫಾರಸ್ಸು ಮಾಡಿದೆ.

ದೇಶದಾದ್ಯಂತ ಲಾಕ್ಡೌನ್ ಹೇರಿದ್ದರಿಂದಾಗಿ ಕಳೆದ ವರ್ಷದ ಮಾರ್ಚ್‌ನಲ್ಲಿ ಶಾಲೆಗಳನ್ನು ಮುಚ್ಚಲಾಗಿತ್ತು. ಕೆಲವು ರಾಜ್ಯಗಳಲ್ಲಿ ಕಳೆದ ಅಕ್ಟೋಬರ್‌ನಲ್ಲಿ ಶಾಲೆ ತೆರೆಯುವ ಯತ್ನ ಮಾಡಲಾಯಿತು. ಕೋವಿಡ್–19 ಎರಡನೇ ಅಲೆಯು ಹೆಚ್ಚು ತೀವ್ರಗೊಂಡ ಕಾರಣ ಶಾಲೆಗಳನ್ನು ಮತ್ತೆ ಮುಚ್ಚಲಾಯಿತು.

ಆಧಾರ: ಪ್ರಜಾವಾಣಿ, ದಿನಾಂಕ:09.08.2021.

## 53. ಸಂಸದೆಯರ ಮೇಲೆ ಹಲ್ಲೆ

ಸಂಸತ್ತಿನಲ್ಲಿ ಸಂಸದೆಯರ ಮೇಲೆ ಮಾರ್ಷಲ್‌ಗಳು ಹಲ್ಲೆ ಮಾಡಿದ್ದಾರೆ. ಮೇಲ್ಮನೆಯಾದ ರಾಜ್ಯ ಸಭೆ ಯಲ್ಲಂತೂ ಯುದ್ಧಕ್ಕಿಳಿದ ವಾತಾವರಣ ಇತ್ತು ಎಂದು ವಿಪಕ್ಷ ನಾಯಕ ಮಲ್ಲಿಕಾರ್ಜುನ್ ಖರ್ಗೆ ಆರೋಪಿಸಿದ್ದಾರೆ.

ಸಂಸತ್ತಿನಲ್ಲಿ ವಿರೋಧ ಪಕ್ಷಗಳ ಸಂಸದರು ಕೋಲಾಹಲ ಸೃಷ್ಟಿಸಿದ ನಂತರ ಈ ದಿನ ಭಾರೀ ಸಂಖ್ಯೆಯ ಭದ್ರತಾ ಸಿಬ್ಬಂದಿ ನಿಯೋಜಿಸಲಾಗಿತ್ತು. ರಾಜ್ಯಸಭೆಯಲ್ಲಿ ಸರ್ಕಾರಿ ಸ್ವಾಮ್ಯದ ವಿಮಾ ಕಂಪನಿಗಳ ಖಾಸಗೀಕರಣ ಮಸೂದೆ ವಿಷಯ ಚರ್ಚೆಗೆ ಬಂದಾಗ ವಿರೋಧಪಕ್ಷಗಳ ಸದಸ್ಯರು ಸದನದ ಅಂಗಳಕ್ಕೆ ನುಗ್ಗಿ ಸರ್ಕಾರಿ ವಿರೋಧಿ ಘೋಷಣೆ ಕೂಗಿದರು. ಈ ಸಂದರ್ಭದಲ್ಲಿ ರಾಜ್ಯ ಸಭಾಧ್ಯಕ್ಷರಾಗಿರುವ ಉಪ ರಾಷ್ಟ್ರಪತಿ ವೆಂಕಯ್ಯ ನಾಯ್ಡು ಸುತ್ತ ಸುಮಾರು 50 ಭದ್ರತಾ ಸಿಬ್ಬಂದಿ ನಿಂತು ರಕ್ಷಣೆ ಮಾಡಿದ್ದರಿಂದ ಪ್ರತಿಭಟನಾನಿರತ ಸದಸ್ಯರಿಗೆ ವೆಂಕಯ್ಯ ನಾಯ್ಡು ಅವರ ಬಳಿ ಬರಲು ಸಾಧ್ಯವಾಗಲಿಲ್ಲ.

ಇದೇ ವೇಳೆ ಮಹಿಳಾ ಸಂಸದರ ಬಳಿ ಪುರುಷ ಮಾರ್ಷಲ್‌ಗಳನ್ನು, ಪುರುಷ ಸಂಸದರ ಬಳಿ ಮಹಿಳಾ ಮಾರ್ಷಲ್‌ಗಳನ್ನು ನಿಲ್ಲಿಸಿ ಗದ್ದಲ ತಪ್ಪಿಸುವ ಪ್ರಯತ್ನ ನಡೆಯಿತು. ಕಾಂಗ್ರೆಸ್, ತೃಣಮೂಲ ಕಾಂಗ್ರೆಸ್ ಮತ್ತು ಡಿಎಂಕೆ ಸದಸ್ಯರು ಪ್ರತಿಭಟನೆ ನಡೆಸುವುದನ್ನು ಮುಂದುವರಿಸಿದರು.

ನನ್ನ 55 ವರ್ಷಗಳ ಸಂಸದೀಯ ಜೀವನದಲ್ಲಿ ರಾಜ್ಯಸಭೆಯಲ್ಲಿ ಈ ರೀತಿ ಮಹಿಳಾ ಸಂಸದೆಯರ ಮೇಲೆ ಹಲ್ಲೆ ಮಾಡಿರುವುದನ್ನು ಹಿಂದೆಂದೂ ನೋಡಿಲ್ಲ ಎಂದು ಎನ್‌ಸಿಪಿ ನಾಯಕ ಶರದ್ ಪವಾರ್ ಆತಂಕ ವ್ಯಕ್ತಪಡಿಸಿದರು. ಸುಮಾರು 40ರಷ್ಟು ಮಂದಿ ಹೊರಗಿನವರನ್ನು ರಾಜ್ಯಸಭೆಯೊಳಗೆ ಕರೆಸಿಕೊಳ್ಳಲಾಗಿತ್ತು. ಪ್ರಜಾತಂತ್ರ ಮೇಲೆ ಈ ರೀತಿಯ ದಾಳಿ ನಡೆದಿರುವುದು ನನಗೆ ಬಹಳ ದುಃಖವಾಗುತ್ತಿದೆ ಎಂದು ಹೇಳಿದರು.

ಕಾಂಗ್ರೆಸ್ ಸಚೇತಕಿ ಛಾಯ ವರ್ಮಾ ಹೇಳುವಂತೆ ಪುರುಷ ಮಾರ್ಷಲ್‌ಗಳು ನನ್ನನ್ನು ದೂಡಿದ್ದರಿಂದ ನಾನು ಪೋಲೀದೇವಿ ನೇತಂ ಅವರ ಮೇಲೆ ಬಿದ್ದೆ. ಆದರೆ ಆಕೆ ನನ್ನ ಭಾರ ತಡೆಯಲಾಗದೆ ನೆಲದ ಮೇಲೆ ಬಿದ್ದರು.

ಕಾಂಗ್ರೆಸ್ಸಿನ ಮತ್ತೊಬ್ಬ ಸಂಸದ ಜೈರಾಮ್ ರಮೇಶ್ ಸರ್ಕಾರದ ವಿರುದ್ಧ ಆಕ್ರೋಶ ವ್ಯಕ್ತಪಡಿಸಿ ಭದ್ರತಾ ಸಿಬ್ಬಂದಿ ಸದನಕ್ಕೆ ಕರೆಸಿಕೊಂಡು ವಿಮಾ ಮಸೂದೆಯ ಖಾಸಗೀಕರಣ ಮಸೂದೆ ಅಂಗೀಕಾರ ನೀಡಲಾಗಿದೆ ಬಿಜೆಪಿ ಆಪ್ತರು ಸೇರಿದಂತೆ ವಿರೋಧಪಕ್ಷಗಳ ಒತ್ತಾಯವನ್ನು ಕಡೆಗಣಿಸಿ ಮಸೂದೆಯನ್ನು ಧ್ವನಿಮತದಿಂದ ಅಂಗೀಕರಿಸಲಾಗಿದೆ. ಈ ಸಂಜೆ ನಡೆದಿರುವುದು ದೌರ್ಜನ್ಯಕ್ಕಿಂತ ಕಡಿಮೆಯೇನಲ್ಲ ಎಂದು ಆರೋಪಿಸಿದರು.

ಸಂಸತ್ತಿನ ಮುಂಗಾರು ಅಧಿವೇಶನ ಈ ವಾರ ಮುಕ್ತಾಯಗೊಳ್ಳಬೇಕಿತ್ತು. ಗದ್ದಲ ನಿಲ್ಲದ ಕಾರಣ ಯಾವುದೇ ವಿಷಯಗಳ ಚರ್ಚೆ ನಡೆಯದೆ ಸಭಾಧ್ಯಕ್ಷರು ಕಲಾಪಗಳನ್ನು ಮೊಟಕುಗೊಳಿಸಿ ಅನಿರ್ದಿಷ್ಟ ಕಾಲಕ್ಕೆ ಮುಂದೂಡಿದರು.

ಆಧಾರ: ಸಂಯುಕ್ತ ಕರ್ನಾಟಕ, ದಿನಾಂಕ:09.08.2021.

## 54. ಸಾಗರ ಸುರಕ್ಷೆಗೆ ಒತ್ತು

"ಸಾಗರ ಮಾರ್ಗಗಳ ಮೂಲಕ ಯಾವುದೇ ಮಾರಕವಾಗುವಂಥ ಸನ್ನಿವೇಶಗಳನ್ನು ಮುಲಾಜಿಲ್ಲದೆ ಹತ್ತಿಕ್ಕ ಬೇಕು". ಎಂದು ಪ್ರಧಾನಿ ನರೇಂದ್ರ ಮೋದಿ, ವಿಶ್ವ ಸಮುದಾಯಕ್ಕೆ ಕರೆ ಕೊಟ್ಟಿದ್ದಾರೆ.

ಇದೇ ಮೊದಲ ಬಾರಿಗೆ ವಿಶ್ವಸಂಸ್ಥೆಯ ಭದ್ರತಾ ಮಂಡಳಿಯ(ಯುಎನ್‌ಎಸ್‌ಸಿ)ಸಭೆಯ ಅಧ್ಯಕ್ಷತೆವಹಿಸಿ ಅವರು ಮಾತನಾಡಿದ್ದಾರೆ. 'ಸಮುದ್ರ ಮಾರ್ಗಗಳ ಸುರಕ್ಷತೆಯ ಬಲವರ್ಧನೆಗೆ ಬೇಕಿರುವ ಅಂತರರಾಷ್ಟ್ರೀಯ ಸಹಕಾರ' ಎಂಬ ವಿಚಾರದಡಿ ನಡೆದ ವಿಡಿಯೋ ಸಂವಾದದಲ್ಲಿ ಅಧ್ಯಕ್ಷೀಯ ಭಾಷಣ ಮಾಡಿದ ಅವರು, "ಸಮಾಜ ಘಾತುಕ ಶಕ್ತಿಗಳಿಂದ ಸಮುದ್ರ ಮಾರ್ಗಗಳ ದುರುಪಯೋಗವನ್ನು ತಪ್ಪಿಸಿಕೊಳ್ಳಬೇಕು. ಸಮುದ್ರಕ್ಕೆ ಹೊಂದಿಕೊಂಡಂತಿರುವ ಎಲ್ಲ ರಾಷ್ಟ್ರಗಳಿಗೆ ಏಕಸ್ವರೂಪದ ಸುರಕ್ಷಾ ಕವಚ ನಿರ್ಮಾಣವಾಗಬೇಕು. ಜೊತೆಗೆ, ಸಮುದ್ರದ ಮೂಲಕ ನೈಸರ್ಗಿಕವಾಗಿ ಬಂದೊದಗುವ ಕಂಟಕಗಳನ್ನು ಪರಿಹರಿಸಲು ಸಂಬಂಧಿಸಿದ ಎಲ್ಲಾ ದೇಶಗಳು ಪರಸ್ಪರ ಸಹಾಯ–ಸಹಕಾರ ನೀಡಬೇಕು" ಎಂದು ವಿಶ್ವಸಮುದಾಯಕ್ಕೆ ಮನವಿ ಮಾಡಿದರು.

ಯುಎನ್‌ಎಸ್‌ಸಿಯಲ್ಲಿ ಸಮುದ್ರದ ಮಾರ್ಗಗಳ ಸುರಕ್ಷತೆಯ ಬಗ್ಗೆ ಸದಸ್ಯ ರಾಷ್ಟ್ರಗಳ ನಡುವೆ ಸಂವಾದ ನಡೆದಿದ್ದು ಇದೇ ಮೊದಲು. ಭಾಷಣದಲ್ಲಿ ಸಾಗರ ಮಾರ್ಗಗಳ ಸುರಕ್ಷತೆಯ ಬಗ್ಗೆ ಮಾತನಾಡಿದ ಮೋದಿ, "ಸಮುದ್ರ ಮಾರ್ಗಗಳ ಮೂಲಕ ಸರಬರಾಜಾಗುವ ನಕಲಿ ಮಾಲುಗಳ ನಿಗ್ರಹ, ಕಡಲ್ಗಳ್ಳರ ಹಾವಳಿ ನಿಗ್ರಹಗಳ ಅವಶ್ಯಕತೆಯನ್ನು ಒತ್ತಿ ಹೇಳಿದರು. ಇಂಥ ಸಮಸ್ಯೆಗಳ ನಿರ್ವಹಣೆಗೆ ಸೂಕ್ತ ಮೂಲಸೌಕರ್ಯ ಸೃಷ್ಟಿಸುವುದು ಇಂದಿನ ತುರ್ತು ಅವಶ್ಯಕತೆಗಳಲ್ಲೊಂದಾಗಿದೆ. ಸಮುದ್ರಗಳಿಗೆ ಹೊಂದಿಕೊಂಡಂತಿರುವ ದೇಶಗಳ ಸುಸ್ಥಿರತೆ, ಸಾಗರೋತ್ತರ ವ್ಯವಹಾರಗಳನ್ನು ನಿಭಾಯಿಸುವ ಶಕ್ತಿಯನ್ನು ಪರಿಗಣಿಸಿ ಈ ಸೌಕರ್ಯಗಳನ್ನು ಸೃಷ್ಟಿಸಬೇಕು" ಎಂದರು.

**ಅಂತರರಾಷ್ಟ್ರೀಯ ನ್ಯಾಯಾಧೀಕರಣಕ್ಕೆ ಆಗ್ರಹ:** ಸಮುದ್ರ ಮಾರ್ಗಗಳ ವ್ಯವಹಾರಗಳಿಗೆ ಸಂಬಂಧಿಸಿದ ವಿವಿಧ ರಾಷ್ಟ್ರಗಳ ನಡುವೆ ಏರ್ಪಡುವ ವಿವಾದ ಬಗೆಹರಿಸುವ ಸಲುವಾಗಿ ಅಂತರರಾಷ್ಟ್ರೀಯ ನ್ಯಾಯಾಧೀಕರಣ ಸ್ಥಾಪನೆಗೆ ಮೋದಿ ಆಗ್ರಹಿಸಿದರು. ಸಾಗರ ವ್ಯವಹಾರಗಳಿಗೆ ಸಂಬಂಧಿಸಿ ವಿವಿಧ ರಾಷ್ಟ್ರಗಳ ನಡುವೆ ಏರ್ಪಡುವ ವಿವಾದ ಬಗೆಹರಿಸುವ ಸಲುವಾಗಿ

ಅಂತರರಾಷ್ಟ್ರೀಯ ನ್ಯಾಯಧೀಕರಣ ಸ್ಥಾಪನೆಗೆ ಮೋದಿ ಆಗ್ರಹಿಸಿದರು. ಸಾಗರ ವ್ಯವಹಾರಗಳ ವ್ಯಾಜ್ಯಗಳ ಇತ್ಯರ್ಥಕ್ಕೆ ಅಂತರರಾಷ್ಟ್ರೀಯ ಮಟ್ಟದ ಕಾನೂನುಗಳು ರೂಪುಗೊಳ್ಳಬೇಕು ಎಂದು ಆಶಿಸಿದರು.

**ಕಾನೂನು ತೊಡುಕು ನಿವಾರಣೆಗೆ ಆಗ್ರಹ:** "ಸಾಗರ ಮುಖೇನ ವ್ಯವಹರಗಳಿಂದ ಜಗತ್ತಿನ ಆರ್ಥಿಕತೆ ಮತ್ತಷ್ಟು ಮಜಬೂತಾಗಿ ಬೆಳೆಯುವ ಸಾಧ್ಯತೆಗಳು ದಟ್ಟವಾಗಿವೆ. ಈ ಮಾದರಿಯ ಆರ್ಥಿಕತೆಯನ್ನು ಬಲಪಡಿಸಿಕೊಳ್ಳಬೇಕಿದೆ. ಸಮುದ್ರಾಧಾರಿತ ವ್ಯವಹಾರಗಳಿಗೆ ಇರುವ ಕಾನೂನಾತ್ಮಕ ನಿಬಂಧನೆಗಳನ್ನು ಆದಷ್ಟು ತೆಗೆದುಹಾಕಬೇಕು. ಸೀಮಿತ ನಿಬಂಧನೆಗಳಿದ್ದರೆ ಮಾತ್ರ ಆರ್ಥಿಕಾಭಿವೃದ್ಧಿ ಸಾಧ್ಯ" ಎಂದು ಮೋದಿ ವಿವರಿಸಿದರು.

ಆಧಾರ: ಉದಯವಾಣಿ, ದಿನಾಂಕ:10.08.2021.

## 55. ಬ್ಯಾಂಕ್ ಮುಳುಗಿದರೆ ರೂ.5 ಲಕ್ಷ ಪರಿಹಾರ ಖಾತರಿ

ಬ್ಯಾಂಕುಗಳು ದಿವಾಳಿಯಾದಾಗ ಗ್ರಾಹಕರಿಗೆ ರೂ.5 ಲಕ್ಷ ತನಕ ಪರಿಹಾರ ನೀಡುವ ತಿದ್ದುಪಡಿ ವಿಧೇಯಕವನ್ನು ಸಂಸತ್ತು ಅಂಗೀಕರಿಸಿದೆ.

ಈ ಕುರಿತು ರಾಜ್ಯಸಭೆಯಲ್ಲಿ ನಡೆದ ಚರ್ಚೆಯ ವೇಳೆ, ನೂತನ ಕಾನೂನು ಹಾಲಿ ಬಿಕ್ಕಟ್ಟಿನಲ್ಲಿರುವ ಪಿಎಂಸಿ ಸೇರಿದಂತೆ ಎಲ್ಲ ಬ್ಯಾಂಕ್‌ಗಳಿಗೂ ಅನ್ವಯವಾಗಲಿದೆ ಎಂದು ಹಣಕಾಸು ಸಚಿವೆ ನಿರ್ಮಾಲಾ ಸೀತಾರಾಮನ್ ತಿಳಿಸಿದರು.

ಠೇವಣಿ ವಿಮೆ ಮತ್ತು ಕ್ರೆಡಿಟ್ ಗ್ಯಾರೆಂಟಿ ಕಾರ್ಪೋರೇಷನ್ ಕಾಯಿದೆ–1961ಅನ್ನು ಸಂಸತ್ತು ಅನುಮೋದಿಸಿದ್ದು, ಬ್ಯಾಂಕ್‌ಗಳು ಆರ್‌ಬಿಐನಿಂದ ಮೊರಟೋರಿಯಂಗೆ ಒಳಗಾದ 90 ದಿನಗಳೊಳಗೆ ಠೇವಣಿದಾರರಿಗೆ ರೂ.5 ಲಕ್ಷ ತನಕ ವಿಮೆ ಪರಿಹಾರ ಸಿಗಲಿದೆ. ಲೋಕಸಭೆಯಲ್ಲಿ ಅಂಗೀಕಾರವಾದ ಈ ವಿಧೇಯಕ ಆಗಸ್ಟ್ 4 ರಂದು ರಾಜ್ಯಸಭೆಯಲ್ಲೂ ಅಂಗೀಕಾರವಾಗಿತ್ತು. "ಒಟ್ಟು 90 ದಿನಗಳನ್ನು ತಲಾ 45 ದಿನಗಳ ಎರಡು ವಿಭಾಗಗಳಾಗಿ ವಿಂಗಡಿಸಲಾಗಿದೆ. ಮೊದಲ 45 ದಿನಗಳೊಳಗೆ ಠೇವಣಿದಾರರಿಗೆ ಪರಿಹಾರ ವಿತರಣೆಯಾಗಬೇಕು" ಎಂದು ಸಚಿವೆ ವಿವರಿಸಿದರು.

"ಒಟ್ಟಾರೆ ರೂ.5 ಲಕ್ಷ ವಿಮೆ ಪರಿಹಾರವು ಮೂಲ ಠೇವಣಿ ಮತ್ತು ಬಡ್ಡಿ ದರ ಎರಡಕ್ಕೂ ಅನ್ವಯ. ಬ್ಯಾಂಕ್‌ಗಳಲ್ಲಿರುವ ಠೇವಣಿಯಲ್ಲಿ ಸುಮಾರು ಶೇ.98.3 ಅನ್ನು ಈ ವಿಮೆ ಕವರೇಜ್ ಒದಗಿಸಲಿವೆ" ಎಂದರು.

ಈ ಹಿಂದೆ ಸಹಕಾರ ಕ್ಷೇತ್ರದ ಹಲವಾರು ಬ್ಯಾಂಕ್‌ಗಳು ಈ ವಿಮೆಯ ವ್ಯಾಪ್ತಿಯಲ್ಲಿ ಇದ್ದಿರಲಿಲ್ಲ. 2020ರಲ್ಲಿ ಸರ್ಕಾರ ಬ್ಯಾಂಕಿಂಗ್ ನಿಯಂತ್ರಣ ಕಾಯಿದೆಗೆ ತಿದ್ದುಪಡಿ ತಂದಿದ್ದು, ಸಹಕಾರ ಬ್ಯಾಂಕುಗಳ ಮೇಲೆ ಆರ್‌ಬಿಐ ಸಂಪೂರ್ಣ ನಿಯಂತ್ರಣ ಗಳಿಸಿದೆ ಹಾಗೂ ಠೇವಣಿ ವಿಮೆ ಕವರೇಜ್ ಅನ್ನು ವಿವರಿಸಲಾಗಿದೆ" ಎಂದು ತಿಳಿಸಿದರು.

ಆಧಾರ: ವಿಜಯ ಕರ್ನಾಟಕ, ದಿನಾಂಕ:10.08.2021.

## 56. ಎನ್ನೆಸ್‌ಒ ಜೊತೆ ವಹಿವಾಟಿಲ್ಲ

ಪೆಗಾಸಸ್ ಬೇಹುಗಾರಿಕೆ ಪ್ರಕರಣವು ಇಡೀ ಸಂಸತ್ ಅಧಿವೇಶನವನ್ನೇ ಕೊಚ್ಚಿಹೋಗುವಂತೆ ಮಾಡುತ್ತಿರುವ ಮಧ್ಯೆಯೇ ರಕ್ಷಣಾ ಸಚಿವಾಲಯವು ರಾಜ್ಯಸಭೆಯಲ್ಲಿ ಈ ಕುರಿತು ಸ್ಪಷ್ಟನೆಯೊಂದನ್ನು ನೀಡಿದೆ.

ಬೇಹು ತಂತ್ರಾಂಶ ಅಭಿವೃದ್ಧಿ ಪಡಿಸಿರುವ ಇಸ್ರೇಲ್ ಎನ್‌ಎಸ್‌ಇ ಗ್ರೂಪ್ ಸಂಸ್ಥೆಯೊಂದಿಗೆ ಸಚಿವಾಲಯವು ಯಾವುದೇ ರೀತಿಯ ವ್ಯವಹಾರ ಮಾಡಿಲ್ಲ ಎಂದು ರಕ್ಷಣಾ ಇಲಾಖೆ ಸ್ಪಷ್ಟಪಡಿಸಿದೆ.

ರಾಜ್ಯಸಭೆಯಲ್ಲಿ ಸಿಪಿಎಂ ಸದಸ್ಯ ವಿ. ಶಿವದಾಸನ್ ಅವರ ಕೇಳಿದ ಪ್ರಶ್ನೆಗೆ ಉತ್ತರವಾಗಿ ರಕ್ಷಣಾ ಇಲಾಖೆ ಸಹಾಯಕ ಸಚಿವ ಅಜಯ್ ಭಟ್, 'ಎನ್ಎಸ್ಓ ಗ್ರೂಪ್‌ನೊಂದಿಗೆ ರಕ್ಷಣಾ ಸಚಿವಾಲಯ ಯಾವುದೇ ವಹಿವಾಟು ನಡೆಸಿಲ್ಲ' ಎಂದಿದ್ದಾರೆ.

**ಲೋಕಸಭೆಯಲ್ಲಿ 3 ಬಿಲ್ ಪಾಸ್:** ಪೆಗಾಸಸ್ ಕುರಿತು ಚರ್ಚೆಗೆ ಆಗ್ರಹಿಸಿ ಪ್ರತಿ ಪಕ್ಷಗಳು ಗದ್ದಲ ಮುಂದುವರಿಸಿರುವಂತೆಯೇ 3 ವಿಧೇಯಕಗಳು ಲೋಕಸಭೆಯಲ್ಲಿ ಅಂಗೀಕಾರಗೊಂಡಿವೆ. ಅವೆಂದರೆ, ಸೀಮಿತ ಬಾಧ್ಯತೆ ಪಾಲುದಾರಿಕೆ(ತಿದ್ದುಪಡಿ) ವಿಧೇಯಕ, ವಿಮೆ ಮತ್ತು ಸಾಲ ಖಾತ್ರಿ ನಿಗಮ ತಿದ್ದುಪಡಿ ವಿಧೇಯಕ ಮತ್ತು ಸಾಂವಿಧಾನಿಕ (ಪರಿಶಿಷ್ಟ ವರ್ಗಗಳು) ಆದೇಶ (ತಿದ್ದುಪಡಿ) ವಿಧೇಯಕ. ಕೇವಲ 10 ನಿಮಿಷಗಳಲ್ಲಿ 'ದೋಸೆ ಮಾಡಿದಂತೆ' 3 ಬಿಲ್ ಪಾಸ್ ಮಾಡಲಾಗಿದೆ ಎಂದು ಆರ್ಎಸ್‌ಪಿ ಸದಸ್ಯ ಎನ್.ಕೆ. ಪ್ರೇಮ್ ಚಂದ್ರನ್ ಹೇಳಿದ್ದಾರೆ. ಇನ್ನು ಸರ್ಕಾರವು ಪ್ರಜಾಸತ್ತೆಯ ಹತ್ಯೆ ಮಾಡುತ್ತಿದೆ ಎಂದು ಕಾಂಗ್ರೆಸ್ ಕಿಡಿಕಾರಿದೆ.

**ಹಲವು ವಿಧೇಯಕ ಅಂಗೀಕಾರ :** ಚಲನಚಿತ್ರ ಪ್ರಮಾಣೀಕರಣ ಮೇಲ್ಮನವಿ ನ್ಯಾಯಾಧೀಕರಣ ಸೇರಿದಂತೆ 9 ಮೇಲ್ಮನವಿ ನ್ಯಾಯಾಧೀಕರಣ ಸೇರಿದಂತೆ 9 ಮೇಲ್ಮನವಿ ನ್ಯಾಯಾಧೀಕರಣಗಳನ್ನು ರದ್ದು ಮಾಡುವಂಥ 'ನ್ಯಾಯಧೀಕರಣಗಳ ಸುಧಾರಣಾ ವಿಧೇಯಕ, 2021 ರಾಜ್ಯಸಭೆಯಲ್ಲಿ ಅಂಗೀಕಾರಗೊಂಡಿದೆ.

ಆಧಾರ: ಉದಯವಾಣಿ, ದಿನಾಂಕ:10.08.2021.

## 57. ಪ್ರತಿಭಟನೆಗೆ ತಾತ್ಕಾಲಿಕ ವಿರಾಮ, ತಿದ್ದುಪಡಿ ಮಸೂದೆಗೆ ಒಪ್ಪಿಗೆ ನೀಡಲು ಪ್ರತಿಪಕ್ಷಗಳು ಸಜ್ಜು

ತಮ್ಮದೇ ಪ್ರತ್ಯೇಕ ಇತರೆ ಹಿಂದುಳಿದ ವರ್ಗಗಳ ಪಟ್ಟಿಯನ್ನು ಸಿದ್ದಪಡಿಸುವ ರಾಜ್ಯ ಸರ್ಕಾರಗಳ ಅಧಿಕಾರವನ್ನು ಮರುಸ್ಥಾಪಿಸುವ, ಸಂವಿಧಾನ ತಿದ್ದುಪಡಿ ಮಸೂದೆಯನ್ನು ಕೇಂದ್ರ ಸರ್ಕಾರವು ಲೋಕಸಭೆಯಲ್ಲಿ ಮಂಡಿಸಿದೆ.

ರಾಜ್ಯ ಸರ್ಕಾರಗಳಿಗೆ ಈ ಹಿಂದೆ ಇದ್ದ ಈ ಅಧಿಕಾರವನ್ನು ಮರುಸ್ಥಾಪಿಸುವ ಸಂವಿಧಾನದ 127ನೇ ತಿದ್ದುಪಡಿ ಮಸೂದೆಯನ್ನು, ಸಮಾಜ ಕಲ್ಯಾಣ ಮತ್ತು ಸಬಲೀಕರಣ ಸಚಿವ ಡಾ. ವೀರೇಂದ್ರ ಕುಮಾರ್ ಮಂಡಿಸಿದರು.

ಇತರೆ ಹಿಂದುಳಿದ ವರ್ಗಗಳ ಪಟ್ಟಿಯನ್ನು ಸಿದ್ದಪಡಿಸುವ ಅಧಿಕಾರವು ಈ ಮೊದಲು ರಾಜ್ಯ ಸರ್ಕಾರಗಳಿಗೆ ಇತ್ತು. ಸಂವಿಧಾನಕ್ಕೆ 102 ನೇ ತಿದ್ದುಪಡಿ ತರುವ ಮೂಲಕ ರಾಜ್ಯ ಸರ್ಕಾರಗಳ ಆ ಅಧಿಕಾರವನ್ನು, ಕೇಂದ್ರ ಸರ್ಕಾರವು 2018ರಲ್ಲಿ ತೆಗೆದು ಹಾಕಿತ್ತು. ಕೇಂದ್ರ ಸರ್ಕಾರದ ಆ ನಿರ್ಧಾರದ ವಿರುದ್ಧ ವಿರೋಧ ಪಕ್ಷಗಳು ತೀವ್ರ ಆಕ್ಷೇಪ ವ್ಯಕ್ತಪಡಿಸಿದ್ದವು. ಸಂಸತ್ತಿನ ಒಳಗೂ ಮತ್ತು ಹೊರಗೂ ಪ್ರತಿಭಟನೆಗಳು ನಡೆದಿದ್ದವು. 2021ರಲ್ಲಿ ಮಹಾರಾಷ್ಟ್ರದ ಮೀಸಲಾತಿ ಪಟ್ಟಿಯ ವಿರುದ್ಧದ ಪ್ರಕರಣದ ವಿಚಾರಣೆ ನಡೆಸಿದ್ದ ಸುಪ್ರೀಂಕೋರ್ಟ್, ಸಂವಿಧಾನದ 102ನೇ ತಿದ್ದುಪಡಿಯ ಮಾನ್ಯತೆಯನ್ನು ಎತ್ತಿ ಹಿಡಿದಿತ್ತು.

ಉದ್ಯೋಗ ಮತ್ತು ಶಿಕ್ಷಣದಲ್ಲಿ ಮೀಸಲಾತಿ ನೀಡುವ ಉದ್ದೇಶದಿಂದ ಸಮುದಾಯಗಳನ್ನು ಇತರ ಹಿಂದುಳಿದ ವರ್ಗಗಳು (ಒಬಿಸಿ) ಎಂದು ಘೋಷಿಸುವ ಅಧಿಕಾರ ರಾಜ್ಯಗಳಿಗಿಲ್ಲ ಎಂದು ಮೇ 5 ರಂದು ನೀಡಿದ ತೀರ್ಪಿನಲ್ಲಿ ಹೇಳಿತ್ತು. ಈ ತೀರ್ಪು ಮರು ಪರಿಶೀಲಿಸುವಂತೆ ಕೇಂದ್ರ ಸರ್ಕಾರ ಸಲ್ಲಿಸಿದ್ದ ಮೇಲ್ಮನವಿಯನ್ನು ವಜಾಗೊಳಿಸಿತ್ತು. ಸುಪ್ರೀಂಕೋರ್ಟ್‌ನ ತೀರ್ಪಿನ ನಂತರ, ಸಂವಿಧಾನಕ್ಕೆ

ಮತ್ತೆ ತಿದ್ದುಪಡಿ ತರಲು ಸರ್ಕಾರವು ಮುಂದಾಗಿದೆ. ಆ ಭಾಗವಾಗಿ 127ನೇ ತಿದ್ದುಪಡಿ ಮಸೂದೆಯನ್ನು ಲೋಕಸಭೆಯಲ್ಲಿ ಮಂಡಿಸಿದೆ.

**ಒಕ್ಕೂಟ ವ್ಯವಸ್ಥೆ ಕಾಯ್ದುಕೊಳ್ಳಲು ಅಗತ್ಯ:** ದೇಶದ ಒಕ್ಕೂಟ ವ್ಯವಸ್ಥೆಯನ್ನು ಕಾಯ್ದುಕೊಳ್ಳುವ ಸಲುವಾಗಿ, ತಮ್ಮದೇ ಆದ ಪ್ರತ್ಯೇಕ ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ಹಿಂದುಳಿದ ವರ್ಗಗಳ ಪಟ್ಟಿಯನ್ನು ಸಿದ್ಧಪಡಿಸುವ ಅಧಿಕಾರವನ್ನು ರಾಜ್ಯ ಸರ್ಕಾರಗಳು ಮತ್ತು ಕೇಂದ್ರಾಡಳಿತ ಪ್ರದೇಶಗಳಿಗೆ ನೀಡಬೇಕಿದೆ. ಇದಕ್ಕಾಗಿ ಸಂವಿಧಾನದ 342ನೇಎ, 338ಬಿ ಮತ್ತು 366ನೇ ವಿಧಿಗಳಿಗೆ ತಿದ್ದುಪಡಿ ತರಬೇಕಿದೆ' ಎಂದು ಸಚಿವ ವಿರೇಂದ್ರ ಕುಮಾರ್ ಅವರು ಮಸೂದೆ ಮಂಡನೆ ವೇಳೆ ತಿಳಿಸಿದ್ದಾರೆ.

ಮಸೂದೆಯ ಮೇಲೆ ಲೋಕಸಭೆಯಲ್ಲಿ ಇನ್ನಷ್ಟೇ ಚರ್ಚೆ ನಡೆಯಬೇಕಿದೆ. ಲೋಕಸಭೆಯಲ್ಲಿ ಈ ಮಸೂದೆಗೆ ಅಂಗೀಕಾರ ದೊರೆಯುವ ನಿರೀಕ್ಷೆ ಇದೆ. ರಾಜ್ಯಸಭೆಯಲ್ಲಿ ಈ ಮಸೂದೆಯನ್ನು ಸರ್ಕಾರ ಇನ್ನು  ಮಂಡಿಸಿಲ್ಲ. ಎರಡು ಸದನಗಳಲ್ಲಿ ಮಸೂದೆಗೆ ಅಂಗೀಕಾರ ದೊರೆತ ನಂತರ, ರಾಷ್ಟ್ರಪತಿಗಳ ಅಂಕಿತಕ್ಕೆ ಕಳುಹಿಸಲಾಗುತ್ತದೆ.

ಆಧಾರ: ಪ್ರಜಾವಾಣಿ, ದಿನಾಂಕ:10.08.2021.

## 58. ರಾಜ್ಯಸಭೆ: ಮತ ಹಾಕುವ ವೇಳೆ ಗೈರಾದವರ ವಿವರ ಕೇಳಿದ ಮೋದಿ

ರಾಜ್ಯಸಭೆಯಲ್ಲಿ ವಿರೋಧ ಪಕ್ಷಗಳ ಸಂಸದರು ಮಂಡಿಸಿದ್ದ ನಿರ್ಣಯಗಳ ಮೇಲೆ ಮತದಾನ ನಡೆಯುವ ಸಂದರ್ಭದಲ್ಲಿ ಗೈರು ಹಾಜರಾಗಿದ್ದ ಪಕ್ಷದ ಸಂಸದರ ಕುರಿತ ವಿವರಗಳನ್ನು ಸಲ್ಲಿಸುವಂತೆ ಸಂಸದೀಯ ವ್ಯವಹಾರಗಳ ಸಚಿವ ಪ್ರಹ್ಲಾದ ಜೋಷಿ ಅವರಿಗೆ ಪ್ರಧಾನಿ ನರೇಂದ್ರ ಮೋದಿ ಸೂಚಿಸಿದ್ದಾರೆ.

ಪಕ್ಷದ ಸಂಸದೀಯ ಪಕ್ಷದ ಸಭೆಯಲ್ಲಿ ಮಾತನಾಡಿದ ಪ್ರಧಾನಿ ಈ ಸೂಚನೆ ನೀಡಿದರು ಎಂದು ಮೂಲಗಳು ಹೇಳಿವೆ. 'ನ್ಯಾಯಮಂಡಳಿಗಳ ಸುಧಾರಣಾ ಮಸೂದೆಯನ್ನು ಸದನದ ಆಯ್ಕೆ ಸಮಿತಿಗೆ ಕಳುಹಿಸಬೇಕು ಎಂದು ಒತ್ತಾಯಿಸಿ, ವಿರೋಧ ಪಕ್ಷಗಳ ಕೆಲ ಸದಸ್ಯರು ನಿರ್ಣಯ ಮಂಡಿಸಿದ್ದರು. ನಿರ್ಣಯವನ್ನು ಸದನ ತಿರಸ್ಕರಿಸಿತು. ಒಲಿಂಪಿಕ್ಸ್‌ನಲ್ಲಿ ಅಸಾಧಾರಣ ಪ್ರತಿಭೆ ಮೆರೆದು, ಪದಕಗಳನ್ನು ಗೆದ್ದವರಿಗೆ ಸಭೆಯಲ್ಲಿ ಪಾಲ್ಗೊಂಡಿದ್ದವರು ಎದ್ದು ನಿಂತು ಚಪ್ಪಾಳೆ ತಟ್ಟಿ, ಅಭಿನಂದಿಸಿದರು.

**ವ್ಯಾಪಕ ಪ್ರಚಾರಕ್ಕೆ  ಸಲಹೆ:** ಕ್ರೀಡಾ ಚಟುವಟಿಕೆಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಪಾಲ್ಗೊಳ್ಳುವಂತೆ ನಿಮ್ಮ ಕ್ಷೇತ್ರದ ಜನರಿಗೆ ಪ್ರೋತ್ಸಾಹ ನೀಡಬೇಕು. ಪೋಷಣ್ ಅಭಿಯಾನ್ ಮತ್ತು ಪ್ರಧಾನ ಮಂತ್ರಿ ಗರೀಬ್ ಕಲ್ಯಾಣ್ ಯೋಜನೆ ಕುರಿತು ವ್ಯಾಪಕ ಪ್ರಚಾರ ಕೈಗೊಳ್ಳಬೇಕು' ಎಂದು ಸಂಸದರಿಗೆ ಪ್ರಧಾನಿ ಸಲಹೆ ನೀಡಿದರು.

ಆಧಾರ: ಪ್ರಜಾವಾಣಿ, ದಿನಾಂಕ:11.08.2021.

## 59. ರಾಜ್ಯಸಭೆಯಲ್ಲಿ ಮುಂದುವರಿದ ವಿರೋಧ ಪಕ್ಷಗಳ ಗದ್ದಲ

ಸಂಸತ್ತಿನ ಮುಂಗಾರು ಅಧಿವೇಶನ ಶುರುವಾದ ದಿನದಿಂದಲೂ ಪ್ರತಿಭಟನೆ ನಡೆಸುತ್ತಿರುವ ವಿಪಕ್ಷ ಸದಸ್ಯರ ವರ್ತನೆ ಪುನಃ ಸಂಸದೀಯ ನಡವಳಿಕೆಯ ಚೌಕಟ್ಟು ಮೀರಿದೆ. ಕಾಂಗ್ರೆಸ್ ಸದಸ್ಯ ಪ್ರತಾಪ್ ಸಿಂಗ್ ಬಜ್ವಾ ಮೇಜಿನ ಮೇಲೇರಿ ಕಡತ ಒಂದನ್ನು ರಾಜ್ಯಸಭಾ ಅಧ್ಯಕ್ಷರ ಪೀಠದೆಡೆಗೆ ಎಸೆದು ಅಸಂಸದೀಯ ನಡವಳಿಕೆ ಪ್ರದರ್ಶಿಸಿದರು. ಈ ಹೈಡ್ರಾಮದ ಶುರುವಾದ ಸಂದರ್ಭದಲ್ಲೇ ಆಮ್‌ಆದ್ಮಿ ಪಕ್ಷದ ಸದಸ್ಯ ಸಂಜಯ್ ಸಿಂಗ್ ಕೂಡ ರಿಪೋರ್ಟರ್ಸ್ ಟೇಬಲ್ ಮೇಲೇರಿ ಸರ್ಕಾರದ ವಿರುದ್ಧ ಘೋಷಣೆ ಕೂಗಿದ್ದರು. ಕಾಂಗ್ರೆಸ್ ಪಕ್ಷದ ದೀಪೇಂದ್ರ ಹೂಡಾ, ರಾಜಮಣಿ ಪಟೇಲ್, ಸಿಪಿಐನ ಬಿನೋಯ್ ವಿಶ್ವಂ, ಸಿಎಂನ ವಿ.ಶಿವದಾಸನ್ ಅವರು ಟೇಬಲ್ ಮೇಲೇರಿ ಕುಳಿತು ಘೋಷಣೆ

ಕೂಗತೊಡಗಿದರು. ಈ ಘಟನೆ ನಡೆದಾಗ ಸಭಾಧ್ಯಕ್ಷರ ಪೀಠದಲ್ಲಿ ಭುಬನೇಶ್ವರ ಕಲಿಟಾ ಇದ್ದರು. ಕಲಾಪವನ್ನು 15 ನಿಮಿಷ ಕಾಲ ಮುಂದೂಡಿದ್ದರು. ಪ್ರತಿಪಕ್ಷ ಸದಸ್ಯರ ಗದ್ದಲ ಮುಂದುವರಿದ ಕಾರಣ ಬಳಿಕ ರಾಜ್ಯಸಭೆ ಕಲಾಪವನ್ನು ದಿನದ ಮಟ್ಟಿಗೆ ಮುಂದೂಡಲಾಗಿದೆ.

**ಇದೇ ಮೊದಲ ಬಾರಿಗೆ ಡಿಜಿಟಲ್ ಜನಗಣತಿ:** ಈ ವರ್ಷ ನಡೆಯುವ ಸಾರ್ವತ್ರಿಕ ಜನಗಣತಿಯು ಡಿಜಿಟಲ್ ಸ್ವರೂಪದ್ದಾಗಲಿದೆ. ಇದೇ ಮೊದಲ ಬಾರಿಗೆ ದೇಶದಲ್ಲಿ ಈ ವಿಧಾನದ ಗಣತಿ ಕಾರ್ಯ ನಡೆಯಲಿದೆ. ಗಣಿದಾರರಿಗೆ ಈ ಮೊಬೈಲ್ ಆ್ಯಪ್ ಬಳಸುವ ಬಗ್ಗೆ ತರಬೇತಿ ನೀಡಲಾಗುತ್ತದೆ ಎಂದು ಸರ್ಕಾರ ಸಂಸತ್‌ಗೆ ತಿಳಿಸಿದೆ. ಗಣತಿಯಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರ ಜಾತಿಯನ್ನು ಮಾತ್ರ ನಮೂದು ಮಾಡಲಾಗುತ್ತದೆ. ಇತರ ಜಾತಿಗಳನ್ನು ಅಲ್ಲ ಎಂದು ಸ್ಪಷ್ಟ ಪಡಿಸಿದೆ.

**ಕಾಶ್ಮೀರದಲ್ಲಿ ಇಬ್ಬರು ಹೊರಗಿನವರಿಂದ ಆಸ್ತಿ ಖರೀದಿ:** ಜಮ್ಮು–ಕಾಶ್ಮೀರದ ವಿಶೇಷ ಸ್ಥಾನಮಾನ ರದ್ದತಿಯ ನಂತರ ಅಲ್ಲಿ ಈವರೆಗೆ ಹೊರಗಿನವರು ಇಬ್ಬರು ಮಾತ್ರ ಆಸ್ತಿ ಖರೀದಿ ಮಾಡಿದ್ದಾರೆ ಎಂದು ಗೃಹ ಸಚಿವ ನಿತ್ಯಾನಂದ ರೈ ಲೋಕಸಭೆಗೆ ಲಿಖಿತ ಉತ್ತರ ನೀಡಿದ್ದಾರೆ.

**ಸಂಸತ್ ಪ್ರಶ್ನೋತ್ತರ :**

1. ರಾಷ್ಟ್ರೀಯ ಪೌರತ್ವ ನೋಂದಣಿ ದೇಶ ವ್ಯಾಪಿ ಜಾರಿ ಮಾಡುವ ಬಗ್ಗೆ ಸರ್ಕಾರ ಇನ್ನು ನಿರ್ಧಾರ ಕೈಗೊಂಡಿಲ್ಲ ಎಂದು ಸಂಸತ್‌ನಲ್ಲಿ ಹೇಳಿಕೆ.
2. ಕರ್ನಾಟಕ ಸೇರಿ 12 ರಾಜ್ಯಗಳು ಆರ್ಥಿಕವಾಗಿ ದುರ್ಬಲರಾದವರಿಗೆ ಕಲ್ಪಿಸಿರುವ ಶೇ.10 ಮೀಸಲಾತಿಯನ್ನು ಜಾರಿ ಮಾಡಿವೆ.
3. ಕಳೆದ ಐದು ವರ್ಷದಲ್ಲಿ ಒಳಚರಂಡಿ ಮತ್ತು ಸೆಪ್ಟಿಕ್ ಟ್ಯಾಂಕ್ ಸ್ವಚ್ಛ ಮಾಡುವ ಸಂದರ್ಭದಲ್ಲಿ 309 ಪೌರ ಕಾರ್ಮಿಕರು ಮೃತರಾಗಿದ್ದಾರೆ. ಇವರು ಮಾನವ ಸ್ಕ್ಯಾವೆಂಜಿಂಗ್‌ನಿಂದ ಸತ್ತಿಲ್ಲ.
4. ರಾಜ್ಯ ಮತ್ತು ಕೇಂದ್ರಾಡಳಿತ ಪ್ರದೇಶಗಳಲ್ಲಿ 2013ರ ನಂತರ 4.39ಲಕ್ಷ ನಕಲಿ ರೇಷನ್ ಕಾರ್ಡ್‌ಗಳು ಪತ್ತೆಯಾಗಿದ್ದು, ಇವುಗಳನ್ನು ರದ್ದುಪಡಿಸಲಾಗಿದೆ.
5. 19 ರಾಜ್ಯ ಮತ್ತು ಕೇಂದ್ರಾಡಳಿತ ಪ್ರದೇಶಗಳು ಅಂತರ್ಜಲ ಕಾನೂನನ್ನು ಅಳವಡಿಕೆ ಮಾಡಿಕೊಂಡಿವೆ. ಇದರಲ್ಲಿ ಕರ್ನಾಟಕವು ಸೇರಿದೆ.
6. ಹೋಮಿಯೋಪಥಿ ರಾಷ್ಟ್ರೀಯ ಆಯೋಗ ತಿದ್ದುಪಡಿ, ಭಾರತೀಯ ವೈದ್ಯ ಪದ್ಧತಿ ರಾಷ್ಟ್ರೀಯ ಆಯೋಗ ತಿದ್ದುಪಡಿ ಮಸೂದೆಗೆ ಲೋಕಸಭೆ ಒಪ್ಪಿಗೆ.

**ಬಿಜೆಪಿಯ ಸದಸ್ಯರ ಗೈರಿನ ಬಗ್ಗೆ ಪ್ರಧಾನಿ ಅಸಮಾಧಾನ:**

ರಾಜ್ಯ ಸಭೆಯಲ್ಲಿ ಕಲಾಪ ನಡೆದ ವೇಳೆ ಸದಸ್ಯರು ಗೈರುಹಾಜರಾಗಿರುವುದು ಪ್ರಧಾನಿ ನರೇಂದ್ರ ಮೋದಿ ಅವರ ಅಸಮಾಧಾನಕ್ಕೆ ಕಾರಣವಾಗಿದೆ. ಕರ್ತವ್ಯ ನಿರ್ಲಕ್ಷ್ಯ ತೋರಿದ ಬಿಜೆಪಿ ಸದಸ್ಯರ ಪಟ್ಟಿ ನೀಡುವಂತೆ ಅವರು ಸಂಸದೀಯ ವ್ಯವಹಾರಗಳ ಸಚಿವ ಪ್ರಹ್ಲಾದ ಜೋಶಿ ಅವರಿಗೆ ಸೂಚಿಸಿದ್ದಾರೆ. ಪಕ್ಷದ ಸಂಸದೀಯ ಸಭೆಯನ್ನು ಉದ್ದೇಶಿಸಿದ ಮಾತನಾಡಿದ ಪ್ರಧಾನಿ ಮೋದಿ, ರಾಜ್ಯ ಸಭೆಯಲ್ಲಿ ಸದಸ್ಯ ಬಲ ಇಲ್ಲದ ಕಾರಣ ಮಸೂದೆ ಅಂಗೀಕಾರವಾಗಲಿಲ್ಲ. ಈಗ ಗೈರಾದವರ ವಿವರ ಪಡೆಯುವುದೊಂದೇ ದಾರಿ ಉಳಿದಿರುವುದು ಎಂದು ಅಸಮಾಧಾನ ವ್ಯಕ್ತಪಡಿಸಿದ್ದಾರೆ. ರಾಜ್ಯಸಭೆಯಲ್ಲಿ ನ್ಯಾಯಾಧೀಕರಣ ಸುಧಾರಣಾ ಮಸೂದೆ ಮಂಡನೆ ವೇಳೆ 20 ಬಿಜೆಪಿ ಸದಸ್ಯರು ಗೈರಾಗಿದ್ದರು.

ಆಧಾರ: ವಿಜಯವಾಣಿ, ದಿನಾಂಕ:11.08.2021.

## 60. ಒಬಿಸಿ ಮಸೂದೆಗೆ ರಾಷ್ಟ್ರಪತಿ ಸಹಿ ಬಾಕಿ

ಇತರೆ ಹಿಂದುಳಿದ ವರ್ಗಗಳ (ಒಬಿಸಿ) ಪಟ್ಟಿಯನ್ನು ತಯಾರಿಸುವ ಅಧಿಕಾರವನ್ನು ರಾಜ್ಯಗಳಿಗೆ ಬಿಟ್ಟುಕೊಡುವ ಮಹತ್ವದ ಸಾಂವಿಧಾನಿಕ ತಿದ್ದುಪಡಿ ಮಸೂದೆಗೆ ರಾಜ್ಯಸಭೆ ಕೂಡ ಸರ್ವಾನುಮತದ ಅಂಗಿಕಾರ ನೀಡಿದೆ. ಇದರೊಂದಿಗೆ ಸಂಸತ್ತಿನ ಉಭಯ ಸದನಗಳಲ್ಲಿ ಅಂಗೀಕಾರಗೊಂಡ ಈ ಮಹತ್ವದ ಸಾಂವಿಧಾನಿಕ ತಿದ್ದುಪಡಿ ಮಸೂದೆ ಕಾಯ್ದೆಯಾಗಿ ರೂಪುಗೊಳ್ಳಲು ರಾಷ್ಟ್ರಪತಿಗಳ ಅಂಕಿತವೊಂದೇ ಬಾಕಿ ಉಳಿದಿದೆ.

ರಾಜ್ಯಸಭೆ ಕಲಾಪದಲ್ಲಿ ಸಂವಿಧಾನದ 137ನೇ ತಿದ್ದುಪಡಿ ವಿಧೇಯಕವಾದ ಈ ಮಸೂದೆಯ ಪರ 187 ಮತಗಳು ಚಲಾವಣೆಯಾದವು ವಿಧೇಯಕದ ವಿರುದ್ಧ ಒಂದೇ ಒಂದು ಮತ ಕೂಡ ಬೀಳಲಿಲ್ಲ.

ಮಸೂದೆಯಲ್ಲಿ ಕೆಲವು ತಿದ್ದುಪಡಿಗಳನ್ನು ಮಾಡಬೇಕೆಂಬ ವಿಪಕ್ಷಗಳ ಸದಸ್ಯರ ಕೋರಿಕೆಯನ್ನು ಸದನ ತಿರಸ್ಕರಿಸಿತು. ಮಸೂದೆ ಮಂಡಿಸಿ ಮಾತನಾಡಿದ ಸಮಾಜ ಕಲ್ಯಾಣ ಸಚಿವ ವೀರೇಂದ್ರ ಕುಮಾರ್, ತಿದ್ದುಪಡಿಯಿಂದ ಒಬಿಸಿ ಸವಲತ್ತು ಪಡೆಯಲು 671 ಸಮುದಾಯಗಳಿಗೆ ಒಬಿಸಿ ಸ್ಥಾನಮಾನ ನೀಡುವ ಅಧಿಕಾರ ರಾಜ್ಯಗಳಿಗೆ ಮತ್ತೆ ಪ್ರಾಪ್ತಿಯಾಗಲಿದೆ. ಇತ್ತೀಚಿನ ಸುಪ್ರೀಂಕೋರ್ಟ್ ಆದೇಶದಿಂದ ರಾಜ್ಯಗಳು ಒಬಿಸಿ ಸ್ಥಾನಮಾನ ನೀಡುವ ಅಧಿಕಾರ ಕಳೆದು ಕೊಂಡಿದ್ದವು. ಸಾಂವಿಧಾನಿಕ ತಿದ್ದುಪಡಿಯಿಂದ ಈ ಗೊಂದಲ ನಿವಾರಣೆಯಾಗಲಿದೆ' ಎಂದರು. ವಿಧೇಯಕ ಅಂಗೀಕಾರಕ್ಕೆ ಸಹಕರಿಸುತ್ತಿರುವ ಎಲ್ಲ ಪಕ್ಷಗಳ ಸದಸ್ಯರಿಗೂ ಧನ್ಯವಾದ ಸಲ್ಲಿಸಿದರು.

ಈ ನಡುವೆ ಮಾತನಾಡಿದ ಹಲವು ಪ್ರತಿಪಕ್ಷಗಳ ಸದಸ್ಯರು, 'ಮೀಸಲು ಮಿತಿಯನ್ನು ಶೇ.50ಕ್ಕಿಂತ ಹೆಚ್ಚಿಸಲು ಕ್ರಮ ಜರುಗಿಸಬೇಕು' ಎಂದು ಒತ್ತಾಯಿಸಿದರು. ಇದಕ್ಕೆ ಪ್ರತ್ಯೇಕ ಚರ್ಚೆಯ ಅಗತ್ಯವಿದೆ. ಈ ಹಂತದಲ್ಲಿ ಇದು ಸಾಧ್ಯವಾಗದು ಎಂದು ಸರ್ಕಾರ ನಿರಾಕರಿಸಿತು. ಬಳಿಕ ವಿಪಕ್ಷಗಳು ತಂದ ತಿದ್ದುಪಡಿ ಸೂಚನೆಗಳು ತಿರಸ್ಕೃತಗೊಂಡವು.

1. ಪೆಗಾಸಸ್ ಪ್ರತಿಭಟನೆ ಬಿಟ್ಟು ಮಸೂದೆಗೆ ಪ್ರತಿಪಕ್ಷಗಳ ಬೆಂಬಲ.
2. ವಿಧೇಯಕದ ಪರ 187 ಮತ, ವಿರುದ್ಧ ಒಂದೂ ಮತ ಇಲ್ಲ.
3. ತಿದ್ದುಪಡಿ ತರಬೇಕೆಂಬ ವಿಪಕ್ಷಗಳ ಆಗ್ರಹ ತಿರಸ್ಕಾರ.
4. ಮೀಸಲು ಮಿತಿಯನ್ನು ಶೇ.50ಕ್ಕಿಂತ ಹೆಚ್ಚಿಸಲು ಪ್ರತಿಪಕ್ಷಗಳ ಒತ್ತಾಯ
5. ಈ ಹಂತದಲ್ಲಿ ಇದು ಸಾಧ್ಯವಾಗದು ಎಂದು ಹೇಳಿದ ಕೇಂದ್ರ ಸರ್ಕಾರ.

ಆಧಾರ: ಕನ್ನಡ ಪ್ರಭ, ದಿನಾಂಕ:12.08.2021.

## 61. ನಾಸೀರ್ ಹುಸೇನ್ ರಾಜ್ಯಸಭೆ ಸಚೇತಕ

ಕರ್ನಾಟಕದಿಂದ ರಾಜ್ಯಸಭೆಗೆ ಆಯ್ಕೆಯಾಗಿರುವ ನಾಸೀರ್ ಹುಸೇನ್ ಅವರನ್ನು ರಾಜ್ಯಸಭೆಯಲ್ಲಿ ಕಾಂಗ್ರೆಸ್‌ನ ಸಚೇತಕರನ್ನಾಗಿ ನೇಮಿಸಲಾಗಿದೆ. ರಾಜ್ಯಸಭೆಯಲ್ಲಿ ಪ್ರತಿಪಕ್ಷ ನಾಯಕರಾಗಿ ಕರ್ನಾಟಕದವರೇ ಆದ ಮಲ್ಲಿಕಾರ್ಜುನ ಖರ್ಗೆ ಅವರಿದ್ದು, ಇದೀಗ ನಾಸೀರ ಹುಸೇನ್ ಅವರಿಗೆ ಸಚೇತಕ ಹುದ್ದೆ ಒಲಿದಿದೆ. ಪಕ್ಷದ ಅಧ್ಯಕ್ಷೆ ಸೋನಿಯಾಗಾಂಧಿ ಅವರು ಈ ಕುರಿತು ಆದೇಶ ಹೊರಡಿಸಿದ್ದಾರೆ.

ಆಧಾರ: ಉದಯವಾಣಿ, ದಿನಾಂಕ:12.08.2021.

## 62. LS worked just 21 of 96 hrs this session, RS lost 70hrs

Hit by the government-opposition logjam over issues like the Pegasus spyware controversy, the monsoon session witnessed the lowest productivity of the 17th LokSabha so far, as it could function only 21 hours and 14 minutes against the stipulated time fo 96 hours. The Lok Sahba was adjourned sine die two days ahead of schedule on Wednesday.

Together the first to fifth sessions lost approximately 40 hours, far less than the 74 hours and 46 minutes lost in the sixth session.

The Rajya Sabha was equally affected due to opposition protests as the 17 sittings of the House witnessed barely 28% productivity, in comparison to the 95% average of the previours five sessions. In this session, of the available 97 hours and 30 minutes, the Upper House could run for 28 hours-a loss of almost 70 hours.

The Lok Sabha lost 74 hours and 46 minutes to interruptions and the productivity of the House during the session was barely 22% with protests by opposition MPs over the Pegasus controversy, farm laws and other issues leading to daily disruptions.

The previous sessions of the current LokSabha have had record productivity, exceeding 100% as House sittings took place till late hours to compensate for disruptions. The opposition has blamed the government for refusing to accept a discussion on the Pegasus allegations and the Centre said issues like Covid and other matters could not be discussed in the Lok Sabha due to the blocked of proceedings.

At a press conference, Lok Sabha Speaker Om Birla said 13 bills were introduced and 20, including those from the Rajya Sabha, were passed during the session. Some of the important bills which were passed are the Constitution (one Hundred and Twenty-Seventh Amendment) Bill, 2021, the Insolvency and Bankruptcy Code (Amendment) Bill, 2021 and appropriation Bills relating to Supplementary Grants for 2017-18 and 2020-2021.

Birla informed that the sixth session of the current Lok Sabha had 17 sittings. Due to frequent adjournments and disruptions with opposition's continuing protests the proceedings remained fragmented.

Courtesy: Times of India, Dated: 12.08.2021

# ಭಾಗ–3

# ಕೇಂದ್ರ ಸರ್ಕಾರದ ಸುದ್ದಿಗಳು

## 1. ವೈದ್ಯರು ದೇವರ ಸಮಾನ

ಒಂದೂವರೆ ವರ್ಷಗಳಿಂದ ಸೋಂಕಿನ ಪರಿಸ್ಥಿತಿಯಲ್ಲಿ ವೈದ್ಯರು ನಿಸ್ಪೃಹೆಯಿಂದ ಕಾರ್ಯನಿರ್ವಹಿಸುತ್ತಿದ್ದಾರೆ. ಅವರು ದೇವರಂತೆ ಎಂದು ಪ್ರಧಾನಿ ನರೇಂದ್ರ ಮೋದಿ ಬಣ್ಣಿಸಿದ್ದಾರೆ. ರಾಷ್ಟ್ರೀಯ ವೈದ್ಯರ ದಿನ ಪ್ರಯುಕ್ತ ಇಂಡಿಯನ್ ಮೆಡಿಕಲ್ ಅಸೋಸಿಯೇಷನ್ ಆಯೋಜಿಸಿದ್ದ ಕಾರ್ಯಕ್ರಮದಲ್ಲಿ ಮಾತನಾಡಿದ ಪ್ರಧಾನಿ ಮೋದಿ, ವೈದ್ಯರ ಸೇವೆಗೆ ದೇಶವಾಸಿಗಳ ಪರವಾಗಿ ಕೃತಜ್ಞತೆ ಸಲ್ಲಿಸುವುದಾಗಿ ಹೇಳಿದ್ದಾರೆ. ಕೊರೋನಾ ಅವಧಿಯಲ್ಲಿ ಅವರ ನಿಸ್ವಾರ್ಥ ಸೇವೆ ಲಕ್ಷಾಂತರ ಜನರ ಜೀವ ಉಳಿಸುವಲ್ಲಿ ನೆರವಾಗಿದೆ. ನಮ್ಮ ವೈದ್ಯರು ಸೋಂಕಿನ ಪರಿಸ್ಥಿತಿ ತಡೆಯುವ ನಿಟ್ಟಿನಲ್ಲಿ ಹಲವು ನಿಯಮಗಳನ್ನು ಜಾರಿಗೊಳಿಸಿ, ಅನುಷ್ಠಾನಗೊಳಿಸಲು ನೆರವಾಗುತ್ತಿದ್ದಾರೆ. ಈ ಹಿಂದೆ ವೈದ್ಯಕೀಯ ಕ್ಷೇತ್ರದ ಮೂಲ ಸೌಕರ್ಯಗಳತ್ತ ನಿರ್ಲಕ್ಷ್ಯ ವಹಿಸಲಾಗಿತ್ತು. ಈಗ ಆ ಕೊರತೆ ಪರಿಹರಿಸುವ ನಿಟ್ಟಿನಲ್ಲಿ ಕ್ರಮ ಕೈಗೊಳ್ಳಲಾಗಿದೆ ಎಂದಿದ್ದಾರೆ.

**ಹಿಂಸೆ ವಿರುದ್ಧ ಕ್ರಮ:** ವೈದ್ಯರ ಮೇಲೆ ಹಲ್ಲೆ, ಹಿಂಸಾ ಪ್ರವೃತ್ತಿ ಸಲ್ಲದು ಎಂದು ಹೇಳಿದ ಪ್ರಧಾನಿ, ವೈದ್ಯರು ಮತ್ತು ವೈದ್ಯಕೀಯ ಸಿಬ್ಬಂದಿಗಳ ರಕ್ಷಣೆಗೆ ಸರ್ಕಾರ ಮುತುವರ್ಜಿ ವಹಿಸುತ್ತಿದೆ. ಹಾಲಿ ಪರಿಸ್ಥಿತಿಯಲ್ಲಿ ವೈದ್ಯರು ದೇವರ ಸ್ಥಾನದಲ್ಲಿದ್ದಾರೆ ಮತ್ತು ಅವರು ನಮ್ಮ ಜೀವನ ಕ್ರಮವನ್ನೇ ಬದಲಿಸಿದ್ದಾರೆ ಎಂದು ಮೆಚ್ಚುಗೆ ವ್ಯಕ್ತಪಡಿಸಿದ್ದಾರೆ.

**2 ಲಕ್ಷ ಕೋಟಿ ಮೀಸಲು:** ಆರೋಗ್ಯ ಕ್ಷೇತ್ರಕ್ಕೆ ಸಂಬಂಧಿಸಿ ಮೀಸಲಾಗಿ ಇರಿಸಿರುವ ಮೊತ್ತ ದ್ವಿಗುಣಗೊಳಿಸಲಾಗಿದ್ದು ರೂ.2 ಲಕ್ಷ ಕೋಟಿಗಳಿಗೆ ಏರಿಕೆ ಮಾಡಲಾಗಿದೆ. ಹೆಚ್ಚಿನ ಸಂಖ್ಯೆಯ ವೈದ್ಯರು ಮತ್ತು ವೈದ್ಯಕೀಯ ಸಿಬ್ಬಂದಿ ಯೋಗ ಮತ್ತು ಆರೋಗ್ಯ ಕಾಪಾಡಿಕೊಳ್ಳುವ ಸೂತ್ರಗಳನ್ನು ಅಳವಡಿಸಿಕೊಳ್ಳುತ್ತಿದ್ದಾರೆ. ವೈದ್ಯರು ಮತ್ತು ಆರೋಗ್ಯ ಕ್ಷೇತ್ರದ ಕಾರ್ಯಕರ್ತರನ್ನು ನಾವೆಲ್ಲರೂ ಸದಾ ಸ್ಮರಿಸಬೇಕಾಗಿದೆ ಎಂದರು.

**ಮೆಚ್ಚುಗೆಯ ಮಹಾಪೂರ:** ಅಮಿತ್ ಶಾ, ಡಾ.ಹರ್ಷವರ್ಧನ್ ಸೇರಿದಂತೆ ಕೇಂದ್ರ ಸಚಿವರು, ಅವರಿಂದ ಕೇಜ್ರಿವಾಲ್, ಉದ್ಧವ್ ಠಾಕ್ರೆ, ಶಿವರಾಜ್ ಸಿಂಗ್ ಚೌಹಾಣ್, ಮಮತಾ ಬ್ಯಾನರ್ಜಿ, ಸೇರಿದಂತೆ ವಿವಿಧ ರಾಜ್ಯಗಳ ಮುಖ್ಯಮಂತ್ರಿಗಳು ರಾಜಕೀಯ ಪಕ್ಷಗಳ ನಾಯಕರು ಕೂಡ ವೈದ್ಯರ ಸೇವೆಯನ್ನು ಸ್ಮರಿಸಿ, ಮೆಚ್ಚುಗೆ ವ್ಯಕ್ತಪಡಿಸಿದ್ದಾರೆ. ರಾಜಸ್ಥಾನ ಸರ್ಕಾರವು ಜೈಪುರದ ಸವಾಯಿ ಮನ್‌ಸಿಂಗ್ ಆಸ್ಪತ್ರೆಯಲ್ಲಿ ವೈದ್ಯರ ಸ್ಮಾರಕ ನಿರ್ಮಿಸುವುದಾಗಿ ಘೋಷಿಸಿದೆ.

**ಸಿಎಗಳಿಗೆ ಪ್ರಧಾನಿ ಮೋದಿ ಶುಭಾಶಯ:** ಚಾರ್ಟೆಡ್ ಅಕೌಂಟ್ಸ್ (ಸಿಎ)ಗಳ ದಿನವೂ ಆಗಿದ್ದು, ಎಲ್ಲ ಸಿಎಗಳಿಗೂ ಟ್ವೀಟ್ ಮೂಲಕ ಪ್ರಧಾನಿ ನರೇಂದ್ರ ಮೋದಿ ಶುಭಾಶಯ ತಿಳಿಸಿದ್ದಾರೆ. ಭಾರತದ ಪ್ರಗತಿಯಲ್ಲಿ ಅಕೌಂಟೆಂಟ್ಸ್ ಸಮುದಾಯವು ಅತ್ಯುನ್ನತ ಪಾತ್ರ ವಹಿಸುತ್ತಿದೆ. ಭಾರತದ ಸಂಸ್ಥೆಗಳು ಜಗತ್ತಿನಲ್ಲೇ ಅತ್ಯುತ್ತಮ ಎಂಬ ಹಿರಿಮೆ ಪಡೆಯುವಂತೆ ಸಿಎಗಳು ಹೆಚ್ಚಿನ ಕಾರ್ಯಕ್ಷಮತೆಯನ್ನು ತೋರಿಸುಂವತಾಗಬೇಕು ಎಂದು ಪ್ರಧಾನಿ ಮೋದಿ ಕರೆ ನೀಡಿದ್ದಾರೆ.

**ವೈದ್ಯರಿಗೆ ಆಭಾರಿ ರಾಷ್ಟ್ರಪತಿ ಕೋವಿಂದ್:** ಸೋಂಕಿನ ಸಂಕಷ್ಟಮಯ ಸನ್ನಿವೇಶದಲ್ಲಿ ವೈದ್ಯರು ಅಗತ್ಯಕ್ಕಿಂತ ಹೆಚ್ಚೇ ದುಡಿಯುತ್ತಿದ್ದಾರೆ, ರಾಷ್ಟ್ರೀಯ ವೈದ್ಯರ ದಿನ ಎಂದು ಆಚರಿಸುವುದು ನಿಜಕ್ಕೂ ಅವರಿಗೆ ಸಲ್ಲಿಸುವ ಗೌರವ ಎಂದು ರಾಷ್ಟ್ರಪತಿ ರಾಮನಾಥ್ ಕೋವಿಂದ್ ಹೇಳಿದ್ದಾರೆ. ಈ ಬಗ್ಗೆ ಟ್ವೀಟ್ ಮಾಡಿರುವ ಅವರು ಸದ್ಯದ ಪರಿಸ್ಥಿತಿಯಲ್ಲಿ ಶ್ರಮ ಮೀರಿ ವೈದ್ಯರು ಕೆಲಸ ಮಾಡುತ್ತಿದ್ದಾರೆ. ಕೊರೋನಾ

ಸಂಕಷ್ಟ ಕಾಲದಲ್ಲಂತೂ ಆರೋಗ್ಯ ರಕ್ಷಣೆಯಲ್ಲಿ ವೈದ್ಯರು ನಿರ್ವಹಿಸುತ್ತಿರುವ ಕೆಲಸ ಶ್ಲಾಘನೀಯ. ಅವರ ನಿಸ್ವಾರ್ಥ ಸೇವೆಗೆ ಮನಃಪೂರ್ವಕ ಗೌರವಗಳನ್ನು ಅರ್ಪಿಸುತ್ತಿದ್ದೇನೆ ಎಂದು ಬರೆದುಕೊಂಡಿದ್ದಾರೆ.

ಆಧಾರ:ಉದಯವಾಣಿ, ದಿನಾಂಕ:02.07.2021

## 2. ಅಧಿವೇಶನಕ್ಕೆ ಹೊಸ ನಿರ್ಬಂಧ

ದೇಶದೆಲ್ಲೆಡೆ ಕೊರೋನಾ ಅನ್‌ಲಾಕ್ ಪ್ರಕ್ರಿಯೆ ಚಾಲನೆಗೊಂಡಿರುವುದರ ನಡುವೆಯೇ ಜುಲೈ 19 ರಿಂದ ಆಗಸ್ಟ್ 13ರವರೆಗೆ ಚಳಿಗಾಲದ ಅಧಿವೇಶನ ನಡೆಯಲಿದೆ. ಸಂಸತ್ ಭವನದಲ್ಲಿ ಕಳೆದ ಅಧಿವೇಶನದ ವೇಳೆ, ರಾಜ್ಯಸಭೆ ಹಾಗೂ ಲೋಕಸಭೆಗಳ ಕಲಾಪವನ್ನು ಬೇರೆ ಬೇರೆ ಸಮಯದಲ್ಲಿ ನಡೆಸಲಾಗಿತ್ತು. ರಾಜ್ಯಸಭೆಯ ಕಲಾಪಗಳು ಬೆಳಿಗ್ಗೆ 9 ರಿಂದ ಮಧ್ಯಾಹ್ನ 2ರ ವರೆಗೆ ನಡೆದರೆ, ಲೋಕಸಭೆಯ ಕಲಾಪ ಸಂಜೆ 4 ರಿಂದ 9 ರವರೆಗೆ ನಡೆದಿದ್ದವು. ಈ ಬಾರಿ ಒಟ್ಟಿಗೆ ಎರಡೂ ಕಲಾಪಗಳು ನಡೆಯಲಿವೆ. ಶೂನ್ಯ ವೇಳೆ, ಪ್ರಶ್ನೋತ್ತರ ಅವಧಿ ಇರಲಿದೆ.

**ಪ್ರಮಾಣ ಪತ್ರ ಕಡ್ಡಾಯ:** ಈಗಾಗಲೇ ಶೇ.90ರಷ್ಟು ಸಂಸದರು ಲಸಿಕೆ ಪಡೆದಿದ್ದಾರೆ. ಸಂಸತ್ತಿಗೆ ಪ್ರವೇಶಿಸುವ ಮುನ್ನ ಅವರಿಗೆ ಲಸಿಕೆ ಪ್ರಮಾಣ ಪತ್ರ ಹಾಜರುಪಡಿಸುವುದು ಕಡ್ಡಾಯವೇ ಎಂಬುದರ ಬಗ್ಗೆ ಕೇಂದ್ರ ಇನ್ನೂ ಸ್ಪಷ್ಟ ನಿರ್ಧಾರ ಕೈಗೊಂಡಿಲ್ಲ ಎಂದು ಹೇಳಲಾಗಿದೆ. ಸಂಸತ್ ಭವನ ಪ್ರವೇಶಿಸುವವರಿಗೆ ಆರ್‌ಟಿ-ಪಿಸಿಆರ್ ಪರೀಕ್ಷೆಯನ್ನು ಕಡ್ಡಾಯಗೊಳಿಸುವ ಸಾಧ್ಯತೆ ದಟ್ಟವಾಗಿದೆ.

**ಆಯ್ದವರಿಗೆ ಪ್ರವೇಶ:** ಸಂಸತ್ ಭವನಕ್ಕೆ ಕೇವಲ ಸೀಮಿತ ಸಿಬ್ಬಂದಿ ಹಾಗೂ ಸಚಿವರಿಗೆ ಮಾತ್ರ ಪ್ರವೇಶ ಕಲ್ಪಿಸುವ ಸಾಧ್ಯತೆಗಳು ದಟ್ಟವಾಗಿದೆ. ಸಾರ್ವಜನಿಕರಿಗೆ ಹಾಗೂ ಮಾಧ್ಯಮದವರಿಗೆ ಅಧಿವೇಶನ ನಡೆವಲ್ಲಿಗೆ ಪ್ರವೇಶವಿಲ್ಲ. ಸಂಸತ್ತಿನ ಸೆಂಟ್ರಲ್ ಹಾಲ್‌ಗೆ ಕೇವಲ ಹಾಲಿ ಸಂಸದರಿಗಷ್ಟೇ ಪ್ರವೇಶವಿರುತ್ತದೆ.

ಆಧಾರ:ಉದಯವಾಣಿ, ದಿನಾಂಕ:03.07.2021

## 3. ಕೇಂದ್ರದಿಂದ ಹೊಸ ಸಹಕಾರ ಸಚಿವಾಲಯ

ಕೇಂದ್ರ ಸರ್ಕಾರವು ಸಹಕಾರ ಸಚಿವಾಲಯ ಎಂಬ ನೂತನ ಸಚಿವಾಲಯವೊಂದನ್ನು ರಚನೆ ಮಾಡಿದೆ. ದೇಶದಲ್ಲಿ ಸಹಕಾರಿ ಆಂದೋಲನಕ್ಕೆ ಹೆಚ್ಚಿನ ಬಲ ತುಂಬುವ ನಿಟ್ಟಿನಿಂದ ಹೊಸ ಸಚಿವಾಲಯ ರಚನೆ ಮಾಡಲಾಗಿದೆ. ಸಚಿವರ ವಿಸ್ತರಣೆಯ ಮುನ್ನಾದಿನವೇ ಈ ಕುರಿತು ಮಾಹಿತಿ ಹೊರಬಿದ್ದಿರುವುದು ಕುತೂಹಲ ಮೂಡಿಸಿದೆ.

ಸಹಕಾರ ಸಮೃದ್ಧಿ ಎಂಬ ಧ್ಯೇಯವನ್ನು ಸಾಕಾರಗೊಳಿಸುವ ನಿಟ್ಟಿನಿಂದ ನೂತನ ಸಚಿವಾಲಯವನ್ನು ರಚನೆ ಮಾಡುವ ತೀರ್ಮಾನವನ್ನು ಸರ್ಕಾರ ಕೈಗೊಂಡಿದೆ. ನೂತನ ಸಚಿವಾಲಯ ಸಹಕಾರ ಕ್ಷೇತ್ರಕ್ಕೆ ಪ್ರತ್ಯೇಕ ಆಡಳಿತ, ಕಾನೂನು ಮತ್ತು ನೀತಿ ಚೌಕಟ್ಟನ್ನು ಒದಗಿಸಲಿದೆ ಎಂದು ಮೂಲಗಳು ತಿಳಿಸಿವೆ.

ದೇಶದಲ್ಲಿ ಸಹಕಾರ ಚಟುವಟಿಕೆ ಸ್ನೇಹಿ ವಾತಾವರಣ ನಿರ್ಮಿಸುವುದು ಬಹುರಾಜ್ಯ ಸಹಕಾರ ಚಟುವಟಿಕೆ ಆಧಾರಿತ ಅಭಿವೃದ್ಧಿ ಕಾರ್ಯಗಳನ್ನು ಉತ್ತೇಜಿಸಲು ಸಚಿವಾಲಯ ನೆರವಾಗಲಿದೆ. ಸಚಿವ ಸಂಪುಟ ಪುನಾರಚನೆಯ ವೇಳೆ ನೂತನ ಸಹಕಾರ ಸಚಿವರು ಪ್ರಮಾಣ ವಚನ ಸ್ವೀಕರಿಸುವ ಸಾಧ್ಯತೆ ಇದೆ. ಪ್ರಸಕ್ತ ಸಾಲಿನ ಕೇಂದ್ರ ಹಣಕಾಸು ಬಜೆಟ್‌ನಲ್ಲಿ ಹಣಕಾಸು ಸಚಿವೆ ಅವರು ಪ್ರತ್ಯೇಕ ಸಹಕಾರ ಸಚಿವಾಲಯ ರಚನೆಯ ಘೋಷಣೆಯನ್ನು ಮಾಡಿದ್ದರು.

ಆಧಾರ:ಕನ್ನಡ ಪ್ರಭ, ದಿನಾಂಕ:07.07.2021

## 4. 7 more women in new team, total 11

Seven more women found a place in Narendra Modi's Council of Ministers, taking their number to 11 in the Ministerial reshuffle which also saw the dropping of junior minister.

At the beginning of Modi's second term, there were six women ministers but Harsimart kaur resigned after Akali Dal snapped ties with the BJP-led NDA. The exclusion of Sushma Swaraj, who passed away later, and Maneka Gandhi had then raised eyebrows.

Minister of State Debasree Chaudhuri, who represents West Bengal's Raigani, was dropped this time while other women ministers Nirmala Sitharaman, Smriti Irani, Renuka Singh and Sadhvi Niranjan Jyothi retained their space in Modi 2.0.

Apna Dal's Anupriya Patel returned to Modi's team after a gap of two years, after she failed to find a place in 2019 following her insistence that she should get a Cabinet berth.

Others who found a place in the team and their first ministerial assignment at the Centre are Shobha Karandlaje, Darshana Jardosh, Meenakshi Lekhi, Annapurna Devi, Pratima Bhaumik and Dr.Bharati Pawar.

At present, Parliament has a record number of 78 women MPs, the BJP having 41. Over the years, the number of women ministers have been increasing but under Modi, there were more women Cabinet ministers and Sitharaman is a part of the elite Cabinet Committee on Security.

Karandlaje, a close confident of Karnataka Chief Minister enters the Council of Ministers as a fiery politician who defends the party on all fora.

Lekhi, who came out in staunch support of Modi for being BJP's Prime Ministerial candidate before the 2014 elections, was considered following her performance inside and outside Parliament, especially her fierce fight to counter Congress allegations on the Rafale deal.

Another interesting inductee is Annapurna Singh, former RJD Jarkhand president who joined BJP ahead of the 2019 polls. She represents Kodarma and has defeated former Chief Minister Babulal Marandi. Jardosh, who has been in politics since 1988, is a three term MP from Surat.

Courtesy: Deccan Herald, Date: 08.07.2021

## 5. Department of Public enterprises merged with Finance Ministry

Just ahead of the cabinet reshuffle, the government has merged the Department of Public Enterprises (DPE) with the Finance Ministry to take better control of the companies which are to be privatised, better asset monetisation of the Central Public Sector Enterprises (CPSEs) and to cut on procedural delays in the divestment process.

According to the gazette notification issued by the government, the department will work for coordination on matters of general policy affecting all public sector enterprises (PSEs) evaluation and monitoring the performance of PSEs, including review of capital projects, expenditure, improving performance and restructuring or closure of PSEs among others.

Post this arrangement, Finance Ministry will now have six departments while DPEs hereto parent ministry. Presently, the Finance Ministry has five departments- Economic Affairs, Revenue, Expenditure, Investment and Public Asset Management and Financial Services.

After the restructuring, the Ministry of Heavy Industries and Public Enterprises will now be called the Ministry of Heavy Industries and will continue to be the administrative Ministry related primarily to the capital goods sector. As many as 44 CPSEs including BHEL, Cement Corporation, Sectors India, HMT and various other subsidiaries would be under the Ministry of Heavy Industries.

The gazette notification issued said these rules may be called the Government of India (Allocation of Business) Three Hundred and Sixty First Amendment Rules, 2021. They shall come into force at once, the notification said.

This is not the first time it is happening. The department started in 1965 as the Bureau of Public Enterprises (BPE) under Ministry of Finance and was later shifted under the Ministry of heavy the industries and public enterprises. Earlier even the Dis-investment Ministry created under the Atal Bihari Vajpayee Government was merged with the Finance Ministry.

Finance Minister in her Budget 2021-22 had set a target of Rs.1.75 lakh crore from stake sale in public sector companies and financial institutions during 2021-22.

Courtesy: Indian Express, Dated: 08.07.2021

## 6. ನೂತನ ಸಂಪುಟದ ಪ್ರಮುಖ ಸಚಿವರು

| | | |
|---|---|---|
| 1. | ನರೇಂದ್ರ ಮೋದಿ | ಸಿಬ್ಬಂದಿ, ಸಾರ್ವಜನಿಕ ಕುಂದುಕೊರತೆ, ಪಿಂಚಣಿ, ಅಣು ಇಂಧನ, ಬಾಹ್ಯಾಕಾಶ |
| 2. | ರಾಜನಾಥ್ ಸಿಂಗ್ | ರಕ್ಷಣೆ |
| 3. | ಅಮಿತ್ ಶಾ | ಗೃಹ, ಸಹಕಾರ |
| 4. | ನಿರ್ಮಲಾ ಸೀತಾರಾಮನ್ | ಹಣಕಾಸು, ಕಾರ್ಪೊರೇಟ್ |
| 5. | ನರೇಂದ್ರ ಸಿಂಗ್ ತೋಮರ್ | ಕೃಷಿ |
| 6. | ಜೈಶಂಕರ್ | ವಿದೇಶಾಂಗ |

| 7. | ಅರ್ಜುನ್ ಮುಂಡಾ | ಬುಡಕಟ್ಟು ವ್ಯವಹಾರ |
|---|---|---|
| 8. | ಸ್ಮೃತಿ ಇರಾನಿ | ಮಹಿಳಾ ಮತ್ತು ಮಕ್ಕಳ ಕಲ್ಯಾಣ ಖಾತೆ |
| 9. | ಪಿಯೂಷ್ ಗೋಯಲ್ | ವಾಣಿಜ್ಯ ಕೈಗಾರಿಕೆ, ಗ್ರಾಹಕ ವ್ಯವಹಾರ ಸಾರ್ವಜನಿಕ ವಿತರಣೆ, ಜವಳಿ |
| 10. | ಧರ್ಮೇಂದ್ರ ಪ್ರಧಾನ್ | ಶಿಕ್ಷಣ, ಕೌಶಲ್ಯಾಭಿವೃದ್ಧಿ |
| 11. | ಪ್ರಹ್ಲಾದ್ ಜೋಷಿ | ಸಂಸದೀಯ ವ್ಯವಹಾರ, ಕಲ್ಲಿದ್ದಲು |
| 12. | ನಾರಾಯಣ್ ರಾಣೆ | ಸಣ್ಣ ಮತ್ತು ಮಧ್ಯಮ ಕೈಗಾರಿಕೆ |
| 13. | ಸರ್ಬಾನಂದ ಸೋನೊವಾಲ್ | ಹಡಗು, ಜಲಸಾರಿಗೆ ಖಾತೆ |
| 14. | ಮುಕ್ತಾರ್ ಅಬ್ಬಾಸ್ ನಖ್ವಿ | ಅಲ್ಪಸಂಖ್ಯಾತ |
| 15. | ವಿರೇಂದ್ರ ಕುಮಾರ್ | ಸಾಮಾಜಿಕ ನ್ಯಾಯ, ಸಬಲೀಕರಣ |
| 16. | ಗಿರಿರಾಜ್ ಸಿಂಗ್ | ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ |
| 17. | ಜ್ಯೋತಿರಾದಿತ್ಯ ಸಿಂಧಿಯಾ | ವಿಮಾನಯಾನ ಖಾತೆ |
| 18. | ರಾಮಚಂದ್ರ ಪ್ರಸಾದ್ | ಉಕ್ಕು |
| 19. | ಅಶ್ವಿನಿ ವೈಷ್ಣವ್ | ರೈಲ್ವೆ, ಸಂಪರ್ಕ, ಐಟಿ |
| 20. | ಪಶುಪತಿ ಪರಸ್ | ಆಹಾರ ಸಂಸ್ಕರಣೆ |
| 21. | ಗಜೇಂದ್ರ ಸಿಂಗ್ ಶೇಖಾವತ್ | ಜಲಶಕ್ತಿ |
| 22. | ಕಿರಣ್ ರಿಜಿಜು | ಕಾನೂನು ಮತ್ತು ನ್ಯಾಯ |
| 23. | ರಾಜಕುಮಾರ್ ಸಿಂಗ್ | ಇಂಧನ |
| 24. | ಹರ್‌ದೀಪ್‌ಸಿಂಗ್ ಪುರಿ | ಪೆಟ್ರೋಲಿಯಂ |
| 25. | ಮನ್‌ಸುಖ್ ಮಾಂಡವೀಯ | ಆರೋಗ್ಯ, ಕುಟುಂಬ ಕಲ್ಯಾಣ, ರಾಸಾಯನಿಕ ಮತ್ತು ರಸಗೊಬ್ಬರ |
| 26. | ಭೋಪೇಂದ್ರ ಯಾದವ್ | ಪರಿಸರ, ಅರಣ್ಯ, ಹವಾಮಾನ ಬದಲಾವಣೆ, ಕಾರ್ಮಿಕ |
| 27. | ಮಹೇಂದ್ರನಾಥ್ ಪಾಂಡೆ | ಭಾರೀ ಕೈಗಾರಿಕೆ ಖಾತೆ |
| 28. | ಪುರುಷೋತ್ತಮ ರೂಪಾಲ | ಮೀನುಗಾರಿಕೆ, ಪಶುಸಂಗೋಪನೆ |
| 29. | ಕಿಶನ್ ರೆಡ್ಡಿ | ಸಂಸ್ಕೃತಿ, ಪ್ರವಾಸೋದ್ಯಮ, ಈಶಾನ್ಯ |

| | | |
|---|---|---|
| | | ರಾಜ್ಯಗಳ ಅಭಿವೃದ್ಧಿ |
| 30. | ಅನುರಾಗ್ ಠಾಕೂರ್ | ವಾರ್ತಾ ಮತ್ತು ಪ್ರಸಾರ, ಯುವಜನ ವ್ಯವಹಾರ, ಕ್ರೀಡೆ |
| 31. | ಶೋಭಾ ಕರಂದ್ಲಾಜೆ | ಕೃಷಿ |
| 32. | ಭಗವಂತಾ ಖೂಬಾ | ನವ ಇಂಧನ |
| 33. | ಎ.ನಾರಾಯಣಸ್ವಾಮಿ | ಸಾಮಾಜಿಕ ನ್ಯಾಯ |
| 34. | ರಾಜೀವ್ | ಐಟಿ |

ಆಧಾರ:ಕನ್ನಡ ಪ್ರಭ, ದಿನಾಂಕ:08.07.2021

## 7. ಕೇಂದ್ರ ಸಂಪುಟಕ್ಕೆ ಭರ್ಜರಿ ಸರ್ಜರಿ

ಪ್ರಧಾನಿ ನರೇಂದ್ರ ಮೋದಿ ಅವರು ಮೆಗಾ ಸಂಪುಟ ಪುನಾರಚನೆಯಲ್ಲಿ ರಾಜ್ಯಕ್ಕೆ ಜಾಕ್‌ಪಾಟ್ ಹೊಡೆದಿದೆ. ಸಂಸದರಾದ ಶೋಭಾ ಕರಂದ್ಲಾಜೆ, ಭಗವಂತ ಖೂಬಾ, ಎ. ನಾರಾಯಣಸ್ವಾಮಿ ಹಾಗೂ ರಾಜೀವ್ ಚಂದ್ರಶೇಖರ್ ಕೇಂದ್ರ ಸಂಪುಟದಲ್ಲಿ ಸ್ಥಾನ ಪಡೆದಿದ್ದು, ಪ್ರಧಾನಿ ಮೋದಿ ಅವರು ರಾಜ್ಯಕ್ಕೆ ನಾಲ್ಕು ಸಚಿವರ ಸ್ಥಾನಗಳ ಬಂಪರ್ ಕೊಡುಗೆ ಕೊಟ್ಟಿದ್ದಾರೆ. ಇದರೊಂದಿಗೆ ಕರ್ನಾಟಕದ ಸಚಿವರ ಸಂಖ್ಯೆ 6ಕ್ಕೇರಿದೆ.

2019ರ ಲೋಕಸಭೆ ಚುನಾವಣೆಯಲ್ಲಿ ಅಧಿಕಾರಕ್ಕೆ ಬಂದ ಬಳಿಕದ ಮೊದಲ ಸಂಪುಟ ವಿಸ್ತರಣೆ ಇದಾಗಿದೆ. ಕಳೆದೊಂದು ತಿಂಗಳಿಂದಲೂ ಸಂಪುಟ ಪುನಾರಚನೆಯ ಸುದ್ದಿಯು ಭಾರೀ ಕುತೂಹಲಕ್ಕೆ ಕಾರಣವಾಗಿತ್ತು. ಆ ಎಲ್ಲ ಕುತೂಹಲಗಳಿಗೂ ತೆರೆಬಿದ್ದಿದ್ದು, 36 ಹೊಸ ಸಚಿವರೂ ಸೇರಿದಂತೆ ಒಟ್ಟು 43 ಮಂದಿ ರಾಷ್ಟ್ರಪತಿ ಭವನದಲ್ಲಿ ನಡೆದ ಕಾರ್ಯಕ್ರಮದಲ್ಲಿ ಪ್ರಮಾಣ ವಚನ ಸ್ವೀಕರಿಸಿದ್ದಾರೆ.

ಪಕ್ಷದ ಹಿರಿಯ ನಾಯಕರೆನಿಸಿದ ಸಚಿವರಾದ ರವಿಶಂಕರ್ ಪ್ರಸಾದ್, ಪ್ರಕಾಶ್ ಜಾವಡೇಕರ್, ಡಾ:ಹರ್ಷವರ್ಧನ್‌ರನ್ನು ಸಂಪುಟದಿಂದ ಕೈಬಿಟ್ಟಿರುವುದು ಅಚ್ಚರಿ ಮೂಡಿಸಿದೆ. ಕರ್ನಾಟಕದಿಂದ ಸಚಿವರಾಗಿದ್ದ ಡಿ.ವಿ.ಸದಾನಂದಗೌಡ ಸಹ ರಾಜೀನಾಮೆ ನೀಡಿದ್ದು, ಅವರ ಸ್ಥಾನವನ್ನು ಚಿಕ್ಕಮಗಳೂರು– ಉಡುಪಿ ಸಂಸದೆ ಶೋಭಾ ಕರಂದ್ಲಾಜೆ ತುಂಬಿದ್ದಾರೆ.

ಮುಂದಿನ ವರ್ಷ ಹಲವು ರಾಜ್ಯಗಳಲ್ಲಿ ನಡೆಯಲಿರುವ ವಿಧಾನಸಭೆ ಚುನಾವಣೆ, ಮೈತ್ರಿ ಲೆಕ್ಕಾಚಾರ ಜಾತಿ–ಲಿಂಗ–ಪ್ರಾದೇಶಿಕ ಸಮತೋಲನವನ್ನು ಗಮನದಲ್ಲಿಟ್ಟುಕೊಂಡು ಯಶಸ್ವಿಯಾಗಿ ಸಂಪುಟ ಪುನಾರಚಿಸಲಾಗಿದೆ.

ಹಲವು ಬಣ್ಣಗಳು ಸೇರಿ ಕಾಮನಬಿಲ್ಲು ಪ್ರಕಟಗೊಳ್ಳುತ್ತದೆ. ಹೊಸ ಮುಖಗಳಿಗೆ ಅವಕಾಶ, ಆಡಳಿತಾತ್ಮಕ ಅನುಭವ ಹೊಂದಿರುವವರಿಗೂ ಆದ್ಯತೆ ಸಿಗುವ ಮೂಲಕ ನವ ಸಂಪುಟ ಕಾಮನಬಿಲ್ಲಿನಂತೆ ಸುಂದರಗೊಂಡಿದೆ. ಸಂಪುಟ ಸೇರಿದವರಲ್ಲಿ ಪ್ರಮುಖರೆಂದರೆ ಮಧ್ಯಪ್ರದೇಶದ ಬಿಜೆಪಿ ನಾಯಕ ಜ್ಯೋತಿರಾದಿತ್ಯ ಸಿಂಧಿಯಾ. ಇನ್ನು ಕೊಂಕಣ ಕರಾವಳಿಯ ಪ್ರಭಾವಿ ವ್ಯಕ್ತಿಯಾದ ನಾರಾಯಣ ರಾಣೆ ಅವರು ಕೇಂದ್ರ ಸಂಪುಟಕ್ಕೆ ಸೇರ್ಪಡೆಯಾಗಿದ್ದಾರೆ. ಇತ್ತೀಚೆಗೆ ನಡೆದ ಅಸ್ಸಾಂ ವಿಧಾನಸಭೆ ಚುನಾವಣೆಯಲ್ಲಿ ಸಿಎಂ ಸ್ಥಾನ ಬಿಟ್ಟುಕೊಡಲು ಒಪ್ಪಿ ಪಕ್ಷನಿಷ್ಠೆ ಪ್ರದರ್ಶಿಸಿರುವ ಸರ್ಬಾನಂದ ಸೊನೊವಾಲ್‌ರನ್ನು ನೂತನ ಸಂಪುಟದ ಪ್ರಮಾಣ ಸ್ವೀಕಾರದ ಬೆನ್ನಲ್ಲೇ ಖಾತೆಗಳನ್ನು ಹಂಚಿಕೆ ಮಾಡಲಾಗಿದೆ. ಹೊಸದಾಗಿ ಸೃಷ್ಟಿಸಲಾದ ಸಹಕಾರ ಸಚಿವಾಲಯದ ಉಸ್ತುವಾರಿಯನ್ನು ಕೇಂದ್ರ ಗೃಹ

ಸಚಿವ ಅಮಿತ್ ಶಾಗೆ ವಹಿಸಲಾಗಿದೆ. ಜೊತೆಗೆ ಸಂಸ್ಕೃತಿ ಮತ್ತು ಪ್ರವಾಸೋದ್ಯಮ, ಈಶಾನ್ಯ ಅಭಿವೃದ್ಧಿ ಇಲಾಖೆಯನ್ನೂ ಅವರೇ ನಿರ್ವಹಿಸಲಿದ್ದಾರೆ, ಈವರೆಗೆ ಪ್ರತ್ಯೇಕವಾಗಿದ್ದ ಆರೋಗ್ಯ ಮತ್ತು ರಾಸಾಯನಿಕ–ರಸಗೊಬ್ಬರ ಇಲಾಖೆಗಳನ್ನು ವಿಲೀನಗೊಳಿಸಿ ಇವರೆಡಕ್ಕೆ ಮನಸುಖ ಮಾಂಡವಿಯ ಅವರನ್ನು ಸಚಿವರನ್ನಾಗಿಸಲಾಗಿದೆ.

ಆಧಾರ: ಉದಯವಾಣಿ, ದಿನಾಂಕ 08.07.2021

## 8. ಕೊರೋನಾ ನಿರ್ವಹಣೆಗೆ ರೂ. 23 ಸಾವಿರ ಕೋಟಿ ನಿಧಿ

ಕೇಂದ್ರ ಸಂಪುಟ ಪುನಾರಚಿಸಿದ ಬೆನ್ನಲ್ಲೇ ಕೊರೋನಾ ನಿಯಂತ್ರಣಕ್ಕೆ ರೂ. 23,123 ಕೋಟಿ ತುರ್ತು ಪ್ಯಾಕೇಜ್ ಪ್ರಕಟಿಸಿರುವ ಸರ್ಕಾರ, ಕೃಷಿ ಕ್ಷೇತ್ರಕ್ಕೆ ಮೋದಿ ಸರ್ಕಾರ ಭರ್ಜರಿ ಕೊಡುಗೆ ಪ್ರಕಟಿಸಿದೆ. ಕೃಷಿ ಉತ್ಪನ್ನ ಮಾರುಕಟ್ಟೆಗಳ ಮೂಲಕ ರೈತರ ಆಮೂಲಾಗ್ರ ಅಭಿವೃದ್ಧಿಗಾಗಿ ಒಂದು ಲಕ್ಷ ಕೋಟಿ ಕೃಷಿ ಬಂಡವಾಳ ನಿಧಿಯನ್ನು ಪ್ರಕಟಿಸಲಾಗಿದೆ.

ದೆಹಲಿಯಲ್ಲಿ ಪ್ರಧಾನಿ ಜೊತೆ ಕೇಂದ್ರ ಮಂತ್ರಿ ಮಂಡಲದ ಮೊದಲ ಸಭೆ ನಂತರ ಸುದ್ದಿಗೋಷ್ಠಿ ನಡೆಸಿದ ಆರೋಗ್ಯ ಸಚಿವ ಲಕ್ಷ್ಮಣ ಮಾಂಡವಿಯಾ, ಕೊರೋನಾ ನಿಧಿ ವಿವರ ತಿಳಿಸಿದರು.

ರೂ.23,123 ಕೋಟಿಗಳ ಪ್ಯಾಕೇಜ್‌ನಲ್ಲಿ ದೇಶದ 736 ಜಿಲ್ಲೆಗಳಲ್ಲಿ ಮಕ್ಕಳ ಚಿಕಿತ್ಸಾ ಕೇಂದ್ರಗಳನ್ನು ಸ್ಥಾಪಿಸಲಾಗುವುದು. 20 ಸಾವಿರ ಐಸಿಯು ಬೆಡ್‌ಗಳ ವ್ಯವಸ್ಥೆ ಮಾಡಲಾಗುವುದು. ಹೆಚ್ಚಿನ ಪ್ರಮಾಣದಲ್ಲಿ ಕೊರೋನಾ ಔಷಧಿಗಳ ದಾಸ್ತಾನು ಇಡಲಾಗುವುದು ಎಂದರು.

ಕೃಷಿ ಸಚಿವ ನರೇಂದ್ರ ಸಿಂಗ್ ತೋಮಾರ್ ಅನ್ನದಾತನ ಜೀವನ ಮಟ್ಟ ಸುಧಾರಣೆಗೆ ಎಪಿಎಂಸಿ ಈ ಹಣವನ್ನು ರೈತರ ಕಲ್ಯಾಣಕ್ಕಾಗಿ ಬಳಸಬಹುದಾಗಿದೆ ಎಂದು ತಿಳಿಸಿದರು. ರೈತರು ಬೆಳೆದ ಬೆಳೆಗಳಿಗೆ ಉತ್ತಮ ಬೆಲೆ ನೀಡುವ ಮೂಲಕ ಅವರ ಸ್ಥಿತಿಗತಿಯನ್ನು ಮತ್ತಷ್ಟು ಸುಧಾರಿಸುವ ಹಾಗೂ ಕೃಷಿ ಕ್ಷೇತ್ರದ ಸಮಗ್ರ ಅಭಿವೃದ್ಧಿಗೆ ಆದ್ಯತೆ ನೀಡುವುದೇ ಸರ್ಕಾರದ ಹೆಗ್ಗುರಿ ಎಂದು ಅವರು ಬಣ್ಣಿಸಿದರು.

ಇದೇ ವೇಳೆ, ಎಪಿಎಂಸಿಗಳ ಬಲವರ್ಧನೆಗೆ ಪ್ರಧಾನಿ ಬದ್ಧ ಎಂದ ಸಚಿವರು, ಈಗ ಜಾರಿಗೆ ತಂದಿರುವ ತಿದ್ದುಪಡಿ ಕಾಯ್ದೆಗಳಿಂದ ಕೃಷಿ ಮಾರುಕಟ್ಟೆ ವ್ಯವಸ್ಥೆಗೆ ಯಾವುದೇ ರೀತಿಯಲ್ಲಿ ತೊಂದರೆಯಿಲ್ಲ. ಮಂಡಿ ಮತ್ತು ಮಾರುಕಟ್ಟೆ ವ್ಯವಸ್ಥೆ ಎಂದಿನಂತೆ ಮುಂದುವರಿಯುತ್ತದೆ ಎಂದು ಸ್ಪಷ್ಟಪಡಿಸಿದರು.

ಈ ಕಾಯ್ದೆಗಳಿಂದಾಗಿ ದೇಶಾದ್ಯಂತ ಎಪಿಎಂಸಿಗಳು ನಿರ್ನಾಮವಾಗುತ್ತವೆ ಎಂಬುದು ಸುಳ್ಳು ಎಂದ ನರೇಂದ್ರ ಸಿಂಗ್ ತೋಮರ್, ಸದ್ಯದ ಬಿಕ್ಕಟ್ಟನ್ನು ಸೌಹಾರ್ದಯುತವಾಗಿ ಪರಿಹರಿಸಿಕೊಳ್ಳಲು ಕೇಂದ್ರ ಸಿದ್ಧವಿದೆ ಎಂದು ಪುನರುಚ್ಚರಿಸಿದರು. ವಿವಾದಾತ್ಮಕ ಕಾಯ್ದೆಗಳ ವಿರುದ್ಧ ರೈತರು ಹೋರಾಟ ಕೈಬಿಟ್ಟು ಸರ್ಕಾರದೊಂದಿಗೆ ಮಾತುಕತೆಗೆ ಮುಂದೆ ಬರಬೇಕೆಂದು ಅವರು ಮನವಿ ಮಾಡಿದರು.

ಎಪಿಎಂಸಿ ತಿದ್ದುಪಡಿ ಕಾಯ್ದೆಗಳಲ್ಲಿನ ಆಕ್ಷೇಪಾರ್ಹ ಅಂಶಗಳನ್ನು ಕೈಬಿಡಲು ಕೇಂದ್ರ ಸಿದ್ಧ ಎಂದು ಸಚಿವ ತೋಮರ್ ಕೆಲ ದಿನಗಳ ಹಿಂದೆ ಪ್ರಕಟಿಸಿದ್ದನ್ನು ಇಲ್ಲಿ ಸ್ಮರಿಸಬಹುದು.

ಆಧಾರ:ಉದಯವಾಣಿ, ದಿನಾಂಕ 09.07.2021

## 9. Sumalatha seeks Guv's intervention in KRS row

Mandya PM Sumalatha has sought Governor Thawar Chand Gehlot's intervention to protect Krishnaraja Sagar reservoir and to take action against illegal mining that is posing a threat to the dam.

Sumalatha, who met the Governor at Raj Bhavan apprised him of the damage caused by illegal mining to KRS reservoir's safety concern due to hazardous blasts in its vicinity adherence to notes of the seismology department, it appears there is uninterrupted illegal mining and blast occurrences dawn and dusk creating unrest to the denizen of the region, the MP stated in her petition. The illegal mining has caused pollution environmental hazards to human habitation like repeated miscarriages, livestock fodder, scarcity lack of potable water and even damaging the houses of those villages surrendered by illegal mining activity an imaginable impending danger to the reservoir structure as well by the tremors caused due to blasts . I explained everything to the Governor. He gave me a few suggestions and told me that he will forward the letter to the government she stated.

Courtesy: Indian Express Dated: 18.07.2021

## 10. President Ram Nath Kovind completes 4 years in office

President Ram Nath Kovind completed four years in office, the Rashtrapati Bhavan said on Twitter and shared an e-book highlighting activities of the fourth year of his presidency. Apart from giving assent to 43 Bills of the Union government and 20 Bills of different States, the e-book noted that the President had invited frontline COVID-19 warriors for At Home reception on Independence Day. He also celebrated Rashtrapati Bhavan with nurses of the Trained Nurses Association of India, Military Nursing Service and the President's Estate Clinic.

Mr.Kovind, 76 who took oath as the 14th President of India on July 25, 2017, administered oath of office and secrecy to the members of the Council of Ministers and the Chief Justice of India and accepted credentials from 23 foreign Heads of Mission via,. Videoconference, the e-book said.

As the everyone's President Mr.Kovind visited 13 States and two Union Territories and met 780 people during these visits it said.

As the Supreme Commander of the armed forces, he visited the National War Memorial and paid tributes to those who made the Supreme sacrifice while defending the nation, inaugurated the General Thimayya Museum at Madikeri in Kodagu (Karnataka) and witnessed Joint Service Operational demonstrations by the Andaman and Nicobar Command at Swaraj Dweep.

The e-book also noted the Presidents convocation addresses to various universities. He also presented national awards to teachers via., videoconference and attended a Governor's Conference on the Role of National Education Policy 2020 in Transforming Higher Education in the virtual mode.

Courtesy:-The Hindu, Dated: 26.07.2021

## 11. Reverse decision on Asthana: Delhi Assembly resolution

Signalling another round of confrontation, Delhi Assembly passed an unprecedented resolution against the appointment of senior IPS officer Rakesh Asthana claiming that he is forced upon to destabilise Delhi.

The resolution which expressed disapproval to the appointment of controversial Gujarat cadre officer being forced upon Delhi as Police Commissioner also demanded that the Ministry of Home Affairs (MHA) reverse the decision.

AAP MLAs, including Delhi Home Minister Satyendar Jain, alleged that his appointment was in contravention with the Supreme Court order on the appointment of police chiefs while Leader of Opposition Ramvir Bhiduri defended the appointment and claimed that he has one year to retire.

Asthana, who was BSF Director-General, was on night appointed as Delhi Police Commissioner just four days ahead of this scheduled retirement by extending his services till July 31 next year. The 1984 batch IPS officer took charge.

Referring to Bindhuris re-marks that he is a decorated police official, Jain said that the Leader of Opposition has actually highlighted that the police chiefs before Asthana were not good enough and it proves that the Centre had restricted good officers to be Delhi Police Commissioners, Jain also asked if Asthana had one year more to retire, why he was not considered for the post of CBI Director in May this year. The names of Asthana and YC Modi were not considered for CBI Director's post after Chief Justice NV Ramana highlighted the Supreme Court order that no officer with less than six months of service should be considered for such top posts.

Bighuri said Asthana was conferred Police Medal for Meritorious Service earlier and he had led the probe in the fodder scam Asthana's appointment is ajoltto crime and corruption. His appointment should be welcomed he said.

Moving the resolution AAP MLA Sanjeev Jha said Asthana's appointment was illegal Prime Minister blue-eyed boy was appointed four days before his retirement with a one year extension. The Prime Minister has brought a henchman on a special; mission to destabilize Delhi. It is illegal and contempt of the Supreme Court he said.

AAP MLA, Akilesh Pati Tripathi alleged that Asthana was appointed to crush political opponents in Delhi as it was in Gujarat.

Courtesy: The Hindu, Dated: 30.07.2021

## 12. ವೈದ್ಯಕೀಯ ಕೋರ್ಸ್: ಒಬಿಸಿ, ಬಡವರಿಗೆ ಕೇಂದ್ರ ಮೀಸಲಾತಿ

ಮಹತ್ವದ ನಿರ್ಧಾರವೊಂದರಲ್ಲಿ ಕೇಂದ್ರ ಸರ್ಕಾರವು ದೇಶದ ಎಲ್ಲ ಸರ್ಕಾರಿ ವೈದ್ಯಕೀಯ ಹಾಗೂ ದಂತ ವೈದ್ಯಕೀಯ ಕಾಲೇಜುಗಳ ಪದವಿ ಹಾಗೂ ಸ್ನಾತಕೋತ್ತರ ಪದವಿ ಪ್ರವೇಶದಲ್ಲಿ ಇತರೆ ಹಿಂದುಳಿದ ವರ್ಗ(ಒಬಿಸಿ)ಗಳಿಗೆ ಶೇ.27 ಹಾಗೂ ಅರ್ಥಿಕ ಹಿಂದುಳಿದ ವರ್ಗ(ಇಡಬ್ಲ್ಯುಎಸ್)ಗಳಿಗೆ ಶೇ.10ರ ಮೀಸಲಾತಿ ಜಾರಿಗೊಳಿಸಿದೆ.

ಹಲವು ವರ್ಷಗಳಿಂದ ನೆನೆಗುದಿಗೆ ಬಿದ್ದಿದ್ದ ಈ ಬೇಡಿಕೆಯನ್ನು ಈಗ ಈಡೇರಿಸಲಾಗಿದ್ದು ಇದರಿಂದ ಹಿಂದುಳಿದ ವರ್ಗಗಳ ಹಾಗೂ ಬಡವರ ಮಕ್ಕಳಿಗೆ ವೈದ್ಯಕೀಯ ಶಿಕ್ಷಣ ಪಡೆಯಲು ಅನುಕೂಲವಾಗಲಿದೆ ಎಂದು ಪ್ರಧಾನಿ ಶ್ಲಾಘಿಸಿದ್ದಾರೆ. ಕೇಂದ್ರ ಆರೋಗ್ಯ ಸಚಿವ ಮನ್ಸುಖ್ ಮಾಂಡವೀಯ ಕೂಡ ಇದೊಂದು ಐತಿಹಾಸಿಕ ನಿರ್ಧಾರ ಎಂದು ಬಣ್ಣಿಸಿದ್ದಾರೆ.

ಸರ್ಕಾರಿ ವೈದ್ಯಕೀಯ ಹಾಗೂ ದಂತ ವೈದ್ಯಕೀಯ ಕಾಲೇಜುಗಳ ಆಲ್ ಇಂಡಿಯಾ ಕೋಟಾ ಸೀಟುಗಳಿಗೆ ಈ ಮೀಸಲು ಅನ್ವಯವಾಗಲಿದೆ. ದೇಶದ ಸರ್ಕಾರಿ ಕಾಲೇಜುಗಳಲ್ಲಿ ಲಭ್ಯವಿರುವ ಒಟ್ಟು ವೈದ್ಯಕೀಯ ಹಾಗೂ ದಂತ ವೈದ್ಯಕೀಯ ಸೀಟುಗಳ ಪೈಕಿ ಪದವಿ ಕೋರ್ಸ್‌ಗಳಿಗೆ ಶೇ.15 ರಷ್ಟು ಸೀಟನ್ನು ಹಾಗೂ ಸ್ನಾತಕೋತ್ತರ ಪದವಿ ಕೋರ್ಸ್‌ಗಳಿಗೆ ಶೇ.50ರಷ್ಟು ಸೀಟನ್ನು ಆಲ್ ಇಂಡಿಯಾ ಕೋಟಾ ಎಂದು ಪರಿಗಣಿಸಲಾಗುತ್ತದೆ. ಈ ಸೀಟುಗಳಿಗೆ ದೇಶದ ಯಾವ ರಾಜ್ಯದ ವಿದ್ಯಾರ್ಥಿ ಇನ್ನಾವುದೇ ರಾಜ್ಯದಲ್ಲಿ ಬೇಕಾದರೂ ಪ್ರವೇಶ ಪಡೆಯಬಹುದು.

1986ರಲ್ಲಿ ಸುಪ್ರೀಂಕೋರ್ಟ್ ಆದೇಶದಂತೆ ಆಲ್ ಇಂಡಿಯಾ ಕೋಟಾ ರಚಿಸಲಾಗಿದೆ. ಆರಂಭದಲ್ಲಿ ಅದರಡಿ ಮೀಸಲಾತಿ ನೀಡುತ್ತಿರಲಿಲ್ಲ. ನಂತರ 2007ರಲ್ಲಿ ಸುಪ್ರೀಂಕೋರ್ಟ್ ಈ ಕೋಟಾದಡಿ ಶೇ.15ರಷ್ಟು ಸೀಟುಗಳನ್ನು ಪರಿಶಿಷ್ಟ ಜಾತಿಗೆ ಹಾಗೂ ಶೇ.7.5ರಷ್ಟು ಸೀಟುಗಳನ್ನು ಪರಿಶಿಷ್ಟ ಪಂಗಡಕ್ಕೆ ಮೀಸಲು ನೀಡಿ ಆದೇಶ ಹೊರಡಿಸಿತು. ಒಬಿಸಿ ಮತ್ತು ಇಡಬ್ಲ್ಯೂಎಸ್ ವರ್ಗಕ್ಕೆ ಮೀಸಲು ನೀಡಿರಲಿಲ್ಲ.

ಈ ನಡುವೆ ಅದೇ ವರ್ಷ (2007ರಲ್ಲಿ) ಕೇಂದ್ರೀಯ ಶಿಕ್ಷಣ ಸಂಸ್ಥೆಗಳ ಕಾಯ್ದೆ ಜಾರಿಗೆ ಬಂದ ಮೇಲೆ ಕೇಂದ್ರೀಯ ವೈದ್ಯಕೀಯ ಶಿಕ್ಷಣ ಸಂಸ್ಥೆಗಳಲ್ಲಿ (ಉದಾ: ದಿಲ್ಲಿಯ ಸಫ್ದರ್‌ಜಂಗ್ ವೈದ್ಯಕೀಯ ಕಾಲೇಜು, ವಾರಣಾಸಿಯ ಬನಾರಸ್ ಹಿಂದೂ ವಿಶ್ವವಿದ್ಯಾಲಯ ಇತ್ಯಾದಿ) ಶೇ.27 ರಷ್ಟು ಸೀಟನ್ನು ಒಬಿಸಿಗೆ ಮೀಸಲು ನೀಡಲಾಯಿತು. ಆದರೆ ರಾಜ್ಯಗಳ ವೈದ್ಯಕೀಯ ಶಿಕ್ಷಣ ಸಂಸ್ಥೆಗಳಲ್ಲಿ ಹಿಂದುಳಿದ ವರ್ಗ (ಒಬಿಸಿ) ಕೋಟಾ ಇರಲಿಲ್ಲ. ಈಗ ರಾಜ್ಯಗಳ ಶಿಕ್ಷಣ ಸಂಸ್ಥೆಗಳಲ್ಲೂ ಒಬಿಸಿ ಮತ್ತು ಇಡಬ್ಲ್ಯೂಎಸ್ ಕೋಟಾ ನೀಡಲಾಗಿದೆ. ಕೇಂದ್ರದ ಒಬಿಸಿ ಪಟ್ಟಿಯಲ್ಲಿರುವ ಜಾತಿಗಳಿಗೆ ಈ ಮೀಸಲು ಸೌಲಭ್ಯ ಸಿಗಲಿದೆ.

ಆಧಾರ: ಕನ್ನಡ ಪ್ರಭ, ದಿನಾಂಕ 30.07.2021

## 13. Govt finalises 3 tweaks For state OBC powers

Aiming to overturn the Superme Court judgment and restore the rights of states to identify the OBCs for local purposes, the Modi government is embracing the very changes to the 102nd Constitutional amendment that it had rejected from the opposition during the parliamentary process.

The Union Cabinet may clear the amendment bill this week in a sudden move that appears designed to break the opposition blockade in parliament. It is learnt that the social justice ministry will make three changes to Article 342 A, which governs the process of identification of OBCs, while Clause 1 will specify that the president will identify the OBCs in the "central list" which will be considered as backward in a state, a detailed explanatory note to clause 2 will make it clear thate "Central list" mentioned in the clause pertains to the OBC list prepared by the Government of India for reservations in the services under the GOI.

The difference between "central list" and "Central List" is to clarify that the former refers to what has till now been called the "State list" is to clarify that the former refers to what has till now been called the "State list". To stress the point, a new clause 3 is being

added to underline that every state can prepare its list of OBCs for reservation in the state government jobs.

Ironically, these were roughly the suggestions given by the oppositions parities during the tortuous debate in parliament on 102nd amendment in 2017-18. While the government had rejected them, they were flagged by the Supreme Court in its May 5 judgement where it ruled that the 342 A implies that only the Centre can identify the backwards for the Central list as well as the state lists. The SC judgement denuding the states of their power to identify the OBCs for local reservations, as had been the case since 1993 when Mandal reservations came intoforce, triggered a major controversy.

Courtesy: The Hindu, Dated: 30.07.2021

## 14. ಸಮಾನ ಶಿಕ್ಷಣ ಇರಲಿ

ಶಿಕ್ಷಣ ಎನ್ನುವುದು ಕೇವಲ ಒಳಗೊಳ್ಳುವಿಕೆಗೆ ಸೀಮಿತವಾಗಬಾರದು. ಅದು ಸಮಾನವಾಗಿ ಇರಬೇಕು ಎಂದು ಪ್ರಧಾನಿ ನರೇಂದ್ರ ಮೋದಿ ಅಭಿಪ್ರಾಯ ಪಟ್ಟಿದ್ದಾರೆ. ವಿಡಿಯೋ ಕಾನ್ಫರೆನ್ಸ್ ಮೂಲಕ ಶಿಕ್ಷಣ ಕ್ಷೇತ್ರಕ್ಕೆ ಸಂಬಂಧಿಸಿದ ಐದು ಯೋಜನೆಗಳನ್ನು ಉದ್ಘಾಟಿಸಿ ಮಾತನಾಡಿದರು.

ಕೇಂದ್ರ ಸರ್ಕಾರ ಜಾರಿಗೆ ತಂದಿರುವ ಶಿಕ್ಷಣ ಸುಧಾರಣೆ ಕ್ರಮಗಳು ಜಾಗತಿಕ ಮಾನದಂಡಕ್ಕೆ ಅಗತ್ಯವಾಗಿರುವಂತೆ ಮೌಲ್ಯವರ್ಧಿಸಲಿದೆ. ವಿದ್ಯಾರ್ಥಿಗಳಿಗೆ ಮುಂದಿನ ಸವಾಲುಗಳನ್ನು ಎದುರಿಸಲು ಅನುಕೂಲವಾಗುವಂಥ ಸಾಮರ್ಥ್ಯ ನೀಡಲಿದೆ ಎಂದರು.

ಶಿಕ್ಷಣ ಕ್ಷೇತ್ರದಲ್ಲಿನ ಸುಧಾರಣೆ ಕೇವಲ ನೀತಿ ಆಧಾರಿತವಲ್ಲ. ಬದಲಾಗಿ ಭಾಗವಹಿಸುವಿಕೆಯ ಆಧಾರವಾಗಿ ಇರಬೇಕು ಎಂದು ಶಿಕ್ಷಾಪರ್ವ ಎಂಬ ಶಿಕ್ಷಣ ಕ್ಷೇತ್ರದ ಸಮ್ಮೇಳನ ಉದ್ಘಾಟಿಸಿ ಮೋದಿ ಹೇಳಿದ್ದಾರೆ. **"ಶಿಕ್ಷಣ ಕ್ಷೇತ್ರಕ್ಕೆ"** ಸಂಬಂಧಿಸಿದಂತೆ ದೇಶ ಹೊರಳು ಹಾದಿಯಲ್ಲಿದೆ. ಇದೇ ಅವಧಿಯಲ್ಲಿ ಕೇಂದ್ರ ಸರ್ಕಾರ ಹೊಸ ಶಿಕ್ಷಣ ನೀತಿ ಜಾರಿಗೊಳಿಸಿದೆ. ಶಿಕ್ಷಣ ಕ್ಷೇತ್ರವನ್ನು ಕಾಲಕಾಲಕ್ಕೆ ಸುಧಾರಣೆ ಮಾಡುವಲ್ಲಿ ಶಿಕ್ಷಣ ಕ್ಷೇತ್ರದ ತಜ್ಞರು, ಅಧ್ಯಾಪಕರು, ಪರಿಣತರು ವಿನೂತನ ಸಲಹೆಗಳನ್ನು ನೀಡಿದ್ದು, ವಿಶೇಷವಾದ ಬೋಧನಾ ಕ್ರಮದ ಮೂಲಕ ಮೆಚ್ಚುವಂಥ ಕೊಡುಗೆ ನೀಡಿದ್ದಾರೆ. ಹೊಸ ಶಿಕ್ಷಣ ನೀತಿ ರೂಪಿಸುವಲ್ಲಿ ಅವರ ಕೊಡುಗೆ ಅಮೂಲ್ಯವಾದದ್ದು ಎಂದರು.

**ಹೊಣೆಗಾರಿಕೆ ಇದೆ:** ಪ್ರಸಕ್ತ ವರ್ಷ ದೇಶಕ್ಕೆ ಸ್ವಾತಂತ್ರ್ಯ ಲಭಿಸಿ 75 ವರ್ಷಗಳು ಪೂರ್ಣಗೊಂಡಿವೆ. ಅದಕ್ಕೆ ಪೂರಕವಾಗಿ ಹೊಸ ಶಿಕ್ಷಣ ನೀತಿಯೂ ಜಾರಿಯಾಗಿದೆ. ಮುಂದಿನ 25 ವರ್ಷಗಳಲ್ಲಿ ದೇಶಕ್ಕೆ ಸ್ವಾತಂತ್ರ್ಯ ಲಭಿಸಿ 100 ವರ್ಷ ಆಗುವ ವೇಳೆಗೆ ಹೊಸ ಭಾರತ ರೂಪಿಸುವ ಹೊಣೆಗಾರಿಕೆ ನಮ್ಮೆಲ್ಲರ ಮೇಲಿದೆ ಎಂದರು.

**ಪಂಚ ಯೋಜನೆಗಳಿಗೆ ಚಾಲನೆ:**

ಶಾಲಾ ಗುಣಮಟ್ಟ ಮತ್ತು ಮಾನ್ಯತೆ ಮಾರ್ಗಸೂಚಿ (ಎಸ್‌ಕ್ಯೂಎಎಫ್):

- **ಶಾಲೆಗಳಲ್ಲಿನ ಶಿಕ್ಷಣಶಾಸ್ತ್ರ** (pedagogy) ಪಠ್ಯಕ್ರಮ, ಮೌಲ್ಯಮಾಪನ ಮತ್ತು ಮೂಲಸೌಕರ್ಯ ಕ್ಷೇತ್ರದಲ್ಲಿ ಉಂಟಾಗಿರುವ ಕೊರತೆ ನಿವಾರಿಸಲು ನೆರವಾಗಲಿದೆ. ಜೊತೆಗೆ ಶಾಲೆಗಳ ನಿರ್ವಹಣೆಗೂ ಸಹಾಯ ಮಾಡಲಿದೆ.

- **ನಿಪುಣ ಭಾರತಕ್ಕಾಗಿ ನಿಷ್ಠಾ:** ಪ್ರಾಥಮಿಕ ಶಾಲೆಗಳ ಶಿಕ್ಷಕರಿಗೆ ತರಬೇತಿ ನೀಡಲು ನಿಷ್ಠಾ 3.0 ಎಂಬ ಹೊಸ ಯೋಜನೆ ಜಾರಿ. ಸ್ಪರ್ಧಾತ್ಮಕ ರೀತಿಯಲ್ಲಿ ಪಠ್ಯಕ್ರಮ ಬೋಧಿಸಲು, ಭಿನ್ನವಾಗಿ ಚಿಂತಿಸಿ, ಕಾರ್ಯಯೋಜನೆ ಜಾರಿಗೆ ತರಬೇತಿ.

- **ಭಾರತೀಯ ಸಂಜ್ಞಾ ಭಾಷೆಯ ಶಬ್ದಕೋಶ:** ಇದು ಮೂರನೇ ಆವೃತ್ತಿ. ಅದರಲ್ಲಿ ಹತ್ತು ಸಾವಿರ ಸಂಜ್ಞಾ ಭಾಷೆಗಳ ವಿವರಗಳು ಇವೆ. ವೆಬ್‌ಸೈಟ್ ಸೇರಿದಂತೆ ಹಲವು ಅಂಶಗಳನ್ನು ಸಂಜ್ಞೆಯಲ್ಲಿ ಹೇಗೆ ವಿವರಿಸಲಾಗಿದೆ ಎಂಬುದರ ಬಗ್ಗೆ ಉಲ್ಲೇಖ.

- **ಟಾಕಿಂಗ್ ಬುಕ್ಸ್:** ಕಣ್ಣು ಕಾಣದವರಿಗೆ ಅನುಕೂಲವಾಗುವ ನಿಟ್ಟಿನಲ್ಲಿ ಧ್ವನಿಮುದ್ರಣಗೊಂಡ ಪಠ್ಯಕ್ರಮಗಳು.

- **ವಿದ್ಯಾಂಜಲಿ 2.0 ವೆಬ್‌ಸೈಟ್**:ಶಾಲಾಭಿವೃದ್ಧಿಗೆ ಸಿಎಸ್‌ಆರ್ ವ್ಯಾಪ್ತಿಯಲ್ಲಿ ದೇಣಿಗೆ ನೀಡುವವರಿಗೆ ಅನುಕೂಲವಾಗಲು ಹೇಗೆ ಸಾಧ್ಯ ಎಂಬುದರ ಬಗ್ಗೆ ಸಮಗ್ರ ಮಾಹಿತಿ.

**ಜನರ ಭಾಗೀದಾರಿಕೆ ಮುಖ್ಯ**: ಸದ್ಯ ಅಧಿಕಾರದಲ್ಲಿರುವ ಕೇಂದ್ರ ಸರ್ಕಾರ ಏಳು ವರ್ಷಗಳಿಂದ ಆಡಳಿತದಲ್ಲಿ ಜನರ ಭಾಗೀದಾರಿಕೆ ಬಯಸುತ್ತಿದೆ. ಸ್ವಚ್ಛ ಭಾರತ ಡಿಜಿಟಲ್ ವ್ಯವಸ್ಥೆ ಮೂಲಕ ಹಣ ವರ್ಗಾವಣೆಗೆ ಸಂಬಂಧಿಸಿ ಜಾತಿ ಮಾಡಲಾಗಿರುವ ಕ್ರಮಗಳ ಜನರ ಸಲಹೆಯಿಂದಲೇ ಅನುಷ್ಠಾನಗೊಂಡಿವೆ ಎಂದರು.

ಆಧಾರ:ಉದಯವಾಣಿ, ದಿನಾಂಕ:08.09.2021

## 15. ರೈತರಿಗೆ ಚೌತಿ ಸಿಹಿ

ಕರ್ನಾಟಕ ಸೇರಿದಂತೆ ಕಬ್ಬು ಬೆಳೆಯುವ ರೈತರಿಗೆ ಕೇಂದ್ರ ಸರ್ಕಾರ ಗೌರಿ–ಗಣೇಶನ ಹಬ್ಬದ ಸಿಹಿ ಸುದ್ದಿ ನೀಡಿದೆ. ಇದರ ಜೊತೆಗೆ ಗೋಧಿ, ಬಾರ್ಲಿ ಸಾಸಿವೆಯ ಎಂಎಸ್‌ಪಿ ಹೆಚ್ಚಳಕ್ಕೂ ಕೇಂದ್ರ ಸಂಪುಟ ಅನುಮೋದನೆ ನೀಡಿದೆ. ಸಕ್ಕರೆ ಕಾರ್ಖಾನೆಗಳ ಮೂಲಕ ಕಬ್ಬು ಬೆಳೆಗಾರರಿಗೆ ನೀಡುವ ನ್ಯಾಯ ಮತ್ತು ಪ್ರೋತ್ಸಾಹದಾಯಕ ದರ (ಎಫ್‌ಆರ್‌ಪಿ)ಯನ್ನು ಪ್ರತಿ ಕ್ವಿಂಟಲ್ ರೂ.290 ಗಳಿಂದ ರೂ.295ಗೆ ಹೆಚ್ಚಿಸುವ ನಿಧಾರ ಕೈಗೊಂಡಿದೆ. ಪ್ರಧಾನಿ ನರೇಂದ್ರ ಮೋದಿ ನೇತೃತ್ವದಲ್ಲಿ ಆರ್ಥಿಕ ವ್ಯವಹಾರಗಳಿಗಾಗಿನ ಕೇಂದ್ರ ಸಂಪುಟ ಸಮಿತಿ (ಸಿಸಿಇಎ) ಸಭೆಯಲ್ಲಿ ಈ ತೀರ್ಮಾನ ಪ್ರಕಟಿಸಲಾಗಿದೆ. ಸಭೆಯ ಬಳಿಕ ಮಾತನಾಡಿದ ಕೇಂದ್ರ ವಾಣಿಜ್ಯ ಮತ್ತು ಕೈಗಾರಿಕಾ ಸಚಿವ ಪಿಯೂಷ್ ಗೋಯಲ್, 2020–21ನೇ ಕಬ್ಬಿನ ಬೆಳೆಗೆ ವರ್ಷ (ಅಕ್ಟೋಬರ್ ನಿಂದ ಸೆಪ್ಟೆಂಬರ್‌ವರೆಗೆ) ಪ್ರತಿ ಕ್ವಿಂಟಲ್‌ಗೆ ರೂ.290 ದರ ನಿಗದಿ ಮಾಡಲಾಗಿತ್ತು. ಸಿಸಿಇಎ ಸಭೆಯಲ್ಲಿ ಕೈಗೊಂಡ ದರ ಏರಿಕೆ ನಿರ್ಧಾರ ಇದುವರೆಗಿನ ಆತ್ಯಧಿಕ ಹೆಚ್ಚಳವಾಗಿದೆ ಎಂದು ಪ್ರತಿಪಾದಿಸಿದ್ದಾರೆ. ಕಬ್ಬಿನಿಂದ ಉತ್ಪಾದನೆಯಾಗುವ ಸಕ್ಕರೆಯ ಪ್ರಮಾಣ ಶೇ.10ನ್ನು ಆಧರಿಸಿ ಈ ದರ ನಿಗದಿ ಮಾಡಲಾಗಿದೆ. ಇದರಿಂದಾಗಿ ಮಾರುಕಟ್ಟೆಯಲ್ಲಿ ಸಕ್ಕರೆಯ ಬೆಲೆ ಹೆಚ್ಚಾಗುವ ಸಾಧ್ಯತೆ ಇಲ್ಲ ಎಂದು ಹೇಳಿದ್ದಾರೆ.

ಕಬ್ಬಿನಿಂದ ಸಿಗುವ ಸಕ್ಕರೆಯ ಪ್ರಮಾಣ ಶೇ.10ಕ್ಕಿಂತ ಹೆಚ್ಚಾಗಿದ್ದಲ್ಲಿ ಪ್ರತಿ ಶೇ.01ರಷ್ಟು ಹೆಚ್ಚುವರಿ ಉತ್ಪಾದನೆಗೆ ಪ್ರತಿ ಕ್ವಿಂಟಲ್‌ಗೆ ರೂ.290 ಪ್ರೀಮಿಯಂ ಅನ್ನು ನೀಡಲಾಗುತ್ತದೆ ಎಂದರು ಸಚಿವ ಗೋಯಲ್. ಇಷ್ಟು ಮಾತ್ರವಲ್ಲದೆ ಸಕ್ಕರೆ ಉತ್ಪಾದನೆ ಪ್ರಮಾಣ ಶೇ.9.5ಕ್ಕಿಂತ ಕಡಿಮೆಯಾಗಿದ್ದರೆ. ಎಫ್‌ಆರ್‌ಪಿ ದರ ಪ್ರತಿ ಕ್ವಿಂಟಲ್‌ಗೆ ರೂ.290 ಕಡಿಮೆಯಾಗಲಿದೆ. ಈ ಸಂದರ್ಭದಲ್ಲಿ ಬೆಳೆಗಾರರಿಗೆ ಪ್ರತಿ ಕ್ವಿಂಟಲ್ ಕಬ್ಬಿಗೆ ರೂ.275 ಸಿಗಲಿದೆ. ಕಳೆದ ವರ್ಷ ಅದರ ಮೊತ್ತ ರೂ.270.75 ಆಗಿತ್ತು ಎಂದು ಹೇಳಿದ್ದಾರೆ. ಕೃಷಿ ವೆಚ್ಚ ಮತ್ತು ಬೆಲೆ ನಿಗದಿ ಆಯೋಗ (ಸಿಎಸಿಪಿ) 2021–22ನೇ ಸಾಲಿನಲ್ಲಿ ಕಬ್ಬಿನ ಉತ್ಪಾದನಾ ವೆಚ್ಚ ಪ್ರತಿ ಕ್ವಿಂಟಲ್‌ಗೆ ರೂ.155 ಎಂದು ನಿಗದಿ ಮಾಡಿದೆ.

**ಬೆಲೆ ಹೆಚ್ಚಳವಿಲ್ಲ:** ಎಫ್‌ಆರ್‌ಪಿ ದರ ಪರಿಷ್ಕರಣೆ ಮಾಡಿದ ಕಾರಣಕ್ಕಾಗಿ ಮಾರುಕಟ್ಟೆಯಲ್ಲಿ ಸಕ್ಕರೆ ಬೆಲೆ ಹೆಚ್ಚಳ ಮಾಡುವ ಇರಾದೆ ಸರ್ಕಾರಕ್ಕೆ ಇಲ್ಲ ಎಂದು ಗೋಯಲ್ ಹೇಳಿದ್ದಾರೆ. ಸಕ್ಕರೆ ರಫ್ತು ಮತ್ತು ಇಥೆನಾಲ್ ಉತ್ಪಾದನೆಗೆ ಸರ್ಕಾರ ಅಗತ್ಯ ನೆರವು ನೀಡುತ್ತಿದೆ ಎಂದರು. ಕೇಂದ್ರ ಸರ್ಕಾರದ ನಿರ್ಧಾರದ ಬಗ್ಗೆ ಪ್ರತಿಕ್ರಿಯೆ ನೀಡಿದ ಸಕ್ಕರೆ ಉದ್ದಿಮೆ ವಲಯ ಸಾಧಾರಣ ಎಂದಿದೆ. ಜೊತೆಗೆ ಸಕ್ಕರೆಗೆ ಕನಿಷ್ಠ ಬೆಂಬಲ ಬೆಲೆಯನ್ನು ಪ್ರಸಕ್ತ ಸಾಲಿಗೆ ಪರಿಷ್ಕರಿಸಬೇಕು ಎಂದು ಒತ್ತಾಯಿಸಿದೆ.

**ಎಂಎಸ್‌ಪಿ ಹೆಚ್ಚಳ:** ದೇಶದಲ್ಲಿ ರೈತರ ಆದಾಯ ಹೆಚ್ಚಳ ಮಾಡುವ ನಿಟ್ಟಿನಲ್ಲಿ ಮತ್ತು ಹೆಚ್ಚಿನ ಪ್ರದೇಶದಲ್ಲಿ ರಬಿ ಬೆಳೆ ಬೆಳೆಯುವಂತೆ ಪ್ರೋತ್ಸಾಹ ನೀಡಲು ಗೋಧಿ, ಬಾರ್ಲಿ ಕಡಲೆ, ಹುರುಳಿ, ಎಣ್ಣೆಬೀಜಗಳು/ಸಾಸಿವೆ, ಕುಸುಂಬೆ (safflower) ಗಳಿಗೆ ಕ್ರಮವಾಗಿ ಪ್ರತಿ ಕ್ವಿಂಟಲ್‌ಗೆ ರೂ.40 ಗಳಿಂದ ರೂ.2,015 ಗಳವರೆ ಕನಿಷ್ಠ ಬೆಂಬಲ ಬೆಲೆ (ಎಂಎಸ್‌ಪಿ) ಹೆಚ್ಚಿಸುವ ತೀರ್ಮಾನ ಕೈಗೊಂಡಿದೆ.

ಗೋಧಿಗೆ ರೂ.40 ಏರಿಕೆ ಮಾಡಲಾಗಿದ್ದು, ಹೊಸ ದರ ರೂ.2,015 ಆಗಲಿದೆ. 2021–22ನೇ ಸಾಲಿನಲ್ಲಿ 43 ಮಿಲಿಯನ್ ಟನ್ ಗೋಧಿ ಉತ್ಪಾದಿಸಲಾಗಿದೆ. ಬಾರ್ಲಿಯ ಬೆಂಬಲ ಬೆಲೆಯನ್ನು ಕ್ವಿಂಟಲ್‌ಗೆ ರೂ.35 ಹೆಚ್ಚಳ ಮಾಡಲಾಗಿದ್ದು, ರೂ.1,635 ಆಗಿದೆ. ಕಡಲೆ ಬೆಂಬಲ ಬೆಲೆಯನ್ನು ರೂ.130, ಹುರುಳಿಗೆ ರೂ.400, ಕುಸುಬೆಗೆ ರೂ.114 ಬೆಂಬಲ ಬೆಲೆ ಹೆಚ್ಚಿಸುವ ಬಗ್ಗೆ ನಿರ್ಧಾರ ಕೈಗೊಳ್ಳಲಾಗಿದೆ ಎಂದು ಸಂಪುಟ ಸಭೆಯ ಬಳಿಕ ಕೈಗಾರಿಕೆ ಮತ್ತು ವಾಣಿಜ್ಯ ಸಚಿವ ಪಿಯೂಷ್ ಗೋಯಲ್ ಹೇಳಿದ್ದಾರೆ. ಕೇಂದ್ರ ಸರ್ಕಾರ 2021–22 ಮತ್ತು 2022–23ನೇ ಬೆಳೆ ವರ್ಷಕ್ಕಾಗಿ ಆರು ಬೆಳೆಗಳಿಗೆ ಎಂಎಸ್‌ಪಿ ನೀಡಲು ಸದ್ಯಕ್ಕೆ ಒಪ್ಪಿದೆ. ಆಡುಗೆ ಎಣ್ಣೆ ವಿಶೇಷವಾಗಿ ತಾಳೆ ಎಣ್ಣೆಯ ಆಮದು ತಗ್ಗಿಸಿ ಸ್ವಾವಲಂಬಿಯಾಗುವ ನಿಟ್ಟಿನಲ್ಲಿ ಕೇಂದ್ರ ಸರ್ಕಾರ ರಾಷ್ಟ್ರೀಯ ಆಡುಗೆ ಎಣ್ಣೆ ಯೋಜನೆ – ತಾಳೆ (ಎನ್‌ಎಂಇಒ–ಒಪಿ)ಗೆ ಅನುಮೋದನೆ ನೀಡಿದ್ದು, ರೂ.11,040 ಕೋಟಿ ಮೊತ್ತ ಮೀಸಲಾಗಿ ಇರಿಸಿದೆ.

| ಕ್ರಮ ಸಂಖ್ಯೆ | ಬೆಳೆ | ಎಷ್ಟಿತ್ತು (ಕ್ವಿಂಟಾಲ್‌ಗೆ) | ಎಷ್ಟಾಯ್ತು (ರೂ.ಗಳಲ್ಲಿ) |
|---|---|---|---|
| 1 | ಗೋಧಿ | 1,975 | 2,015 |
| 2 | ಬಾರ್ಲಿ | 1,600 | 1635 |
| 3 | ಕಡಲೆ | 5,100 | 5,230 |
| 4 | ಹುರುಳಿ | 5,100 | 5,500 |
| 5 | ಎಣ್ಣೆಬೀಜ/ಸಾಸಿವೆ | 4,650 | 5,441 |
| 6 | ಕುಸುಂಬೆ | 5,327 | 5,441 |

ಆಧಾರ:ಉದಯವಾಣಿ, ದಿನಾಂಕ:19.09.2021

## 16. Speaker Proposes lawmaker's meet to mark 75 Yrs of Independence

Lok Sabha Speaker Om Birla suggested to the all India presiding officer of the legislative bodies that a mega conference of MPs and MLAs be organised to commemorate 75 years of Independence. He also suggested that conference of present and former MPs and MLAs above 75 years of age may be organised in the states. Addressing a meeting of presiding Officers.

Birla informed that the centenary year of Public Accounts, Comitee will be celebrated on role of women and young MPs and MLAs on strengthening democratic Institutions may be organised similarly conferences of democratic institutions at different levels, including village panchayats and urban bodies, may also be organised. Birla also said that the credibility of legislatures is linked to the conduct and behavior of their members.

Courtesy: The Hindu, Dated:16.09.2021.

## 17. ಹೊಸ ಸಂಸತ್ ಟಿವಿ ಲೋಕಾರ್ಪಣೆ

ಸಂಸತ್‌ನಲ್ಲಿ ನಡೆಯುವ ಚರ್ಚೆಗಳಿಂದ ಬಹಳಷ್ಟು ಅಂಶಗಳನ್ನು ಕಲಿಸಲು ಸಾಧ್ಯವಾಗುತ್ತದೆ ಎಂದು ಪ್ರಧಾನಿ ನರೇಂದ್ರ ಮೋದಿ ಹೇಳಿದ್ದಾರೆ. ಲೋಕಸಭಾ ಮತ್ತು ರಾಜ್ಯಸಭಾ ಟಿವಿಗಳನ್ನು ವಿಲೀನಗೊಳಿಸಿ ಏಕೀಕರಣಗೊಳಿಸಿದ ಸಂಸದ್ ಟಿವಿ ಲೋಕಾರ್ಪಣೆ ಕಾರ್ಯಕ್ರಮದಲ್ಲಿ ಅವರು ಮಾತನಾಡಿದರು. ಸಂಸತ್‌ನಲ್ಲಿ ಉತ್ತಮ ಚರ್ಚೆಗಳು ಮತ್ತು ವರ್ತನೆಗಳು ಇದ್ದರೆ ಆ ಅಂಶ ಜನರ ಜೊತೆಗೆ ಸಂಪರ್ಕ ಸಾಧಿಸಲು ಸಾಧ್ಯವಾಗುತ್ತದೆ ಎಂದರು. ಇದೇ ಸಂದರ್ಭದಲ್ಲಿ ದೂರದರ್ಶನ 62 ವರ್ಷ ಪೂರ್ಣಗೊಳಿಸಿದ್ದಕ್ಕೂ ಪ್ರಧಾನಿ ಅಭಿನಂದನೆ ಸಲ್ಲಿಸಿದರು.

ಇತ್ತೀಚೆಗೆ ಮುಕ್ತಾಯಗೊಂಡ ಸಂಸತ್‌ನ ಮುಂಗಾರು ಅಧಿವೇಶನದಲ್ಲಿ ಪ್ರತಿಪಕ್ಷಗಳು ಕೋಲಾಹರ ಎಬ್ಬಿಸಿ ಕಲಾಪಕ್ಕೆ ಅಡ್ಡಪಡಿಸಿದ್ದ ಹಿನ್ನೆಲೆಯಲ್ಲಿ ಪ್ರಧಾನಿಯವರ ಮಾತುಗಳು ಮಹತ್ವ ಪಡೆದಿದೆ. ಉಪ ರಾಷ್ಟ್ರಪತಿ ಎಂ.ವೆಂಕಯ್ಯ ನಾಯ್ಡು ಮಾತನಾಡಿ ಸಂಸತ್ತಿನ ಚರ್ಚೆಗಳು ಕಾಳಜಿಯನ್ನು ವರ್ಧಿಸುವಂತಿರಬೇಕು ಎಂದರು. ಕಾರ್ಯಕ್ರಮದಲ್ಲಿ ಲೋಕಸಭೆ ಸ್ಪೀಕರ್ ಓಂ ಬಿರ್ಲಾ ಭಾಗವಹಿಸಿದ್ದರು.

ಆಧಾರ: ಉದಯವಾಣಿ, ದಿನಾಂಕ:16.09.2021

## 18. ಹೊರೆ ಇಳಿಕೆಗೆ ಹೊಂಬೆಳಕು

ದೇಶದ ಬ್ಯಾಂಕಿಂಗ್ ವ್ಯವಸ್ಥೆಗೆ ತಲೆನೋವಾಗಿರುವ ಅನುತ್ಪಾದಕ ಆಸ್ತಿ ನಿಯಂತ್ರಿಸಲು ಬ್ಯಾಡ್ ಬ್ಯಾಂಕ್ ಸ್ಥಾಪನೆಗೆ ಕೇಂದ್ರ ಸಂಪುಟ ಅನುಮೋದನೆ ನೀಡಿದೆ. ಕೇಂದ್ರ ಸಂಪುಟ ಸಭೆಯಲ್ಲಿ ಈ ಬಗ್ಗೆ ಅನುಮೋದನೆ ನೀಡಲಾಗಿದ್ದರು, ವಿತ್ತ ಸಚಿವೆ ನಿರ್ಮಲಾ ಸೀತಾರಾಮನ್ ಅವರು ಅದರ ವಿವರಗಳನ್ನು ಸುದ್ದಿಗೋಷ್ಠಿಯಲ್ಲಿ ಪ್ರಕಟಿಸಿದ್ದಾರೆ.

ರಾಷ್ಟ್ರೀಯ ಆಸ್ತಿ ಪುನರ್‌ರಚನೆ ಕಂಪನಿ (ಎನ್‌ಎಆರ್ ಸಿಎಲ್) ಅಥವಾ ಬ್ಯಾಂಡ್ ಬ್ಯಾಂಕ್ ಸ್ಥಾಪನೆಯ ಬಗ್ಗೆ ಬಜೆಟ್‌ನಲ್ಲಿ ಉಲ್ಲೇಖಿಸಲಾಗಿತ್ತು. ಅದರ ರಚನೆ ಬಗ್ಗೆ ಸಂಪುಟದಲ್ಲಿ ಚರ್ಚಿಸಿ ಅನುಮೋದನೆ ನೀಡಲಾಗಿದೆ ಎಂದು ಹೇಳಿದ್ದಾರೆ. ವಿತ್ತ ಸಚಿವೆ ಎನ್‌ಆರ್‌ಸಿಎಲ್ ಬ್ಯಾಂಕ್‌ಗಳಲ್ಲಿರುವ ವಸೂಲಾಗದ ಸಾಲಗಳಿಗೆ ಸಂಬಂಧಿಸಿದಂತೆ ರೂ.30,600 ಕೋಟಿ ಮೊತ್ತವನ್ನು (ಶೇ.15) ಪಾವತಿ ಮಾಡಲಿದೆ. ಉಳಿದ ಶೇ.85 ಭಾಗವನ್ನು ಸರ್ಕಾರಿ ಬಾಂಡ್‌ಗಳ ಮೂಲಕ ಪಾವತಿ ಮಾಡಲಾಗುತ್ತದೆ ಎಂದು ನಿರ್ಮಲಾ ಸೀತಾರಾಮನ್ ಹೇಳಿದ್ದಾರೆ.

**ರೂ.90 ಸಾವಿರ ಕೋಟಿ:** ದೇಶದ ಬ್ಯಾಂಕಿಂಗ್ ವ್ಯವಸ್ಥೆಗೆ ಸಮಸ್ಯೆ ಮತ್ತು ಸವಾಲಾಗಿ ಉಳಿದಿರುವ 2 ಟ್ರಲಿಯನ್ ಅನುತ್ಪಾದಕ ಆಸ್ತಿಯಾಗಿ ಪರಿವರ್ತನೆಯಾಗಿರುವ ಸಾಲಗಳನ್ನು ಸ್ವೀಕರಿಸಲಿದೆ. ಮುಂದಿನ ಐದು ವರ್ಷಗಳಲ್ಲಿ ಈ ಪ್ರಕ್ರಿಯೆ ನಡೆಯಲಿದೆ ಎಂದು ಹೇಳಿದ್ದಾರೆ. ಅದಕ್ಕೆ ಪೂರಕವಾಗಿ ರೂ.30,600 ಕೋಟಿಗಳನ್ನು ಮೊದಲ ಹಂತದಲ್ಲಿ ನೀಡಲಾಗುತ್ತದೆ ಎಂದು ಹೇಳಿದ್ದಾರೆ.

ಮೊದಲ ಹಂತದಲ್ಲಿ ರೂ.90 ಸಾವಿರ ಕೋಟಿ ಮೌಲ್ಯದ ಸಾಲದ ಮೊತ್ತವನ್ನು ಕೈಗೆತ್ತಿಕೊಳ್ಳಲಾಗುತ್ತದೆ ಎಂದು ಹೇಳಿದ್ದಾರೆ.

ಬ್ಯಾಂಕ್‌ಗಳು ತಮಗೆ ಹೊರೆಯಾಗಿರುವ ವಸೂಲಾಗದೇ ಇರುವ ಸಾಲಗಳನ್ನು ಆಸ್ತಿ ಪುನರ್ ರಚನೆ ಕಂಪನಿಗಳಿಗೆ (ಎಆರ್‌ಸಿ)ಹಸ್ತಾಂತರಿಸಲಿವೆ ಎಂದರು ಇದರ ಜೊತೆಗೆ ಅನುತ್ಪಾದಕ ಆಸ್ತಿ ನಿರ್ವಹಿಸಲು ಭಾರತದ ಸಾಲ ಪರಿಹಾರ ಕಂಪನಿ ಲಿ. ಅನ್ನೂ ಸ್ಥಾಪಿಸಲಾಗುತ್ತದೆ ಎಂದರು.

**4 ಆರ್ ಸೂತ್ರ:** ಸಮಸ್ಯೆ ಪರಿಹಾರಕ್ಕಾಗಿ ಗುರುತಿಸುವಿಕೆ (ರೆಕಗ್ನಿಷನ್), ಸಂಕಲ್ಪ (ರೆಸೊಲ್ಯೂಷನ್), ರಿ ಕ್ಯಾಪಿಟಲೈಸೇಷನ್ (ಮತ್ತೊಮ್ಮೆ ಬಂಡವಾಳ ಹೂಡಿಕೆ) ಮತ್ತು ಸುಧಾರಣೆ (ರಿಫಾರ್ಮ್ಸ್) ಎಂಬ ಸೂತ್ರಗಳನ್ನು ಅನುಸರಿಸುತ್ತಿದೆ ಎಂದು ಹೇಳಿದ್ದಾರೆ. ವಿತ್ತ ಸಚಿವೆ ನಿರ್ಮಲಾ ಸೀತಾರಾಮನ್. ಐದು ವರ್ಷಗಳ ಅವಧಿಯಲ್ಲಿ ರೂ.5.01 ಲಕ್ಷ ಕೋಟಿ ಮೊತ್ತವನ್ನು ವಸೂಲು ಮಾಡಿದ್ದೇವೆ ಎಂದರು. ಈ ಪೈಕಿ ರೂ.3.1 ಲಕ್ಷ ಕೋಟಿ ಮೊತ್ತವನ್ನು 2018ರ ಮಾರ್ಚ್‌ನಿಂದ ಈಚೆಗೆ ಪಡೆದುಕೊಂಡಿದ್ದೇವೆ ಎಂದಿದ್ದಾರೆ.

**ರಚನೆ ಹೇಗೆ:** ಕಂಪನಿಗಳ ಕಾಯ್ದೆಯ ಅನ್ವಯ ಎನ್‌ಎಆರ್‌ಸಿಎಲ್ ಅನ್ನು ಸ್ಥಾಪಿಸಲಾಗಿದೆ ಮತ್ತು ಈಗಾಗಲೇ ಅದರ ಕಾರ್ಯಾರಂಭಕ್ಕೆ ಪರವಾನಿಗಿ ನೀಡುವಂತೆ ಆರ್‌ಬಿಐಗೆ ಅರ್ಜಿ ಸಲ್ಲಿಸಲಾಗಿದೆ. ಆಸ್ತಿ ಪುನರ್ ರಚನಾ ಕಂಪನಿ ಎಂಬ ನೆಲೆಯಲ್ಲಿ ಕಾರ್ಯನಿರ್ವಹಿಸಲು ಅನುಮತಿ ಕೋರಲಾಗಿದೆ. ಸರ್ಕಾರಿ ಸ್ವಾಮ್ಯದ ಬ್ಯಾಂಕ್‌ಗಳು ಹೊಸ ಸಂಸ್ಥೆಯ ಶೇ.51 ರಷ್ಟು ಮಾಲೀಕತ್ವವನ್ನು ಹೊಂದಿವೆ.

- ರೂ.5.1 ಲಕ್ಷ ಕೋಟಿ 6 ವರ್ಷಗಳಲ್ಲಿ ವಸೂಲಾದ ಮೊತ್ತ.
- ರೂ.3.1 ಲಕ್ಷ ಕೋಟಿ 2018 ಮಾರ್ಚ್ ಬಳಿಕ ವಸೂಲಾದದ್ದು
- ರೂ.90,000 ಕೋಟಿ ಮೊದಲನ ಹಂತದಲ್ಲಿ ಎನ್‌ಎಆರ್ ಸಿಎಲ್‌ಗೆ ವರ್ಗಾವಣೆಯಾಗುವ ಮೊತ್ತ.
- ರೂ.6.17 ಶತಕೋಟಿ ದೇಶದಲ್ಲಿನ ಎಪಿ ಮೌಲ್ಯ.

**ಬ್ಯಾಡ್ ಬ್ಯಾಂಕ್** : ಬ್ಯಾಂಕ್‌ಗಳು ಮತ್ತು ವಿತ್ತಿಯ ಸಂಸ್ಥೆಗಳಲ್ಲಿರುವ ವಸೂಲಾದ ಸಾಲಗಳನ್ನು ಹೊಸ ಸಂಸ್ಥೆ ಖರೀದಿಸುತ್ತದೆ. ಈ ಮೂಲಕ ಅವುಗಳ ಬ್ಯಾಲೆನ್ಸ್‌ಶೀಟ್ ಅನ್ನು ಕ್ರಮಬದ್ಧಗೊಳಿಸಲು ನೆರವಾಗುತ್ತದೆ. ಹೆಚ್ಚಿನ ಪ್ರಮಾಣದಲ್ಲಿ ಎನ್‌ಪಿಎ ಹೊಂದಿರುವ ಬ್ಯಾಂಕ್‌ಗಳೇ ಅದರ ಮಾಲೀಕತ್ವ ಹೊಂದಿರುತ್ತವೆ.

ಆಧಾರ: ಉದಯವಾಣಿ, ದಿನಾಂಕ:17.09.2021

## 19. ಇಂದಿನಿಂದ 20 ದಿನ ಸೇವಾ ಪರ್ವ

**ಯುವ ಮೋರ್ಚಾದಿಂದ ನವಭಾರತ ಮೇಳ:**

- ದೇಶಾದ್ಯಂತ 'ನವ ಭಾರತ್ ಮೇಳ' ಅಯೋಜನೆ 7 ವರ್ಷಗಳ ಮೋದಿ ಸರ್ಕಾರದ ಸಾಧನೆ ಬಗ್ಗೆ ವಿವರಣೆ.
- ಸ್ವಚ್ಛತಾ ಕಾರ್ಯಕ್ರಮ, ರಕ್ತದಾನ ಶಿಬಿರ ಮತ್ತು ರಸಪ್ರಶ್ನೆಗಳ ಆಯೋಜನೆ.
- ಕೇಂದ್ರದ ಯೋಜನೆಗಳ ಫಲಾನುಭವಿಗಳಾಗಲು ಇಚ್ಛಿಸುವ ನಾಗರಿಕರನ್ನು ನೋಂದಣಿ ಮಾಡಿಕೊಳ್ಳಲು ದೇಶಾದ್ಯಂತ ಮಳಿಗೆಗಳ ಸ್ಥಾಪನೆ.

- ಜನರು ನಮೋ ಆ್ಯಪ್ ಬಳಸುವಂತೆ ಉತ್ತೇಜಿಸಲು ವಿಶೇಷ ಮಳಿಗೆ.
- ಆಗಸ್ಟ್ 2 ರಂದು ಸ್ವಚ್ಛತಾ ಸೇ ಸಮ್ಮಾನ್ ಅಭಿಯಾನ ಸಸಿ ನೆಡುವ ಕಾರ್ಯಕ್ರಮ ರಾಜ್ಯ ಬಿಜೆಪಿಯಿಂದ ಅಭಿಯಾನ
- ಸೆಪ್ಟೆಂಬರ್ 17 ರಿಂದ ಅಕ್ಟೋಬರ್ 7ರವರೆಗೆ ಸೇವೆ ಮತ್ತು ಸಮರ್ಪಣೆ ಅಭಿಯಾನ, ಕೆರೆಕಟ್ಟೆಡಗಳ ಸ್ವಚ್ಛತೆ, ಜಲಮೂಲಗಳ ಪ್ಲಾಸ್ಟಿಕ್ ಹೆಕ್ಕುವುದು ಮತ್ತಿತರ ಕಾರ್ಯಕ್ರಮ.
- ಆಸ್ಪತ್ರೆಗಳಲ್ಲಿ ಬಡ ರೋಗಿಗಳಿಗೆ ಹಣ್ಣು–ಹಂಪಲು ವಿತರಣೆ, ಉಚಿತ ಆರೋಗ್ಯ ತಪಾಸಣಾ ಶಿಬಿರ.
- ದಿವ್ಯಾಂಗರಿಗೆ ನೆರವು, ಸೈಕಲ್ ಬೈಕ್, ಶ್ರವಣ ಸಾಧನ ಸೇರಿ ಹಲವು ಉಪಕರಣಗಳ ವಿವರಣೆ
- ಆಕ್ಟೋಬರ್ 2 ರಂದು ಸ್ವದೇಶಿ ವಸ್ತುಗಳ ಖರೀದಿ ಆಭಿಯಾನ.
- ಪ್ರಧಾನಿಗೆ ಶುಭ ಹಾರೈಸಿ ರೂ.5 ಕೋಟಿ ಪೋಸ್ಟ್ ಕಾರ್ಡ್‌ಗಳನ್ನು ಜನರೇ ಬರೆಯುವಂತೆ ಪ್ರೇರೇಪಣೆ.

**ಇಂದು ಒಂದೇ ದಿನ 30 ಲಕ್ಷ ಲಸಿಕೆ:** ಮೋದಿ ಬರ್ತ್‌ಡೇ ಹಿನ್ನೆಲೆಯಲ್ಲಿ ರಾಜ್ಯಾದ್ಯಂತ ಒಂದೇ ದಿನ 30 ಲಕ್ಷ ಮಂದಿಗೆ ಲಸಿಕೆ ವಿತರಿಸಲು ರಾಜ್ಯ ಸರ್ಕಾರ ಸಿದ್ಧತೆ ನಡೆಸಿದೆ. ಲಸಿಕೆ ಮೆಗಾ ಮೇಳಕ್ಕಾಗಿ 10 ಸಾವಿರ ಲಸಿಕಾ ಕೇಂದ್ರಗಳನ್ನು ತೆರೆಯಲಾಗಿದೆ. ಇದೇ ವೇಳೆ ಎಷ್ಟು ಸಾಧ್ಯವೋ ಅಷ್ಟು ಮಂದಿಯನ್ನು ಕೊರೋನಾ ಲಸಿಕೆ ಕೇಂದ್ರಕ್ಕೆ ಕರೆತಂದು ಲಸಿಕೆ ಪಡೆಯುವಂತೆ ಮನವೊಲಿಸಿ ಎಂದು ಪಕ್ಷ ಕಾರ್ಯಕರ್ತರಿಗೆ ಕೇಂದ್ರ ಆರೋಗ್ಯ ಸಚಿವ ಮನಸುಖ ಮಾಂಡವಿಯ ಅವರು ಕರೆ ನೀಡಿದ್ದಾರೆ.

ಆಧಾರ: ಉದಯವಾಣಿ, ದಿನಾಂಕ:17.09.2021

## 20. Venkaiah pushes for attendance at panel meetings

Ahead of the reconstitution of the 24 Department-Related Standing Committees (DRSC), Rajya Sabha chairman sent a detailed record of participation by the members in committee meetings over the past year to the political parties calling them to nominate members only based on their participation and interest.

Only 16 members of the Rajya Sabha (out of 243 MPs) attended all the scheduled 361 meetings held in 2020.

Six of these 16 members were chairpersons of their respective committee. Opposition parties have routinely slammed the government for bypassing parliamentary scrutiny by not sending key legislation to the standing key legislation to the standing committees.

On direction from Mr.Naidu the Rajya Sabha Secretariat collected details on the participation by 243 members of the Rajya Sabha from 32 political parties as well as Independents and nominated members in 361 meetings of these committees held in the period of September 2020 August 2021.

The report noted that 115 members clocked an attendance of 50% or more. In all 131 members accounting for 54% of the House, reported an attendance of 50% or more in the meetings of the DRCs.

The attendance of about one-third members of the House had been below 30%.The data showed that the average attendance of 92 BJP members of the Rajya Sabha in these meetings had been 56% while the same for 38 Congress members was 42%.For the parties with five to 13 members the average attendance of the YSR Congress Party was 66%. The Biju Janata Dal was a close second at 62%. The attendance of Trinmool Congress MPs who have been at the forefront of the parties by the Opposition on the Pegasus spyware and other issues, was only 24%. The Janata Dal (U) though had the lowest tally just 16% attendance.

Rajya Sabha sources said the attendance of members in various committees was sent to leaders of the respective parties to gauge the interest of the member and factor in the same while nominating them to different committees.

Courtesy:The Hindu, Dated:24.09.2021

## 21. 65 ಗಂಟೆಗಳಲ್ಲಿ 20 ಸಭೆ ನಡೆಸಿದ ಮೋದಿ

ಪ್ರಧಾನಿ ನರೇಂದ್ರ ಮೋದಿ ಅವರು ಅಮೆರಿಕಕ್ಕೆ ಪ್ರವಾಸ ಬೆಳಸಿದ 65 ಗಂಟೆಗಳಲ್ಲಿ 20 ಸಭೆಯಲ್ಲಿ ಭಾಗವಹಿಸಿದ್ದಾರೆ. ವಿಮಾನ ಪ್ರಯಾಣದ ವೇಳೆ ನಾಲ್ಕು ಸಭೆ ನಡೆಸಿದ್ದಾರೆ. ಕೇಂದ್ರ ಸರ್ಕಾರದ ಈ ಅಧಿಕಾರಿಗಳು ಮಾಹಿತಿ ನೀಡಿದ್ದಾರೆ.

ನವದೆಹಲಿಯಿಂದ ಅಮೆರಿಕಕ್ಕೆ ವಿಮಾನದಲ್ಲಿ ಪ್ರಯಾಣಿಸುವಾಗ 2 ಸಭೆ ನಡೆಸಿ ಅಮೆರಿಕದಲ್ಲಿ ಹೋಟೆಲ್‌ನಲ್ಲಿ 3 ಸಭೆ ನಡೆಸಿದ್ದಾರೆ. ಸೆಪ್ಟೆಂಬರ್ 23 ರಂದು ಅಮೆರಿಕ ಉಪಾಧ್ಯಕ್ಷೆ ಕಮಲಾ ಹ್ಯಾರಿಸ್ ಜೊತೆಗೆ ಸಭೆ, ಜಪಾನ್ ಮತ್ತು ಆಸ್ಟ್ರೇಲಿಯಾ ಪ್ರತಿನಿಧಿಗಳ ಜೊತೆ ಎರಡು ದ್ವಿಪಕ್ಷಿಯ ಸಭೆ ಹಾಗೂ ವಿವಿಧ ಸಂಸ್ಥೆಗಳ ಸಿಇಓ ಜೊತೆಗೆ 5 ಸಭೆ ನಡೆಸಿದ್ದಾರೆ. 3 ಆಂತರಿಕ ಸಭೆಗಳಲ್ಲಿ ಭಾಗವಹಿಸಿದ್ದಾರೆ. ಸೆಪ್ಟೆಂಬರ್ 24 ರಂದು ಅಮೆರಿಕ ಅಧ್ಯಕ್ಷ ಜೋ ಬೈಡೆನ್ ಅವರೊಂದಿಗೆ ಸಭೆ, ಕ್ವಾಡ್ ಸಭೆ, 4 ಆಂತರಿಕ ಸಭೆ ನಡೆಸಿದ್ದಾರೆ. ಸೆಪ್ಟೆಂಬರ್ 25 ರಂದು ಭಾರತಕ್ಕೆ ವಾಪಸ್ಸಾಗುವಾಗ ವಿಮಾನದಲ್ಲಿಯೇ ಕುಳಿತು 2 ಸಭೆಯಲ್ಲಿ ಪಾಲ್ಗೊಂಡಿದ್ದಾರೆ.

**ಪ್ರಮುಖ ರಾಷ್ಟ್ರದ ಮಾನ್ಯತೆ:** ಪ್ರಧಾನಿ ಮೋದಿಯವರು ವಿಶ್ವದ ರಾಷ್ಟ್ರಗಳ ಪೈಕಿ ಭಾರತಕ್ಕೆ ಮಹತ್ವದ ಸ್ಥಾನ ಕಲ್ಪಿಸಿಕೊಟ್ಟಿದ್ದಾರೆ ಎಂದು ಬಿಜೆಪಿ ಅಧ್ಯಕ್ಷ ಜೆ.ಪಿ.ನಡ್ಡಾ ಮೆಚ್ಚುಗೆ ವ್ಯಕ್ತಪಡಿಸಿದ್ದಾರೆ. ಪ್ರಧಾನಿಯವರಿಗೆ ಅಭಿನಂದನೆ ಸಲ್ಲಿಸಲು ಆಯೋಜಿಸಲಾಗಿದ್ದ ಕಾರ್ಯಕ್ರಮದಲ್ಲಿ ಮಾತನಾಡಿದ ಅವರು ಭಾರತವನ್ನು ಜಗತ್ತಿನಲ್ಲಿ ಪ್ರಮುಖ ರಾಷ್ಟ್ರಗಳ ಸಾಲಿಗೆ ಸೇರಲು ಕಾರಣರಾದ ಮೋದಿ ಜಗತ್ತಿನ ನಾಯಕ ಎಂದು ಬಣ್ಣಿಸಿದ್ದಾರೆ.

ನಿರಂತರವಾಗಿ ಪ್ರಯಾಣ ಸಭೆ ನಡೆಸುವ ಪ್ರಧಾನಿ ಮೋದಿಯವರಿಗೆ ಆಯಾಸ ಆಗುವುದಿಲ್ಲವೇ ಎನ್ನುವುದು ಹಲವರ ಅಚ್ಚರಿ. ಈ ಕೌತುಕಕ್ಕೆ ಹಿರಿಯ ಅಧಿಕಾರಿಗಳು ಪರಿಹಾರವನ್ನು ನೀಡಿದ್ದಾರೆ. ಪ್ರಧಾನಿಯವರು ನಿರಂತರವಾಗಿ ಸಭೆ, ಪರಾಮರ್ಶೆಗಳನ್ನು ನಡೆಸುತ್ತಾರೆ ಎಂದು ಹೇಳಿದ್ದಾರೆ. 1990 ದಶಕದಲ್ಲಿ ಮೋದಿಯವರು ಪದೇ ಪದೇ ಅಮೆರಿಕಕ್ಕೆ ಭೇಟಿ ನೀಡುತ್ತಿದ್ದ ವೇಳೆ ವಿಮಾನಯಾದ ಸಂಸ್ಥೆಯೊಂದು ಅವರಿಗೆ ಟಿಕೆಟ್‌ನಲ್ಲಿ ರಿಯಾಯಿತಿ ನೀಡಿ, ತಿಂಗಳ ಪಾಸ್ ಅನ್ನು ನೀಡಿತ್ತು.

ಆಧಾರ: ಉದಯವಾಣಿ, ದಿನಾಂಕ:27.09.2021

## 22. ಒಂದೇ ಕಾರ್ಡ್‌ನಲ್ಲಿ ನಿಮ್ಮ ಸಂಪೂರ್ಣ ಆರೋಗ್ಯ ಮಾಹಿತಿ

ದೇಶದ ಪ್ರತಿ ಪ್ರಜೆಗೂ ಅವರ ಆರೋಗ್ಯದ ಪೂರ್ಣ ಮಾಹಿತಿ ಒಳಗೊಂಡ ಡಿಜಿಟಲ್ ಕಾರ್ಡ್ ವಿತರಿಸುವ 'ಆಯುಷ್ಮಾನ್ ಭಾರತ ಡಿಜಿಟಲ್ ಮಿಷನ್' ಯೋಜನೆಗೆ ಪ್ರಧಾನಿ ನರೇಂದ್ರ ಮೋದಿ ಚಾಲನೆ ನೀಡಿದರು. ಇದನ್ನು ದೇಶದ ಆರೋಗ್ಯ ವಲಯದಲ್ಲಿ ಕ್ರಾಂತಿಕಾರಿ ಬದಲಾವಣೆ ತರುವ ಯೋಜನೆ ಎಂದು ಬಣ್ಣಿಸಲಾಗಿದೆ.

ಡಿಜಿಟಲ್ ಆರೋಗ್ಯ ಮಿಷನ್ ಯೋಜನೆಯಡಿ ದೇಶದ ಪ್ರತಿ ಪ್ರಜೆ ಕೂಡಾ ಆಧಾರ್ ಮಾದರಿಯ 14 ಅಂಕಿಗಳ ವಿಶಿಷ್ಟ ಡಿಜಿಟಲ್ ಗುರುತಿನ ಚೀಟಿ ಪಡೆದುಕೊಳ್ಳಬಹುದು. ಈ ಕಾರ್ಡ್‌ನಲ್ಲಿ ವ್ಯಕ್ತಿಯ ಸಕಲ ಆರೋಗ್ಯ ಮಾಹಿತಿಗಳು ಇರುತ್ತವೆ. ಅಂದರೆ ಆತನಿಗೆ ಯಾವ ಆರೋಗ್ಯ ಸಮಸ್ಯೆ ಇದೆ ಹಿಂದೆ ಯಾವ ಚಿಕಿತ್ಸೆ ಪಡೆದಿದ್ದ ಯಾವ ವೈದ್ಯರನ್ನು ಭೇಟಿ ಮಾಡಿದ್ದ ವೈದ್ಯಕೀಯ ವರದಿ ಇತ್ಯಾಧಿ ಮಾಹಿತಿಗಳು ಲಭಿಸುತ್ತವೆ. ಇದರಿಂದಾಗಿ ಆ ವ್ಯಕ್ತಿ ಮುಂದೆ ಯಾವುದಾದರೂ ವೈದ್ಯರನ್ನು ಭೇಟಿ ಮಾಡಿದಾಗ, ಕಂಪ್ಯೂಟರ್‌ನಲ್ಲಿ ಅಥವಾ ಆ್ಯಪ್‌ನಲ್ಲಿ ವೈದ್ಯರು ರೋಗಿಯ ಡಿಜಿಟಲ್ ಸಂಖ್ಯೆ ಬಳಸಿ ಒಂದು ಕ್ಲಿಕ್ ಮಾಡಿದರೆ ಸಾಕು, ಆ ರೋಗಿಯ ಎಲ್ಲ ವಿವರಗಳು ವೈದ್ಯರಿಗೆ ಲಭ್ಯ ಆಗಲಿವೆ. ರೋಗಿಯು ಹೋದಲ್ಲೆಲ್ಲ ತನ್ನ ದಾಖಲೆಗಳನ್ನು ಹೊತ್ತೊಯ್ಯುವ ಪ್ರಮೇಯ ಇನ್ನಿಲ್ಲ. ಇದಲ್ಲದೆ ಈ ವ್ಯವಸ್ಥೆಯಡಿ ದೇಶಾದ್ಯಂತ ಇರುವ ವೈದ್ಯರ ಸಂಪರ್ಕ ಆರೋಗ್ಯ ಸೌಕರ್ಯಗಳ ಸಂಪರ್ಕ ಕೂಡಾ ಸುಲಭವಾಗಿ ಸಾಧ್ಯವಾಗುತ್ತದೆ. ಸರ್ಕಾರಕ್ಕೂ ಆರೋಗ್ಯ ಕ್ಷೇತ್ರಕ್ಕೆ ಅಗತ್ಯ ಯೋಜನೆಗಳನ್ನು ರೂಪಿಸಲು ಅನುಕೂಲವಾಗುತ್ತದೆ.

**7 ವರ್ಷದ ಶ್ರಮಕ್ಕೆ ಈಗ ಫಲ:** ಯೋಜನೆಗೆ ಚಾಲನೆ ನೀಡಿ ಮಾತನಾಡಿದ ಪ್ರಧಾನಿ ನರೇಂದ್ರ ಮೋದಿ ಕಳೆದ 7 ವರ್ಷದ ಶ್ರಮದ ಫಲ ಈಗ ದೊರಕಿದೆ. ರೇಶನ್‌ನಿಂದ ಪ್ರಶಾಸನದ (ಆಡಳಿತ) ವರೆಗೆ ಇಂದು ಜನ ಸಾಮಾನ್ಯರಿಗೆ ಡಿಜಿಟಲ್ ಮಾಧ್ಯಮ ತಲುಪುತ್ತಿದೆ.

ಈ ಕ್ರಮವು ದೇಶದ ಆರೋಗ್ಯ ವ್ಯವಸ್ಥೆಯಲ್ಲಿ ಕ್ರಾಂತಿಕಾರಿ ಬದಲಾವಣೆ ತರಲಿದೆ. ದೇಶದಲ್ಲಿ 140 ಕೋಟಿ ಜನರು ಆಧಾರ್ ಕಾರ್ಡ್ ಹೊಂದಿದ್ದಾರೆ. 118 ಮೊಬೈಲ್ ಚಂದಾದಾರರು ರೂ.43.ಕೋಟಿ ಜನಧನ ಬ್ಯಾಂಕ್ ಖಾತೆದಾರರು ಇದ್ದಾರೆ. ಇಷ್ಟೊಂದು ಸಂಪರ್ಕದ ಮೂಲಸೌಕರ್ಯ ಬೇರೆ ಯಾವ ದೇಶದಲ್ಲೂ ಸಿಗುವುದಿಲ್ಲ ಎಂದು ಮೋದಿ ಅವರು ಹೇಳಿದರು.

ಆಯುಷ್ಮಾನ್ ಡಿಜಿಟಲ್ ಯೋಜನೆಯಿಂದ ಎಲ್ಲ ಜನರಿಗೂ ಅವರದ್ದೇ ಆದ ಡಿಜಿಟಲ್ ಆರೋಗ್ಯ ಗುರುತು ಸಂಖ್ಯೆ ದೊರೆಕಲಿದೆ. ಜನರ ಆರೋಗ್ಯ ಮಾಹಿತಿಗಳನ್ನು ಡಿಜಿಟಲ್ ರೂಪದಲ್ಲಿ ಸಂಗ್ರಹಿಸಲಾಗುತ್ತದೆ. ಇದರಿಂದ ಜನರು ಯಾವುದೇ ಆಸ್ಪತ್ರೆಗೆ ಹೋದರು ಅವರ ಆರೋಗ್ಯ ಕುರಿತ ವಿವರಗಳು ಡಿಜಿಟಲ್ ರೂಪದಲ್ಲೇ ಲಭ್ಯವಾಗವುದು. ಬಡವರು ಹಾಗೂ ಮಧ್ಯಮ ವರ್ಗದವರಿಗೆ ಇದರಿಂದ ನೆರವಾಗಲಿದೆ ಎಂದರು.

ಆರೋಗ್ಯ ಸೇತು ಆ್ಯಪ್ ಕೊರೋನಾ ವೈರಸ್ ನಿಯಂತ್ರಣದಲ್ಲಿ ನೆರವಾಯಿತು. ಕೋ–ವಿನ್ ಆ್ಯಪ್ ಮೂಲಕ ರೂ.90 ಕೋಟಿ ಡೋಸ್ ಲಸಿಕೆ ಹಾಕಲಾಗಿದೆ. ತಂತ್ರಜ್ಞಾನವು ಈ ರೀತಿ ಆರೋಗ್ಯ ವಲಯದಲ್ಲಿ ಬೃಹತ್ ಪ್ರಮಾಣದಲ್ಲಿ ನೆರವಾಗಿದೆ. ಮುಂದೆಯೂ ನೆರವಾಗಲಿದೆ ಎಂದರು.

**6 ರಾಜ್ಯಗಳಲ್ಲಿ ಪ್ರಯೋಗಿಕ ಜಾರಿ:** 2020ರ ಆಗಸ್ಟ್ 15 ರಂದು ಮೋದಿ ಅವರು ಈ ಯೋಜನೆಯನ್ನು ಕೆಂಪುಕೋಟೆ ಭಾಷಣದಲ್ಲಿ ಘೋಷಣೆ ಮಾಡಿದ್ದರು. ಬಳಿಕ 66 ಕೇಂದ್ರಾಡಳಿತ ಪ್ರದೇಶಗಳಲ್ಲಿ ಪ್ರಯೋಗಿಕವಾಗಿ ಇದನ್ನು ಜಾರಿಗೆ ತರಲಾಗಿತ್ತು. ಯೋಜನೆಯನ್ನು ದೇಶವ್ಯಾಪ್ತಿಯಾಗಿ ಇದನ್ನು ಜಾರಿಗೆಗೊಳಿಸಲಾಗಿದೆ. ಈ ದಿನವು ಆಯುಷ್ಮಾನ್ ಭಾರತ ಪ್ರಧಾನಮಂತ್ರಿ ಜನರ ಆರೋಗ್ಯ ಯೋಜನೆಯ 3ನೇ ವರ್ಷಾಚರಣೆಯ ದಿನವು ಹೌದು.

**ಏನಿದು ಯೋಜನೆ:**

- ದೇಶದ ಪ್ರತಿಯೊಬ್ಬರಿಗೂ ಆಧಾರ್ ಹಾಗೂ ಮೊಬೈಲ್ ಸಂಖ್ಯೆಯ ರೀತಿ 14 ಅಂಕಿಗಳ ವಿಶಿಷ್ಟ ಡಿಜಿಟಲ್ ಗುರುತಿನ ಚೀಟಿ.
- ಈ ಕಾರ್ಡ್‌ನಲ್ಲಿ ವ್ಯಕ್ತಿಯ ಸಕಲ ಆರೋಗ್ಯ ಮಾಹಿತಿ, ಈ ಹಿಂದೆ ಬಂದ ರೋಗ ಅನಾರೋಗ್ಯದ ವಿಸ್ತೃತ ಮಾಹಿತಿ ಅಡಕ.
- ಹಿಂದೆ ಪಡೆದಿದ್ದ ಚಿಕಿತ್ಸೆ ಭೇಟಿ ಮಾಡಿದ್ದ ವೈದ್ಯರು ಚಿಕಿತ್ಸೆ ನೀಡಿದ ಆಸ್ಪತ್ರೆ, ವೈದ್ಯಕೀಯ ವರದಿಗಳು ಕೂಡ ಇದರಲ್ಲಿ ಲಭ್ಯ.
- ಈ ವ್ಯವಸ್ಥೆಯ ಮೂಲಕವೇ ದೇಶಾದ್ಯಂತ ಇರುವ ವೈದ್ಯರು, ವೈದ್ಯಕೀಯ ಸೌಕರ್ಯಗಳ ಮಾಹಿತಿ ಸಂಪರ್ಕ ಕೂಡ ಸಾಧ್ಯ.

**ಪ್ರಯೋಜನವೇನು:**

- ಜನರು ಪ್ರತಿ ಬಾರಿ ವೈದ್ಯರ ಬಳಿಗೆ ವೈದ್ಯಕೀಯ ಪರೀಕ್ಷೆಗಳ ಮಾಹಿತಿ ಒಯ್ಯಬೇಕಿಲ್ಲ.
- ಮೊದಲು ಒಂದು ಕಡೆ ಚಿಕಿತ್ಸೆ ಪಡೆದವರು ನಂತರ ಬೇರೆಡೆ ಚಿಕಿತ್ಸೆ ಪಡೆಯುವುದು ಸುಲಭ.
- ಎಲ್ಲ ಮಾಹಿತಿ ಕಂಪ್ಯೂಟರ್, ಆ್ಯಪ್‌ನಲ್ಲಿ ಲಭ್ಯ ವೈದ್ಯರಿಗೆ ಚಿಕಿತ್ಸೆಗೆ ಅನುಕೂಲ
- ಸರ್ಕಾರಕ್ಕೆ ಜನರಾರೋಗ್ಯ ಮಾಹಿತಿ ಲಭಿಸುವುದರಿಂದ ಯೋಜನೆಗಳ ಜಾರಿ ಸುಲಭ.

ಆಧಾರ: ಕನ್ನಡ ಪ್ರಭ, ದಿನಾಂಕ:28.09.2021

## 23. ಬಿಸಿಯೂಟ ಇನ್ನುಂದೆ ಪಿಎಂ ಪೋಷಣೆ

ಪ್ರಧಾನಿ ನರೇಂದ್ರ ಮೋದಿ ನೇತೃತ್ವದಲ್ಲಿ ನಡೆದ ಕೇಂದ್ರ ಸಚಿವ ಸಂಪುಟ ಸಭೆಯಲ್ಲಿ ಇದುವರೆವಿಗೂ ಚಾಲ್ತಿಯಲ್ಲಿದ್ದ ಶಾಲೆಗಳಲ್ಲಿ ಮಧ್ಯಾಹ್ನದ ಬಿಸಿಯೂಟ ನೀಡುವ ರಾಷ್ಟ್ರೀಯ ಯೋಜನೆಗೆ ಹೊಸ ರೂಪ ನೀಡುವ ಉದ್ದೇಶದಿಂದ ಪಿಎಂ ಪೋಷಣೆ ಎಂದು ಮರು ನಾಮಕರಣ ಮಡಲಾಗಿದೆ.

ಸರ್ಕಾರಿ ಮತ್ತು ಅನುದಾನಿಕ ಶಾಲೆಗಳಲ್ಲಿ ದೇಶಾದ್ಯಂತ ವ್ಯಾಸಂಗ ಮಾಡುತ್ತಿರುವ 11.80 ಕೋಟಿ ವಿದ್ಯಾರ್ಥಿಗಳು ಬಿಸಿಯೂಟದ ಫಲಾನುಭವಿಗಳಾಗಿದ್ದಾರೆ. ಮುಂದಿನ ಐದು ವರ್ಷಗಳವರೆಗೂ ಈ ಯೋಜನೆ ಮುಂದುವರಿಯಲಿದ್ದು, ಇದಕ್ಕಾಗಿ ರೂ.1.31 ಕೋಟಿಗಳನ್ನು ಕೇಂದ್ರ ಸರ್ಕಾರ ಮೀಸಲಿಟ್ಟಿದೆ. ಕೇಂದ್ರ ಸರ್ಕಾರಗಳು ಮತ್ತು ಕೇಂದ್ರಾಡಳಿತ ಪ್ರದೇಶಗಳ ಆಡಳಿತದ ಸಹಯೋಗದಲ್ಲಿ ಯೋಜನೆ ಯಶಸ್ವಿಯಾಗಿ ನಡೆಯುತ್ತಿದೆ. ಯೋಜನೆಯನ್ನು ದೇಶದ 11.20 ಲಕ್ಷ ಶಾಲೆಗಳಲ್ಲಿ ಜಾರಿ ಮಾಡಲಾಗಿದೆ. ಪಿ.ಎಂ. ಪೋಷಣೆ ಯೋಜನೆಯ ಒಟ್ಟಾರೆ ವೆಚ್ಚದಲ್ಲಿ ರೂ.54 ಸಾವಿರ ಕೋಟಿ ಕೇಂದ್ರ ಸರ್ಕಾರ ಭರಿಸಲಿದೆ. ರಾಜ್ಯ ಸರ್ಕಾರಗಳು ರೂ.31.733 ಕೋಟೀ ಖರ್ಚು ಮಾಡಲಿವೆ. ಇನ್ನು ಬಾಕಿಯಾಗಿರುವ ಹೆಚ್ಚುವರಿ ಮೊತ್ತ ರೂ.45 ಸಾವಿರಗಳನ್ನು (ಧಾನ್ಯಗಳ ಖರೀದಿ ವೆಚ್ಚ) ಕೂಡ ಕೇಂದ್ರ ಸರ್ಕಾರವೇ ಭರಿಸುವ ಭರವಸೆ ನೀಡಿದೆ>

ಉದ್ಯಾನ, ಆಹಾರ ತಯಾರಿಕೆ: ಇದಲ್ಲದೇ ಪ್ರತಿ ಸರ್ಕಾರೀ ಶಾಲೆಯಲ್ಲಿ ಪೌಷ್ಠಿಕಾಂಶ ಉದ್ಯಾನ ಬೆಳೆಸಲು ಸರ್ಕಾರ ಉತ್ತೇಜನ ನೀಡಲಿದೆ. ಪ್ರಕೃತಿಯೊಂದಿಗೆ ವಿದ್ಯಾರ್ಥಿಗಳು ಬೆರೆಯಲು ಮತ್ತು ತೋಟಗಾರಿಕೆಯ ಪ್ರಾಥಮಿಕ ಅನುಭವವನ್ನು ಕೂಡ ವಿದ್ಯಾರ್ಥಿಗಳಿಗೆ ಈ ಮೂಲಕ ನೀಡಲು

ಮಾರ್ಗವಾಗಲಿದೆ ಎನ್ನುವುದು ಶಿಕ್ಷಣ ತಜ್ಞರ ಅಭಿಪ್ರಾಯವಾಗಿದೆ. ಈ ಉದ್ಯಾನಗಳಲ್ಲಿ ಬಿಸಿಯೂಟಕ್ಕೆ ಅಗತ್ಯವಾದ ತರಕಾರಿಗಳು ಸಾಧ್ಯವಾದಲ್ಲಿ ಕೆಲವು ಧಾನ್ಯಗಳನ್ನು ಕೂಡ ಬೆಳೆಯಬಹುದಾಗಿದೆ. ಪಿಎಂ ಪೋಷಣೆ ಯೋಜನೆ ಆಡಿಯಲ್ಲಿ ರಕ್ತಹೀನತೆಯಿಂದ ಬಳಲುತ್ತಿರುವ ವಿದ್ಯಾರ್ಥಿಗಳು ಹೆಚ್ಚಾಗಿರುವ ಜಿಲ್ಲೆಗಳನ್ನು ಆದ್ಯತೆ ಮೇರೆಗೆ ಪರಿಗಣಿಸಿ ಸಮಸ್ಯೆ ಪರಿಹರಿಸಲು  ನೆರವಾಗುವ ವಿಶೇಷ ಧಾನ್ಯಗಳನ್ನು ಪೂರೈಕೆ ಮಾಡಲು ಸರ್ಕಾರ ಒತ್ತು ನೀಡಲಿದೆ. ವಿದ್ಯಾರ್ಥಿಗಳಿಗೆ ತರಕಾರಿ ಬೆಳೆಯುವುದು, ಅವುಗಳನ್ನು ನಿತ್ಯ ಆಡುಗೆಯಲ್ಲಿ ಬಳಸುವುದರ ಬಗ್ಗೆ ಅರಿವು ಮೂಡಿಸಲು ಶಾಲಾ ಮಟ್ಟದಲ್ಲಿ ಯೋಜನೆ ಆಡಿಯಲ್ಲಿ ಖಾದ್ಯ ತಯಾರಿಕೆ ಸ್ಪರ್ಧೆಗಳನ್ನು ಕೂಡ ಆಯೋಜಿಸಲು ಚಿಂತಿಸಲಾಗಿದೆ.

**ಸಂಪುಟದ ಇತರ ಪ್ರಮುಖ ನಿರ್ಧಾರಗಳು:**

- ಮಧ್ಯಪ್ರದೇಶದ ನಿಮಚ್–ರತ್ಲಾಂ ಹಾಗೂ ಗುಜರಾತಿನ ರಾಜ್ ಕೋಟ್–ಕನಾಲುಸ್ ನಡುವಿನ ರೈಲ್ವೆ ಮಾರ್ಗ ದ್ವಿಪಥ ಮಾಡಲು ಆಸ್ತು.
- ಸರ್ಕಾರಿ ಸ್ವಾಮ್ಯದ ರಫ್ತು ಸಾಲ ಖಾತ್ರಿ ಮಂಡಳಿ (ಇಸಿಜಿಸಿ)ಗೆ ಮುಂದಿನ ವರ್ಷ ಷೇರು ಮಾರುಕಟ್ಟೆ ಪ್ರವೇಶಕ್ಕೆ ಒಪ್ಪಿಗೆ.
- ಇಸಿಜಿಸಿ ಉತೇಜನಕ್ಕೆ 5 ವರ್ಷಗಳಲ್ಲಿ ಕೇಂದ್ರದಿಂದ ರೂ.4,400 ಕೋಟಿಮೊತ್ತ ಹೆಚ್ಚುವರಿ ಹೂಡಿಕೆ, ಸದ್ಯಕ್ಕೆ ತುರ್ತು ಹೂಡಿಕೆಯಾಗಿ ರೂ.500 ಕೋಟಿ.
- ರಾಷ್ಟ್ರೀಯ ರಫ್ತು ವಿಮೆ ಖಾತೆ (ಎನ್ಇಐಎ) ಯೋಜನೆಗೆ ರೂ.1,650 ಕೋಟಿ ಹೂಡಿಕೆ.
- 2021 ಸೆಪ್ಟೆಂಬರ್ 21ರವರೆಗೆ ಭಾರತದಿಂದ ದಾಖಲೆ ಮೊತ್ತದ ಸರಕು ರೂ.185 ಶತಕೋಟಿ ರಫ್ತು ಮಾಡಲಾಗಿದೆ.

ಆಧಾರ: ವಿಜಯ ಕರ್ನಾಟಕ, ದಿನಾಂಕ:30.09.2021

# ಭಾಗ–4

# ರಾಜ್ಯ ಸರ್ಕಾರದ ಸುದ್ದಿಗಳು

## 1. ರಾಜ್ಯದ ಪ್ರತಿ ವಿಧಾನಸಭಾ ಕ್ಷೇತ್ರದ ಒಂದು ಪಿಎಚ್‌ಸಿ ಮೇಲ್ದರ್ಜೆಗೆ

ರಾಜ್ಯದ ಎಲ್ಲ ಆಸ್ಪತ್ರೆಗಳಲ್ಲಿ ವೈದ್ಯರ ಖಾಲಿ ಹುದ್ದೆ ತುಂಬಿ ಕೊರತೆಯಾಗದಂತೆ ಕ್ರಮ ವಹಿಸಲಾಗಿದ್ದು, 250ಕ್ಕೂ ಹೆಚ್ಚು ಪಿ.ಎಚ್‌ಸಿಗಳನ್ನು ಪ್ರಾಯೋಗಿಕವಾಗಿ ಮೇಲ್ದರ್ಜೆಗೇರಿಸಲು ಚಿಂತನೆ ನಡೆಯುತ್ತಿದೆ ಎಂದು ಆರೋಗ್ಯ ಮತ್ತು ವೈದ್ಯಕೀಯ ಶಿಕ್ಷಣ ಸಚಿವ ಡಾ: ಕೆ. ಸುಧಾಕರ್ ತಿಳಿಸಿದ್ದಾರೆ. ಚಾರ್ಮಾಡಿಯಲ್ಲಿ ಪ್ರಾಥಮಿಕ ಆರೋಗ್ಯ ಕೇಂದ್ರದ ಹೊಸ ಕಟ್ಟಡ ಹಾಗೂ ಕೊಕ್ಕಡದಲ್ಲಿ ಸಮುದಾಯ ಆರೋಗ್ಯ ಕೇಂದ್ರದ ಉದ್ಘಾಟನೆ ನೆರವೇರಿಸಿ ಅವರು ಮಾತನಾಡಿದರು.

ಮುಖ್ಯಮಂತ್ರಿಯವರ ಸರ್ಕಾರ ಆರೋಗ್ಯ ಕ್ಷೇತ್ರಕ್ಕೆ ಒತ್ತು ನೀಡಿದ್ದು, ಪ್ರಾಥಮಿಕ ಸಮುದಾಯ ಆರೋಗ್ಯ ಕೇಂದ್ರಗಳನ್ನು ಮೇಲ್ದರ್ಜೆಗೇರಿಸಲಾಗುತ್ತಿದೆ. 250 ಪಿಎಚ್‌ಸಿಗಳನ್ನು ಪ್ರಾಯೋಗಿಕವಾಗಿ ಮೇಲ್ದರ್ಜೆಗೇರಿಸಿ ಗ್ರಾಮೀಣ ಪ್ರದೇಶದ ಪ್ರತಿಯೊಬ್ಬರಿಗೂ ಆರೋಗ್ಯ ಸವಲತ್ತುಗಳನ್ನು ನೀಡುವ ಉದ್ದೇಶವಿದೆ.

ಆಸ್ಪತ್ರೆಗಳ ಖಾಲಿ ಹುದ್ದೆ ತುಂಬಲು 1,763 ವೈದ್ಯರು ಹಾಗೂ ವೈದ್ಯಾಧಿಕಾರಿಗಳನ್ನು ನೇಮಕ ಮಾಡಲಾಗಿದೆ. ನಂತರ ಗುತ್ತಿಗೆ ಆಧಾರದಲ್ಲಿ ಒಂದು ವರ್ಷ ಕಡ್ಡಾಯ ಸೇವೆಯಡಿ 2,050 ವೈದ್ಯರ ನೇಮಕವಾಗಿದೆ. ಈ ಪೈಕಿ ದಕ್ಷಿಣ ಕನ್ನಡ ಜಿಲ್ಲೆಗೆ 26 ವೈದ್ಯರನ್ನು ನೀಡಲಾಗಿದೆ. ಹೊಸ ನೇಮಕಾತಿಯಲ್ಲಿ 18 ತಜ್ಞರು, 40 ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳನ್ನು ದಕ್ಷಿಣ ಕನ್ನಡದ ಆಸ್ಪತ್ರೆಗಳಲ್ಲಿ ನೇಮಿಸಲಾಗಿದೆ. ಈ ಮೂಲಕ ರಾಜ್ಯದ ಪ್ರತಿ ಸರ್ಕಾರಿ ಆಸ್ಪತ್ರೆಯಲ್ಲಿ ವೈದ್ಯರ ಕೊರತೆಯಾಗದಂತೆ ಕ್ರಮ ವಹಿಸಲಾಗಿದೆ ಎಂದರು.

ಕೊಕ್ಕಡದಲ್ಲಿ 30 ಹಾಸಿಗೆಗಳ ರೂ.4.8 ಕೋಟಿ ವೆಚ್ಚದ ಸಮುದಾಯ ಆರೋಗ್ಯ ಕೇಂದ್ರ ಉದ್ಘಾಟಿಸಲಾಗಿದೆ. ಇಲ್ಲಿಗೆ ಬೇಕಾದ ಸಲಕರಣೆಗಳನ್ನು ಓದಗಿಸಲಾಗುವುದು. ಕೆಐಒಸಿಎಲ್ ಸಂಸ್ಥೆಯಿಂದ ಹಾಸಿಗೆಗಳನ್ನು ಇಲ್ಲಿಗೆ ನೀಡಲಾಗಿದೆ. ಉತ್ತಮ ಗುಣಮಟ್ಟದ ಚಿಕಿತ್ಸೆಯನ್ನು ಬಡವರು ಇಲ್ಲಿ ಪಡೆಯಬಹುದು ಎಂದು ತಿಳಿಸಿದರು.

**ಎಂಡೋಸಲ್ಫಾನ್ ಸಂತ್ರಸ್ತರಿಗೆ ಸೌಲಭ್ಯ:** ಎಂಡೋಸಲ್ಫಾನ್‌ನಿಂದ ಜನರು ತೊಂದರೆಗಳೊಳಗಾಗಿದ್ದಾರೆ. ಶೇ.60ಕ್ಕಿಂತ ಹೆಚ್ಚು ಅಂಗವೈಕಲ್ಯ ಇರುವವರಿಗೆ ತಿಂಗಳಿಗೆ ರೂ. 3,000 ನೀಡಲಾಗುತ್ತಿದೆ. ಶೇ.59ರವರೆಗೆ ರೂ.1,500, ಶೇ.25ಕ್ಕಿಂತ ಕಡಿಮೆ ಇರುವವರಿಗೆ ಕೆಲ ರಿಯಾಯಿತಿ ಸೌಲಭ್ಯ ನೀಡಲಾಗುತ್ತಿದೆ. ಸಂಕಷ್ಟದಲ್ಲಿರುವ ಸಂತ್ರಸ್ತರಿಗೆ ಇನ್ನು ಹೆಚ್ಚಿನ ಸೌಲಭ್ಯ ನೀಡಲು ಯತ್ನಿಸಲಾಗುವುದು ಎಂದರು.

ರಾಷ್ಟ್ರೀಯ ಆರೋಗ್ಯ ಅಭಿಯಾನ ಒಂದು ಕಾರ್ಯಕ್ರಮವಾಗಿದೆ. ಇದು ಕೆಲ ವರ್ಷಗಳವರೆಗೆ ಇದ್ದು ನಂತರ ಮುಗಿಯುತ್ತದೆ. ಇದರಡಿ ಕೆಲಸಕ್ಕೆ ನೇಮಕ ಮಾಡುವಾಗಲೇ ಗುತ್ತಿಗೆ ಆಧಾರದಲ್ಲಿ ನೇಮಕ ಮಾಡಲಾಗಿದೆ. ಅದರಲ್ಲಿ ಶಾಶ್ವತ ನೇಮಕ ಕಷ್ಟವಾಗುತ್ತದೆ. ಇದರಲ್ಲಿ ಶೇ.60 ಕೇಂದ್ರ ಹಾಗೂ ರಾಜ್ಯ ಶೇ.40 ಅನುದಾನ ನೀಡುತ್ತದೆ ಎಂದರು.

ಆಶಾ ಕಾರ್ಯಕರ್ತರಿಗೆ ವಿಶೇಷ ಭತ್ಯೆ ನೀಡಲಾಗಿದೆ. ಕೋವಿಡ್ ಹೊಸ ವೈರಾಣು ಪತ್ತೆಗೆ ಮಂಗಳೂರಿನಲ್ಲಿ ಜೀನೋಮ್ ಸೀಕ್ವೆನ್ಸ್ ಲ್ಯಾಬ್ ರೂಪಿಸಲಾಗುತ್ತಿದೆ ಎಂದು ತಿಳಿಸಿದ ಸಚಿವ ಸುಧಾಕರ್, ವೆನ್‌ಲಾಕ್ ಆಸ್ಪತ್ರೆಯನ್ನು ಮೇಲ್ದರ್ಜೆಗೇರಿಸಲು ಹಾಗೂ ಉತ್ಕೃಷ್ಟ ದರ್ಜೆಯ

ಆಸ್ಪತ್ರೆಯಾಗಿಸುವ ಉದ್ದೇಶವಿದೆ. ಪ್ರತಿ ವಿಧಾನಸಭಾ ಕ್ಷೇತ್ರದಲ್ಲಿ ಕನಿಷ್ಠ ಒಂದು ಪ್ರಾಥಮಿಕ ಆರೋಗ್ಯ ಕೇಂದ್ರ ಮೇಲ್ದರ್ಜೆಗೇರಿಸಲಾಗುವುದು. ಬೆಳ್ತಂಗಡಿಯ ಪಡಂಗಡಿ ಗ್ರಾಮದಲ್ಲಿ ರೂ.8 ಕೋಟಿ ವೆಚ್ಚದಲ್ಲಿ ಮಾದರಿ ಪ್ರಾಥಮಿಕ ಆರೋಗ್ಯ ಕೇಂದ್ರ ನಿರ್ಮಾಣವಾಗುತ್ತಿದೆ ಎಂದು ತಿಳಿಸಿದರು.

ಆಧಾರ: ಕನ್ನಡಪ್ರಭ, ದಿನಾಂಕ:01.07.2021

## 2. ಕುಡಿಯುವ ನೀರು ಘಟಕ ಅಳವಡಿಕೆಯಲ್ಲಿ ಅವ್ಯವಹಾರ ಆರೋಪ

ರಾಜ್ಯದಲ್ಲಿನ ಶುದ್ಧ ಕುಡಿಯುವ ನೀರಿನ ಘಟಕಗಳ ಅಳವಡಿಕೆ ಮತ್ತು ನಿರ್ವಹಣೆಯಲ್ಲಿ ನಡೆದಿರುವ ಅವ್ಯವಹಾರಗಳ ಆರೋಪಗಳ ಬಗ್ಗೆ ಸಮೀಕ್ಷೆ ಆರಂಭಿಸಿದ್ದು, ಮೂರು ತಿಂಗಳ ಒಳಗೆ ವರದಿ ಸಲ್ಲಿಸಲಾಗುವುದು ಎಂದು ವಿಧಾನಮಂಡಲದ ಜಂಟಿ ಸದನ ಸಮಿತಿಯ ಅಧ್ಯಕ್ಷ ಆರಗ ಜ್ಞಾನೇಂದ್ರ ತಿಳಿಸಿದರು.

ಸಮಿತಿಯ ಮೊದಲ ಸಭೆ ಬಳಿಕ ಮಾತನಾಡಿದ ಅವರು ಈ ಅವ್ಯವಹಾರದ ಬಗ್ಗೆ ಸಮಗ್ರವಾಗಿ ವಿಚಾರಣೆ ನಡೆಸಿ ವರದಿ ನೀಡಲಾಗುವುದು. ಟೆಂಡರ್ ಪ್ರಕ್ರಿಯೆ, ಹೆಚ್ಚುವರಿ ಮೊತ್ತ ಪಾವತಿ, ಘಟಕಗಳ ಗುಣಮಟ್ಟದ ಬಗ್ಗೆ ಸಮಿತಿ ವಿಚಾರಣೆ ನಡೆಸಲಿದೆ. ಹಲವು ಕಡೆಗಳಲ್ಲಿ ಅಳವಡಿಸಿರುವ ಘಟಕಗಳು ಯೋಗ್ಯವಾಗಿಲ್ಲ ಘಟಕಗಳ ಆಳವಡಿಕೆಯಲ್ಲಿ ಮಧ್ಯವರ್ತಿಗಳು ಭಾಗಿಯಾಗಿದ್ದು, ಭಾರಿ ಪ್ರಮಾಣ ಭ್ರಷ್ಟಾಚಾರ ನಡೆದಿರುವುದು ಮೇಲ್ನೋಟಕ್ಕೆ ಕಾಣಿಸುತ್ತದೆ ಎಂದರು.

ಶುದ್ಧ ಕುಡಿಯುವ ನೀರಿನ ಘಟಕಗಳ ಅಳವಡಿಕೆ ಮತ್ತು ನಿರ್ವಹಣೆ ವಿಚಾರದಲ್ಲಿ ನಡೆದಿರುವ ಅವ್ಯವಹಾರಗಳ ಬಗ್ಗೆ ವಿಧಾನಸಭೆಯಲ್ಲಿ ಪಕ್ಷಾತೀತವಾಗಿ ಶಾಸಕರು ಧ್ವನಿ ಎತ್ತಿದಾಗ ಈ ಬಗ್ಗೆ ಸದನ ಸಮಿತಿಯಿಂದ ತನಿಖೆ ನಡೆಸುವುದಾಗಿ ಮುಖ್ಯಮಂತ್ರಿಯವರು ಘೋಷಿಸಿದ್ದರು.

ಆಧಾರ: ಪ್ರಜಾವಾಣಿ, ದಿನಾಂಕ:01.07.2021

## 3. ಪರಿಶಿಷ್ಟರ ಅಭಿವೃದ್ಧಿಗೆ ಅಸ್ತು

ಪರಿಶಿಷ್ಟ ಜಾತಿ, ಪಂಗಡಗಳ ಸಮುದಾಯದ ಸರ್ವಾಂಗೀಣ ಅಭಿವೃದ್ಧಿಗಾಗಿ ಉಪ ಹಂಚಿಕೆ ಯೋಜನೆಯಡಿ ಒಟ್ಟು ರೂ.26,005.01 ಕೋಟಿ ಮೊತ್ತದ ಕ್ರಿಯಾ ಯೋಜನೆಗೆ ರಾಜ್ಯ ಸರ್ಕಾರ ಅಸ್ತು ಎಂದಿದೆ. ವಿಧಾನಸೌಧ ಸಮ್ಮೇಳನ ಸಭಾಂಗಣದಲ್ಲಿ ಮುಖ್ಯಮಂತ್ರಿಯವರ ಅಧ್ಯಕ್ಷತೆಯಲ್ಲಿ ನಡೆದ ರಾಜ್ಯ ಅಭಿವೃದ್ಧಿ ಪರಿಷತ್ ಸಭೆಯು 2021–22 ಸಾಲಿನ ಕರಡು ಯೋಜನೆಗೆ ಅನುಮೋದನೆ ನೀಡಿದೆ. ಅನುಮೋದಿತ ಕ್ರಿಯಾ ಯೋಜನೆಯ ಒಟ್ಟು ಮೊತ್ತದ ಪೈಕಿ ಎಸ್.ಸಿ.ಪಿಗೆ ರೂ.18,331.54 ಕೋಟಿ ಮತ್ತು ಟಿ.ಎಸ್.ಪಿ.ಗೆ ರೂ.7,673.47 ಕೋಟಿ ಅನುದಾನ ಒದಗಿಸಲಾಗಿದೆ ಎಂದು ಮುಖ್ಯಮಂತ್ರಿಯವರು ಸುದ್ದಿಗೋಷ್ಠಿಯಲ್ಲಿ ತಿಳಿಸಿದರು. ಬಜೆಟ್‌ನಲ್ಲಿ ಹಂಚಿಕೆಯಾಗಿದ್ದ ಮೊತ್ತಕ್ಕೆ ರೂಪಿಸಿದ ಕ್ರಿಯಾ ಯೋಜನೆಗೆ ಸಮ್ಮತಿಸಿದ್ದು, ಅನುಷ್ಠಾನ ಜವಾಬ್ದಾರಿ ಹೊತ್ತ 35 ಇಲಾಖೆಗಳಿಗೆ ನೀಡಲಾಗಿದೆ. ಮುಂದುವರಿದ ಕಾಮಗಾರಿಗಳಿಗೆ ಮೊದಲ ತ್ರೈಮಾಸಿಕ ಅನುದಾನ ಬಳಕೆಗೂ ಈಗಾಗಲೇ ಒಪ್ಪಿಗೆ ನೀಡಲಾಗಿದೆ. ಕಳೆದ ಆರ್ಥಿಕ ವರ್ಷಕ್ಕೆ (2020–21)ಒದಗಿಸಿದ್ದ ರೂ.25,945 ಕೋಟಿಗಳಲ್ಲಿ ರೂ.24,446 ಕೋಟಿ ವೆಚ್ಚವಾಗಿದ್ದು, ಶೇ.95 ಆರ್ಥಿಕ ಪ್ರಗತಿ ಸಾಧಿಸಲಾಗಿದೆ ಎಂದರು.

**ಲೋಪ ಕಂಡು ಬಂದರೆ ಕ್ರಮ:** ಇಲಾಖಾವಾರು ಅನುಮೋದನೆ ನೀಡಿದ ಅಭಿವೃದ್ಧಿ ಯೋಜನೆಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಕ್ಕೆ ತಂದು, ಗುಣಮಟ್ಟದ ಜೊತೆಗೆ ಕಾಲಮಿತಿ ಕಾಯ್ದುಕೊಳ್ಳಲು ಕಟ್ಟುನಿಟ್ಟಿನ ಸೂಚನೆ ನೀಡಲಾಗಿದೆ. ಶೋಷಿತ ಸಮುದಾಯಗಳ ಜೀವನಮಟ್ಟ ಸಮಗ್ರ ಸುಧಾರಣೆ ಎಸ್.ಸಿ.ಪಿ ಮತ್ತು ಟಿ.ಎಸ್.ಪಿ ಆಶಯವಾಗಿದ್ದು, ಕಾಮಗಾರಿಗಳ ಅನುಷ್ಠಾನದಲ್ಲಿ ಲೋಪ–

ದೋಷಗಳು ಕಂಡುಬಂದರೆ ಕ್ರಮವಹಿಸಲಾಗುವುದು ಎಂದು ಅಧಿಕಾರಿಗಳಿಗೆ ಮುಖ್ಯಮಂತ್ರಿಯವರು ಎಚ್ಚರಿಸಿದರು.

**ಅನುದಾನ ಬೇರೆಯದಕ್ಕೆ ಬಳಸಿಲ್ಲವೆಂದ ಮುಖ್ಯಮಂತ್ರಿ:** ಯೋಜನೆಯಡಿ ಮೀಸಲಿರಿಸಿದ ಅನುದಾನವನ್ನು ಬೇರೆಯದಕ್ಕೆ ಬಳಸಿಲ್ಲ. ಅದೆಲ್ಲ ತಪ್ಪು ಕಲ್ಪನೆ ಎಂದು ಮುಖ್ಯಮಂತ್ರಿ ತಳ್ಳಿ ಹಾಕಿದರೆ, ಜೊತೆಯಲ್ಲಿದ್ದ ಉಪ ಮುಖ್ಯಮಂತ್ರಿಯವರು ಧ್ವನಿಗೂಡಿಸಿದರು. ಅನುಮೋದಿತ ಕ್ರಿಯಾ ಯೋಜನೆ ಅನುಸಾರ ಅನುದಾನ ವಿನಿಯೋಗಿಸಲಾಗಿದೆ. ಬೇರೆ ಯೋಜನೆ ಅಥವಾ ಕಾರ್ಯಕ್ರಮಗಳಿಗೆ ಡೈವರ್ಟ್ ಮಾಡಿಲ್ಲ ಎಂದರು. ಆ ಮೂಲಕ ಪರಿಹಾರ ಪ್ಯಾಕೇಜ್‌ಗೆ ಅನುದಾನ ಬಳಸಲಾಗಿದೆ ಎಂಬ ಪ್ರತಿಪಕ್ಷ ನಾಯಕ ಸಿದ್ದರಾಮಯ್ಯ ಆರೋಪವನ್ನು ಅಲ್ಲಗೆಳೆದರು. ಪರಿಶಿಷ್ಟ ಸಮುದಾಯಗಳ ಶಿಕ್ಷಣ, ಆರ್ಥಿಕತೆ ಎತ್ತರಿಸುವುದು. ಆರೋಗ್ಯ ಸವಲತ್ತು ಅಭಿವೃದ್ಧಿಗೆ ಶೇ.100 ಆರ್ಥಿಕ ಪ್ರಗತಿ ಸಾಧಿಸಲು ಸೂಚಿಸಿದ್ದು, ಹೆಚ್ಚುವರಿ ಅನುದಾನ ನೀಡುವುದಕ್ಕೂ ಬದ್ಧವೆಂದು ಮುಖ್ಯಮಂತ್ರಿಯವರು ಭರವಸೆ ನೀಡಿದರು.

**ಶೌಚಗೃಹ ಸಬ್ಸಿಡಿ ಹೆಚ್ಚಳ:** ಎಸ್ಸಿ ಹಾಗೂ ಎಸ್ಟಿ ಫಲಾನುಭವಿಗಳಿಗೆ ಶೌಚ/ಸ್ನಾನಗೃಹ ನಿರ್ಮಾಣಕ್ಕೆ ನೀಡುವ ಸಹಾಯಧನ ಮೊತ್ತವನ್ನು ರೂ.15,000 ರಿಂದ ರೂ.20,000ಗಳಿಗೆ ಹೆಚ್ಚಿಸಲು ಸಭೆ ತೀರ್ಮಾನಿಸಿದೆ. ಒಟ್ಟು ಸಬ್ಸಿಡಿ ಮೊತ್ತದಲ್ಲಿ ಕೇಂದ್ರ ಮತ್ತು ರಾಜ್ಯ ತಲಾ ಅರ್ಧಪಾಲು ಭರಿಸಲಿವೆ.

**ಜಂಟಿ ಹೆಸರಿನಲ್ಲೇ ಸೌಲಭ್ಯಕ್ಕೆ ಸೂಚನೆ:** ಎಸ್ಸಿ–ಎಸ್ಟಿ ಕುಟುಂಬಗಳಿಗೆ ಭೂ ಒಡೆತನ ಯೋಜನೆಯಡಿ ಭೂಮಿ ಹಂಚಿಕೆ, ವಸತಿ ಇನ್ನಿತರ ಯಾವುದೇ ಸೌಲಭ್ಯ ವಿತರಿಸುವಾಗ ಜಂಟಿ ಹೆಸರಿನಲ್ಲೇ ನೀಡಬೇಕು ಎಂದು ರಾಜ್ಯ ಅಭಿವೃದ್ಧಿ ಪರಿಷತ್ ಸಭೆ ಸೂಚಿಸಿದೆ.

**ಇಲಾಖಾವಾರು ಹಂಚಿಕೆಯಾದ ಅನುದಾನ:**

| **ಕ್ರಮ ಸಂಖ್ಯೆ** | **ಇಲಾಖೆಗಳು** | **ಬಿಡುಗಡೆಯಾದ ಅನುದಾನ (ಕೋಟಿ ರೂ.ಗಳಲ್ಲಿ)** |
|---|---|---|
| 1 | ಕೃಷಿ ಮತ್ತು ಸಂಬಂಧಿತ ಇಲಾಖೆ | 1410.30 |
| 2 | ಮೂಲಸವಲತ್ತು ವಸತಿ ಮತ್ತು ಇಂಧನ | 11480.02 |
| 3 | ಶಿಕ್ಷಣ, ಆರೋಗ್ಯ, ಸಮಾಜ ಕಲ್ಯಾಣ ಇತ್ಯಾದಿ | 8933.38 |
| 4 | ಕೌಶಲ್ಯಾಭಿವೃದ್ಧಿ ಮತ್ತು ಇತರ ಇಲಾಖೆಗಳು | 153.38 |
| 5 | ಸಾಮಾಜಿಕ/ಆಹಾರ ಭದ್ರತೆ | 3725.23 |
| 6 | ಕೈಗಾರಿಕಾ ವಲಯ | 304.73 |

ಆಧಾರ: ವಿಜಯವಾಣಿ, ದಿನಾಂಕ:03.07.2021

## 4. ನೋಂದಣಿ ದಾಖಲೆಗಿಲ್ಲ ಸುರಕ್ಷತೆ

ರಾಜ್ಯ ಸರ್ಕಾರದ ಬೊಕ್ಕಸವನ್ನು ತುಂಬುವ ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಮತ್ತೊಂದು ಅವಾಂತರ ಬೆಳಕಿಗೆ ಬಂದಿದ್ದು, ಜನರು ಕರಾರು ನೋಂದಣಿ ದಾಖಲೆಗಳಿಗೆ ಸುರಕ್ಷತೆ ಇಲ್ಲದಂತಾಗಿದೆ.

1997–98ರಿಂದ ಕಾವೇರಿ ಯೋಜನೆ(2004) ಪ್ರಾರಂಭಕ್ಕೂ ಮೊದಲು ನೋಂದಣಿಯಾದ ದಾಖಲೆಗಳನ್ನು ಸ್ಕ್ಯಾನಿಂಗ್ ಮಾಡಿ ಸಂಗ್ರಹಿಸಿದ್ದ ಸಿ.ಡಿ.ಗಳು ಸಂಪೂರ್ಣ ನಾಶವಾಗಿವೆ. ಸಾರ್ವಜನಿಕರಿಗೆ ದೃಢೀಕೃತ ಪ್ರತಿ ನೀಡಲು ಸಿ.ಡಿ. ತೆರೆದಾಗ ಅದರಲ್ಲಿ ಮಾಹಿತಿ ಲಭ್ಯವಾಗುತ್ತಿಲ್ಲ. ಪರಿಣಾಮ 1997–98 ರಿಂದ 2004ರ ನಡುವೆ ಉಪ ನೋಂದಣಿಗಳ ಕಚೇರಿಯಲ್ಲಿ ನಡೆದಿರುವ ಕರಾರು ನೋಂದಣಿಗಳ ದೃಢೀಕೃತ ಪ್ರತಿಗಳು ಸಾರ್ವಜನಿಕರಿಗೆ ಲಭ್ಯವಿಲ್ಲದಂತಾಗಿದೆ. ಲಕ್ಷಾಂತರ ರೂ. ನೋಂದಣಿ ಮತ್ತು ಮುದ್ರಾಂಕ ಶುಲ್ಕ ಪಡೆದಿರುವ ಅಧಿಕಾರಿಗಳು ಜನರ ದಾಖಲೆಗಳನ್ನು ಸಂರಕ್ಷಣೆ ನೀಡುವಲ್ಲಿ ನಿರ್ಲಕ್ಷ್ಯ ತೋರಿದ್ದಾರೆ.

ಕಾವೇರಿ ತಂತ್ರಾಂಶ ಯೋಜನೆ ಬರುವ ಮೊದಲು ಕರಾರು ನೋಂದಣಿ ದಾಖಲೆಗಳನ್ನು ಸ್ಕ್ಯಾನಿಂಗ್ ಮಾಡಿ ಇಂಟಿಗ್ರಾ ಸಿ.ಡಿ.ಗಳಲ್ಲಿ ಸಂಗ್ರಹಿಸಲಾಗಿತ್ತು. ಸರ್ವರ್ ಮತ್ತು ಹಾರ್ಡ್‌ಡಿಸ್ಕ್ ವ್ಯವಸ್ಥೆ ಇರಲಿಲ್ಲ. ಸಿ.ಡಿ.ಯಲ್ಲಿ ಸಂಗ್ರಹಿಸಲಾಗಿದೆ ಎಂಬ ಕಾರಣಕ್ಕೆ ಬಹುತೇಕ ಉಪ ನೋಂದಣಿ ಕಚೇರಿಗಳಲ್ಲಿ ನಕಲು ಪ್ರತಿಗಳನ್ನೇ ಇಟ್ಟುಕೊಂಡಿರಲಿಲ್ಲ. ಸಾವಿರಾರು ನೋಂದಣಿ ದಾಖಲೆಗಳು ನಾಶವಾಗಿವೆ.

ಸಾರ್ವಜನಿಕರು ಕೋರ್ಟ್ ವಿಚಾರಣೆ ಇನ್ನಿತರ ವಿಷಯಕ್ಕೆ ನಕಲು ಪ್ರತಿಗಳನ್ನು ಪಡೆಯಲು ಉಪ ನೋಂದಣಿ ಕಛೇರಿಗಳಲ್ಲಿ ಸಾಧ್ಯವಾಗುತ್ತಿಲ್ಲ. ಮೊದಲೇ ಸುರಕ್ಷತಾ ಕ್ರಮಗಳನ್ನು ಕೈಗೊಳ್ಳದ ನೋಂದಣಿ ಮತ್ತು ಮುದ್ರಾಂಕ ಇಲಾಖೆ, ಇದೀಗ ಸಮಸ್ಯೆಗೆ ಪರಿಹಾರ ಕಂಡುಕೊಳ್ಳಲು 21 ಅಧಿಕಾರಿಗಳ ತಜ್ಞರ ಸಮಿತಿ ರಚನೆ ಮಾಡಿದೆ.

ನೋಂದಣಿ ಉಪ ಮಹಾಪರಿವೀಕ್ಷಕರ (ಆಡಳಿತ ಮತ್ತು ಕಾನೂನು) ನೇತೃತ್ವದಲ್ಲಿ ಕಾನೂನು, ಆಡಳಿತ, ತಾಂತ್ರಿಕ ಮತ್ತು ಜಿಲ್ಲಾ ನೋಂದಣಾಧಿಕಾರಿಗಳು, ಒಳಗೊಂಡ ಸಮಿತಿ ರಚನೆ ಮಾಡಿದೆ. ನಾಶವಾಗಿರುವ ಅಥವಾ ಕೆಲಸಕ್ಕೆ ಬಾರದ ಸಿ.ಡಿ.ಗಳಿಗೆ ಪರಿಹಾರವನ್ನು ಒಂದು ತಿಂಗಳ ಒಳಗಾಗಿ ಚರ್ಚೆ ನಡೆಸಿ ವರದಿ ನೀಡುವಂತೆ ನೋಂದಣಿ ಮತ್ತು ಮುದ್ರಾಂಕ ಇಲಾಖೆ ಆಯುಕ್ತ ಕೆ.ಪಿ.ಮೋಹನ್‌ರಾಜ್ ಆದೇಶ ಹೊರಡಿಸಿದ್ದಾರೆ.

**ಹಾರ್ಡ್ ಡಿಸ್ಕ್ ವ್ಯವಸ್ಥೆಗೆ ಒತ್ತಾಯ:** ಉಪ ನೋಂದಣಾ ಕಚೇರಿಗಳಲ್ಲಿ ಸಾರ್ವಜನಿಕ ದಾಖಲೆಗಳನ್ನು ಸಂಗ್ರಹಿಸುವಲ್ಲಿ ಯಾವುದೇ ಕ್ರಮ ತೆಗೆದುಕೊಂಡಿಲ್ಲ. ರಾಜ್ಯದಲ್ಲಿರುವ 255 ಸಬ್ ರಿಜಿಸ್ಟ್ರಾರ್ ಕಚೇರಿಗಳಲ್ಲಿ ಪ್ರತಿದಿನ 3 ಸಿ.ಡಿ.ಗಳು ಬೇಕಾಗಿವೆ. ವರ್ಷಕ್ಕೆ ಅಂದಾಜು 3 ಲಕ್ಷ ಸಿ.ಡಿ. ಗಳಲ್ಲಿ ದಾಖಲೆಗಳನ್ನು ಸ್ಕ್ಯಾನಿಂಗ್ ಮಾಡಿ ಸಂಗ್ರಹಿಸಲಾಗುತ್ತಿದೆ. ಆದರೆ, ಈ ಸಿ.ಡಿ.ಗಳನ್ನು ಸಂಗ್ರಹಿಸಲು ಸೂಕ್ತ ವ್ಯವಸ್ಥೆಯನ್ನೇ ರೂಪಿಸಿಲ್ಲ. ಕೇಂದ್ರ ಕಚೇರಿಯಿಂದ ಸಿ.ಡಿ.ಗಳ ಪೂರೈಕೆಗೂ ಇಲ್ಲದೆ ಇರುವ ಕಾರಣಕ್ಕೆ ಆಯಾ ಸಬ್ ರಿಜಿಸ್ಟ್ರಾರ್ ಅಧಿಕಾರಿಗಳೇ ಸಿ.ಡಿ. ಖರೀದಿಸಿ ಬಳಸುತ್ತಿದ್ದಾರೆ. ಇವು ಎಷ್ಟು ಗುಣಮಟ್ಟವಾಗಿವೆ ಎಂಬುದು ತಿಳಿದಿಲ್ಲ. ಸಿ.ಡಿ. ಬದಲು ಹಾರ್ಡ್‌ಡಿಸ್ಕ್ ವ್ಯವಸ್ಥೆ ಜಾರಿಗೆ ತರಬೇಕೆಂಬುದು ಅಧಿಕಾರಿಗಳ ಒತ್ತಾಯವಾಗಿದೆ.

**ಕಡತದಲ್ಲೇ ಉಳಿದಿದೆ ಸುರಭಿ ಯೋಜನೆ:** ರಾಜ್ಯ ಸರ್ಕಾರ 2017–18ನೇ ಸಾಲಿನ ಬಜೆಟ್‌ನಲ್ಲಿ ಹಳೆಯ ಕಡತಗಳ ಸುರಕ್ಷತೆಗೆ ಸುರಭಿ ಯೋಜನೆ (ಸೂಕ್ಷ್ಮ ರಕ್ಷಣಾ ಅಭಿಲೇಖ) ಘೋಷಣೆ ಮಾಡಿ ರೂ.25 ಕೋಟಿ ಮೀಸಲಿಟ್ಟರೂ ಅನುಷ್ಠಾನಕ್ಕೆ ತರುವಲ್ಲಿ ಹಿರಿಯ ಅಧಿಕಾರಿಗಳು ವಿಳಂಬ ಧೋರಣೆ ತಾಳಿದ್ದಾರೆ. ಕರ್ನಾಟಕ ಈಗಿನ ಭೂ ಭಾಗಗಳು ಸ್ವಾತಂತ್ರ್ಯ ಪೂರ್ವದಲ್ಲಿ ಮದ್ರಾಸ್, ಬಾಂಬೆ, ಹೈದರಾಬಾದ್ ಪ್ರಾಂತ್ಯಗಳಲ್ಲಿದ್ದವು. ಉರ್ದು, ತಮಿಳು ತೆಲುಗು, ಮಲೆಯಾಳಂ, ಮರಾಠಿ ಭಾಷೆಗಳಲ್ಲಿ ದಾಖಲೆಗಳು ಇವೆ. 1867 ರಿಂದ 2004ರವರೆಗೆ ಆಸ್ತಿ ಖರೀದಿ, ಮಾರಾಟ, ದಾನ, ವಿಭಾಗ, ಕ್ರಯ ಸಂಬಂಧ ಭೂ ದಾಖಲೆಗಳನ್ನು ಆಯಾ ತಾಲ್ಲೂಕು ಸಬ್ ರಿಜಿಸ್ಟ್ರಾರ್ ಕಚೇರಿಗಳಲ್ಲಿ ಬ್ರಿಟಿಷರ ಕಾಲದಂತೆ ಬಟ್ಟೆ ಕಟ್ಟಿ ಸಂಗ್ರಹಿಸಲಾಗಿದೆ. ಡಿಜಿಟಲ್ ಸೌಲಭ್ಯ ತರುವಲ್ಲಿ ಅಧಿಕಾರಿಗಳು ಪೈಲಟ್ ಯೋಜನೆಯಲ್ಲಿ ಕಾಲ ಕಳೆಯುತ್ತಿದ್ದಾರೆ.

ಆಧಾರ:ವಿಜಯವಾಣಿ, ದಿನಾಂಕ:06.07.2021

## 5. ಕರ್ನಾಟಕದ ರಾಜ್ಯಪಾಲರಾಗಿ ಥಾವರಚಂದ್ ಗೆಹಲೋತ್

ರಾಜ್ಯಕ್ಕೆ ಹೊಸ ರಾಜ್ಯಪಾಲರ ನೇಮಕವಾಗಿದ್ದು, ಸುಮಾರು ಏಳು ವರ್ಷಗಳಿಂದ ರಾಜ್ಯಪಾಲರಾಗಿದ್ದ ವಿ.ಆರ್. ವಾಲಾ ಅವರ ಸ್ಥಾನಕ್ಕೆ ಥಾವರಚಂದ್ ಗೆಹಲೋತ್ ಅವರನ್ನು ನೇಮಕ ಮಾಡಲಾಗಿದೆ. ಕರ್ನಾಟಕ ಸೇರಿದಂತೆ ಎಂಟು ರಾಜ್ಯಗಳ ರಾಜ್ಯಪಾಲರನ್ನು ಬದಲಾಯಿಸಿರುವ ರಾಷ್ಟ್ರಪತಿಗಳು ಈ ಬಗ್ಗೆ ಅಧಿಕೃತ ಘೋಷಣೆ ಮಾಡಿದ್ದಾರೆ.

ವಿ.ಆರ್. ವಾಲಾ ಅವರನ್ನು ಬದಲಾಯಿಸಬೇಕು ಎನ್ನುವ ಒತ್ತಡ ಭಾರಿ ಪ್ರಮಾಣದಲ್ಲಿ ಕೇಳಿಬಂದಿತ್ತು. ಮೋದಿ ಸರ್ಕಾರ ಹಾಲಿ ಸಚಿವರಾಗಿದ್ದ ಥಾವರಚಂದ್ ಗೆಹಲೋತ್ ಅವರನ್ನು ಸಂಪುಟದಿಂದ ಕೈಬಿಡಲು ನಿರ್ಧರಿಸಲಾಗಿತ್ತು. ಆದ್ದರಿಂದ ಸಂಪುಟದಿಂದ ಕೈಬಿಡುವ ಮೊದಲು ಕರ್ನಾಟಕ ರಾಜ್ಯಪಾಲರನ್ನಾಗಿ ನೇಮಿಸಲಾಗಿದೆ.

**ಪ್ರಸ್ತುತ ಕೇಂದ್ರ ಸಚಿವ:** ಸಾಮಾಜಿಕ ನ್ಯಾಯ ಮತ್ತು ಸಬಲೀಕರಣ ಸಚಿವರಾಗಿರುವ ಗೆಹಲೋತ್ ಅವರು ರಾಜ್ಯ ಸಭೆಯಲ್ಲಿನ ಬಿಜೆಪಿ ನಾಯಕರಾಗಿದ್ದಾರೆ. ಜೊತೆಗೆ ಸಂಸದೀಯ ಸಮಿತಿ ಹಾಗೂ ಬಿಜೆಪಿಯ ಕೇಂದ್ರ ಚುನಾವಣಾ ಸಮಿತಿಗಳಲ್ಲಿ ಸದಸ್ಯರಾಗಿದ್ದಾರೆ.

**ಗೆಹಲೋತ್ ಪರಿಚಯ:**

- **ಪೂರ್ಣ ಹೆಸರು**: ಥಾವರಚಂದ್ ಗೆಹಲೋತ್
- **ಹುಟ್ಟೂರು**: ಮಧ್ಯಪ್ರದೇಶದ ಉಜ್ಜಯಿನಿ ಜಿಲ್ಲೆಯ ನಾಗ್ಡಾ
- **ಜನ್ಮ ದಿನಾಂಕ**:18 ಮೇ, 1948.
- **ಪತ್ನಿ**:ಅಂಕಿತಾ ಗೆಹಲೋತ್
- **ವಿದ್ಯಾಭ್ಯಾಸ**: ವಿಕ್ರಂ ವಿಶ್ವವಿದ್ಯಾನಿಲಯದಲ್ಲಿ ಬಿಎ ವ್ಯಾಸಂಗ, ಡಾ:ಬಿ.ಆರ್. ಅಂಬೇಡ್ಕರ್ ಯೂನಿವರ್‌ಸಿಟಿ ಆಫ್ ಸೋಷಿಯಲ್ ಸೈನ್ಸ್‌ನಿಂದ ಗೌರವ ಡಾಕ್ಟರೇಟ್.

**ಎಂಟು ರಾಜ್ಯಗಳ ನೂತನ ರಾಜ್ಯಪಾಲರು:**

- ಕರ್ನಾಟಕ–ಥಾವರಚಂದ್ ಗೆಹಲೋತ್
- ಗೋವಾ–ಪಿ.ಎಸ್.ಶ್ರೀಧರನ್ ಪಿಳ್ಳೈ
- ತ್ರಿಪುರ–ಸತ್ಯದೇವ್ ನಾರಾಯಣ್ ಆರ್ಯ
- ಜಾರ್ಖಂಡ್–ರಮೇಶ್ ಬೈಸ್
- ಹರಿಯಾಣ–ಬಂಡಾರು ದತ್ತಾತ್ರೇಯ
- ಮಿಜೋರಾಂ– ಹರಿಬಾಬು ಕಂಭಂಪತಿ
- ಮಧ್ಯಪ್ರದೇಶ–ಮಂಗುಭಾಯ್ ಛಗನ್‌ಬಾಯ್ ಪಟೇಲ್
- ಹಿಮಾಚಲ ಪ್ರದೇಶ– ರಾಜೇಂದ್ರನ್ ವಿಶ್ವನಾಥ್ ಅರ್ಲೇಕರ್

**6 ವರ್ಷ, 10 ತಿಂಗಳು ರಾಜ್ಯಪಾಲರಾಗಿದ್ದ ವಾಲಾ:** 2014ರಲ್ಲಿ ವಿ.ಆರ್. ವಾಲಾ ಅವರು ಕರ್ನಾಟಕಕ್ಕೆ ರಾಜ್ಯಪಾಲರಾಗಿ ಬಂದಾಗಿನಿಂದಲೂ ಜನರೊಂದಿಗೆ ಬೆರೆಯುತ್ತಿಲ್ಲ ಎನ್ನುವ ಆರೋಪವಿತ್ತು. ಐದು ವರ್ಷದ ಅವಧಿ ಮುಗಿದ ಬಳಿಕವು ರಾಜ್ಯಪಾಲರಾಗಿ ಮುಂದುವರೆದಿದ್ದ ಅವರು, ಸಾರ್ವಜನಿಕರೊಂದಿಗೆ ಬೆರೆಯುತ್ತಿರಲಿಲ್ಲ. ಕರ್ನಾಟಕದ ರಾಜಭವನದಲ್ಲಿ ಗುಜರಾತಿಗಳ ದರ್ಬಾರ್ ಎಂದು ವರದಿಗಳನ್ನು ಪ್ರಕಟಿಸಿತ್ತು. ಅವಧಿ ಮುಗಿದಿರುವುದರಿಂದ, ವಾಲಾ ಅವರನ್ನು ಬದಲಾಯಿಸಬೇಕು ಎನ್ನುವ ಬಗ್ಗೆಯೂ ವಿಶೇಷ ವರದಿ ಪ್ರಕಟವಾಗಿತ್ತು.

ಆಧಾರ:ವಿಶ್ವವಾಣಿ, ದಿನಾಂಕ:07.07.2021

## 6. 3 ಪ್ರಾಧಿಕಾರ, ರೂ.328 ಕೋಟಿ ಮೊತ್ತದ ಯೋಜನೆಗಳು

ಐತಿಹಾಸಿಕ ಪಾರಂಪರಿಕ ಹಾಗೂ ಸಾಮಾಜಿಕ ಸುಧಾರಣೆಯ ನೆಲೆಯ ಬೇರುಗಳನ್ನು ಇನ್ನಷ್ಟು ಗಟ್ಟಿಗೊಳಿಸಿ, ಆ ಮೂಲಕ ಮುಂದಿನ ಪೀಳಿಗೆಗೆ ಪರಿಚಯಿಸಲು ಉದ್ದೇಶಿತ ಮೂರು ಪ್ರಾಧಿಕಾರಗಳ ರೂ.328.25 ಕೋಟಿ ಮೊತ್ತದ ಯೋಜನೆಗಳಿಗೆ ಸರ್ಕಾರ ಒಪ್ಪಿಗೆ ನೀಡಿದೆ.

ಮುಖ್ಯಮಂತ್ರಿಯವರ ಗೃಹ ಕಚೇರಿ ಕೃಷ್ಣಾದಲ್ಲಿ ಮುಖ್ಯಮಂತ್ರಿಯವರ ಅಧ್ಯಕ್ಷತೆಯಲ್ಲಿ ಕಿತ್ತೂರು ನಾಡಪ್ರಭು ಕೆಂಪೇಗೌಡ ಹಾಗೂ ಕೂಡಲಸಂಗಮ ಅಭಿವೃದ್ಧಿ ಪ್ರಾಧಿಕಾರಗಳ ಸಭೆಗಳು ಪ್ರತ್ಯೇಕವಾಗಿ ನಡೆದವು.

ಕೂಡಲಸಂಗಮದಲ್ಲಿ ದೆಹಲಿಯ ಅಕ್ಷರಧಾಮ ಮಾದರಿ ಬಸವ ಅಂತರರಾಷ್ಟ್ರೀಯ ಮಟ್ಟದ ಮ್ಯೂಸಿಯಂ ನಿರ್ಮಾಣ ಕಾಮಗಾರಿ ಚುರುಕುಗೊಳಿಸಿ, ಮೊದಲ ಹಂತದ ಕಾಮಗಾರಿಗಳನ್ನು ಶೀಘ್ರವೇ ಪೂರ್ಣಗೊಳಿಸಲು ಮುಖ್ಯಮಂತ್ರಿಯವರು ಸೂಚಿಸಿದರು.

ರಾಣಿಚೆನ್ನಮ್ಮನ ಸಮಾಧಿಯ ಸ್ಥಳದ ಅಭಿವೃದ್ದಿ, ಸ್ಮಾರಕಭವನ ಕಿತ್ತೂರು ಸಂಸ್ಥಾನ ಅರಮನೆ ಪ್ರತಿರೂಪ ನಿರ್ಮಾಣವು ಒಳಗೊಂಡ ಕ್ರಿಯಾ ಯೋಜನೆಗೆ ಅನುಮೋದನೆ ನೀಡಲಾಯಿತು. ಕೆಂಪೇಗೌಡರ ಕಾಲದ 46 ಪಾರಂಪರಿಕ ತಾಣಗಳನ್ನು ಮೂರು ಸರ್ಕ್ಯೂಟ್‌ಗಳಲ್ಲಿ ಗುರುತಿಸಲಾಗಿದ್ದು, ಪ್ರವಾಸೋದ್ಯಮ ಅಭಿವೃದ್ಧಿ ದೃಷ್ಟಿಯಲ್ಲಿರಿಸಿಕೊಂಡು ಈ ತಾಣಗಳ ಅಭಿವೃದ್ಧಿ ಕಾರ್ಯಕ್ರಮಗಳನ್ನು ಜಾರಿಗೊಳಿಸಬೇಕು ಎಂದು ಮುಖ್ಯಮಂತ್ರಿಯವರು ಸಲಹೆ ನೀಡಿದರು.

**ನಾಡಪ್ರಭು ಕೆಂಪೇಗೌಡ ಅಭಿವೃದ್ಧಿ ಪ್ರಾಧಿಕಾರ:–**

- ಬೆಂಗಳೂರು ನಗರ, ಗ್ರಾಮಾಂತರ, ರಾಮನಗರ, ಚಿಕ್ಕಬಳ್ಳಾಪುರ ಮತ್ತು ತುಮಕೂರು ಜಿಲ್ಲೆಗಳಲ್ಲಿನ ಕೆಂಪೇಗೌಡರ 46 ಪಾರಂಪರಿಕ ತಾಣಗಳ ಅಭಿವೃದ್ಧಿ
- ಮಾಗಡಿ ಸರ್ಕ್ಯೂಟ್‌ಗೆ ರೂ.132 ಕೋಟಿ, ಬೆಂಗಳೂರು ಸರ್ಕ್ಯೂಟ್‌ಗೆ ರೂ.47 ಕೋಟಿ ಹಾಗೂ ನಂದಿ ಸರ್ಕ್ಯೂಟ್‌ಗೆ ರೂ.44 ಕೋಟಿ ವೆಚ್ಚದ ಯೋಜನೆ.
- ಅಂತರರಾಷ್ಟ್ರೀಯ ವಿಮಾನ ನಿಲ್ದಾಣದ ಸಮೀಪ ರೂ.64 ಕೋಟಿ ವೆಚ್ಚದಲ್ಲಿ 108 ಅಡಿ

**ಎತ್ತರದ ಕಂಚಿನ ಪ್ರತಿಮೆ ನಿರ್ಮಾಣ ಪ್ರಗತಿ.**

- ಪ್ರತಿಮೆಯ ಸುತ್ತ ಥೀಮ್ ಪಾರ್ಕ್ ನಿರ್ಮಾಣ ಯೋಜನೆಗೆ ಸಿದ್ಧತೆ.
- ಕೆಂಪಾಪುರದಲ್ಲಿ ನಾಡಗೌಡ ಕೆಂಪೇಗೌಡರ ವೀರ ಸಮಾಧಿ ಅಭಿವೃದ್ಧಿಗೆ ರೂ.32 ಕೋಟಿ ವೆಚ್ಚ.

- ಕೆಂಪೇಗೌಡರ ಜೀವನಾಧಾರಿತ ಪುಸ್ತಕ, ಕಿರುಚಿತ್ರ ಆಡಳಿತಾವಧಿಯ ಕೋಟೆಗಳು, ಕೆರೆಗಳು ಮತ್ತು ಪಾರಂಪರಿಕ ತಾಣಗಳ ಅಭಿವೃದ್ದಿಗೆ ವಿವಿಧ ಇಲಾಖೆಗಳ ಸಹಭಾಗಿತ್ವದಲ್ಲಿ ಯೋಜನೆ ತಯಾರಿ.

**ಕೂಡಲಸಂಗಮ ಅಭಿವೃದ್ಧಿ ಪ್ರಾಧಿಕಾರ:**

- ಬಸವ ಅಂತರರಾಷ್ಟ್ರೀಯ ಮ್ಯೂಸಿಯಂ ನಿರ್ಮಾಣ ಯೋಜನೆಗೆ ಮೊದಲ ಹಂತದಲ್ಲಿ ರೂ.94 ಕೋಟಿ ವೆಚ್ಚ.
- ಎಂ.ಕೆ. ಹುಬ್ಬಳ್ಳಿಯಲ್ಲಿರುವ ಗಂಗಾಂಬಿಕೆ ಐಕ್ಯಮಂಟಪದ ಹತ್ತಿರ ಮೂಲ ಸವಲತ್ತು ಅಭಿವೃದ್ಧಿಗೆ ರೂ.1.25 ಕೋಟಿ ಮೀಸಲಿರಿಸಲು ತೀರ್ಮಾನ.
- ಪ್ರವಾಹದಿಂದ ಸಂಪೂರ್ಣ ಜಲಾವೃತ ಕೂಡಲಸಂಗಮ ಅಭಿವೃದ್ಧಿ ಮಂಡಳಿ ವ್ಯಾಪ್ತಿಯ 81 ಮಳಿಗೆಗಳ 2 ತಿಂಗಳ ರೂ.2.97 ಲಕ್ಷ ಬಾಡಿಗೆ ಮನ್ನಾ.

**ಕಿತ್ತೂರು ಅಭಿವೃದ್ಧಿ ಪ್ರಾಧಿಕಾರ:**

- ಕಿತ್ತೂರು ಐತಿಹಾಸಿಕ ತಾಣಗಳ ಅಭಿವೃದ್ಧಿಗಾಗಿ ಆಯವ್ಯಯದಲ್ಲಿ ರೂ.50 ಕೋಟಿ ಮೀಸಲು. ಪ್ರಸಕ್ತ ಸಾಲಿನ ರೂ.10 ಕೋಟಿ ವೆಚ್ಚದ ಕ್ರಿಯಾ ಯೋಜನೆಗೆ ಆಸ್ತು.
- ಚೆನ್ನಮ್ಮ ಸ್ಮಾರಕ ಭವನ ನಿರ್ಮಾಣ, ಸಮಾಧಿ ಸ್ಥಳ, ಚೌಕಿಮಠ ಗದ್ದುಗೆ ಅಭಿವೃದ್ಧಿ
- ಬೆಳವಡಿಯಲ್ಲಿ ಬೆಳವಡಿ ಮಲ್ಲಮ್ಮನ ಪ್ರತಿಮೆ, ಇತಿಹಾಸ ಸಾರುವ ಫಲಕ ನಿರ್ಮಾಣ.
- ಕಿತ್ತೂರು ಸಂಸ್ಥಾನದ ಕಾಗದಪತ್ರಗಳ ಸಂರಕ್ಷಣೆ.
- ಚೆನ್ನಮ್ಮನ ಅರಮನೆಯ ಪುನರ್ ನಿರ್ಮಾಣವನ್ನು ರಾಜ್ಯ ಪುರಾತತ್ವ ಇಲಾಖೆಯೊಂದಿಗೆ ಸಮಾಲೋಚನೆಗೆ ಸೂಚನೆ.
- ಸ್ಮಾರಕಗಳ ನಿರ್ವಹಣೆಗೆ ಪ್ರಾಧಿಕಾರವು ಸಂಪನ್ಮೂಲ ಸೃಜಿಸುವುದಕ್ಕೆ ಕ್ರಮಕೈಗೊಳ್ಳಲು ನಿರ್ಣಯ.

ಆಧಾರ:ವಿಜಯವಾಣಿ, ದಿನಾಂಕ:07.07.2021

## 7. ಕೊಡಗು ಜಿಲ್ಲೆಯ 5ನೇ ತಾಲ್ಲೂಕು ಕುಶಾಲನಗರಕ್ಕೆ ಅಶೋಕ್ ಚಾಲನೆ

ಕೊಡಗಿನ 5ನೇ ತಾಲ್ಲೂಕಾಗಿ ಕುಶಾಲನಗರ ಲೋಕಾರ್ಪಣೆಗೊಂಡಿದ್ದು, ಕಂದಾಯ ಸಚಿವ ಆರ್. ಅಶೋಕ್ ಅಧಿಕೃತವಾಗಿ ಉದ್ಘಾಟಿಸಿದರು. ಈ ವೇಳೆ ಮಾತನಾಡಿದ ಸಚಿವರು ಕುಶಾಲನಗರ ನೂತನ ತಾಲ್ಲೂಕು ರಚನೆ ಮಾಡಿ ರಾಜ್ಯ ಸರ್ಕಾರ ಘೋಷಿಸಿದೆ. ನೂತನ ಕಛೇರಿಗೆ ತಹಸೀಲ್ದಾರ್ ನೇಮಕ, ಮೂಲ ಭೂತ ಸೌಲಭ್ಯ ಕಲ್ಪಿಸಲು ಸರ್ಕಾರ ಈಗಾಗಲೇ ರೂ.50 ಲಕ್ಷ ಬಿಡುಗಡೆ ಮಾಡಿದೆ. ಸಿಬ್ಬಂದಿ ನೇಮಕಕ್ಕೂ ಸರ್ಕಾರ ಒಪ್ಪಿಗೆ ನೀಡಿದೆ ಎಂದರು. ಇದೇ ವೇಳೆ ಜಿಲ್ಲಾ ಪಂಚಾಯತ್ ಮಾಜಿ ಸದಸ್ಯ ಕೆ.ಪಿ.ಶಶಿಧರ್ ಅವರು ಕಾರ್ಯಕ್ರಮದಲ್ಲಿ ತಮ್ಮನ್ನು ಕಡೆಗಣಿಸಿರುವ ಬಗ್ಗೆ ಅಸಮಾಧಾನ ವ್ಯಕ್ತಪಡಿಸಿ ಗೊಂದಲ ಸೃಷ್ಟಿಸಿದರು. ಶಾಸಕ ಅಪ್ಪಚ್ಚುರಂಜನ್ ಮಧ್ಯಪ್ರವೇಶಿಸಿದಾಗ ಮಾತಿಗೆ ಮಾತು ಬೆಳೆದು ಸಭೆಯಲ್ಲಿ ಗೊಂದಲ ಉಂಟಾಯಿತು. ಪೊಲೀಸರು ಮಧ್ಯಪ್ರವೇಶಿಸಿ ವಿ.ಪಿ. ಶಶಿಧರ್ ಮತ್ತಿತರರನ್ನು ಸಭೆಯಿಂದ ಹೊರಕಳುಹಿಸಿದರು.

ಆಧಾರ:ಕನ್ನಡಪ್ರಭ, ದಿನಾಂಕ:07.07.2021

## 8. ಕೊರೋನಾಗೆ ಬಲಿಯಾದ ರೈತರ 1 ಲಕ್ಷ ಸಾಲ ಮನ್ನಾ

ಕೊರೋನಾದಿಂದ ಮೃತಪಟ್ಟ ಸಹಕಾರಿ ಸಂಘಗಳ ಸದಸ್ಯರ ಸಾಲ ಮನ್ನಾ ಮಾಡಲಾಗುವುದು ಎಂದು ರಾಜ್ಯ ಅಪೆಕ್ಸ್ ಬ್ಯಾಂಕ್ ಅಧ್ಯಕ್ಷ ಬೆಳ್ಳಿಪ್ರಕಾಶ್ ಹೇಳಿದ್ದಾರೆ.

ಸುದ್ದಿಗಾರರೊಂದಿಗೆ ಮಾತನಾಡಿದ ಅವರು, ರಾಜ್ಯದ 21 ಜಿಲ್ಲೆಯಲ್ಲಿರುವ ಸಹಕಾರ ಕೇಂದ್ರ (ಡಿಸಿಸಿ) ಬ್ಯಾಂಕ್‌ಗಳಲ್ಲಿ ಬೆಳೆ ಸಾಲ ಪಡೆದಿರುವ ರೈತರಲ್ಲಿ ಯಾರಾದರೂ ಕೊರೋನಾ ಸೋಂಕಿನಿಂದ ಮೃತಪಟ್ಟಿದ್ದರೆ ಈ ರೈತರ ಗರಿಷ್ಠ ರೂ.1 ಲಕ್ಷಗಳ ಸಾಲ ಮನ್ನಾ ಮಾಡಲಾಗುವುದು. ಈ ಬಗ್ಗೆ ಸಭೆಯಲ್ಲಿ ಚರ್ಚಿಸಿ ನಿರ್ಣಯ ಕೈಗೊಳ್ಳಲಾಗಿದೆ. ಈಗಾಗಲೇ ಎಲ್ಲ ಡಿಸಿಸಿ ಬ್ಯಾಂಕ್‌ಗಳಿಂದ ಮಾಹಿತಿ ಪಡೆಯುತ್ತಿದ್ದು ಮೃತರ ಸಂಪೂರ್ಣ ದಾಖಲೆಗಳೊಂದಿಗೆ ಮಾಹಿತಿ ಬಂದ ನಂತರ ಬಜೆಟ್‌ಗೆ ಅನುಗುಣವಾಗಿ ಸಾಲ ಮನ್ನಾ ಮಾಡಲಾಗುವುದು ಎಂದಿದ್ದಾರೆ.

ಕೊರೋನಾದಿಂದ ಮೃತಪಟ್ಟ ರೈತರು ರೂ. 55 ಸಾವಿರ ಮಾತ್ರ ಸಾಲ ಮಾಡಿದ್ದರೆ ಅಷ್ಟು ಮಾತ್ರ ಮನ್ನಾ ಆಗಲಿದೆ. ರೂ.1.50 ಲಕ್ಷ ಸಾಲ ಮಾಡಿದ್ದರೆ ರೂ.1 ಲಕ್ಷ ಮಾತ್ರ ಮನ್ನಾ ಆಗಲಿದೆ. ಕೋವಿಡ್‌ನಿಂದ ಮೃತಪಟ್ಟ ರೈತ ಕುಟುಂಬದ ಸದಸ್ಯರು ಸಮೀಪದ ಡಿಸಿಸಿ ಬ್ಯಾಂಕ್‌ಗಳಲ್ಲಿ ಮಾಹಿತಿ ಪಡೆದು ಅರ್ಜಿ ಸಲ್ಲಿಸಬಹುದಾಗಿದೆ ಎಂದರು.

ಆಧಾರ: ಉದಯವಾಣಿ, ದಿನಾಂಕ:07.07.2021

## 9. ಲೈಂಗಿಕ ಅಲ್ಪ ಸಂಖ್ಯಾತರಿಗೆ ಶೇ.1 ಮೀಸಲಾತಿಗೆ ಸರ್ಕಾರ ಅಧಿಸೂಚನೆ

ಲೈಂಗಿಕ ಅಲ್ಪಸಂಖ್ಯಾತರಿಗೆ ಸರ್ಕಾರಿ ಉದ್ಯೋಗದಲ್ಲಿ ಮೀಸಲಾತಿ ಕೊಡಲು ರಾಜ್ಯ ಸರ್ಕಾರ ಅಧಿಸೂಚನೆ ಹೊರಡಿಸಿದೆ. ನೇರ ನೇಮಕಾತಿ ಮೂಲಕ ನೇಮಕ ಮಾಡಿಕೊಳ್ಳುವ ಎಲ್ಲ ರೀತಿಯ ಅಂದರೆ ಗ್ರೂಪ್ 'ಎ' ನಿಂದ ಗ್ರೂಪ್ 'ಡಿ' ವರೆಗಿನ ಹುದ್ದೆಗಳಲ್ಲಿ ಲೈಂಗಿಕ ಅಲ್ಪಸಂಖ್ಯಾತರಿಗೆ ಶೇ.1 ರಷ್ಟು ಮೀಸಲಾತಿ ನೀಡಬೇಕೆಂದು ಆದೇಶ ಮಾಡಿದೆ. ಹೈಕೋರ್ಟ್ ಆದೇಶದಂತೆ ರಾಜ್ಯ ಬಿಜೆಪಿ ಸರ್ಕಾರ ಅಧಿಸೂಚನೆ ಹೊರಡಿಸಿದೆ.

ಲೈಂಗಿಕ ಅಲ್ಪಸಂಖ್ಯಾತರಿಗೆ ಮೀಸಲಾತಿ ಕಲ್ಪಿಸಲು 1977ರ ಕರ್ನಾಟಕ ನಾಗರಿಕ ಸೇವೆಗಳ (ಸಾಮಾನ್ಯ ನೇಮಕಾತಿ) ನಿಯಮ 9ನ್ನು ತಿದ್ದುಪಡಿ ಮಾಡಲಾಗಿದೆ. ಮೀಸಲಾತಿ ಕುರಿತು ಸುಪ್ರೀಂಕೋರ್ಟ್‌ನ ನಿರ್ದೇಶನಗಳನ್ನು ಜಾರಿಗೊಳಿಸುವಂತೆ ನ್ಯಾಯಾಲಯ ಕಳೆದ ವರ್ಷ ರಾಜ್ಯ ಸರ್ಕಾರಕ್ಕೆ ಸೂಚಿಸಿತ್ತು. ಅದರಂತೆ, ಜುಲೈ 6, 2021 ರಂದು ಅಧಿಸೂಚನೆ ಹೊರಡಿಸಿರುವ ಸರ್ಕಾರ ಲೈಂಗಿಕ ಅಲ್ಪಸಂಖ್ಯಾತರಿಗೆ ಮೀಸಲಾತಿ ನಿಗದಿ ಮಾಡಿ ಆದೇಶ ಮಾಡಿದೆ.

ಅಧಿಸೂಚನೆಯ ಪ್ರಕಾರ ಜನರಲ್ ಮೆರಿಟ್, ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಮತ್ತು ಇತರ ಹಿಂದುಳಿದ ವರ್ಗಗಳ ಪ್ರತಿಯೊಂದು ವಿಭಾಗಗಳಲ್ಲಿಯೂ ಲೈಂಗಿಕ ಅಲ್ಪಸಂಖ್ಯಾತರಿಗೆ ಶೇ.1 ರಷ್ಟು ಮೀಸಲಾತಿ ಲಭ್ಯವಿರುತ್ತದೆ.

ಆಧಾರ: ಉದಯವಾಣಿ, ದಿನಾಂಕ:08.07.2021

## 10.ಬಸವ ಕಲ್ಯಾಣ, ಕಾಗಿನೆಲೆ ಅಭಿವೃದ್ಧಿ ಯೋಜನೆಗೆ ಅನುಮೋದನೆ

ಬಸವಕಲ್ಯಾಣ ಅಭಿವೃದ್ಧಿ ಮಂಡಳಿಯ 2021–22ನೇ ಸಾಲಿನ ಕ್ರಿಯಾ ಯೋಜನೆಗೆ ಮುಖ್ಯಮಂತ್ರಿಯವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ಅನುಮೋದನೆ ನೀಡಲಾಯಿತು.

ಮಂಡಳಿ ವತಿಯಿಂದ ಕೈಗೊಳ್ಳಲಾಗಿರುವ 134 ಕಾಮಗಾರಿಗಳ ಪೈಕಿ ಈವರೆಗೆ 76 ಕಾಮಗಾರಿಗಳು ಪೂರ್ಣಗೊಂಡಿದ್ದು, 58 ಕಾಮಗಾರಿಗಳು ಬಾಕಿ ಇರುತ್ತವೆ. ಒಟ್ಟು ರೂ.500 ಕೋಟಿ

ವೆಚ್ಚದ ಅನುಭವ ಮಂಟಪ ಯೋಜನೆಗೆ ಸರ್ಕಾರ ರೂ.200 ಕೋಟಿ ಹಂಚಿಕೆ ಮಾಡಿದೆ. ಒಟ್ಟು 101 ಎಕರೆ ಪ್ರದೇಶದಲ್ಲಿ ಯೋಜನೆ ಅನುಷ್ಠಾನಗೊಳ್ಳುತ್ತಿದ್ದು, 11 ಎಕರೆ 25 ಗುಂಟೆ ಉಚಿತವಾಗಿ ಲಭ್ಯವಿದೆ. ಉಳಿದ 69 ಎಕರೆ ಭೂಮಿ ಸ್ವಾಧೀನಪಡಿಸಿಕೊಳ್ಳಬೇಕಾಗಿದೆ. ಈ ಭೂಮಿಯ ಮಾಲೀಕರು ಹೆಚ್ಚು ಪರಿಹಾರ ಬಯಸಿದ್ದು, ಮಾರುಕಟ್ಟೆ ದರದಲ್ಲಿ ಪರಿಹಾರ ಕೇಳುತ್ತಿದ್ದಾರೆ. ಆದುದರಿಂದ ಭೂ ಸ್ವಾಧೀನ ಪ್ರಕ್ರಿಯೆಗೆ ತೊಂದರೆಯಾಗಿದೆ. ಪರಸ್ಪರ ಸಂಧಾನ ನಡೆಸಿ ರೈತರ ಸಮ್ಮತಿ ಪಡೆದು ಭೂ ಸ್ವಾಧೀನ ಪ್ರಕ್ರಿಯೆ ಜರುಗಿಸುವಂತೆ ಮುಖ್ಯಮಂತ್ರಿಯವರು ಅಧಿಕಾರಿಗಳಿಗೆ ಸಲಹೆ ನೀಡಿದ್ದಾರೆ.

ಪ್ರಸಕ್ತ ಬಜೆಟ್‌ನಲ್ಲಿ ಲಭ್ಯವಿರುವ ರೂ.10.ಕೋಟಿ ಸೇರಿಸಿ ಕ್ರಿಯಾ ಯೋಜನೆ ಸಿದ್ಧಪಡಿಸುವಂತೆ ಸೂಚಿಸಿದ ಅವರು, ಪ್ರಸ್ತುತ ಲಭ್ಯವಿರುವ ಭೂಮಿಯಲ್ಲಿ ಮಣ್ಣಿನ ಪರೀಕ್ಷೆ ಮತ್ತು ಇತರ ಕಾಮಗಾರಿಗಳು ನಡೆದಿವೆ. ಭೂ ಸ್ವಾಧೀನ ಪ್ರಕ್ರಿಯೆ ಜೊತೆಜೊತೆಗೆ ಡಿಪಿಆರ್ ಹಾಗೂ ಇತರೆ ಕಾರ್ಯಗಳನ್ನು ಪೂರ್ಣಗೊಳಿಸುವಂತೆ ನಿರ್ದೇಶನ ನೀಡಿದರು. ಇನ್ನು ಮುಂದೆ ಬಸವಕಲ್ಯಾಣ ಸಭೆಗೆ ಬೀದರ್ ಜಿಲ್ಲೆಯ ಜಿಲ್ಲಾ ಶಾಸಕರನ್ನು ಆಹ್ವಾನಿಸುವಂತೆ ಭಾಲ್ಕಿ ಶಾಸಕ ಈಶ್ವರ ಖಂಡ್ರೆ ನೀಡಿದ ಸಲಹೆಗೆ ಮುಖ್ಯಮಂತ್ರಿಯವರು ಸಮ್ಮತಿ ವ್ಯಕ್ತಪಡಿಸಿದರು.

ರೈತರ ಒಪ್ಪಿಗೆ ಮೇರೆಗೆ ಭೂಮಿ ಸ್ವಾಧೀನಪಡಿಸಿಕೊಳ್ಳುವ ಸಂಬಂಧ ಮುಖ್ಯಮಂತ್ರಿಯವರ ಅಧ್ಯಕ್ಷತೆಯಲ್ಲಿ ರಾಜ್ಯ ಮಟ್ಟದಲ್ಲಿ ಸಭೆಯೊಂದನ್ನು ನಡೆಸಲು ತೀರ್ಮಾನಿಸಲಾಯಿತು.

ಕಾಗಿನೆಲೆ ಅಭಿವೃದ್ಧಿ ಪ್ರಾಧಿಕಾರದ ಸಭೆ ಕೂಡ ಇಂದು ಜರುಗಿತ್ತು. ಪ್ರಸಕ್ತ ಆರ್ಥಿಕ ವರ್ಷದಲ್ಲಿ ರೂ.14 ಕೋಟಿಗಳನ್ನು ವೆಚ್ಚ ಮಾಡಲು ಸಭೆ ಅನುಮೋದನೆ ನೀಡಿತು. ಕಾಗಿನೆಲೆಯಲ್ಲಿ ನಿರ್ಮಾಣ ಪೂರ್ಣಗೊಳಿಸಿರುವ ಪ್ರಕೃತಿ ಚಿಕಿತ್ಸಾ ಕೇಂದ್ರವನ್ನು ಶೀಘ್ರ ಉದ್ಘಾಟಿಸಲು ನಿರ್ಧರಿಸಲಾಯಿತು.

ಸಂಗೊಳ್ಳಿ ರಾಯಣ್ಣ ಕ್ಷೇತ್ರಾಭಿವೃದ್ಧಿ ಪ್ರಾಧಿಕಾರದ ಸಭೆಯಲ್ಲಿ 2021–22ನೇ ಸಾಲಿನ ಕ್ರಿಯಾ ಯೋಜನೆಗೆ ಅನುಮೋದನೆ ನೀಡಲಾಯಿತು. ಪ್ರಾಧಿಕಾರದ ವತಿಯಿಂದ ಕೈಗೊಳ್ಳಲಾದ ಕಾಮಗಾರಿಗಳಿಗೆ ಸಂಬಂಧಿಸಿದ ಬಾಕಿ ಇರುವ ರೂ.22 ಕೋಟಿ ವೆಚ್ಚ ಪಾವತಿ ಮಾಡಲು ಅನುಮೋದನೆ ನೀಡಲಾಯಿತು.

ಪ್ರಸಕ್ತ ಆರ್ಥಿಕ ವರ್ಷದಲ್ಲಿ ಬಜೆಟ್‌ನಲ್ಲಿ ಸಂಗೊಳ್ಳಿ ರಾಯಣ್ಣ ಪ್ರಾಧಿಕಾರಕ್ಕೆ ರೂ.62 ಕೋಟಿಗಳನ್ನು ಒದಗಿಸಿದೆ. ರೂ.279 ಕೋಟಿ ವೆಚ್ಚದ ಕ್ರಿಯಾ ಯೋಜನೆಯನ್ನು ಪ್ರಾಧಿಕಾರ ರೂಪಿಸಿದ್ದು, 2021 ರಿಂದ ಈವರೆಗೆ ರೂ.159 ಕೋಟಿಗಳನ್ನು ವೆಚ್ಚಮಾಡಲಾಗಿದೆ ಎಂದು ಅಧಿಕಾರಿಗಳು ಮಾಹಿತಿ ನೀಡಿದರು.

ರಾಯಣ್ಣನ ಜನ್ಮಸ್ಥಳದಲ್ಲಿ ಸೈನಿಕ ಶಾಲೆ ಪೂರ್ಣಗೊಂಡಿದೆ. ಕೇಂದ್ರ ರಕ್ಷಣಾ ಇಲಾಖೆಯೊಂದಿಗೆ ಒಪ್ಪಂದ ಮಾಡಿಕೊಂಡು ಶಾಲೆಯ ಆರಂಭಕ್ಕೆ ಅಗತ್ಯ ವ್ಯವಸ್ಥೆಯನ್ನು ಮಾಡಿಕೊಳ್ಳಲು ಮುಖ್ಯಮಂತ್ರಿಯವರು ಸೂಚಿಸಿದರು. ಸೈನಿಕ ಶಾಲೆ ಆರಂಭಕ್ಕೆ ಅನುಮೋದನೆ ಹುದ್ದೆಗಳ ಮಂಜೂರಾತಿ ಬಗ್ಗೆ ರಕ್ಷಣಾ ಸಚಿವ ರಾಜನಾಥ್ ಸಿಂಗ್ ಜೊತೆ ಚರ್ಚಿಸಿ ಒಪ್ಪಿಗೆ ಪಡೆಯಲಾಗುವುದು ಎಂದು ಮುಖ್ಯಮಂತ್ರಿಯವರು ತಿಳಿಸಿದರು.

ನಂದಗಢದಲ್ಲಿ ಅಂತರರಾಷ್ಟ್ರೀಯ ಮಟ್ಟದ ವಸ್ತು ಸಂಗ್ರಹಾಲಯ ಮತ್ತು ರಾಕ್ ಗಾರ್ಡನ್ ನಿರ್ಮಾಣ ಕಾಮಗಾರಿಗಳು ಜರುಗಿದ್ದು, ಈ ಕೆಲಸವನ್ನು ಪೂರ್ಣಗೊಳಿಸುವಂತೆ ಸೂಚಿಸಲಾಯಿತು.

ಕಳೆದ ವಾರ ಮುಖ್ಯಮಂತ್ರಿಯವರ ಅಧ್ಯಕ್ಷತೆಯಲ್ಲಿ ಕೂಡಲ ಸಂಗಮ ಅಭಿವೃದ್ಧಿ ಪ್ರಾಧಿಕಾರ, ಕಿತ್ತೂರು ಪ್ರಾಧಿಕಾರ ಹಾಗು ಕೆಂಪೇಗೌಡ ಅಭಿವೃದ್ಧಿ ಪ್ರಾಧಿಕಾರದ ಸಭೆ ಜರುಗಿದ್ದವು. ಮುಂದುವರಿದ ಭಾಗವಾಗಿ ಒಂದು ಬಸವಕಲ್ಯಾಣ ಅಭಿವೃದ್ಧಿ ಮಂಡಳಿ, ಕಾಗಿನೆಲೆ ಅಭಿವೃದ್ಧಿ ಪ್ರಾಧಿಕಾರ ಹಾಗೂ

ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ ಅಭಿವೃದ್ಧಿ ಪ್ರಾಧಿಕಾರದ ಸಭೆಗಳು ಜರುಗಿ ಎಲ್ಲ ಪ್ರಾಧಿಕಾರಗಳ ವಾರ್ಷಿಕ ಕ್ರಿಯಾ ಯೋಜನೆಗಳಿಗೆ ಮುಖ್ಯಮಂತ್ರಿಗಳ ಅಧ್ಯಕ್ಷತೆಯಲ್ಲಿ ಅನುಮೋದನೆ ನೀಡಲಾಗಿದೆ.

ಆಧಾರ: ಸಂಯುಕ್ತ ಕರ್ನಾಟಕ, ದಿನಾಂಕ:13.07.2021

## 11. ಕನ್ನಡಿಗರ ಕೂಗಿಗೆ ಕೇಂದ್ರ ಸರ್ಕಾರ ಮಾನ್ಯತೆ

ಸಾರ್ವಜನಿಕ ಬ್ಯಾಂಕ್‌ಗಳಲ್ಲಿನ ಗುಮಾಸ್ತ ಮಟ್ಟದ ಹುದ್ದೆಗಳ ಭರ್ತಿಗಾಗಿ ನಡೆಸಲಾಗುವ ಬ್ಯಾಂಕಿಂಗ್ ಪರೀಕ್ಷೆಗಳನ್ನು ಕನ್ನಡದಲ್ಲೂ ನಡೆಸಬೇಕೆಂದು ಒತ್ತಾಯಿಸಿರುವ ಕನ್ನಡಿಗರ ಕೂಗಿಗೆ ಕೇಂದ್ರ ಸರ್ಕಾರ ಮಾನ್ಯತೆ ನೀಡಿದೆ. ಕನ್ನಡಿಗರ ಮನವಿಯ ಬಗ್ಗೆ ಪರಿಶೀಲನೆ ನಡೆಸಲು ಸಮಿತಿಯೊಂದನ್ನು ರಚಿಸಲಾಗಿದ್ದು 15 ದಿನಗಳೊಳಗೆ ವರದಿ ನೀಡುವಂತೆ ಸಮಿತಿಗೆ ಸೂಚಿಸಲಾಗಿದೆ. ಸಮಿತಿಯ ವರದಿ ಸಲ್ಲಿಕೆಯಾಗುವವರೆಗೂ ಕ್ಲರ್ಕ್ ಹುದ್ದೆಗಳಿಗಾಗಿ ಬ್ಯಾಂಕಿಂಗ್ ಸಿಬ್ಬಂದಿ ನೇಮಕಾತಿ ಸಂಸ್ಥೆ (ಐಬಿಪಿಎಸ್) ಕರೆದಿರುವ ಪರೀಕ್ಷೆಯ ಅರ್ಜಿ ಸಲ್ಲಿಕೆ ಪ್ರಕ್ರಿಯೆಗಳನ್ನು ತಡೆ ಹಿಡಿಯಲಾಗಿದೆ ಎಂದು ಕೇಂದ್ರ ಹಣಕಾಸು ಸಚಿವಾಲಯ ಪ್ರಕಟಿಸಿದೆ.

ಜೂನ್ 13 ರಂದು ಐಬಿಪಿಎಸ್ ಮೂಲಕ ಬ್ಯಾಂಕ್‌ಗಳ ಗುಮಾಸ್ತರ ಹುದ್ದೆಗೆ ಅರ್ಜಿ ಆಹ್ವಾನಿಸಲಾಗಿದೆ. ಪ್ರಕಟಣೆ ಹೊರಬೀಳುತ್ತಿದ್ದಂತೆ ಸಿಡಿದೆದ್ದ ಕನ್ನಡಿಗರು ಈ ಪರೀಕ್ಷೆಗಳನ್ನು ಕನ್ನಡ ಮತ್ತು ಇಂಗ್ಲೀಷ್ ಭಾಷೆಯಲ್ಲಿ ಮಾತ್ರ ನಡೆಸುವುದಾಗಿ ಪ್ರಕಟಿಸಲಾಗಿದೆ. 2019ರಲ್ಲಿ ಕೇಂದ್ರ ವಿತ್ತ ಸಚಿವರು ಎಲ್ಲಾ ಬ್ಯಾಂಕಿಂಗ್ ಪರೀಕ್ಷೆಗಳನ್ನು ಇಂಗ್ಲೀಷ್ ಮತ್ತು ಹಿಂದಿ ಮಾತ್ರವಲ್ಲದೆ ಕನ್ನಡ ಸೇರಿ 22 ಪ್ರಾದೇಶಿಕ ಭಾಷೆಗಳಲ್ಲಿ ನಡೆಸುವುದಾಗಿ ಭರವಸೆ ನೀಡಿದ್ದರು. ಆ ಭರವಸೆಯಿಂದ ಕೇಂದ್ರ ನುಣುಚಿ ಕೊಂಡಿದೆ. ಎಂದು ಆಕ್ಷೇಪಿಸಿದರು. ಈ ಹಿನ್ನೆಲೆಯಲ್ಲಿ ಕೇಂದ್ರದಿಂದ ಸ್ಪಷ್ಟನೆ ಹೊರಬಿದ್ದಿದೆ. ಜೊತೆಗೆ, 2019ರಲ್ಲಿ ಸಚಿವರು ಪ್ರಾಂತೀಯ ಗ್ರಾಮೀಣ ಬ್ಯಾಂಕ್‌ಗಳಲ್ಲಿನ ಕಛೇರಿ ಸಹಾಯಕರು ಹಾಗೂ 1ನೇ ದರ್ಜೆಯ ಅಧಿಕಾರಿಗಳ ಹುದ್ದೆಗಳಿಗಾಗಿ ನಡೆಸುವ ಪರೀಕ್ಷೆಗಳನ್ನು ಪ್ರಾದೇಶಿಕ ಭಾಷೆಗಳಲ್ಲಿ ನಡೆಸಲು ತೀರ್ಮಾನಿಸಿರುವುದಾಗಿ ಹೇಳಿದ್ದರಷ್ಟೆ. ಈಗಲೂ ಆ ಪರೀಕ್ಷೆಗಳನ್ನು ಕನ್ನಡ, ಕೊಂಕಣಿ ಸೇರಿ 13 ಭಾಷೆಗಳಲ್ಲಿ ನಡೆಸಲಾಗುತ್ತಿದೆ. ಈಗ ಸಾರ್ವಜನಿಕ ವಲಯದ ಬ್ಯಾಂಕ್‌ಗಳಲ್ಲಿನ ಹುದ್ದೆಗಳನ್ನು ಪ್ರಾದೇಶಿಕ ಭಾಷೆಗಳಲ್ಲಿ ನಡೆಸಲು ಆಗ್ರಹ ಬಂದಿರುವುದನ್ನು ಸಮಿತಿ ಮೂಲಕ ಪರಿಶೀಲಿಸುವುದಾಗಿ ಹೇಳಿದೆ.

**ಹಿಂದಿ, ಇಂಗ್ಲೀಷ್‌ನಲ್ಲಿ ಬ್ಯಾಂಕ್ ಪರೀಕ್ಷೆ: ಟಿಎಸ್ಎನ್ ಅಸಮಾಧಾನ:** ರಾಷ್ಟ್ರೀಕೃತ ಬ್ಯಾಂಕ್‌ಗಳ ನೇಮಕಾತಿ ಪರೀಕ್ಷೆಯನ್ನು ಹಿಂದಿ ಮತ್ತು ಆಂಗ್ಲಭಾಷೆಯಲ್ಲಿ ನಡೆಸಲು ಮುಂದಾಗಿರುವ ಬ್ಯಾಂಕ್ ಸಿಬ್ಬಂದಿ ನೇಮಕಾತಿ ಸಂಸ್ಥೆಯ ಕ್ರಮವನ್ನು ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷ ಟಿ.ಎಸ್. ನಾಗಾಭರಣ ಖಂಡಿಸಿದ್ದಾರೆ. ಈ ಬಗ್ಗೆ ಪತ್ರಿಕಾ ಹೇಳಿಕೆ ನೀಡಿರುವ ಅವರು ಬ್ಯಾಂಕ್ ಪರೀಕ್ಷೆಯಲ್ಲಿ ಕನ್ನಡ ಭಾಷೆಗೂ ಅದ್ಯತೆ ನೀಡಬೇಕು ಎಂದು ಕೇಂದ್ರ ಸರ್ಕಾರವನ್ನು ಒತ್ತಾಯಿಸಿದ್ದಾರೆ. ಕೆನರಾ ಬ್ಯಾಂಕ್ ಸೇರಿದಂತೆ ಒಟ್ಟು 11 ಬ್ಯಾಂಕ್‌ಗಳಲ್ಲಿ ಖಾಲಿ ಇರುವ 3000ಕ್ಕೂ ಹೆಚ್ಚು ಹುದ್ದೆಗಳಿಗೆ ಪರೀಕ್ಷೆಯನ್ನು ಕೇವಲ ಇಂಗ್ಲೀಷ್ ಮತ್ತು ಹಿಂದಿಯಲ್ಲಿ ನಡೆಸಿರುವುದರಿಂದ ಕನ್ನಡಿಗರಿಗೆ ಸಿಗಬೇಕಾದ ಹುದ್ದೆಗಳು ಕೈತಪ್ಪಲಿ ಎಂದಿದ್ದಾರೆ. ಕೇಂದ್ರ ಹಣಕಾಸು ಸಚಿವೆ ನಿರ್ಮಲ ಸೀತಾರಾಮ್ ಈ ಹಿಂದಿನ ಅಧಿವೇಶನದಲ್ಲಿ ಆಯಾ ಸ್ಥಳೀಯ ಭಾಷೆಗಳಲ್ಲಿ ಬ್ಯಾಂಕಿಂಗ್ ನೇಮಕಾತಿಗಳನ್ನು ನಡೆಸುವುದಾಗಿ ಭರವಸೆ ನೀಡಿದ್ದರು. ಆದರೆ ಅದು ಹುಸಿಯಾಗಿದೆ. ಕೂಡಲೇ ಕೇಂದ್ರ ಸರ್ಕಾರ ಸ್ಥಳೀಯ ಭಾಷೆಯ ಅಭ್ಯರ್ಥಿಗಳಿಗೆ ಉದ್ಯೋಗದಲ್ಲಿ ಆಗಿರುವ ಅನ್ಯಾಯ ಸರಿಪಡಿಸಬೇಕು ಎಂದು ಒತ್ತಾಯಿಸಿದ್ದಾರೆ. ಬ್ಯಾಂಕಿಂಗ್ ಪರೀಕ್ಷೆಯಲ್ಲಿ ಕನ್ನಡಿಗರಿಗೆ ಆಗಿರುವ ಅನ್ಯಾಯವನ್ನು ನ್ಯಾಯಾಲಯದಲ್ಲಿ ಪ್ರಶ್ನಿಸುವುದಾಗಿ ದೂರದರ್ಶನ ಕೇಂದ್ರದ ಹೆಚ್ಚುವರಿ ವಿಶ್ರಾಂತ ಮಹಾ ನಿರ್ದೇಶಕ ಡಾ:ಮಹೇಶ್ ಜೋಶಿ ಹೇಳಿದ್ದಾರೆ. ಈ ಬಗ್ಗೆ ಪತ್ರಿಕಾ ಹೇಳಿಕೆ ನೀಡಿರುವ ಅವರ ಒಂದು ವೇಳೆ ಕೇಂದ್ರ ಸರ್ಕಾರ ಕನ್ನಡದಲ್ಲಿ ಪರೀಕ್ಷೆ ನಡೆಸದೇ ಇದ್ದರೆ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ಸಾರ್ವಜನಿಕ ಹಿತಾಸಕ್ತಿ ಅರ್ಜಿ ಸಲ್ಲಿಕೆ ಮಾಡುವುದಾಗಿ

ತಿಳಿಸಿದ್ದಾರೆ. ಈ ಹಿಂದೆ ತಾವು ಕೇಂದ್ರ ಕಾರ್ಮಿಕ ಆಯುಕ್ತರಾಗಿದ್ದಾಗ ಬ್ಯಾಂಕ್‌ಗಳ ಆಡಳಿತ ಹಾಗೂ ಕಾರ್ಮಿಕ ಮಂಡಳಿಯೊಂದಿಗೆ ನಿಕಟವಾದ ಸಂಪರ್ಕ ಹೊಂದಿದ್ದೆ. ಆ ಹಿನ್ನೆಲೆಯಲ್ಲಿ ಕನ್ನಡಿಗರಿಗೆ ಆಗುತ್ತಿರುವ ಅನ್ಯಾಯದ ಬಗ್ಗೆ ಅಳವಾದ ಅರಿವು ಇರುವುದಾಗಿ ಹೇಳಿದ್ದಾರೆ.

**ಕನ್ನಡದಲ್ಲಿ ಬ್ಯಾಂಕಿಂಗ್ ಪರೀಕ್ಷೆಗೆ ಅವಕಾಶಕ್ಕಾಗಿ ಸಿದ್ದರಾಮಯ್ಯ ಆಗ್ರಹ:** ರಾಷ್ಟ್ರೀಕೃತ ಬ್ಯಾಂಕ್‌ಗಳ ನೇಮಕಾತಿ ಪರೀಕ್ಷೆಗಳಲ್ಲಿ ರಾಜ್ಯದ ಯುವಜನರಿಗೆ ಕನ್ನಡ ಭಾಷೆಯಲ್ಲಿ ಪರೀಕ್ಷೆ ಬರೆಯಲು ಅವಕಾಶ ನೀಡುವಂತೆ ಪ್ರತಿಪಕ್ಷ ನಾಯಕ ಸಿದ್ದರಾಮಯ್ಯ ಕೇಂದ್ರ ಸರ್ಕಾರವನ್ನು ಒತ್ತಾಯಿಸಿದ್ದಾರೆ.

ಬ್ಯಾಂಕಿಂಗ್ ಸಿಬ್ಬಂದಿ ನೇಮಕಾತಿಯ ಪರೀಕ್ಷೆಗಳನ್ನು ಕನ್ನಡದಲ್ಲಿ ಬರೆಯಲು ಅವಕಾಶ ನೀಡದೆ ನರೇಂದ್ರ ಮೋದಿ ಅವರ ಸರ್ಕಾರ ಕನ್ನಡಿಗರಿಗೆ ದ್ರೋಹ ಬಗೆಯುತ್ತಾ ಬಂದಿದೆ. ಬ್ಯಾಂಕಿಂಗ್ ಸಿಬ್ಬಂದಿ ನೇಮಕಾತಿ ಸಂಸ್ಥೆಯ ಇತ್ತೀಚಿನ ಸುತ್ತೋಲೆ ಈ ದ್ರೋಹಕ್ಕೆ ಸಾಕ್ಷಿಯಾಗಿದೆ. ಕೇಂದ್ರ ಸರ್ಕಾರ ತಕ್ಷಣ ಗಮನಹರಿಸಿ ಈ ಅನ್ಯಾಯವನ್ನು ಸರಿಪಡಿಸಿ ಕನ್ನಡಿಗರಿಗೆ ನ್ಯಾಯ ದೊರಕಿಸಿಕೊಡಬೇಕು ಎಂದು ಆಗ್ರಹಿಸಿದ್ದಾರೆ.

ಐಬಿಪಿಎಸ್ ಇದೀಗ ಹನ್ನೊಂದು ರಾಷ್ಟ್ರೀಕೃತ ಬ್ಯಾಂಕುಗಳಲ್ಲಿನ 3000 ಕ್ಲರ್ಕ್ ಹುದ್ದೆಗಳಿಗೆ ಅರ್ಜಿ ಆಹ್ವಾನಿಸಿದ್ದು, ಇವುಗಳಲ್ಲಿ 407 ಹುದ್ದೆಗಳು ಕರ್ನಾಟಕಕ್ಕೆ ಸೇರಿದ್ದಾಗಿದೆ. ಕನ್ನಡಕ್ಕೆ ಆಗಿರುವ ಆನ್ಯಾಯದಿಂದಾಗಿ ತೀವ್ರ ನಿರುದ್ಯೋಗದ ಸಮಸ್ಯೆ ಎದುರಿಸುತ್ತಿರುವ ಕನ್ನಡಿಗ ಯುವಜನರು ಉದ್ಯೋಗದ ಅವಕಾಶದಿಂದ ವಂಚಿತರಾಗಲಿದ್ದಾರೆ ಎಂದು ಹೇಳಿದ್ದಾರೆ.

2014ಕ್ಕಿಂತ ಮೊದಲು ಬ್ಯಾಂಕಿಂಗ್ ಸಿಬ್ಬಂದಿ ನೇಮಕಾತಿ ಸಂಸ್ಥೆ ನಡೆಸುತ್ತಿದ್ದ ಪರೀಕ್ಷೆಗಳಲ್ಲಿ ರಾಜ್ಯ ಭಾಷೆಗಳಲ್ಲಿಯೂ ಬರೆಯುವ ಅವಕಾಶ ಇತ್ತು. 2014ರಲ್ಲಿ ಕೇಂದ್ರ ಸರ್ಕಾರ ನಿಯಮಾವಳಿಗೆ ತಿದ್ದುಪಡಿ ಮಾಡಿ ಇಂಗ್ಲೀಷ್ ಮತ್ತು ಹಿಂದಿಯೇತರ ಭಾಷಿಕ ಯುವಜನರಿಗೆ ಅನ್ಯಾಯವೆಸಗಿದೆ ಎಂದು ತಿಳಿಸಿದ್ದಾರೆ.

ಈ ಅನ್ಯಾಯವನ್ನು ಪ್ರತಿಭಟಿಸಿ ಹಿಂದಿನ ನಮ್ಮ ಸರ್ಕಾರ ಕೇಂದ್ರ ಸರ್ಕಾರಕ್ಕೆ ಪತ್ರವನ್ನು ಬರೆದಿತ್ತು. ಬ್ಯಾಂಕಿಂಗ್ ಪರೀಕ್ಷೆಗಳಲ್ಲಿ ಕನ್ನಡಿಗರಿಗೆ ಆಗುತ್ತಿರುವ ಅನ್ಯಾಯದ ಬಗ್ಗೆ ನಮ್ಮ ಸರ್ಕಾರ ಕೇಂದ್ರ ಸರ್ಕಾರದ ಗಮನಸೆಳೆದ ನಂತರ ಕೇಂದ್ರ ಹಣಕಾಸು ಸಚಿವೆ ನಿರ್ಮಲಾ ಸೀತಾರಾಮನ್ ಅವರು ಬ್ಯಾಂಕಿಂಗ್ ಪರೀಕ್ಷೆಗಳನ್ನು ಕನ್ನಡದಲ್ಲಿಯೂ ನಡೆಸುವ ಭರವಸೆಯನ್ನು ಲೋಕಸಭೆಯಲ್ಲಿ ನೀಡಿದ್ದರೂ ಆ ಭರವಸೆಯನ್ನು ಇಂದಿಗೂ ಈಡೇರಿಸಿಲ್ಲ ಎಂದು ದೂರಿದ್ದಾರೆ. ಕೇಂದ್ರ ಮತ್ತು ರಾಜ್ಯದಲ್ಲಿ ಒಂದೇ ಪಕ್ಷ ಅಧಿಕಾರಕ್ಕೆ ಬಂದರೆ ರಾಜ್ಯದಲ್ಲಿ ಸೌಲಭ್ಯಗಳ ಸುನಾಮಿ ಬರಲಿದೆ ಎಂದು ಲೋಕಸಭಾ ಚುನಾವಣೆಯ ಕಾಲದಲ್ಲಿ ಬುರುಡೆಬಿಟ್ಟ ಬಿಜೆಪಿಯಿಂದ ಆಯ್ಕೆಯಾದ 25 ಸಂಸದರು ಕರ್ನಾಟಕಕ್ಕೆ ಆಗುತ್ತಿರುವ ಅನ್ಯಾಯಗಳ ಸರಮಾಲೆಯ ಬಗ್ಗೆ ಬಾಯಿಗೆ ಬೀಗ ಹಾಕಿ ಕೂತಿದ್ದಾರೆ ಎಂದು ಆಕ್ರೋಶ ವ್ಯಕ್ತಪಡಿಸಿದ್ದಾರೆ.

ಆಧಾರ: ಸಂಯುಕ್ತ ಕರ್ನಾಟಕ, ದಿನಾಂಕ:14.07.2021

## 12. ಬೆಳಗಾವಿಯಲ್ಲಿ ಅಧಿವೇಶನ ಕರೆಯಲು ಸಿದ್ದರಾಮಯ್ಯ ಒತ್ತಾಯ

ಬೆಳಗಾವಿಯಲ್ಲಿ ಕೂಡಲೇ ರಾಜ್ಯ ವಿಧಾನಮಂಡಲ ಅಧಿವೇಶನ ಕರೆಯಬೇಕು ಎಂದು ಪ್ರತಿಪಕ್ಷ ನಾಯಕ ಸಿದ್ದರಾಮಯ್ಯ ಆಗ್ರಹಿಸಿದ್ದಾರೆ.

ಈ ಕುರಿತು ವಿಧಾನಸಭೆಯ ಸಭಾಧ್ಯಕ್ಷರು ಮತ್ತು ಮುಖ್ಯಮಂತ್ರಿಯವರಿಗೆ ಪತ್ರ ಬರೆದು ವಿಧಾನಮಂಡಲದ ಸರ್ಕಾರಿ ಕಾರ್ಯಕಲಾಪಗಳ ನಿರ್ವಹಣೆ ಅಧಿನಿಯಮ ಪ್ರಕಾರ ಜುಲೈ ತಿಂಗಳಲ್ಲಿ ವಿಧಾನಸಭೆಯ ಅಧಿವೇಶನ ನಡೆಸಬೇಕಾಗಿತ್ತು. ಆದರೆ ಸರ್ಕಾರವು ಇದುವರೆಗೂ ಕೂಡ ಅಧಿವೇಶನ

ನಡೆಸಲು ಯಾವುದೇ ಕ್ರಮಗಳನ್ನು ಕೈಗೊಳ್ಳದಿರುವುದು ನಿಯಮಬಾಹಿರ ಕ್ರಮ ಎಂದು ದೂರಿದ್ದಾರೆ. ನಿಯಮ ಪ್ರಕಾರ ಪ್ರತಿ ವರ್ಷ ಕನಿಷ್ಠ 60 ದಿನಗಳ ಕಾಲ ಅಧಿವೇಶನ ನಡೆಸಬೇಕು. ಬಿಜೆಪಿ ಆಡಳಿತದ ಸರ್ಕಾರವು ಈ ನಿಯಮಗಳನ್ನೆಲ್ಲ ಗಾಳಿಗೆ ತೂರುತ್ತಿದೆ. 2020ರಲ್ಲಿ 31ದಿನ 2021ರಲ್ಲಿ ಇದುವರೆಗೆ 20 ದಿನ ಮಾತ್ರ ಅಧಿವೇಶನ ನಡೆಸಿದೆ. ಈ ಸರ್ಕಾರ ಆಸ್ತಿತ್ವಕ್ಕೆ ಬಂದ ಮೇಲೆ ಬೆಳಗಾವಿಯಲ್ಲಿ ಇದುವರೆಗೆ ಒಂದು ಅಧಿವೇಶನವನ್ನು ನಡೆಸಿಲ್ಲ. ಕೂಡಲೇ ಅಧಿವೇಶನ ನಡೆಸಲು ಅಧಿಸೂಚನೆ ಹೊರಡಿಸಲು ಸೂಕ್ತ ಕ್ರಮ ಕೈಗೊಳ್ಳಬೇಕೆಂದು ಒತ್ತಾಯಿಸಿದ್ದಾರೆ.

ಆಧಾರ: ಉದಯವಾಣಿ, ದಿನಾಂಕ:15.07.2021

## 13. ಖಾಲಿ ಸುವರ್ಣಸೌಧಕ್ಕೆ ಕೋಟಿ ಕೋಟಿ ಖರ್ಚು

ಉತ್ತರ ಕರ್ನಾಟಕ ಆಶೋತ್ತರಗಳಿಗೆ ಉತ್ತರವಾಗಲು ಇಲ್ಲಿನ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳುವ ನಿಟ್ಟಿನಲ್ಲಿ ಆರಂಭಗೊಡಿರುವ ಸುವರ್ಣಸೌಧದಲ್ಲಿ ಕಳೆದ ಮೂರು ವರ್ಷದಿಂದ ಅಧಿವೇಶನ ನಡೆದಿಲ್ಲ. ಆದರೆ ಸೌಧದ ನಿರ್ವಹಣಾ ವೆಚ್ಚ ಮಾತ್ರ ಕೋಟಿ ಕೋಟಿ ಆಗುತ್ತಿರುವುದು ಇದೀಗ ಸಾರ್ವಜನಿಕರ ಆಕ್ರೋಶಕ್ಕೆ ಕಾರಣವಾಗಿದೆ.

ಬೆಳಗಾವಿಯಲ್ಲಿ ರೂ.100 ಕೋಟಿಗೂ ಅಧಿಕ ವೆಚ್ಚದಲ್ಲಿ ನಿರ್ಮಾಣಗೊಂಡಿರುವ ಸುವರ್ಣಸೌಧದಲ್ಲಿ 2018ರ ಬಳಿಕ ಯಾವುದೇ ಅಧಿವೇಶನ ನಡೆದಿಲ್ಲ. ಆರಂಭದಲ್ಲಿ ಪ್ರವಾಹದ ನೆಪದಲ್ಲಿ ಅಧಿವೇಶನವನ್ನು ಬೆಂಗಳೂರಿಗೆ ಶಿಫ್ಟ್ ಮಾಡಲಾಯಿತು. ಇದಾದ ಬಳಿಕ ಎರಡು ವರ್ಷ ಕೊರೋನಾ ಕಾರಣ ನೀಡಿ ಬೆಳಗಾವಿಯಲ್ಲಿ ನಡೆಸಬೇಕಿದ್ದ ಅಧಿವೇಶನವನ್ನು ನಡೆಸಿಲ್ಲ. ಪ್ರತಿ ತಿಂಗಳು ಈ ಸುವರ್ಣಸೌಧ ನಿರ್ವಹಣೆ ಮಾಡುವುದಕ್ಕೆ ರೂ.25 ಲಕ್ಷಗಳು ಖರ್ಚು ಮಾಡಲಾಗುತ್ತಿದೆ. ತಿಂಗಳ ಬಹುಸಮಯ ಯಾವುದೇ ಸಭೆಗಳು ಈ ಸುವರ್ಣಸೌಧದಲ್ಲಿ ನಡೆಯದಿದ್ದರೂ ವಿದ್ಯುತ್ ಬಿಲ್ ಮಾತ್ರ ರೂ.1.5 ಲಕ್ಷ ಬರುತ್ತಿದೆ ಎನ್ನುವ ಆರೋಪಗಳು ಕೇಳಿಬಂದಿವೆ.

ಇನ್ನು ಉತ್ತರ ಕರ್ನಾಟಕದ ಸಮಸ್ಯೆಗಳ ಬಗ್ಗೆ ಚರ್ಚೆ ನಡೆಸಬೇಕಿದ್ದ ಸುವರ್ಣಸೌಧದಲ್ಲಿ ಪ್ರತಿಭಾರಿ ಅಧಿವೇಶನ ನಡೆಯುವ ಮೊದಲು ತೊಳೆಯುವ ಕಾರ್ಯಕ್ಕೆ ಜಿಲ್ಲಾಡಳಿತ ಮುಂದಾಗುತ್ತದೆ. ಇಲ್ಲದಿದ್ದರೆ ಇದೊಂದು ಪಾಳುಭವನವಾಗಿರುತ್ತದೆ. ಅಧಿವೇಶನ ನಡೆಯದಿದ್ದರೂ, ಕೆಲವು ಆಯುಕ್ತಾಲಯ, ನಿಗಮ ಮಂಡಳಿಗಳನ್ನು ಸ್ಥಳಾಂತರಿಸಲು ಸರ್ಕಾರ ಮುಂದಾಗಿದ್ದರೂ ಆದೆಲ್ಲ ಕಾಗದಕ್ಕೆ ಸೀಮಿತಗೊಂಡಿರುವುದು ಸುವರ್ಣಸೌಧ ಮೂಲೆಗುಂಪಾಗಲು ಮತ್ತೊಂದು ಕಾರಣ ಎನ್ನಲಾಗಿದೆ.

**ಶಿಫ್ಟ್ ಆಗದ ಇಲಾಖೆಗಳು:** ಈ ಹಿಂದೆ ಸಿದ್ದರಾಮಯ್ಯ ಹಾಗೂ ಕುಮಾರಸ್ವಾಮಿ ಅವರ ಕಾಲದಲ್ಲಿ ಕೆಲವು ಇಲಾಖೆಗಳನ್ನು ನಿಗಮ ಮಂಡಳಿಗಳನ್ನು ಹಾಗೂ ಕೃಷ್ಣ ಮೇಲ್ದಂಡೆ ಯೋಜನೆಯ ಕಚೇರಿಗಳನ್ನು ಬೆಳಗಾವಿಯ ಸುವರ್ಣಸೌಧಕ್ಕೆ ಸ್ಥಳಾಂತರಿಸಲು ಹಾಗೂ ಕೆಲವು ಆಯುಕ್ತಾಲಯಗಳನ್ನು ಅಲ್ಲಿಯೇ ಸ್ಥಾಪಿಸಲು ನಿರ್ಣಯಿಸಲಾಗಿತ್ತು. ಬಹುತೇಕ ಐಎಎಸ್ ಅಧಿಕಾರಿಗಳು ಬೆಳಗಾವಿಗೆ ಹೋಗಲು ಹಿಂದೇಟು ಹಾಕುತ್ತಿರುವುದರಿಂದ ಇಡೀ ಪ್ರಕ್ರಿಯೆ ಪೂರ್ಣಗೊಂಡಿಲ್ಲ ಎನ್ನುವ ಮಾತುಗಳು ಕೇಳಿಬಂದಿವೆ.

**ಬೆಳಗಾವಿ ಅಧಿವೇಶನಕ್ಕೆ ಹೆಚ್ಚಿನ ಒತ್ತಡ:** ಈಗಾಗಲೇ ಕಾಂಗ್ರೆಸ್ ಹಾಗೂ ಬಿಜೆಪಿ ನಾಯಕರಿಂದ ಬೆಳಗಾವಿಯ ಸುವರ್ಣಸೌಧದಲ್ಲಿ ಕಳೆದ 2–3 ವರ್ಷದಿಂದ ಅಧಿವೇಶನ ನಡೆದಿಲ್ಲ. ಆದ್ದರಿಂದ ಈ ಬಾರಿ ಮುಂಗಾರು ಅಧಿವೇಶನವನ್ನು ಬೆಳಗಾವಿಯಲ್ಲಿಯೇ ನಡೆಸಬೇಕು ಎನ್ನುವ ಒತ್ತಡ ಹೇರುತ್ತಿದ್ದಾರೆ. ಈ ಸಂಬಂಧ ಈಗಾಗಲೇ ವಿಧಾನ ಪರಿಷತ್ ಸಭಾಪತಿ ಬಸವರಾಜ ಹೊರಟ್ಟಿ, ಪ್ರತಿಪಕ್ಷ ನಾಯಕ

ಸಿದ್ದರಾಮಯ್ಯ, ಪರಿಷತ್ ಮುಖ್ಯ ಸಚೇತಕ ಮಹಂತೇಶ್ ಕವಟಗಿಮಠ, ಸಚಿವ ಬಸವರಾಜ ಬೊಮ್ಮಾಯಿ ಸೇರಿದಂತೆ ಅವರುಗಳು ಮುಖ್ಯಮಂತ್ರಿಯವರ ಮೇಲೆ ಒತ್ತಡ ಹೇರಿದ್ದಾರೆ.

ಆಧಾರ: ವಿಶ್ವವಾಣಿ, ದಿನಾಂಕ:15.07.2021

## 14.ರಾಜಭವನಕ್ಕೆ ಕಾಂಗ್ರೆಸ್ ಚಲೋ

ಕೇಂದ್ರ ಸರ್ಕಾರ ಪೆಗಾಸಸ್ ತಂತ್ರಾಂಶದಿಂದ ದೂರವಾಣಿ ಕದ್ದಾಲಿಕೆ ಮಾಡಿ ಗೂಢಚರ್ಯೆ ನಡೆಸಿದೆ ಎಂದು ಆರೋಪಿಸಿ ಬೀದಿಗಿಳಿದ ಕಾಂಗ್ರೆಸ್ ನಾಯಕರು ವಿಧಾನಸೌಧದಿಂದ ರಾಜಭವನ ಚಲೋ ನಡೆಸಿ ಆಕ್ರೋಶ ವ್ಯಕ್ತಪಡಿಸಿದರು. ಸುಪ್ರೀಂ ನ್ಯಾಯಮೂರ್ತಿಗಳ ನೇತೃತ್ವದಲ್ಲಿ ಪ್ರಕರಣದ ನ್ಯಾಯಾಂಗ ತನಿಖೆ ನಡೆಸಬೇಕು ಎಂದು ಆಗ್ರಹಿಸಿದರು.

ಹಾಲಿ ನ್ಯಾಯಮೂರ್ತಿಗಳು ಸೇರಿದಂತೆ 400 ಗಣ್ಯರ ಮೇಲೆ ಕೇಂದ್ರ ಸರ್ಕಾರದಿಂದಲೇ ಗೂಢಚರ್ಯೆ ನಡೆದಿದೆ. ಪ್ರಧಾನಿಯೇ ಪ್ರಕರಣದಲ್ಲಿ ನೇರವಾಗಿ ಭಾಗಿಯಾಗಿದ್ದು, ರಾಜೀನಾಮೆ ನೀಡಲು ಆಗ್ರಹಿಸಿದರು.

ವಿಧಾನಸೌಧ ಹಾಗೂ ವಿಕಾಸಸೌಧ ನಡುವೆ ಇರುವ ಮಹಾತ್ಮ ಗಾಂಧೀಜಿ ಪ್ರತಿಮೆ ಎದುರು ಧರಣಿ ನಡೆಸಿದ ಕಾಂಗ್ರೆಸ್ ನಾಯಕರು, ಶಾಸಕರು ಕೇಂದ್ರ ಸರ್ಕಾರದ ವಿರುದ್ಧ ಆಕ್ರೋಶ ವ್ಯಕ್ತಪಡಿಸಿದರು. ಬಳಿಕ ಅಲ್ಲಿಂದ ಕಾಲ್ನಡಿಗೆಯಲ್ಲಿ ರಾಜಭವನಕ್ಕೆ ಮುತ್ತಿಗೆ ಹಾಕಲು ಹೊರಟ್ಟಿದ್ದ ಕಾಂಗ್ರೆಸ್ ನಾಯಕರನ್ನು ಪೋಲಿಸರು ತಿಮ್ಮ ಯ್ಯ ವೃತ್ತದ ಬಳಿಯೇ ವಶಕ್ಕೆ ಪಡೆದು ಬಳಿಕ ಬಿಡುಗಡೆ ಮಾಡಿದರು.

**ನ್ಯಾಯಾಂಗ ತನಿಖೆಯಾಗಲಿ:** ಪ್ರತಿಪಕ್ಷ ನಾಯಕ ಸಿದ್ದರಾಮಯ್ಯ ಮಾತನಾಡಿ, "ದೂರವಾಣಿ ಕದ್ದಾಲಿಕೆ ಡರ್ಟಿ ಗೇಮ್. ಪ್ರಕರಣದ ಹಿಂದೆ ಯಾರಿದ್ದಾರೆ ಎಂಬುದು ದೇಶದ ಜನತೆಗೆ ಗೊತ್ತಾಗಬೇಕು. ಸಂಸತ್ತಿನ ಉಭಯ ಸದನಗಳಲ್ಲಿ ವಿಚಾರ ಪ್ರಸ್ತಾಪಿಸಲು ಪಕ್ಷದ ವರಿಷ್ಠರು ತೀರ್ಮಾನಿಸಿದ್ದಾರೆ. ನ್ಯಾಯಾಂಗ ತನಿಖೆಗೆ ಎರಡೂ ಸದನದಲ್ಲಿ ಒತ್ತಡ ಹೇರಲಾಗುವುದು. ಬಿಜೆಪಿಯವರು ಮೈತ್ರಿ ಸರ್ಕಾರ ಪತನಗೊಳಿಸಿದ ವೇಳೆ ನನ್ನ ಆಪ್ತ ಸಹಾಯಕನ ದೂರವಾಣಿ ಕರೆಗಳನ್ನು ಕದ್ದಾಲಿಕೆ ಮಾಡಿದ್ದಾರೆ. ದೂರವಾಣಿ ಕದ್ದಾಲಿಕೆ ಜೊತೆಗೆ ಫೋನ್ ಹ್ಯಾಕ್ ಮಾಡಿ ಮಾಹಿತಿ ಸಂಗ್ರಹಿಸಿದ್ದರು. ಈ ಕುರಿತು ತನಿಖೆಯಾಗಬೇಕು," ಎಂದು ಆಗ್ರಹಿಸಿದರು.

**ಸತ್ಯ ಬಹಿರಂಗವಾಗಲಿ:** "ಕದ್ದಾಲಿಕೆ ಮೂಲಕ ಕೇಂದ್ರ ಅಸಹ್ಯದ ಮಟ್ಟಕ್ಕೆ ಇಳಿದಿದೆ. ಇದು ರಾಷ್ಟ್ರೀಯ ಭದ್ರತೆಗೆ ಧಕ್ಕೆಯಾಗುವ ಕೃತ್ಯವಾಗಿದ್ದು, ಈ ಬಗ್ಗೆ ಸಮಗ್ರ ತನಿಖೆ ನಡೆಯಬೇಕು. ನ್ಯಾಯಾಂಗ ತನಿಖೆ ನಡೆಯಬೇಕು. ನ್ಯಾಯಾಂಗ ತನಿಖೆ ನಡೆಸಿ ಸತ್ಯ ಬಹಿರಂಗವಾಗಬೇಕು ಎಂದು ಡಿ.ಕೆ.ಶಿವಕುಮಾರ್ ಆಗ್ರಹಿಸಿದರು.

**ಕಾಂಗ್ರೆಸ್ ಪ್ರತಿಭಟನೆಯಲ್ಲಿ ದತ್ತ:** ರಾಜಭವನ ಚಲೋ ಚಳುವಳಿಯಲ್ಲಿ ಜೆಡಿಎಸ್ ನಾಯಕ ವೈ.ಎಸ್.ವಿ. ದತ್ತ ಕಾಣಿಸಿಕೊಂಡಿದ್ದು ಅಚ್ಚರಿ ಮೂಡಿಸಿತು. ಈ ಸಂದರ್ಭದಲ್ಲಿ ಮಾತನಾಡಿದ ದತ್ತ, ಕೇಂದ್ರ ಮಾಡಿರುವುದು ತಪ್ಪು ಎಂದು ಹೇಳುವ ಧೈರ್ಯ ನನ್ನಲ್ಲಿದೆ. ಕಾಂಗ್ರೆಸ್ ಪ್ರತಿಭಟನೆಯಲ್ಲಿ ಭಾಗವಹಿಸಿದ್ದೇನೆ ಎಂದು ಹೇಳಿದರು.

ಆಧಾರ: ವಿಜಯ ಕರ್ನಾಟಕ, ದಿನಾಂಕ:23.07.2021.

## 15. ವಸತಿಗೆ ರೂ.8000 ಕೋಟಿ ವೆಚ್ಚ

ಕ್ಷಿಪ್ರ ರಾಜಕೀಯ ಬೆಳವಣಿಗೆ ನಡುವೆ ವಸತಿ ಯೋಜನೆಗೆ ಭಾರಿ ಮೊತ್ತದ ಅನುದಾನ ಮೀಸಲಿಟ್ಟ ಸಚಿವ ಸಂಪುಟ ಸಭೆ ನಿರ್ಣಯ ಕೈಗೊಂಡಿದೆ. ಇದರ ಜೊತೆಯಲ್ಲಿ ಶಿವಮೊಗ್ಗಕ್ಕೆ ಆಯುಷ್ ವಿವಿ ಸ್ಥಾಪನೆ, ಕ್ಯಾನ್ಸರ್ ಕೇಂದ್ರ ನಿರ್ಮಾಣದ ಬೃಹತ್ ಕೊಡುಗೆಯನ್ನು ಘೋಷಿಸಲಾಗಿದೆ.

ಸಿಎಂ ಯಡಿಯೂರಪ್ಪ ನೇತೃತ್ವದಲ್ಲಿ ನಡೆದ ಸಚಿವ ಸಂಪುಟ ಸಭೆಯು ಆರ್ಥಿಕವಾಗಿ ಹಿಂದುಳಿದವರಿಗೆ ರೂ.8000 ಕೋಟಿ ವೆಚ್ಚದಲ್ಲಿ ಐದು ಲಕ್ಷ ಮನೆಗಳನ್ನು ಎರಡು ವರ್ಷಗಳಲ್ಲಿ ಪೂರ್ಣಗೊಳಿಸಲು ನಿರ್ಧರಿಸಿದೆ.

ಸಚಿವ ಸಂಪುಟ ಸಭೆ ಬಳಿಕ ಪತ್ರಿಕಾಗೋಷ್ಠಿಯಲ್ಲಿ ಮಾಹಿತಿ ನೀಡಿದ ಸಚಿವ ಬಸವರಾಜ್ ಬೊಮ್ಮಾಯಿ," ರಾಜ್ಯದ ಗ್ರಾಮೀಣ ಪ್ರದೇಶಗಳಲ್ಲಿ 4 ಲಕ್ಷ ಹಾಗೂ ನಗರ ಪ್ರದೇಶಗಳಲ್ಲಿ 1 ಲಕ್ಷ ಮನೆಗಳನ್ನು ಮಂಜೂರು ಮಾಡಲಾಗಿದೆ. ಗ್ರಾಮೀಣ ಪ್ರದೇಶದಲ್ಲಿ ಬಸವ, ಅಂಬೇಡ್ಕರ್ (ಗ್ರಾಮೀಣ) ಹಾಗೂ ಅರಸು ವಸತಿ(ಗ್ರಾಮೀಣ) ಯೋಜನೆಗಳಡಿ 4 ಲಕ್ಷ ಮನೆ ನಿರ್ಮಾಣ ಹಾಗೂ ನಗರ ಪ್ರದೇಶದಲ್ಲಿ ವಾಜಪೇಯಿ, ಅಂಬೇಡ್ಕರ್ ನಿವಾಸ ಯೋಜನೆ (ನಗರ)ಯಡಿ 1 ಲಕ್ಷ ಮನೆ ನಿರ್ಮಾಣಕ್ಕೆ ಮಂಜೂರಾತಿ ನೀಡಲಾಗಿದೆ," ಎಂದರು.

**ಮೂಲ ಸೌಕರ್ಯಕ್ಕೆ ರೂ.500 ಕೋಟಿ:** ಬೆಂಗಳೂರಿನಲ್ಲಿ ಒಂದು ಲಕ್ಷ ಬಹುಮಹಡಿ ಮನೆಗಳ ಯೋಜನೆಯಲ್ಲಿ ಸೌಕರ್ಯ ಅಂದರೆ ಕುಡಿಯುವ ನೀರು, ವಿದ್ಯುತ್, ಚರಂಡಿ ಇತರೆ ಸೌಲಭ್ಯ ಕಲ್ಪಿಸಲು ರೂ.500 ಕೋಟಿ ಅನುದಾನ ನೀಡಲು ಒಪ್ಪಿಗೆ ನೀಡಲಾಗಿದೆ ಎಂದು ತಿಳಿಸಿದರು.

**ಸಾವಯವ ಇಂಗಾಲ ಹೆಚ್ಚಿಸಲು ಆದ್ಯತೆ:** "ಮಣ್ಣಿನಲ್ಲಿ ಸಾವಯವ ಇಂಗಾಲ ಕೊರತೆಯಿದ್ದು, ಸಾವಯವ ಇಂಗಾಲ ಪ್ರಮಾಣ ಹೆಚ್ಚಿಸಬೇಕಿದೆ ಎಂದು ವಿಜ್ಞಾನಿಗಳು ಸಲಹೆ ನೀಡಿದ್ದಾರೆ. ಈ ಕಾರ್ಯಕ್ಕಾಗಿ ಐದು ವರ್ಷಗಳಲ್ಲಿ ರೂ.75 ಕೋಟಿ ವೆಚ್ಚ ಮಾಡಲಾಗುವುದು," ಎಂದು ಹೇಳಿದರು.

ಕೇಂದ್ರ ಸರ್ಕಾರದ ನಾಗರಿಕ ಹುದ್ದೆ ಮತ್ತು ಸೇವೆಗಳು ಹಾಗೂ ಶಿಕ್ಷಣ ಸಂಸ್ಥೆಗಳಲ್ಲಿ ಪ್ರವೇಶಕ್ಕಾಗಿ ಆರ್ಥಿಕವಾಗಿ ದುರ್ಬಲ ವರ್ಗಗಳ ಮೀಸಲು ಸೌಲಭ್ಯಕ್ಕಾಗಿ ಅರ್ಹ ಅಭ್ಯರ್ಥಿ/ವಿದ್ಯಾರ್ಥಿಗಳಿಗೆ ಆದಾಯ ಮತ್ತು ಸ್ವತ್ತು ಪ್ರಮಾಣ ಪತ್ರ ಒದಗಿಸವು ಬಗ್ಗೆ ಪರಿಷ್ಕೃತ ಆದೇಶ ಹೊರಡಿಸಲು ಸಂಪುಟ ಸಭೆಯಲ್ಲಿ ಒಪ್ಪಿಗೆ ನೀಡಲಾಗಿದೆ. ಕೇಂದ್ರ ಸರ್ಕಾರವು ಆರ್ಥಿಕವಾಗಿ ದುರ್ಬಲ ವರ್ಗದವರಿಗೆ ಉದ್ಯೋಗ ಮತ್ತು ಶಿಕ್ಷಣದಲ್ಲಿ ಶೇ. 10ರಷ್ಟು ಮೀಸಲು ಸೌಲಭ್ಯ ಕಲ್ಪಿಸಿದೆ. ಈ ಮೀಸಲಿಗೆ ಯಾವೆಲ್ಲಾ ಅರ್ಹ ಜಾತಿಗಳು ಅರ್ಹರು ಎಂಬುದನ್ನು ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆಯಿಂದ ಆದೇಶ ಹೊರಡಿಸಲು ತಿರ್ಮಾನಿಸಲಾಯಿತು. ಮೀಸಲು ಪಟ್ಟಿಯಲ್ಲಿರುವ ಜಾತಿಗಳು ಅಂದರೆ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಹಾಗೂ ಇತರೆ ಹಿಂದುಳಿದ ವರ್ಗಗಳ ಪಟ್ಟಿಗೆ ಸೇರಿರದ ಹಾಗೂ ರೂ.8 ಲಕ್ಷಗಿಂತ ಕಡಿಮೆ ವಾರ್ಷಿಕ ಆದಾಯ ಹೊಂದಿರುವ ಕುಟುಂಬಗಳು ಸೌಲಭ್ಯ ಪಡೆಯಲು ಅರ್ಹವಾಗಿರಲಿವೆ ಎಂಬುದಾಗಿ ಆದೇಶ ಹೊರಡಿಸಲು ನಿರ್ಧರಿಸಲಾಗಿದೆ ಎಂದರು.

ಆಧಾರ: ವಿಜಯ ಕರ್ನಾಟಕ, ದಿನಾಂಕ:23.07.2021.

## 16.ರಾಜ್ಯದ ನೂತನ ಮುಖ್ಯಮಂತ್ರಿಯಾಗಿ ಬಸವರಾಜ ಬೊಮ್ಮಾಯಿ

ಯಡಿಯೂರಪ್ಪ ಅವರು ಮುಖ್ಯಮಂತ್ರಿ ಸ್ಥಾನದಿಂದ ಕೆಳಕ್ಕೆ ಇಳಿದರೂ, ತಮ್ಮ ಪರಮಾಪ್ತನನ್ನೇ ಈ ಸ್ಥಾನದಲ್ಲಿ ಕೂರಿಸುವ ಮೂಲಕ ತಮ್ಮ 'ರಾಜೀನಾಮೆ ನೀಡಿದರೂ, ತಮ್ಮ ಹಿಡಿತ ಸಾಧಿಸಿದ್ದಾರೆ'.

ಯಡಿಯೂರಪ್ಪ ಅವರಿಂದ ತೆರವಾಗಿದ್ದ ಮುಖ್ಯಮಂತ್ರಿ ಸ್ಥಾನಕ್ಕೆ ರಾಜೀನಾಮೆ ನೀಡಿದ್ದರಿಂದ ಮುಂದಿನ ಮುಖ್ಯಮಂತ್ರಿ ಹುಡುಕಾಟದಲ್ಲಿದ್ದ ಬಿಜೆಪಿಗೆ ಮತ್ತೊಮ್ಮೆ ಯಡಿಯೂರಪ್ಪ ಅವರ ಆಪ್ತ ವಲಯದ ಬಸವರಾಜ ಬೊಮ್ಮಯಿಯವರನ್ನೇ ಮುಖ್ಯಮಂತ್ರಿ ಗಾದಿಯಲ್ಲಿ ಕೂರಿಸಲಾಗಿದೆ. ಶಾಸಕಾಂಗ ಪಕ್ಷದ ಸಭೆಯಲ್ಲಿ ಈ ಬಗ್ಗೆ ಅಧಿಕೃತ ಘೋಷಣೆಯಾದ ಬಳಿಕ ನಿಯೋಜಿತ ಮುಖ್ಯಮಂತ್ರಿ ಬಸವರಾಜ್ ಬೊಮ್ಮಾಯಿ ಅವರು ರಾಜ್ಯಪಾಲ ಥಾವರ್ ಚಾಂದ್ ಗೆಹಲೋತ್ ಅವರನ್ನು ಭೇಟಿಯಾಗಿ ಸರ್ಕಾರ ರಚಿಸಲು ಅವಕಾಶ ಕೇಳಿದರು. ಇದಕ್ಕೆ ರಾಜ್ಯಪಾಲರು ಒಪ್ಪಿಗೆ ನೀಡಿದ್ದು, ಬೆಳಗ್ಗೆ 11 ಗಂಟೆಗೆ ಪ್ರಮಾಣ ವಚನ ಸ್ವೀಕರಿಸಲು ಅವಕಾಶ ನೀಡಿದ್ದಾರೆ.

ಇದಕ್ಕೂ ಮೊದಲು ದೆಹಲಿಯಿಂದ ವೀಕ್ಷಕರಾಗಿ ಆಗಮಿಸಿದ್ದ ಕಿಶನ್ ರೆಡ್ಡಿ ಹಾಗೂ ಧರ್ಮೇಂದ್ರ ಪ್ರಧಾನ್ ಅವರು ಹಂಗಾಮಿ ಮುಖ್ಯಮಂತ್ರಿ ಯಡಿಯುರಪ್ಪ ಅವರ ನಿವಾಸಕ್ಕೆ ಭೇಟಿ ನೀಡಿ 20 ನಿಮಿಷಕ್ಕೆ ಹೆಚ್ಚು ಕಾಲ ಚರ್ಚಿಸಿದರು. ಇವರು ಬರುವ ಮೊದಲು ಬಿಜೆಪಿ ರಾಜ್ಯ ಉಸ್ತುವಾರಿ ಅರುಣ್ ಸಿಂಗ್ ಬಿಎಸ್‌ವೈ ನಿವಾಸಕ್ಕೆ ಭೇಟಿ ನೀಡಿ ರಾಜ್ಯ ರಾಜಕೀಯದ ಬಗ್ಗೆ ಚರ್ಚಿಸಿದರು. ಈ ವೇಳೆ ಬೊಮ್ಮಾಯಿ ಅವರನ್ನು ಕರೆಸಿಕೊಂಡಿದ್ದ ವೀಕ್ಷಕರು, ಸುಳಿವು ನೀಡಿದ್ದರು ಎಂದು ಮೂಲಗಳು ತಿಳಿಸಿವೆ.

ಆಧಾರ: ವಿಶ್ವವಾಣಿ, ದಿನಾಂಕ:28.07.2021.

## 17.ಬೆಳಗಾವಿ ಪ್ರವಾಹ ಪೀಡಿತ ಪ್ರದೇಶಗಳಿಗೆ ಸಿಎಂ ಬಿಎಸ್‌ವೈ ಭೇಟಿ

ಜಿಲ್ಲೆಯಲ್ಲಿ ಪ್ರವಾಹ ಸಂತ್ರಸ್ತರ ಸಮಸ್ಯೆ ಆಲಿಸಿದ ಮುಖ್ಯಮಂತ್ರಿ ಬಿ.ಎಸ್.ಯಡಿಯೂರಪ್ಪ ಅವರು ಜನರಿಗೆ ಪರ್ಯಾಯ ವ್ಯವಸ್ಥೆ ಕಲ್ಪಿಸುವ ಭರವಸೆ ನೀಡಿದರು.

ಪ್ರವಾಹದಿಂದ ಬಾಧಿತವಾಗಿರುವ ಹರಣ್ಯಕೇಶಿ ನದಿಪಾತ್ರದ ವಿವಿಧ ಸ್ಥಳಗಳಿಗೆ ತೆರಳಿ ಪರಿಶೀಲಿಸಿದರು. ಮುಳುಗಡೆ ಪ್ರದೇಶ, ಕಾಳಜಿ ಕೇಂದ್ರಗಳಿಗೆ ಭೇಟಿ ನೀಡಿದರು. ಕಂದಾಯ ಸಚಿವ ಆರ್.ಅಶೋಕ್, ಉಪಮುಖ್ಯಮಂತ್ರಿಗಳಾದ ಗೋವಿಂದ ಕಾರಜೋಳ, ಲಕ್ಷ್ಮಣ ಸವದಿ, ಆಹಾರ ಸಚಿವ ಉಮೇಶ್ ಕತ್ತಿ, ಸಿಎಂಗೆ ಸಾಥ್ ನೀಡಿದರು. ಎಲ್ಲರೂ ಹುಕ್ಕೇರಿ ತಾಲ್ಲೂಕಿನ ಸಂಕೇಶ್ವರ ಪಟ್ಟಣಕ್ಕೆ ತೆರಳಿ ಪ್ರವಾಹ ಸಂತ್ರಸ್ಥರ ಅಹವಾಲು ಆಲಿಸಿದರು. ಮಧ್ಯಾಹ್ನದ ತನಕ ಬೆಳಗಾವಿ ಪ್ರವಾಸಿ ಮಂದಿರದಲ್ಲಿ ಸ್ಥಳೀಯ ಶಾಸಕರು ಮತ್ತು ಅಧಿಕಾರಿಗಳೊಂದಿಗೆ ಸಭೆ ನಡೆಸಿದರು.

"ಈ ಹಿಂದಿನ ಪ್ರವಾಹಗಳ ಸಂತ್ರಸ್ತರಿಗೆ ಯಾವುದೇ ಕಾರಣಕ್ಕೂ ತಡಮಾಡದೆ ಪರಿಹಾರ ವಿತರಿಸಬೇಕು. ಹಣದ ಕೊರತೆಯಾದರೆ, ತಕ್ಷಣ ಸಂಬಂಧಿಸಿದವರಿಗೆ ತಿಳಿಸಿ ಸರಿಪಡಿಸಿಕೊಳ್ಳಬೇಕು. ಈ ಬಾರಿಯ ಸಂತ್ರಸ್ತರ ಪರಿಹಾರಕ್ಕೂ ಕ್ರಮ ಕೈಗೊಂಡು ಸಂವೇದನಾಶೀಲತೆಯಿಂದ ಕೆಲಸ ಮಾಡಬೇಕು" ಎಂದು ಜಿಲ್ಲಾಧಿಕಾರಿಗೆ ಖಡಕ್ ಸೂಚನೆ ನೀಡಿದರು.

ಸಚಿವೆ ಶಶಿಕಲಾ ಜೊಲ್ಲೆ ಹಾಗೂ ಸಂಸದ ಅಣ್ಣಾಸಾಹೇಬ ಜೊಲ್ಲೆ, ಜಾರಕಿಹೊಳಿ ಸಹೋದರರು ಸಭೆಗೆ ಗೈರು ಹಾಜರಾಗಿದ್ದರು. ಮಧ್ಯಾಹ್ನ 3.30ರ ವೇಳೆಗೆ ಮುಖ್ಯಮಂತ್ರಿಯವರು ಬೆಳಗಾವಿಯಿಂದ ತೆರಳಿದರು. ಪ್ರವಾಸದುದ್ದಕ್ಕೂ ಸಿಎಂ ಬದಲಾವಣೆ ಮತ್ತು ಹೈಕಮಾಂಡ್ ಸಂದೇಶ ಬಗ್ಗೆ ಸುದ್ದಿಗಾರರು ಕೇಳಿದ ಪ್ರಶ್ನೆಗೆ "ಸಂಜೆವರೆಗೂ ಕಾದು ನೊಡೋಣ" ಎನ್ನುತ್ತಲೇ ಬಿ.ಎಸ್.ಯಡಿಯೂರಪ್ಪ ಅವರು ಪ್ರವಾಸ ಮುಗಿಸಿ ತೆರಳಿದರು. ರಾಜಕೀಯವಾಗಿ ಎಲ್ಲೂ ಹೆಚ್ಚು ಮಾತನಾಡಲೇ ಇಲ್ಲ.

ಆಧಾರ: ವಿಜಯ ಕರ್ನಾಟಕ, ದಿನಾಂಕ:26.07.2021.

## 18.ಸಂತೋಷದಿಂದಲೇ ರಾಜೀನಾಮೆ : ಬಿ.ಎಸ್.ಯಡಿಯುರಪ್ಪ

'ತಾವ್ಯಾರೂ ಅನ್ಯಥಾ ಭಾವಿಸಬಾರದು, ನಾನು ನಿಮ್ಮೆಲ್ಲರ ಅಪ್ಪಣೆ ಪಡೆದು ತೀರ್ಮಾನ ಮಾಡಿದ್ದೇನೆ, ಮುಖ್ಯಮಂತ್ರಿ ಸ್ಥಾನಕ್ಕೆ ರಾಜೀನಾಮೆ ನೀಡುತ್ತಿರುವುದು ದುಃಖದಿಂದ ಅಲ್ಲ, ಸಂತೋಷದಿಂದ, ಖುಷಿಯಿಂದ'

ಇದು ವಿಧಾನ ಸೌಧ ಬ್ಯಾಂಕ್ವೆಟ್ ಸಭಾಂಗಣದಲ್ಲಿ ಬಿ.ಎಸ್.ಯಡಿಯೂರಪ್ಪ ಅವರು ಮುಖ್ಯಮಂತ್ರಿ ಸ್ಥಾನದಿಂದ ನಿರ್ಗಮಿಸುವ ಕುರಿತು ಗದ್ಗದಿತರಾಗಿ ಆಡಿದ ಮಾತುಗಳು.

75 ವರ್ಷ ದಾಟಿದ ಯಡಿಯೂರಪ್ಪನಿಗೆ ಮತ್ತೆ ಎರಡು ವರ್ಷ ಮುಖ್ಯಮಂತ್ರಿಯಾಗಿ ಮುಂದುವರಿಯಲು ಅವಕಾಶ ಮಾಡಿಕೊಟ್ಟ ನರೇಂದ್ರ ಮೋದಿ ಅಮಿತ್ ಶಾ, ನಡ್ಡಾ ಅವರಿಗೆ ಶಬ್ದಗಳಲ್ಲಿ ಅಭಿನಂದನೆ ಸಲ್ಲಿಸಲು ಆಗುವುದಿಲ್ಲ ಅವರಿಗೆ ನಾನು ಋಣಿಯಾಗಿದ್ದೇನೆ. ಅವರ ಅಪೇಕ್ಷೆಯಂತೆ

ರಾಜ್ಯದಲ್ಲಿ ಮತ್ತೊಮ್ಮೆ ಬಿಜೆಪಿ ಅಧಿಕಾರಕ್ಕೆ ತರಲು ಒಟ್ಟಾಗಿ ಕೆಲಸ ಮಾಡೋಣ ಎಂದು ವೇದಿಕೆಯಿಂದ ನಿರ್ಗಮಿಸಿದರು.

ಶಿಕಾರಿಪುರದಿಂದ ವಿಧಾನ ಸೌಧದವರೆಗಿನ ತಮ್ಮ ಪಯಣದ ಬಗ್ಗೆ ನೆನಪುಗಳನ್ನು ಬಿಚ್ಚಿಟ್ಟ ಅವರು ರಾಜ್ಯದಲ್ಲಿ ಪಕ್ಷ ಕಟ್ಟಿ ಅಧಿಕಾರಕ್ಕೆ ತರಲು ತಮ್ಮ ಪಾತ್ರ, ಶ್ರಮ ಎಷ್ಟಿದೆ ಎಂಬುದನ್ನು ಎಳೆಎಳೆಯಾಗಿ ಬಿಚ್ಚಿಟ್ಟರು. ಪ್ರತಿ ಹಂತದಲ್ಲೂ ಒಂದೊಂದು ಸಂದೇಶ ರವಾನಿಸಿದರು.

- ಮಂಡ್ಯ ಜಿಲ್ಲೆ ಬೂಕನಕೆರೆಯಲ್ಲಿ ಹುಟ್ಟಿ ಶಿವಮೊಗ್ಗಕ್ಕೆ ಬಂದು ಶಿಕಾರಿಪುರದಲ್ಲಿ ಸಂಘದ ಕಾರ್ಯಕರ್ತನಾಗಿ ಆರ್‌ಎಸ್‌ಎಸ್ ಪ್ರಚಾರಕನಾಗಿ ಪುರಸಭೆ ಚುನಾವಣೆಯಲ್ಲಿ ಗೆದ್ದು ಪುರಸಭಾ ಅಧ್ಯಕ್ಷನಾದೆ. ನಾನು ಮನೆಯಿಂದ ಆ ಸಂದರ್ಭದಲ್ಲಿ ನನ್ನ ಕಚೇರಿಗೆ ಹೋಗಬೇಕಾದರೆ ದಾರಿ ಮಧ್ಯೆ ನನ್ನನ್ನು ಮಾರಣಾಂತಿಕ ಹಲ್ಲೆ ಮಾಡಿದರು. ನಾನು ಮುಗಿದು ಹೋದೆ ಎಂದು ಕೈಬಿಟ್ಟು ಹೋದರು. ಭಗವಂತನ ದಯೆ ನಾನು ಬದುಕಿದರೆ ನನ್ನ ಮುಂದಿನ ಜೀವನ ನಾಡಿನ ಜನರ ಸೇವೆಗೆ ಮುಡಿಪಾಗಿಡುತ್ತೇನೆಂದು ಪತ್ನಿ, ಮಕ್ಕಳಿಗೆ ಹೇಳಿದೆ ಅದೇ ರೀತಿ ನಡೆದು ಕೊಂಡೆ.
- ಜನಸಂಘದ ತಾಲ್ಲೂಕು ಅಧ್ಯಕ್ಷ, ಜಿಲ್ಲಾಧ್ಯಕ್ಷನಾಗಿ ಕೆಲಸ ಪ್ರಾರಂಭಿಸಿ ರೈತ ದಲಿತ ಪರ ಹೋರಾಟ ನಾಡಿನ ಅನ್ನದಾತ ನೆಮ್ಮದಿಯಿಂದ ಬಾಳಬೇಕೆಂಬ ಹೋರಾಟ ಮಾಡಿದೆ. ಒಂದು ಸಂದರ್ಭದಲ್ಲಿ 50 ರಿಂದ 60 ಸಾವಿರ ರೈತರನ್ನು ಸೇರಿಸಿ ಸಭೆ ಮಾಡಿದಾಗ ರಾಜನಾಥ್ ಸಿಂಗ್ ಕಾರ್ಯಕ್ರಮ ಮಾಡಿದಾಗ ಸುಷ್ಮಾ ಸ್ವರಾಜ್ ನೋಡಿ ಅಚ್ಚರಿಪಟ್ಟಿದ್ದರು.
- ಅಂದು ಅಟಲ್ ಬಿಹಾರಿ ವಾಜಪೇಯಿ ಅವರು ಕೇಂದ್ರದಲ್ಲಿ ಸಚಿವರಾಗಬೇಕು ಎಂದು ಹೇಳಿದರು, ಆಗ ನಾನು ಕರ್ನಾಟಕದಲ್ಲಿ ಪಕ್ಷವನ್ನು ಕಟ್ಟಬೇಕಿದೆ. ಯಾವ ಕಾರಣಕ್ಕೂ ಬರುವುದಿಲ್ಲ ಎಂದು ಹೇಳಿದೆ. ಅಟಲ್ ಬಿಹಾರಿ ವಾಜಪೇಯಿ, ಅಡ್ವಾಣಿ, ಮುರಳಿ ಮನೋಹರ ಜೋಶಿ ರಾಜ್ಯದಲ್ಲಿ ಪ್ರವಾಸ ಮಾಡುವಾಗ 200-300-400 ಜನ ಸೇರುತ್ತಿರಲಿಲ್ಲ. ಎದೆಗುಂದದೆ ನಾಡಿನ ಉದ್ದಗಲಕ್ಕೂ ಓಡಾಡಿದೆ. ಇಬ್ಬರು 4 ಜನ ಆದೆವು, ಇವತ್ತು ಬಿಜೆಪಿ ಕರ್ನಾಟಕದಲ್ಲಿ ಅಧಿಕಾರಕ್ಕೆ ಬಂದಿದೆ ಎಂದರೆ ಶಿಕಾರಿಪುರ ಜನ 7 ಬಾರಿ ಶಾಸಕನಾಗಿ ಮಾಡಿ ಇಡೀ ರಾಜ್ಯದ ಜನ ನಮ್ಮ ಪರ ನಿಂತಿರುವುದಕ್ಕೆ ಕಾರಣ. ಇವತ್ತು ನಾವಿರುವ ಈ ಪರಿಸ್ಥಿತಿಗೆ ಲಕ್ಷಾಂತರ ಕಾರ್ಯಕರ್ತರ ಪರಿಶ್ರಮ ಕಾರಣ.
- ನಾನು ದೇವರಲ್ಲಿ ಪ್ರಾರ್ಥನೆ ಮಾಡುವುದು ಇಷ್ಟೆ ನರೇಂದ್ರ ಮೋದಿ, ಅಮಿತ ಶಾ ಮತ್ತೊಮ್ಮೆ ಗೆದ್ದು ಬಂದು ದೇಶದ ಪ್ರಧಾನಿಯಾಗಿ ದೇಶ ಮುನ್ನಡೆಸಿದಾಗ ಭಾರತ ಜಗತ್ತಿನಲ್ಲಿ ಪ್ರಬಲವಾಗಿ ಬೆಳೆಯಲಿದೆ.
- ಶಿವಮೊಗ್ಗ ಜಿಲ್ಲೆಯಲ್ಲಿ ಓಡಾಟ ಮಾಡಲು ಕಾರು ಇಲ್ಲದ ಕಾಲದಲ್ಲಿ ಬೈಸಿಕಲ್‌ನಲ್ಲಿ ಓಡಾಟ ಮಾಡಿ ಪಕ್ಷ ಕಟ್ಟಿದ್ದೇವೆ. ಯಾರೂ ಇಲ್ಲದಾಗ ಪಕ್ಷಕಟ್ಟುವ ಕೆಲಸ ಮಾಡಿದೆವು, ಪಕ್ಷ ಇವತ್ತು ಸದೃಢವಾಗಿ ಬೆಳೆದಿದೆ. ಈಶ್ವರಪ್ಪ ಇಲ್ಲೇ ಕುಳಿತಿದ್ದಾರೆ, ನಾವೆಲ್ಲ ಒಟ್ಟಾಗಿ ಸೇರಿ ಪಕ್ಷ ಬಲಪಡಿಸಿದ ಪರಿಣಾಮ ಮತ್ತೊಮ್ಮೆ ಅಧಿಕಾರಕ್ಕೆ ಬರಲು ಸಾಧ್ಯವಾಯಿತು.
- ಎಲ್ಲ ಸಂದರ್ಭದಲ್ಲೂ ಅಗ್ನಿಪರೀಕ್ಷೆ. ನಾನು ಅಧಿಕಾರ ವಹಿಸಿಕೊಂಡಾಗ ಎರಡು ತಿಂಗಳು ಮಂತ್ರಿಮಂಡಲ ಮಾಡಲು ಬಿಡಲಿಲ್ಲ. ಪ್ರವಾಹ ಎದುರಾಗಿದ್ದರಿಂದ ಎಲ್ಲ ಕಡೆ ತಿರುಗಬೇಕಾಯಿತು ಹುಚ್ಚನಂತೆ. ಒಂದು ರೀತಿ ಎಲ್ಲ ಕಾಲದಲ್ಲಿಯೂ ಅಗ್ನಿಪರೀಕ್ಷೆಯೇ. ಈಗ ಕಳೆದ ಒಂದೂವರೆ ವರ್ಷದಿಂದ ಕೋವಿಡ್‌ನಿಂದ ಸಂಕಷ್ಟ ಜನರ ರಕ್ಷಿಸಲು ಸಂಪುಟ

ಸಹೋದ್ಯೋಗಿಗಳು ಶಕ್ತಿಮೀರಿ ಪ್ರಯತ್ನಿಸಿದವು. ಅಗ್ನಿಪರೀಕ್ಷೆ ಒಂದಾದ ಮೇಲೊಂದು ಬಂದರೂ ಕೆಲಸ ಮಾಡಿದ್ದೇವೆ. ಸರ್ಕಾರಿ ನೌಕರರಿಗೆ ಕೃತಜ್ಞತೆ ಸಲ್ಲಿಸುತ್ತೇನೆ. ನನ್ನ ಮೇಲೆ ವಿಶ್ವಾಸ ಇಟ್ಟು ಸಹಕಾರ ಕೊಟ್ಟಿದ್ದರಿಂದ ರಾಜ್ಯದಲ್ಲಿ ಅಭಿವೃದ್ಧಿ ಮಾಡಬೇಕಾಯಿತು. ತೆರಿಗೆ ಸಂಗ್ರಹ  ಕಡಿಮೆಯಾದರೂ ರಾಜ್ಯವನ್ನು ಅಭಿವೃದ್ಧಿ ಪಥದತ್ತ ಕೊಂಡೊಯ್ಯಲು ಪ್ರಯತ್ನ ಮಾಡಿದ್ದೇವೆ.

ನಾನೊಬ್ಬನೇ ಅಲ್ಲ ಎಲ್ಲರೂ ಸಹಕಾರದಿಂದ ಬದಲಾವಣೆ ತರಲು ಸಾಧ್ಯವಾಯಿತು. ಬರುವ ದಿನಗಳಲ್ಲಿ ಇನ್ನು ಹೆಚ್ಚು ಅಭಿವೃದ್ಧಿ ಕಾರ್ಯ ಮಾಡಿ ರಾಜ್ಯವನ್ನು ಅಭಿವೃದ್ಧಿ ಪಥದತ್ತ  ಕೊಂಡೊಯ್ಯ ಬೇಕಾಗಿದೆ. ನಾಡಿನ ಜನರ ಋಣ ತೀರಿಸಬೇಕಾಗಿದೆ.

ಇತ್ತೀಚಿನ ದಿನಗಳಲ್ಲಿ ಚುನಾಯಿತ ಪ್ರತಿನಿಧಿಗಳ ಬಗ್ಗೆ ಅಧಿಕಾರಿಗಳ ಬಗ್ಗೆ ನಂಬಿಕೆ ವಿಶ್ವಾಸ ಕಡಿಮೆಯಾಗುತ್ತಿದೆ. ಪ್ರಧಾನಿಯವರ ಅಪೇಕ್ಷೆ ಪ್ರಾಮಾಣಿಕರಾಗಿ ನಾವು ಕೆಲಸ ಮಾಡಬೇಕಾಗಿದೆ.

ಆಧಾರ: ಉದಯವಾಣಿ, ದಿನಾಂಕ:27.07.2021.

## 19.ಪೂರ್ಣಾವಧಿ ಪೂರೈಸದ ಶಿವಮೊಗ್ಗದ ಮುಖ್ಯಮಂತ್ರಿಗಳು

ಕರ್ನಾಟಕದ ಇತಿಹಾಸದಲ್ಲಿ ಜಿಲ್ಲೆಯ ನಾಲ್ವರು ಮುಖ್ಯಮಂತ್ರಿ ಸ್ಥಾನ ಅಲಂಕರಿಸಿದ್ದಾರೆ. ಯಾರೊಬ್ಬರಿಗೂ ಪೂರ್ಣಾವಧಿ ಅಧಿಕಾರ ನಡೆಸಲು ಅವಕಾಶ ದೊರೆತಿಲ್ಲ.

ತೀರ್ಥಹಳ್ಳಿ ಕ್ಷೇತ್ರದ ಕಡಿದಾಳು ಮಂಜಪ್ಪ, ಸೊರಬದ ಎಸ್.ಬಂಗಾರಪ್ಪ, ಅವಿಭಜಿತ ಶಿವಮೊಗ್ಗ ಜಿಲ್ಲೆಯ ಚನ್ನಗಿರಿ ಕ್ಷೇತ್ರದ ಜೆ.ಹೆಚ್.ಪಟೇಲ್ ಹಾಗೂ ಶಿಕಾರಿಪುರದ ಬಿ.ಎಸ್.ಯಡಿಯೂರಪ್ಪ ರಾಜ್ಯದ ಮುಖ್ಯಮಂತ್ರಿಗಳಾಗಿ ಅಧಿಕಾರ ನಡೆಸಿದ್ದಾರೆ. ಕಡಿದಾಳ್, ಬಂಗಾರಪ್ಪ ಅವರಿಗೆ ಕಾಂಗ್ರೆಸ್, ಜೆ.ಹೆಚ್.ಪಟೇಲ್‌ರಿಗೆ ಜನತಾ ದಳ ಅವಕಾಶ ನೀಡಿತ್ತು. ಯಡಿಯೂರಪ್ಪ ಅವರು ಬಿಜೆಪಿ ಶಾಸಕರಾಗಿ ಮುಖ್ಯಮಂತ್ರಿ ಸ್ಥಾನ ಪಡೆದಿದ್ದರು.

**ಕಡಿದಾಳ್ ಮಂಜಪ್ಪ ಜಿಲ್ಲೆಯ ಮೊದಲ ಮುಖ್ಯಮಂತ್ರಿ:** ತೀರ್ಥಹಳ್ಳಿ ವಿಧಾನಸಭಾ ಕ್ಷೇತ್ರಕ್ಕೆ 1952ರಲ್ಲಿ ನಡೆದ ಚುನಾವಣೆಯಲ್ಲಿ ಶಾಸಕರಾಗಿ ಆಯ್ಕೆಯಾಗಿದ್ದ ಕಡಿದಾಳ್ ಮಂಜಪ್ಪ ಅವರು 1956 ಆಗಸ್ಟ್ 19ರಂದು ಮುಖ್ಯಮಂತ್ರಿಯಾಗಿ ಅಧಿಕಾರ ಸ್ವೀಕರಿಸಿದ್ದರು. ಮುಖ್ಯಮಂತ್ರಿಯಾಗಿ ನಾಲ್ಕೂವರೆ ವರ್ಷಗಳು ಕಾರ್ಯ ನಿರ್ವಹಿಸಿದ್ದ ಕೆಂಗಲ್ ಹನುಮಂತಯ್ಯ ಅವರು ಸ್ಥಾನಕ್ಕೆ  ರಾಜೀನಾಮೆ ನೀಡಿದ್ದರು. ಅವರಿಗೆ  ದೊರೆತದ್ದು ಕೇವಲ 73 ದಿನಗಳು. ಅದೇ ವರ್ಷ ಅಕ್ಟೋಬರ್ 31ಕ್ಕೆ ವಿಧಾನಸಭೆಯ ಅವಧಿ ಪೂರ್ಣಗೊಂಡಿತ್ತು.

**ಎರಡನೆಯವರು ಬಂಗಾರಪ್ಪ:** ಸೊರಬ ಕ್ಷೇತ್ರದಿಂದ 1989ರಲ್ಲಿ 6ನೇ ಬಾರಿ ಶಾಸಕರಾಗಿ ಆಯ್ಕೆಯಾಗಿದ್ದ ಸಾರೆಕೊಪ್ಪ ಬಂಗಾರಪ್ಪ ಅವರು ವೀರೇಂದ್ರ ಪಾಟೀಲ್ ನಂತರ 1990 ಅಕ್ಟೋಬರ್ 17 ರಂದು ಮುಖ್ಯಮಂತ್ರಿಯಾಗಿ ಪ್ರಮಾಣ ವಚನ ಸ್ವೀಕರಿಸಿದ್ದರು. 1992ರ ನವೆಂಬರ್ 19 ರಂದು ಸ್ಥಾನಕ್ಕೆ ರಾಜೀನಾಮೆ ನೀಡಿದ್ದರು. ಕೇಂದ್ರ ನಾಯಕ ನರಸಿಂಹರಾವ್ ಅವರ ರಾಜಕೀಯ ಕಾರಣಗಳಿಂದ ರಾಜೀನಾಮೆ ನೀಡಿದ್ದರು. ಉಳಿದ ಅವಧಿಗೆ ವೀರಪ್ಪ ಮೊಯಿಲಿ ಅವರು ಮುಖ್ಯಮಂತ್ರಿಯಾಗಿ ಕಾರ್ಯನಿರ್ವಹಿಸಿದ್ದರು.

ಮೂರನೇ ಮುಖ್ಯಮಂತ್ರಿ ಜೆ.ಹೆಚ್.ಪಾಟೇಲ್ ಅವಿಭಜಿತ ಶಿವಮೊಗ್ಗ ಜಿಲ್ಲೆಯ ಚನ್ನಗಿರಿ ಕ್ಷೇತ್ರದಿಂದ 1994 ರ ಚುನಾವಣೆಯಲ್ಲಿ ಗೆಲುವು ಕಂಡಿದ್ದ ಜನತಾದಳದ ಜೆ.ಹೆಚ್.ಪಟೇಲ್ 1996ರ ಮೇ 31 ರಂದು ಮುಖ್ಯಮಂತ್ರಿಯಾಗಿ ಅಧಿಕಾರ ಸ್ವೀಕರಿಸಿದ್ದರು. 1994ರ ವಿಧಾನಸಭಾ ಚುನಾವಣೆಯ ನಂತರ ಜನತಾದಳ ಅಧಿಕಾರದ ಚುಕ್ಕಾಣಿ ಹಿಡಿದಿತ್ತು. ಹೆಚ್.ಡಿ.ದೇವೇಗೌಡರು ಮುಖ್ಯಮಂತ್ರಿಯಾಗಿ

ಪ್ರಮಾಣ ವಚನ ಸ್ವೀಕರಿಸಿದ್ದರು. ಅನಿರೀಕ್ಷಿತ ರಾಜಕೀಯ ಬೆಳವಣಿಗೆಯಲ್ಲಿ ಅವರು ದೇಶದ ಪ್ರಧಾನಿಯಾದರು. ಆಗ ಉಪ ಮುಖ್ಯಮಂತ್ರಿಯಾಗಿದ್ದ ಜೆ.ಹೆಚ್.ಪಟೇಲರಿಗೆ ಮುಖ್ಯಮಂತ್ರಿ ಯೋಗ ಒಲಿದು ಬಂದಿತ್ತು. 1999 ಅಕ್ಟೋಬರ್ 7 ರವರೆಗೆ ಉಳಿದ ಅವಧಿ ಮುಖ್ಯಮಂತ್ರಿಯಾಗಿ ಕಾರ್ಯನಿರ್ವಹಿಸಿದ್ದರು.

**ಮುಖ್ಯಮಂತ್ರಿಯಾಗಿ ಯಡಿಯೂರಪ್ಪ:** ಬಿ.ಎಸ್.ಯಡಿಯೂರಪ್ಪ ಅವರು 2004ರ ಚುನಾವಣೆಯಲ್ಲಿ 5ನೇ ಬಾರಿ ಶಿಕಾರಿಪುರದಿಂದ ಆಯ್ಕೆಯಾಗಿದ್ದರು. ಅಂದು ರಾಜ್ಯದಲ್ಲಿ ಯಾವುದೇ ಪಕ್ಷಕ್ಕೆ ಸ್ಪಷ್ಟ ಬಹುಮತ ದೊರೆತಿರಲಿಲ್ಲ. ಕಾಂಗ್ರೆಸ್. ಜೆಡಿಎಸ್ ಸಮ್ಮಿಶ್ರ ಸರ್ಕಾರ ಅಸ್ತಿತ್ವಕ್ಕೆ ಬಂದಿತ್ತು. ಧರ್ಮಸಿಂಗ್ ಮುಖ್ಯಮಂತ್ರಿಯಾಗಿದ್ದರು.

ಕಾಂಗ್ರೆಸ್‌ಗೆ ನೀಡಿದ್ದ ಬೆಂಬಲ ಜೆಡಿಎಸ್ ಹಿಂಪಡೆದಿದ್ದರಿಂದ ಸರ್ಕಾರ ಪತನವಾಗಿತ್ತು. ನಂತರ ಬಿಜೆಪಿ, ಜೆಡಿಎಸ್ 20:20 ಸರ್ಕಾರ ರಚಿಸಲಾಯಿತು. ಮೊದಲ 20 ತಿಂಗಳಿಗೆ ಜೆಡಿಎಸ್‌ನ ಹೆಚ್.ಡಿ.ಕುಮಾರಸ್ವಾಮಿ ಮುಖ್ಯಮಂತ್ರಿಯಾದರು. ಹಲವು ನಾಟಕೀಯ ಬೆಳವಣಿಗೆಗಳ ನಂತರ 2007ರ ನವೆಂಬರ 12ರಂದು ಯಡಿಯೂರಪ್ಪ ಮುಖ್ಯಮಂತ್ರಿಯಾಗಿ ಅಧಿಕಾರ ಸ್ವೀಕರಿಸಿದರು. ಜೆಡಿಎಸ್ ಬೆಂಬಲ ಹಿಂಪಡೆದ ಕಾರಣ ಕೇವಲ 7 ದಿನಕ್ಕೆ ಅವರು ರಾಜೀನಾಮೆ ನೀಡಬೇಕಾಯಿತು. ಮೂರೂವರೆ ವರ್ಷಕ್ಕೆ ಆಗಿನ ವಿಧಾನಸಭೆ ವಿಸರ್ಜನೆಯಾಗಿತ್ತು.

2008ರ ಚುನಾವಣೆಯಲ್ಲಿ ಶಿಕಾರಿಪುರದಿಂದ 6ನೇ ಬಾರಿ ಆಯ್ಕೆಯಾದ ಅವರು ಆ ವರ್ಷ ಮೇ 30 ರಂದು ಎರಡನೇ ಬಾರಿ ಮುಖ್ಯಮಂತ್ರಿಯಾಗಿ ಅಧಿಕಾರ ಸ್ವೀಕರಿಸಿದರು. ಪಕ್ಷದಲ್ಲಿ ನಡೆದ ಆಂತರಿಕ ಕಲಹ, ಭ್ರಷ್ಟಚಾರ ಪ್ರಕರಣಗಳ ಪರಿಣಾಮ 2011ರ ಜುಲೈ 31ರಂದು ರಾಜೀನಾಮೆ ನೀಡಿದ್ದರು. ಉಳಿದ ಅವಧಿಗೆ ಸದಾನಂದ ಗೌಡ, ಜಗದೀಶ ಶೆಟ್ಟರ್ ಮುಖ್ಯಮಂತ್ರಿಗಳಾಗಿ ಕಾರ್ಯನಿರ್ವಹಿಸಿದ್ದರು.

2018ರ ಮೇನಲ್ಲಿ ನಡೆದ ವಿಧಾನಸಭಾ ಚುನಾವಣೆಯಲ್ಲಿ 8ನೇ ಬಾರಿ ಶಿಕಾರಿಪುರದಿಂದ ಆಯ್ಕೆಯಾದ ನಂತರ ಮೇ 17 ರಂದು ಮುಖ್ಯಮಂತ್ರಿಯಾಗಿ ಪ್ರಮಾಣ ವಚನ ಸ್ವೀಕರಿಸಿದ್ದರು. 104 ಶಾಸಕರ ಬಲ ಹೊಂದಿದ್ದ ಅವರಿಗೆ ಅದೃಷ್ಟ ಒಲಿಯಲಿಲ್ಲ. ಸುಪ್ರೀಂಕೋರ್ಟ್ ಆದೇಶದಂತೆ ಎರಡನೇ ದಿನದಲ್ಲಿ ಬಹುಮತ ಸಾಬೀತು ಪಡಿಸುವ ಅನಿವಾರ್ಯತೆಗೆ ಸಿಲುಕಿ ರಾಜೀನಾಮೆ ನೀಡಿದ್ದರು.

ನಂತರ ಕಾಂಗ್ರೆಸ್ ಸಹಭಾಗಿತ್ವದಲ್ಲಿ ಅಸ್ತಿತ್ವಕ್ಕೆ ಬಂದಿದ್ದ ಹೆಚ್.ಡಿ.ಕುಮಾರಸ್ವಾಮಿ ಸರ್ಕಾರ ಉರುಳಿಸಿ 2019 ಜುಲೈ 26ರಂದು ನಾಲ್ಕನೇ ಬಾರಿ ಮುಖ್ಯಮಂತ್ರಿಗಾದಿ ಅಲಂಕರಿಸಿದ್ದರು. ಎರಡು ವರ್ಷಗಳ ಅವಧಿ ಪೂರ್ಣಗೊಂಡ ದಿನವೇ ಮತ್ತೆ ರಾಜೀನಾಮೆ ನೀಡಿದ್ದಾರೆ.

ಆಧಾರ: ಪ್ರಜಾವಾಣಿ, ದಿನಾಂಕ:27.07.2021.

## 20. ವಾರದಲ್ಲಿ ಸಂಪುಟ ರಚನೆ

ಎಲ್ಲವೂ ಅಂದುಕೊಂಡಂತಾದರೆ ಇನ್ನು ನಾಲ್ಕೈದು ದಿನಗಳಲ್ಲಿ ರಾಜ್ಯದಲ್ಲಿ ಸಂಪುಟ ರಚನೆಯಾಗುವ ಸಾಧ್ಯತೆ ಇದೆ. ಮುಖ್ಯಮಂತ್ರಿಯವರು ನವದೆಹಲಿ ಪ್ರವಾಸದಲ್ಲಿದ್ದು ವರಿಷ್ಠರನ್ನು ಭೇಟಿಯಾಗಿ ಸಚಿವಾಕಾಂಕ್ಷಿಗಳ ಪಟ್ಟಿಕೊಟ್ಟು ಸಂಪುಟ ರಚನೆಗೆ ಮನವಿ ಮಾಡಿದ್ದಾರೆ.

ದೆಹಲಿಯಲ್ಲಿ ಮುಖ್ಯಮಂತ್ರಿಯವರು ಪ್ರಧಾನಿ ನರೇಂದ್ರ ಮೋದಿ, ಕೇಂದ್ರ ಗೃಹ ಸಚಿವ ಅಮಿತ್ ಶಾ, ಬಿಜೆಪಿ ರಾಷ್ಟ್ರೀಯ ಅಧ್ಯಕ್ಷ ಜೆ.ಪಿ.ನಡ್ಡಾ ರಕ್ಷಣಾ ಸಚಿವ ರಾಜನಾಥ ಸಿಂಗ್ ಅವರನ್ನು ಭೇಟಿ ಮಾಡಿ ಅಭಿನಂದನೆ ಸಲ್ಲಿಸಿದ್ದಾರೆ. ಪ್ರಧಾನಿ ಮೋದಿ, ಭ್ರಷ್ಟಚಾರ ರಹಿತ ಉತ್ತಮ ಆಡಳಿತ ನೀಡುವಂತೆ ಸೂಚನೆ

ನೀಡಿದ್ದಾರೆ. ಅಲ್ಲದೇ ಕೇಂದ್ರ ಗೃಹ ಸಚಿವ ಅಮಿತ್ ಶಾ, ಮುಂದಿರುವ ರಾಜಕೀಯ ಸವಾಲುಗಳ ಬಗ್ಗೆ ಎಚ್ಚರಿಸುವ ಕೆಲಸ ಮಾಡಿದ್ದಾರೆ ಎಂದು ತಿಳಿದು ಬಂದಿದೆ.

**ಹೈಕಮಾಂಡ್‌ನಿಂದ ಸಂಪುಟ ಪಟ್ಟಿ:** ನೂತನ ಮುಖ್ಯಮಂತ್ರಿಯವರು ಪ್ರಮಾಣ ವಚನ ಸ್ವೀಕರಿಸಿ ಮೂರು ದಿನ ಕಳೆದಿದ್ದು ರಾಜ್ಯದಲ್ಲಿ ಪ್ರವಾಹ ಪರಿಸ್ಥಿತಿ ಇರುವುದರಿಂದ ಆದಷ್ಟು ಬೇಗ ಸಂಪುಟ ವಿಸ್ತರಣೆಗೆ ಅವಕಾಶ ನಿಡುವಂತೆ ಕೇಂದ್ರದ ವರಿಷ್ಠರಿಗೆ ಮನವಿ ಮಾಡಿದ್ದು ತಮ್ಮದೇ ಆದ ಸಂಭಾವ್ಯರ ಒಂದು ಪಟ್ಟಿಯನ್ನು  ಪಕ್ಷದ ರಾಷ್ಟ್ರೀಯ ಅಧ್ಯಕ್ಷ ಜೆ.ಪಿ.ನಡ್ಡಾ ಅವರಿಗೆ ಸಲ್ಲಿಸಿದ್ದಾರೆ ಎಂದು ತಿಳಿದು ಬಂದಿದೆ.

ಸಂಪುಟದಲ್ಲಿ ಉಪ ಮುಖ್ಯಮಂತ್ರಿಗಳ ನೇಮಕ, ಸಿಡಿ ಆರೋಪಿತ ಸೇರ್ಪಡೆ, ಹಿರಿಯ ಶಾಸಕರನ್ನು ಕೈಬಿಡುವ ವಿಚಾರದ ಕುರಿತು ಯಾವುದೇ ರೀತಿಯ ವಿಸ್ತೃತ ಚರ್ಚೆ ನಡೆದಿಲ್ಲ ಎಂದು ಹೇಳಲಾಗುತ್ತಿದೆ. ಈ ಬಗ್ಗೆ ಪಕ್ಷ ಹೈಕಮಾಂಡ್ ತೀರ್ಮಾನಕ್ಕೆ ಬದ್ಧರಾಗಲು ನೂತನ ಮುಖ್ಯಮಂತ್ರಿ ಮುಂದಾಗಿದ್ದಾರೆ ಎಂಬ ಮಾಹಿತಿ ಲಭ್ಯವಾಗಿದೆ.

ಮುಖ್ಯಮಂತ್ರಿಯವರು ನೀಡಿರುವ ಪಟ್ಟಿ ಹಾಗೂ ಪಕ್ಷದ ಹೈಕಮಾಂಡ್ ಮಟ್ಟದಲ್ಲಿ ಯಾರನ್ನು ಸಂಪುಟಕ್ಕೆ ಸೇರಿಸಬೇಕೆಂಬ ಕುರಿತು ಪ್ರತ್ಯೇಕ ಪಟ್ಟಿ ಸಿದ್ಧವಾಗಿದೆ ಎಂಬ ಮಾತುಗಳು ಕೇಳಿ ಬರುತ್ತಿವೆ. ಇಲ್ಲಿ ಮುಖ್ಯಮಂತ್ರಿಯವರು ನೀಡಿರುವ ಪಟ್ಟಿಯಲ್ಲಿರುವವರಿಗೆ ಅವಕಾಶ ದೊರೆಯುತ್ತದೆಯೋ ಇಲ್ಲವೋ ಎನ್ನುವುದು ಕುತೂಹಲ ಮೂಡಿಸಿದೆ.

ನೂತನ ಸಚಿವರ ಪಟ್ಟಿಯನ್ನು ಒಂದೆರೆಡು ದಿನದಲ್ಲಿ ಕೇಂದ್ರದ ನಾಯಕರು ಒಪ್ಪಿಗೆ ನೀಡಿ ಒಂದು ವಾರದ ಒಳಗೆ ಸಂಪುಟ ವಿಸ್ತರಣೆಯಾಗುವ ಸಾಧ್ಯತೆ ಇದೆ ಎಂದು ಮುಖ್ಯಮಂತ್ರಿಯವರು ಹೇಳಿದ್ದಾರೆ. ಬಿಜೆಪಿ ಮೂಲಗಳ ಪ್ರಕಾರ ಬಿಜೆಪಿ ಹೈಕಮಾಂಡ್ ನೂತನ ಸಚಿವರ ಪಟ್ಟಿಗೆ ಒಪ್ಪಿಗೆ ನೀಡಿದರೆ ನೂತನ ಸಚಿವರ ಪ್ರಮಾಣ ವಚನ ಕಾರ್ಯಕ್ರಮ ನಡೆಯುವ ಸಾಧ್ಯತೆ ಇದೆ ಎಂಬ ಮಾಹಿತಿ ಲಭ್ಯವಾಗಿದೆ.

**ರಾಜ್ಯದಲ್ಲೇ ವರ್ಕಿಂಗ್ ಗ್ರೂಪ್ ರಚನೆ:** ಕೇಂದ್ರ ಸರ್ಕಾರದ ಮಟ್ಟದಲ್ಲಿ ರಾಜ್ಯದ ಯೋಜನೆಗಳಿಗೆ ವೇಗವಾಗಿ ಒಪ್ಪಿಗೆ ಪಡೆಯಲು ಎಸಿಎಸ್ ನೇತೃತ್ವದಲ್ಲಿ ರಾಜ್ಯದಲ್ಲಿಯೇ ವಿಶೇಷ ತಂಡ (ವರ್ಕಿಂಗ್ ಗ್ರೂಪ್) ರಚಿಸಲಾಗುವುದು ಎಂದು ಮುಖ್ಯಮಂತ್ರಿಯವರು ಹೇಳಿದ್ದಾರೆ. ದೆಹಲಿಯಲ್ಲಿರುವ ಕರ್ನಾಟಕದ ಅಧಿಕಾರಿಗಳು ಸಕ್ರಿಯರಾಗಿ ಕೆಲಸ ಮಾಡದ ಹಿನ್ನೆಲೆಯಲ್ಲಿ ರಾಜ್ಯದಲ್ಲಿ ಹಿರಿಯ ಅಧಿಕಾರಿಗಳ ನೇತೃತ್ವದಲ್ಲಿ ವರ್ಕಿಂಗ್ ಗ್ರೂಪ್ ಮಾಡಿ ಅವರ ಮೂಲಕ ಎಲ್ಲ ಮಾಹಿತಿ ಕಲೆ ಹಾಕಿ ದೆಹಲಿ ಮಟ್ಟದಲ್ಲಿ ಕಾರ್ಯಗತಗೊಳಿಸಲಾಗುವುದು ಎಂದು ಹೇಳಿದ್ದರು.

ರಾಷ್ಟ್ರೀಯ ನಾಯಕರ ಭೇಟಿ ಬಳಿಕ ಪತ್ರಿಕಾಗೋಷ್ಠಿಯಲ್ಲಿ ಮಾತನಾಡಿದ ಅವರು, ರಾಜ್ಯದ ಸಂಸದರ ಮೂಲಕ ಕೇಂದ್ರದಿಂದ ರಾಜ್ಯಕ್ಕೆ ಆಗಬೇಕಿರುವ ಕೆಲಸಗಳ ಬಗ್ಗೆ ಸಂಸದರ ಜೊತೆ ಚರ್ಚಿಸಿದ್ದೇನೆ. ಕರ್ನಾಟಕದ ನೆಲ, ಜಲ, ಸಮಸ್ಯೆಗಳ ಕುರಿತು ಎಲ್ಲ ಸಂಸದರೊಂದಿಗೆ ಒಗ್ಗಟ್ಟಿನಿಂದ ಹೋಗಲು ತೀರ್ಮಾನಿಸಿದ್ದೇವೆ ಎಂದರು.

ಜಲ ಶಕ್ತಿ ಸಚಿವರಾದ ಗಜೇಂದ್ರ ಸಿಂಗ್ ಶೇಖಾವತ್ ಅವರ ಭೇಟಿ ವೇಳೆ, ಮೇಕೆದಾಟು ಯೋಜನೆಯ ಡಿಪಿಆರ್‌ಗೆ ಒಪ್ಪಿಗೆ ನೀಡಬೇಕು. ಕೃಷ್ಣಾ ಮೇಲ್ದಂಡೆ ಯೋಜನೆಯ ಎರಡನೇ ನ್ಯಾಯಮಂಡಳಿ ಆದೇಶ ಸುಪ್ರೀಂಕೋರ್ಟ್‌ನಲ್ಲಿದೆ. ಮಹಾರಾಷ್ಟ್ರ ಹಾಗೂ ಕರ್ನಾಟಕ ಆದಷ್ಟು ಬೇಗ ಇತ್ಯರ್ಥ ಪಡಿಸಿಕೊಳ್ಳಲು ಮನವಿ ಸಲ್ಲಿಸಿದ್ದೇನೆ. ಸುಪ್ರೀಂಗೆ ಕೇಂದ್ರ ಸರ್ಕಾರ ತನ್ನ ನಿಲುವು ತಿಳಿಸಿ ಆದಷ್ಟು ಬೇಗ ಪ್ರಕರಣ ಮುಕ್ತಾಯಗೊಳಿಸಲು ಮನವಿ ಮಾಡಿದ್ದೇನೆ ಎಂದು ಬೊಮ್ಮಾಯಿ ಅವರು ತಿಳಿಸಿದ್ದಾರೆ.

ಆಧಾರ: ಉದಯವಾಣಿ, ದಿನಾಂಕ:31.07.2021.

## 21. Long list of CMs with janata parivar roots

Basavaraj Bommai has joined a long list of chief ministers with a Janata parivar background. His father SR Bommai, Ramakrishna Hegde, JH Patel, HD Deve Gowda, HD Kumaraswamy and Siddaramaiah are the others. Basavaraj was instrumental in strengthening Janata Dal and later Janata Dal (United) till 2007.

Many from Janata Parivar later moved to BJP and congress. Former Union minister Basavaraj Patil Anwari, who was the first Janata Dal MP from South India, recounted his association with the Bommai family and said that he was very happy that Basavaraj had become the chief minister. “Whenever a special menu was prepared for festivals, we shared food with SR Bommai, Gangamma and their children. This was when we lived in RT Nagar”, Anwari said. “Basavraj discharged his duty successfully as the home minister over the past years. He has become athe CM in a critical situation, but we are confident that he will succeed.”

Anwari recalled how SR Bommai helped Dharwad get a varsity.” When I was the agriculture minister, he made many efforts to get an agricultural universtity in Dharwad in 1986. He never allowed his wards into politics. As a student, Basavaraj never misused his father’s name. He started his political career with the youth wing of Janata Dal and proved his capabilities on his own.”

Ashok Chandarigi, the president of the Kannada Kriya Samiti in Belagavi, fondly calls Basavarj Basanna. He said that he travelled with him many times to strengthen Janata Dal. “He led a youth rally of Janata Dal in Hubballi in 1993 and later became the party’s state general secretary. We became closer during the Kalasa-Banduri-Mahadayi agitation in 2002; he organized a padayatra of more than 200km. He joined BJP in 2008 and became an MLA,” chandargi said.

Ex-minister Basavaraj Rayareddi, who started his political career as an Janata Dal MLA in 1985 and is now in Congress, said that Janata Pariviar had excellent leaders who connected with the masses and understood their problems. “The Parivar always focused on training the next generation of leaders. It had a good culture. With Parivar background, Bommai has a blend of qualities. He has good Knowledge about issues and knows general administration well, “ he said.

Courtesy: The Times of India, Dated: 01.08.2021

## 22. COVID-19 tests to soon touch four crore mark in State.

Karnataka will soon create another milestone in its pandemic control measures with COVID-19 tests all set to breach the 4 crore mark. The State has been consistently conducting an average of 1.4 lakh tests daily.

With 1,38,532 tests conducted in the last 24 hours the total number of tests stood at 3,86,49,498 Karnataka is the third State in the country, after Uttar Pradesh and Maharashtra,

that has tested 6.5 crore and 4.8 crore samples, respectively to have tested the maximum number.

The State had tested a total of over one crore samples from March last year, when the pandemic hit Karnataka till November 21, 2020 Subsequently another one crore samples were tested in four months and on March 17, 2021 the total number of tests breached the two crore mark. By June, 3 the total tests crossed three crore.

Nearly 83% of the total 3,86,49,498 tests conducted till date have been done using Reverse Transcription Polymerase Chain Reaction (RT-PCR) method. RT-PCR is the gold standard test that has negligible chances of false negativity.

**First in south**: In South India, Karnataka rank first followed by Tamil Nadu and Kerala. While Tamilnadu has carried out 3.7 crore tests. Andhra Pradesh and Telengana have carried out 2.4 crore and 2.2 crore tests respectively.

From an average 80 tests a day in March last year, the State, till January 2021 tested an average of over one lakh samples a day. Although the daily tests reduced subsequently, they have again been increased in the last one month. Now, since the beginning of July the daily number of tests have remained high, which is a good measure, said experts.

The State COVID-19 Technical Advisory recommended that the State should continue aggressive testing irrespective of the decrease in number of new cases. TAC Chairman M.K.Sudarshan told that although the testing numbers are satisfactory, there should be focussed aggressive and syndromic testing and syndromic testing and tracking especially in the border districts of Kerala and Maharashtra. In order to effectively contain the virus transmission testing provides adequate insights into how the virus spreads he said.

V.Ravi nodal officer for genomic confirmation of SARS-CoV-2 in Karnataka and member of State’s COVID-19 TAC, who was entrusted by the ICMR with the task of expansion of COVID-19 labs in April 2020 said it is important for the State to sustain the sample level of testing at least till December.

Testing is one of the important tools to not just prevent the spread of infection but also ensure early intervention in sick patients. We should track and trace at least 20 contacts for every positive case he asserted.

**Silent spread**: Epidemiologist and public health specialist Sunil Kumar D.R. who heads the department of community medicine at Akash Institute of Medical Science, said without aggressive syndromic testing the disease will spread silently. By the time severe cases begin to land in hospitals it will hard to control the transmission he said.

It is also important to get to test results quickly. The potential spread of the infection is high if results are delayed as people are not likely to isolate themselves till the reports come, added Dr.Sunil who is part of BBMP’s death audit committee.

Courtesy: The Hindu, Dated: 01.08.2021

## 23. ಶೇ.10 ಮೀಸಲಾತಿ: ಪರಿಷ್ಕೃತ ಆದೇಶ

ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಮತ್ತು ಕೇಂದ್ರ ಸರ್ಕಾರದ ಇತರ ಹಿಂದುಳಿದ ವರ್ಗಗಳ ಪಟ್ಟಿಯಲ್ಲಿರುವ ಜಾತಿಗಳನ್ನು ಬಿಟ್ಟು ಉಳಿದ ಎಲ್ಲ ಜಾತಿಗಳಲ್ಲಿನ ಆರ್ಥಿಕವಾಗಿ ದುರ್ಬಲ ವರ್ಗಗಳಿಗೆ ಕೇಂದ್ರ ಸರ್ಕಾರದ ಹುದ್ದೆಗಳು ಮತ್ತು ಶಿಕ್ಷಣ ಸಂಸ್ಥೆಗಳ ಪ್ರವೇಶಕ್ಕೆ ಶೇ.10 ರಷ್ಟು ಮೀಸಲಾತಿ ಸೌಲಭ್ಯ ಕಲ್ಪಿಸುವ ಸಂಬಂಧ ರಾಜ್ಯ ಸರ್ಕಾರ ಪರಿಷ್ಕೃತ ಆದೇಶ ಹೊರಡಿಸಿದೆ.

ಈ ಆದೇಶ ಹೊರಡಿಸಿರುವುದರಿಂದ, ಶೇ.10 ರಷ್ಟು ಮೀಸಲಾತಿ ಸೌಲಭ್ಯ 144 ಜಾತಿಗಳಿಗೆ ಮಾತ್ರ ಅನ್ವಯವಾಗುವಂತೆ 2019ರ ಮೇ 14 ರಂದು ಹೊರಡಿಸಿದ್ದ ಆದೇಶವನ್ನು ಹಿಂಪಡೆಯಲಾಗಿದೆ. ಜುಲೈ 22ರಂದು ನಡೆದ ಸಚಿವ ಸಂಪುಟ ಸಭೆಯಲ್ಲಿ ತೆಗೆದುಕೊಂಡ ತೀರ್ಮಾನದಂತೆ ಪರಿಷ್ಕೃತ ಆದೇಶ ಹೊರಡಿಸಲಾಗಿದೆ.

ವಾರ್ಷಿಕ ಆದಾಯ 8 ಲಕ್ಷಗಳಿಗೂ ಕಡಿಮೆ ಇರುವ ಕುಟುಂಬಗಳ ಅರ್ಹ ಅಭ್ಯರ್ಥಿಗಳಿಗೆ ಈ ಮೀಸಲಾತಿ ಸೌಲಭ್ಯ ಸಿಗಲಿದೆ. ಕಂದಾಯ ಇಲಾಖೆ ಅಟಲ್ ಜೀ ಜನಸ್ನೇಹಿ ಕೇಂದ್ರಗಳ ಮೂಲಕ ಆದಾಯ ಮತ್ತು ಸ್ವತ್ತು ಪ್ರಮಾಣ ವಿತರಿಸಲಿದೆ. ಪ್ರಮಾಣ ಪತ್ರ ವಿತರಿಸುವ ಸಂದರ್ಭದಲ್ಲಿ ಪ್ಯಾನ್ ಕಾರ್ಡ್, ಫಾರ್ಮ16, ಆದಾಯ ತೆರಿಗೆ ಪಾವತಿ ಬಗ್ಗೆ ಪರಿಶೀಲಿಸಬೇಕು. ಈ ದಾಖಲೆಗಳು ಕುಟುಂಬದ ಸದಸ್ಯರ ಬಳಿ  ಇಲ್ಲವೆಂದು ನೋಟರಿಯಿಂದ ದೃಢೀಕರಿಸಿದ ಪ್ರಮಾಣ ಪತ್ರವನ್ನು ಅಭ್ಯರ್ಥಿಗಳು ಸಲ್ಲಿಸಬೇಕು. ಆ ಬಳಿಕ, ಕುಟುಂಬದ ಆದಾಯ ಖಚಿತ ಪಡಿಸಿ ಪ್ರಮಾಣ ಪತ್ರ ನೀಡಬೇಕು ಎಂದು ಪರಿಷ್ಕೃತ ಆದೇಶದಲ್ಲಿ ಸ್ಪಷ್ಟಪಡಿಸಲಾಗಿದೆ.

**ಯಾರು ಅರ್ಹರಲ್ಲ:** 5ಎಕರೆ ಮತ್ತು ಅದಕ್ಕಿಂತ ಹೆಚ್ಚು ಕೃಷಿ ಜಮೀನು ಹೊಂದಿರುವ, ಒಂದು ಸಾವಿರ ಚದರ ಅಡಿ ಅಥವಾ ಅದಕ್ಕಿಂತ ದೊಡ್ಡ ಫ್ಲಾಟ್ ಇರುವ, ನಗರಸಭೆ ವ್ಯಾಪ್ತಿಯಲ್ಲಿ 100 ಚದರ ಅಡಿ ಮತ್ತು ಅದಕ್ಕಿಂತ ಹೆಚ್ಚು ಅಥವಾ ಆ ವ್ಯಾಪ್ತಿ ಹೊರತಾದ ಕಡೆಗಳಲ್ಲಿ 200ಅಡಿ ಮತ್ತು ಅದಕ್ಕಿಂತ ಹೆಚ್ಚು  ವಿಸ್ತೀರ್ಣದ ವಾಸ್ತವ್ಯ ಜಾಗ ಹೊಂದಿರುವ ಕುಟುಂಬ ಈ ಮೀಸಲಾತಿ ಸೌಲಭ್ಯ ಪಡೆಯಲು ಅರ್ಹರಲ್ಲ.

ಆಧಾರ: ಪ್ರಜಾವಾಣಿ, ದಿನಾಂಕ:01.08.2021.

## 24. ಮೊದಲ ಹಂತದಲ್ಲಿ ನಗರದ 54 ವಾರ್ಡ್‌ಗಳಲ್ಲಿ ಸಮೀಕ್ಷೆ

ಕೋವಿಡ್‌ನ ಮೂರನೇ ಅಲೆಯನ್ನು ಸಮರ್ಥವಾಗಿ ನಿಯಂತ್ರಿಸುವ ಉದ್ದೇಶದಿಂದ ದೇಶದಲ್ಲೇ ಮೊಟ್ಟ ಮೊದಲ ಬಾರಿಗೆ “ಪಾಲಿಕೆ ವೈದ್ಯರು ನಿಮ್ಮ ಮನೆ ಬಾಗಿಲಿಗೆ’ ಎಂಬ ವಿನೂತನ ಕಾರ್ಯಕ್ರಮ ಆರಂಭವಾಗಿದೆ. ಸಾರ್ವಜನಿಕರ ಆರೋಗ್ಯದ ಸಮಗ್ರ ಮಾಹಿತಿ ಕಲೆ ಹಾಕಲು ವೈದ್ಯರ ತಂಡವೇ ಮನೆ ಬಾಗಿಲಿಗೆ ಬರಲಿದೆ.

ಮೊದಲ ಹಂತದಲ್ಲಿ 27 ವಿಧಾನ ಸಭಾ ಕ್ಷೇತ್ರಗಳ 54 ವಾರ್ಡ್‌ಗಳಲ್ಲಿ ಶುರು ಮಾಡಲಾಗುತ್ತಿರುವ ಈ ಸಮೀಕ್ಷಾ ಕಾರ್ಯಕ್ಕೆ ಕಂದಾಯ ಸಚಿವ ಆರ್.ಅಶೋಕ್ ಬಿಬಿಎಂಪಿ ಕೇಂದ್ರ ಕಚೇರಿ ಆವರಣದಲ್ಲಿ ಚಾಲನೆ ನೀಡಿದರು. “ನಿಮ್ಮ ಆರೋಗ್ಯವೇ ನಮ್ಮ ಧ್ಯೇಯ’ ಎಂಬ ಧ್ಯೇಯ ವಾಕ್ಯದೊಂದಿಗೆ ವೈದ್ಯರ ತಂಡವು ಮನೆ-ಮನೆಗೆ ಭೇಟಿ ನೀಡಿ, ಕೋವಿಡ್‌ಗೆ ಸಂಬಂಧಿಸಿದಂತೆ ಆರೋಗ್ಯ ಸಮೀಕ್ಷೆ ನಡೆಸಲಿದೆ.

ಈ ಕಾರ್ಯಕ್ರಮದ ಪರಿಣಾಮಕಾರಿ ಅನುಷ್ಠಾನಕ್ಕಾಗಿ ಐದು ಮಂದಿ ಸದಸ್ಯರನ್ನೊಳಗೊಂಡ ತಂಡವನ್ನು ರಚಿಸಲಾಗಿದೆ. ಒಬ್ಬರು ವೈದ್ಯಾಧಿಕಾರಿ (ಎಂಬಿಬಿಎಸ್/ಬಿಡಿಎಸ್/ಆಯುಷ್), ನರ್ಸ್, ಆಶಾ ಕಾರ್ಯಕರ್ತೆಯರು, ಅರೆ ವೈದ್ಯಕೀಯ ಸಿಬ್ಬಂದಿಗಳಿರುತ್ತಾರೆ. ಪ್ರತಿಯೊಂದು ತಂಡವು ‘ವೈದ್ಯರು ನಿಮ್ಮ

ಮನೆ ಬಾಗಿಲಿಗೆ. ನಿಮ್ಮ ಆರೋಗ್ಯವೇ ನಮ್ಮ ಭಾಗ್ಯ' ಎಂಬ ಘೋಷಣೆಯ ಬಿಳಿ ಬಣ್ಣದ ಏಪ್ರನ್ ಧರಿಸಿರುತ್ತಾರೆ. ಈ ತಂಡವು ಪ್ರತಿ ಮನೆಗೆ ಭೇಟಿ ನೀಡಿ, ಕೊರೋನಾ ಗುಣಲಕ್ಷಣಗಳ ಬಗ್ಗೆ ಮಾಹಿತಿ ಪಡೆದು ಪರಿಶೀಲಿಸಲಿದೆ. ಅನ್ಯ ಕಾಯಿಲೆಗಳಿಂದ ಬಳಲುತ್ತಿರುವವರ ಆರೋಗ್ಯದ ಸ್ಥಿತಿಗತಿ ವಿಚಾರಿಸಿ, ಸೂಕ್ತ ಸಲಹೆ ನೀಡಲಿದೆ.

**ಮಾಹಿತಿ ಕಲೆ ಹಾಕಲಿರುವ ತಂಡ:** ವೈದ್ಯರ ತಂಡವು ಪ್ರತಿನಿತ್ಯ 50 ಮನೆಗಳಿಗೆ ಭೇಟಿ ನೀಡಿ, ಆ ಕುಟುಂಬ ಸದಸ್ಯರ ಸಂಪೂರ್ಣ ಆರೋಗ್ಯದ ವಿವರವನ್ನು ಪಡೆಯಲಿದೆ. ಮಧುಮೇಹ, ರಕ್ತದೊತ್ತಡ ಸೇರಿದಂತೆ ಇತರೆ ಸಾಮಾನ್ಯ ಸಮಸ್ಯೆಗಳು ಹಾಗೂ ಗಂಭೀರ ಕಾಯಿಲೆಗಳ ಕುರಿತು ಮಾಹಿತಿ ಕಲೆ ಹಾಕಲಿದೆ. ಕುಟುಂಬ ಸದಸ್ಯರು ಲಸಿಕೆ ಪಡೆದಿರುವ ಬಗ್ಗೆಯೂ ವಿವರ ಸಂಗ್ರಹಿಸಲಾಗುತ್ತಿದೆ. ಮನೆ ಮನೆ ಭೇಟಿ ಸಂದರ್ಭದಲ್ಲಿ ಕೋವಿಡ್ ಸೋಂಕಿತರು ಪತ್ತೆಯಾದಲ್ಲಿ ಅವರಿಗೆ ಪ್ರಾಥಮಿಕ ಆರೋಗ್ಯ ಕೇಂದ್ರಗಳಲ್ಲಿ ಲಭ್ಯವಿರುವ ಹೋಮ್ ಐಸೋಲೇಷನ್ ಕಿಟ್ ನೀಡಲಾಗುತ್ತದೆ. ಹೊಸದಾಗಿ ನೇಮಿಸಿಕೊಂಡಿರುವ ವೈದ್ಯರಿಗೆ ರೂ.60 ಸಾವಿರ ವೇತನ ನೀಡಲಾಗುತ್ತಿದೆ.

**ಆರೋಗ್ಯ ಮಾಹಿತಿ ಸಂಗ್ರಹಕ್ಕೆ ಟ್ಯಾಬ್:** ಮಾಹಿತಿ ಕಲೆ ಹಾಕುವ ಕಾರ್ಯವು ಸಂಪೂರ್ಣವಾಗಿ ಕಾಗದ ರಹಿತವಾಗಿರಲಿದೆ. ಸಂಗ್ರಹಿಸಿದ ಮಾಹಿತಿಯನ್ನು ಪಾಲಿಕೆ ತಂತ್ರಾಂಶದಲ್ಲಿ ದಾಖಲಿಸಲು ಟ್ಯಾಬ್‌ಗಳನ್ನು ನೀಡಲಾಗಿದೆ. ಸಾರ್ವಜನಿಕರ ಆರೋಗ್ಯ ಚಟುವಟಿಕೆ, ಸರ್ವೇಕ್ಷಣೆ ಮತ್ತು ನಿಗಾ (ಪಿಎಚ್‌ಎಸ್‌ಟಿ–ಫಾಸ್ಟ್) ತಂತ್ರಾಂಶದ ಮೂಲಕ ವೈದ್ಯರ ತಂಡವು ಜನರ ಆರೋಗ್ಯ ಮಾಹಿತಿ ಸಂಗ್ರಹಿಸಲಿದೆ. ಈ ತಂತ್ರಾಂಶದಲ್ಲಿ ಕುಟುಂಬ ಮುಖ್ಯಸ್ಥರ ಹೆಸರು, ಮನೆಯ ವಿಳಾಸ, ದೂರವಾಣಿ ಸಂಖ್ಯೆ, ಮನೆಯಲ್ಲಿ ವಾಸವಿರುವವರ ವಿವರ, ವಯಸ್ಸು ಕೋವಿಡ್ ಹಾಗೂ ಇನ್ನಿತರೆ ಕಾಯಿಲೆ, ಲಸಿಕೆ ಪಡೆದಿರುವ ಮಾಹಿತಿಯನ್ನು ದಾಖಲಿಸಲಾಗುತ್ತದೆ.

ಆಧಾರ: ವಿಜಯ ಕರ್ನಾಟಕ, ದಿನಾಂಕ:17.08.2021.

## 25. 9, 10ನೇ ತರಗತಿಗಳ ಆರಂಭದ ಬಗ್ಗೆ ಮಾರ್ಗಸೂಚಿ

ರಾಜ್ಯದ ಸರ್ಕಾರಿ, ಅನುದಾನಿತ ಮತ್ತು ಅನುದಾನರಹಿತ ಪ್ರೌಢಶಾಲೆಗಳಲ್ಲಿ ಭೌತಿಕ ತರಗತಿ ನಡೆಸಲು ಮಾರ್ಗಸೂಚಿ ಬಿಡುಗಡೆ ಮಾಡಿರುವ ಸಾರ್ವಜನಿಕ ಶಿಕ್ಷಣ ಇಲಾಖೆ, ಸಾಮಾಜಿಕ ಅಂತರದ ದೃಷ್ಟಿಯಿಂದ ಪ್ರತ್ಯೇಕ ಗುಂಪುಗಳನ್ನು ರಚಿಸಿ, ನಿತ್ಯವು ಅರ್ಧದಿನ ಮಾತ್ರ ಭೌತಿಕ ತರಗತಿ ನಡೆಸಲು ನಿರ್ದೇಶನ ನೀಡಿದೆ.

ಆಗಸ್ಟ್ 23 ರಿಂದ ರಾಜ್ಯಾದ್ಯಂತ 9 ರಿಂದ 12ನೇ ತರಗತಿ ವಿದ್ಯಾರ್ಥಿಗಳಿಗೆ ಭೌತಿಕ ತರಗತಿ ಆರಂಭವಾಗಲಿದ್ದು, ಈ ಸಂಬಂಧ ಪದವಿ ಪೂರ್ವ ಶಿಕ್ಷಣ ಇಲಾಖೆ ಪ್ರತ್ಯೇಕ ಮಾರ್ಗಸೂಚಿ ಬಿಡುಗಡೆ ಮಾಡಲಿದೆ.

**ಮೂರುವರೆ ಗಂಟೆ ತರಗತಿ:** ಕೊರೋನಾ ಪ್ರಮಾಣ ಶೇ.2ಕ್ಕಿಂತ ಕಡಿಮೆಯಿರುವ ಜಿಲ್ಲೆಗಳಲ್ಲಿ ಮಾತ್ರ ತರಗತಿ ನಡೆಸಲು ಅನುಮತಿ ನೀಡಲಾಗಿದೆ. ಸೋಮವಾರದಿಂದ ಶುಕ್ರವಾರದವರೆಗೆ ಬೆಳಗ್ಗೆ 10 ರಿಂದ ಮಧ್ಯಾಹ್ನ 1.30 ರವರೆಗೆ ಹಾಗೂ ಶನಿವಾರ ಬೆಳಗ್ಗೆ 10ರಿಂದ ಮಧ್ಯಾಹ್ನ 12.50ರವರೆಗೆ ತರಗತಿ ನಡೆಯಲಿದೆ. ವಿದ್ಯಾರ್ಥಿಗಳು ಪಾಲಕರಿಂದ ಅನುಮತಿ ಪತ್ರ ಕಡ್ಡಾಯವಾಗಿ ತರಬೇಕು. ಬಿಸಿಯೂಟ ಇರುವುದಿಲ್ಲ. ಮನೆಯಿಂದಲೇ ಉಪಹಾರ, ಕುಡಿಯಲು ಬಿಸಿ ನೀರು ತರುವಂತೆ ಸೂಚಿಸಲಾಗಿದೆ.

ಆಧಾರ: ಉದಯವಾಣಿ, ದಿನಾಂಕ:17.08.2021.

## 26. ಕೃಷಿ ಸಂಶೋಧನೆಗೆ ನವವಿಜ್ಞಾನ ಅನ್ವಯ ಅಗತ್ಯ

ವಿಜ್ಞಾನಿಗಳು ಹೊಸ ಸಾಧ್ಯತೆಗಳ ಕ್ಷೇತ್ರಗಳಾದ ಸಿಂಥೆಟಿಕ್ ಬಯಾಲಜಿ, ಕಂಪ್ಯೂಟೇಷನ್ ಬಯಾಲಜಿ, ಹೈ ಪರ್ಫಾರ್ಮನ್ಸ್ ಎಂಜಿನೀಯರಿಂಗ್ ಮೆಟೀರಿಯಲ್ ಮತ್ತು ಕೃತಕ ಬುದ್ಧಿಮತ್ತೆ ಕ್ಷೇತ್ರಗಳಲ್ಲಿನ ಲಾಭಗಳು ಮಾನವಕುಲದ ಆಧಾರಸ್ತಂಭವಾದ ಕೃಷಿ ಕ್ಷೇತ್ರಕ್ಕೆ ದಕ್ಕುವಂತಹ ಪರಿಹಾರೋಪಾಯಗಳನ್ನು ಕಂಡುಕೊಳ್ಳಬೇಕಿರುವುದು ಇಂದಿನ ತುರ್ತು ಅಗತ್ಯ ಎಂದು ಉಪ ರಾಷ್ಟ್ರಪತಿ ಎಂ.ವೆಂಕಯ್ಯ ನಾಯ್ಡು ಆಶಯ ವ್ಯಕ್ತಪಡಿಸಿದರು.

ಬೆಂಗಳೂರಿನ ಜವಾಹರ್‌ಲಾಲ್ ನೆಹರೂ ಸೆಂಟರ್ ಫಾರ್ ಅಡ್ವಾನ್ಸ್ ಸ್ಟಡೀಸ್‌ನಲ್ಲಿ ನಾವೀನ್ಯ ಹಾಗೂ ಅಭಿವೃದ್ಧಿ ಕೇಂದ್ರ ಉದ್ಘಾಟಿಸಿ ಮಾತನಾಡಿದರು. ಜಗತ್ತಿನಲ್ಲಿ ಸಂಭವಿಸುತ್ತಿರುವ ಎಲ್ಲ ಬಗೆಯ ಸಂಶೋಧನೆಗಳು ಅಂತಿಮವಾಗಿ ಮನುಕುಲದ ಉದ್ಧಾರವನ್ನೇ ಗುರಿಯಾಗಿಸಿಕೊಂಡಾಗ ಮಾತ್ರ ವಿಜ್ಞಾನದಿಂದ ಪ್ರಗತಿ ಸಾಧ್ಯವಿದೆ. ವಿಶೇಷವಾಗಿ ನಾವೀನ್ಯ ತಂತ್ರಜ್ಞಾನಗಳ ಒಟ್ಟಾರೆ ಸಂಶೋಧನೆಯು ಜನೋಪಯೋಗಿ ಆಗಬೇಕಾದರೆ ಅದು ಕೃಷಿಗೆ ಹೆಚ್ಚು ಆದ್ಯತೆ ಕೊಡಬೇಕಾಗಿದೆ ಎಂದು ಪ್ರತಿಪಾದಿಸಿದರು.

ಕಳೆದ 30 ವರ್ಷಗಳಲ್ಲಿ ಜವಾಹರ್‌ಲಾಲ್ ನೆಹರೂ ಸೆಂಟರ್ ಫಾರ್ ಅಡ್ವಾನ್ಸ್ ಸ್ಟಡೀಸ್ ಸಂಸ್ಥೆಯ ಸಾಧನೆ ಗಮನಾರ್ಹ. ದೇಶ–ವಿದೇಶಗಳಲ್ಲಿ ಇಲ್ಲಿನ ಪ್ರತಿಭೆಗಳು ಮಹತ್ವದ ಸ್ಥಾನ ಪಡೆದುಕೊಂಡಿದ್ದಾರೆ. ಅಕಾಡೆಮಿಕ್ ಮತ್ತು ಉದ್ಯಮ ಕ್ಷೇತ್ರದಲ್ಲಿ ಈ ಸಂಸ್ಥೆಯ ಪ್ರಭಾವ ಪರಿಣಾಮಕಾರಿಯಾಗಿದೆ. ಇಲ್ಲಿನ ಸಂಶೋಧನೆಗಳು ಹಾಗೂ ಮಾರ್ಗದರ್ಶಿ ಉಪನ್ಯಾಸಗಳು ಸಾಕಷ್ಟು ಗಮನ ಸೆಳೆದಿವೆ. 300ಕ್ಕೂ ಹೆಚ್ಚು ಪೇಟೆಂಟ್‌ಗಳನ್ನು ತನ್ನ ಮಡಿಲಲ್ಲಿ ಇರಿಸಿಕೊಂಡಿರುವ ಈ ಸಂಸ್ಥೆಯು ದೇಶದ ಪ್ರಗತಿಯಲ್ಲಿ ತನ್ನದೇ ಛಾಪು ಮೂಡಿಸಿದೆ ಎಂದು ಶ್ಲಾಘಿಸಿದರು.

ದೇಶದ ನಾನಾ ಐಐಟಿ, ಐಐಎಂ ಹಾಗೂ ಡೀಮ್ಡ್ ವಿಶ್ವವಿದ್ಯಾಲಯಗಳು ವಿಜ್ಞಾನ ಮತ್ತು ತಂತ್ರಜ್ಞಾನ ಕ್ಷೇತ್ರಗಳಲ್ಲಿ ಇತ್ತೀಚಿನ ವರ್ಷಗಳಲ್ಲಿ ಕೈಗೊಂಡಿರುವ ಸಾಧನೆ ಅತ್ಯಮೋಘ ಎಂದು ಹೇಳಿದರು.

ರಾಜ್ಯಪಾಲ ಥಾವರ್‌ಚಂದ್ ಗೆಹ್ಲೋಟ್ ಮಾತನಾಡಿ, ಬೆಂಗಳೂರು ನಗರ ಉದ್ಯಾನ ನಗರಿ ಎಂಬ ಖ್ಯಾತಿಯ ಜೊತೆಗೆ ಸಿಲಿಕಾನ್ ಸಿಟಿ ಎಂಬ ಗರಿಮೆಗೆ ಪಾತ್ರವಾಗಿರುವುದು ಇಲ್ಲಿನ ವಿಜ್ಞಾನ ಮತ್ತು ತಂತ್ರಜ್ಞಾನ ಸಂಸ್ಥೆಗಳ ಗಣನೀಯ ಸಾಧನೆಯೇ ಕಾರಣವಾಗಿದೆ. ದೇಶ–ವಿದೇಶಗಳಲ್ಲಿನ ಬೆಂಗಳೂರಿನ ಪ್ರತಿಭೆಗಳು ತಮ್ಮ ಸಾಮರ್ಥ್ಯವನ್ನು ಸಾಬೀತು ಮಾಡಿದ್ದಾರೆ. ಕರ್ನಾಟಕದ ಯುವಪ್ರತಿಭೆಗಳು ಭವಿಷ್ಯದಲ್ಲಿ ಇನ್ನಷ್ಟು ಸಾಧನೆಗಳ ಮೂಲಕ ದೇಶದ ಪ್ರಗತಿಗೆ ತಮ್ಮ ಕೊಡುಗೆ ನೀಡಲಿದ್ದಾರೆ ಎಂಬ ವಿಶ್ವಾಸ ನನ್ನದು ಎಂದು ವಿಶ್ವಾಸ ವ್ಯಕ್ತಪಡಿಸಿದರು.

ಮುಖ್ಯಮಂತ್ರಿಯವರು ಭಾರತ ರತ್ನ ಸಿ.ಎನ್.ಆರ್.ರಾವ್, ಜವಾಹರ್‌ಲಾಲ್ ನೆಹರೂ ಸೆಂಟರ್ ಫಾರ್ ಅಡ್ವಾನ್ಸ್ ಸ್ಟಡೀಸ್‌ನ ಕುಲಪತಿ ಪ್ರೊ.ಜಿ.ಯು.ಕುಲಕರ್ಣಿ ಪಾಲ್ಗೊಂಡಿದ್ದರು.

ಆಧಾರ: ಸಂಯುಕ್ತ ಕರ್ನಾಟಕ, ದಿನಾಂಕ:17.08.2021.

## 27. ತಿಂಗಳಲ್ಲಿ ಜನ ಮೆಚ್ಚುವ ನಿರ್ಣಯಗಳು

ರಾಜ್ಯದಲ್ಲಿ ಹಿಂದಿನ ಮುಖ್ಯಮಂತ್ರಿಯವರು ಕೆಳಗೆ ಇಳಿದು ಪ್ರಸ್ತುತ ಮುಖ್ಯಮಂತ್ರಿಯವರು ಅಧಿಕಾರದ ಚುಕ್ಕಾಣಿ ಹಿಡಿದ ತಿಂಗಳಿಗೂ ಮೊದಲೇ ಹತ್ತು ಹಲವು ಯೋಜನೆ ಹಾಗೂ ಘೋಷಣೆಗಳ ಮೂಲಕ ಜನ ಮೆಚ್ಚುಗೆಗೆ ಪಾತ್ರವಾಗಿದ್ದಾರೆ.

ಅಧಿಕಾರ ಸ್ವೀಕರಿಸಿದ ದಿನದಿಂದ ಮುಖ್ಯಮಂತ್ರಿಯವರು ಕೊರೋನಾ ಸಂಕಷ್ಟ ನಡುವೆಯೂ ಆಡಳಿತ ಸುಧಾರಣೆಗೆ ಮಹತ್ವ ನಿಲುವುಗಳನ್ನು ತೆಗೆದುಕೊಂಡಿದ್ದಾರೆ. ಸಿಎಂ ಮಾಡಿದ ಮೊದಲ ಕೆಲಸವೆಂದರೆ ಆಡಳಿತ ವೆಚ್ಚದ ನೆಪದಲ್ಲಿ ಖರ್ಚಾಗುತ್ತಿದ್ದ ದುಂದು ವೆಚ್ಚಕ್ಕೆ ಬ್ರೇಕ್ ಹಾಕಿದ್ದು. ಇದರಿಂದ ತಿಂಗಳಿಗೆ ಕೋಟ್ಯಂತರ ರೂಪಾಯಿ ಉಳಿತಾಯವಾಗಲಿದೆ ಎನ್ನುವುದು ಆರ್ಥಿಕ ಇಲಾಖೆ ಅಧಿಕಾರಿಗಳ ಮಾತಾಗಿದೆ.

ಪ್ರಮಾಣ ವಚನ ಸ್ವೀಕರಿಸಿದ ಬಳಿಕ ರೈತರ ಮಕ್ಕಳಿಗೆ ವಿದ್ಯಾರ್ಥಿವೇತನ, ವಿವಿಧ ಪಿಂಚಣಿ ಯೋಜನೆಯ ಮೊತ್ತವನ್ನು ಹೆಚ್ಚಿಸುವ ಕ್ರಮಕ್ಕೆ ಮುಂದಾದರು. ಇದರಿಂದ ಆರ್ಥಿಕ ಹೊರೆ ಬೀಳುತ್ತದೆ ಎನ್ನುವುದು ತಿಳಿದಿದ್ದರೂ, ಜನರ ಹಿತಕ್ಕೆ ಇದನ್ನು ಮಾಡಲೇಬೇಕು ಎನ್ನುವ ನಿರ್ಧಾರ ಮಾಡಿ, ಈ ತೀರ್ಮಾನ ಕೈಗೊಂಡರು.

**ಝೀರೋ ಟ್ರಾಫಿಕ್ ಬೇಡವೆಂದು ಸಿಎಂ:** ಬೆಂಗಳೂರಿನಲ್ಲಿ ಒಮ್ಮೆ ಮುಖ್ಯಮಂತ್ರಿಗಳ ಕಾರು ಹೋದರೆ, ಕನಿಷ್ಠ 20 ನಿಮಿಷಗಳ ಕಾಲ ವಾಹನಗಳು ನಿಂತು ಭಾರಿ ಸಂಚಾರ ದಟ್ಟಣೆಯಾಗುತ್ತದೆ. ಕೆಲವೊಮ್ಮೆ ಮುಖ್ಯ ಮಂತ್ರಿಗಳು ಹೋಗುತ್ತಾರೆ ಎನ್ನುವ ಕಾರಣಕ್ಕೆ ಆಂಬ್ಯುಲೆನ್ಸ್‌ಗಳನ್ನು ತಡೆದಿರುವ ಘಟನೆಗಳಿವೆ. ಇದನ್ನು ಅರಿತ ಮುಖ್ಯಮಂತ್ರಿಯವರು ತಮಗೆ ಝೀರೋ ಟ್ರಾಫಿಕ್ ಬೇಡ. ಆಂಬ್ಯುಲೆನ್ಸ್ ಬಂದರೆ ಮೊದಲು ಅದಕ್ಕೆ ದಾರಿ ಬಿಡಿ ಎನ್ನುವ ಸೂಚನೆಯನ್ನು ಪೊಲೀಸ್ ಅಧಿಕಾರಿಗಳಿಗೆ ನೀಡಿದ್ದಾರೆ. ಈ ತೀರ್ಮಾನದಿಂದ ಝೀರೋ ಟ್ರಾಫಿಕ್ ಸಂಸ್ಕೃತಿಗೆ ಬ್ರೇಕ್ ಬಿದ್ದಿದೆ.

ಈ ಎಲ್ಲದರ ಜೊತೆ ಮುಖ್ಯಮಂತ್ರಿಯವರ ಸಂಪುಟದ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಸಚಿವ ಸುನೀಲ್ ಕುಮಾರ್ ಅವರು, ಹಾರ ತುರಾಯಿ ಬದಲಿಗೆ ಪುಸ್ತಕವನ್ನು ತನ್ನಿ ಎಂದು ಮನವಿ ಮಾಡಿದ್ದರು. ಇದು ಕೇವಲ ಸುನೀಲ್ ಕುಮಾರ್ ಅವರಿಗೆ ಮಾತ್ರ ಸೀಮಿತಗೊಳ್ಳದೇ, ಇಡೀ ಸರ್ಕಾರಿ ವ್ಯವಸ್ಥೆ ಇದನ್ನು ಪಾಲಿಸಬೇಕು ಎಂದು ಆದೇಶ ಹೊರಡಿಸುವ ಮೂಲಕ ಸಾಹಿತ್ಯ, ಸಂಸ್ಕೃತಿಯ ಬಗ್ಗೆ ಕಾಳಜಿ ತೋರಿದರು.

**ಸಿಎಂ ತೆಗೆದುಕೊಂಡ ಪ್ರಮುಖ ನಿರ್ಣಯಗಳು:**

- ಝೀರೋ ಟ್ರಾಫಿಕ್ ವ್ಯವಸ್ಥೆ ರದ್ದು
- ಗಾರ್ಡ್ ಆಫ್ ಆನರ್ ಎನ್ನುವ ಬ್ರಿಟಿಷ್ ಪದ್ಧತಿಗೆ ಬ್ರೇಕ್
- ಸಭೆ-ಸಮಾರಂಭದಲ್ಲಿ ಹಾರ ತುರಾಯಿ ತರುವ ಬದಲು, ಪುಸ್ತಕಗಳನ್ನು ನೀಡಲು ಸೂಚನೆ
- ರೈತರ ಮಕ್ಕಳ ಉನ್ನತ ಶಿಕ್ಷಣ ಯೋಜನೆಗೆ ವಿದ್ಯಾರ್ಥಿ ವೇತನಕ್ಕೆ ಸಾವಿರ ಕೋಟಿ ರೂ. ಬಿಡುಗಡೆ
- ವಿಧವಾ ವೇತನ ರೂ.600 ಗಳಿಂದ ರೂ.800ಕ್ಕೆ ಏರಿಕೆ
- ಅಂಗವಿಕಲರ ಮಾಸಿಕ ವೇತನ ರೂ.600 ಗಳಿಂದ 800ಕ್ಕೆ ಏರಿಕೆ
- ಪರಿಶಿಷ್ಟ ಪಂಗಡಗಳ ಕಲ್ಯಾಣಕ್ಕೆ ಪ್ರತ್ಯೇಕ ಸಚಿವಾಲಯ ಸ್ಥಾಪನೆ

ಆಧಾರ: ವಿಶ್ವವಾಣಿ, ದಿನಾಂಕ:17.08.2021.

## 28. 3 ಕಡೆ ಸೋಲಾರ್ ಪಾರ್ಕ್

'ಖಾಸಗಿ ಸಹಭಾಗಿತ್ವದಲ್ಲಿ ರೂ.4,800 ಕೋಟಿ ಯೋಜನಾ ವೆಚ್ಚದಲ್ಲಿ ಕೊಪ್ಪಳ, ಬಾಗಲಕೋಟೆ ಹಾಗೂ ಬೀದರ್ ಜಿಲ್ಲೆಯ ಔರಾದ್‌ನಲ್ಲಿ ಸೋಲಾರ್ ಪಾರ್ಕ್ ನಿರ್ಮಾಣ ಮಾಡಲಾಗುವುದು' ಎಂದು ಕೇಂದ್ರ ನವೀಕರಿಸಬಹುದಾದ ಇಂಧನ ಖಾತೆ ರಾಜ್ಯ ಸಚಿವ ಭಗವಂತ ಖೂಬಾ ಹೇಳಿದರು.

'ಒಂದು ಮೆಗಾವಾಟ್ ವಿದ್ಯುತ್ ಉತ್ಪಾದನೆಗೆ ಆರಂಭಿಕ ಸರಾಸರಿ ರೂ.3.75 ಕೋಟಿಯಿಂದ ರೂ.4ಕೋಟಿ ವೆಚ್ಚವಾಗಲಿದೆ. ಪ್ರತಿಯೊಂದು ಪಾರ್ಕ್‌ನಲ್ಲಿ 1,200 ಮೆಗಾವಾಟ್ ವಿದ್ಯುತ್ ಉತ್ಪಾದನೆ ಮಾಡಲಾಗುವುದು' ಎಂದು ಮಾಧ್ಯಮಗೋಷ್ಠಿಯಲ್ಲಿ ತಿಳಿಸಿದರು.

'ಕೊಪ್ಪಳದಲ್ಲಿ 15 ಸಾವಿರ ಎಕರೆ, ಬಾಗಲಕೋಟೆಯಲ್ಲಿ 9,600 ಎಕರೆ ಜಾಗ ಗುರುತಿಸಲಾಗಿದೆ. ಔರಾದ್‌ನಲ್ಲಿ ರೈತರ ಜಮೀನುಗಳನ್ನು 25 ವರ್ಷಗಳ ಅವಧಿಗೆ ಭೋಗ್ಯಕ್ಕೆ ಪಡೆದು ಅವರಿಗೆ ಪ್ರತಿ ಎಕರೆಗೆ ವರ್ಷಕ್ಕೆ ರೂ.25 ಸಾವಿರ ಕೊಡಲಾಗುವುದು. ಪಾರ್ಕ್ ನಿರ್ಮಾಣಕ್ಕೆ ಈಗಾಗಲೇ ಟೆಂಡರ್ ಕರೆಯಲಾಗಿದೆ'. 'ರಾಷ್ಟ್ರೀಯ ಸೋಲಾರ್ ನೀತಿಯನ್ನು ಪರಿಷ್ಕರಿಸಲಾಗುವುದು. ಸೋಲಾರ್ ಪಾರ್ಕ್‌ನಲ್ಲಿ ಉತ್ಪಾದನೆಯಾಗುವ ವಿದ್ಯುತ್ ಅನ್ನು ವಿದ್ಯುತ್ ಕಂಪನಿಗಳು ಕಡ್ಡಾಯವಾಗಿ ಖರೀದಿಸುವಂತೆ ಆದೇಶ ಹೊರಡಿಸಲಾಗುವುದು. ಗ್ರಾಹಕರಿಗೆ ನಿರಂತರ ಹಾಗೂ ಗುಣಮಟ್ಟದ ವಿದ್ಯುತ್ ಪೂರೈಕೆ ಮಾಡುವುದೇ ಇದರ ಉದ್ದೇಶವಾಗಿದೆ' ಎಂದು ತಿಳಿಸಿದರು.

**ಫಾರ್ಮಾ ಪಾರ್ಕ್**: 'ಯಾದಗಿರಿ ಜಿಲ್ಲೆಯ ಕಡೇಚೂರಿನಲ್ಲಿ ರೂ.100 ಕೋಟಿ ವೆಚ್ಚದಲ್ಲಿ ಫಾರ್ಮ ಪಾರ್ಕ್ ನಿರ್ಮಿಸಲಾಗುವುದು. ಇದಕ್ಕೆ ರಾಜ್ಯ ಸರ್ಕಾರ ಜಮೀನು ಹಾಗೂ ಮೂಲ ಸೌಕರ್ಯ ಒದಗಿಸಬೇಕಾಗಲಿದೆ. ಪ್ಲಾಸ್ಟಿಕ್ ಪಾರ್ಕ್ ನಿರ್ಮಾಣಕ್ಕೆ ಮಂಗಳೂರು ಹಾಗೂ ಯಾದಗಿರಿ ಜಿಲ್ಲೆಯಿಂದ ಪ್ರಸ್ತಾವ ಬಂದಿದ್ದು, ಶೀಘ್ರ ಪ್ರಕ್ರಿಯೆ ಪ್ರಾರಂಭ ಮಾಡಲಾಗುವುದು' ಎಂದು ಖೂಬಾ ತಿಳಿಸಿದರು.

ಆಧಾರ: ಪ್ರಜಾವಾಣಿ, ದಿನಾಂಕ:18.08.2021.

## 29. ಕೋವಿಡ್ ಪರಿಕರ ಖರೀದಿಯಲ್ಲಿ ಲೋಪ, ಮಾಹಿತಿಗೆ ಸೂಚನೆ

ಕೋವಿಡ್ ಪರಿಕರ ಖರೀದಿಯಲ್ಲಿ ಸುಮಾರು ರೂ.34.97 ಕೋಟಿ ಹೆಚ್ಚು ವೆಚ್ಚಕ್ಕೆ ಆಕ್ಷೇಪಿಸುವ ಜೊತೆಗೆ ವೆಂಟಿಲೇಟರ್ ಅಭಾವ ಸಂಬಂಧ ಆರೋಗ್ಯ ಇಲಾಖೆ ನೀಡಿರುವ ಉತ್ತರವನ್ನು ತಿರಸ್ಕರಿಸಿದ ಸಾರ್ವಜನಿಕ ಲೆಕ್ಕಪತ್ರಗಳ ಸಮಿತಿಯು ವಾರದೊಳಗೆ ಸರಿಯಾದ ಮಾಹಿತಿ, ಸ್ಪಷ್ಟ ಉತ್ತರ ನೀಡುವಂತೆ ಸೂಚನೆ ನೀಡಿದೆ.

ವಿಧಾನಸೌಧದಲ್ಲಿ ರಾಮಲಿಂಗಾರೆಡ್ಡಿ ಅಧ್ಯಕ್ಷತೆಯ ಸಮಿತಿಯು ಸಭೆಯಲ್ಲಿ ಆರೋಗ್ಯ ವಿಷಯಗಳ ಬಗ್ಗೆ ಚರ್ಚೆ ನಡೆಸಿತು. ಕೋವಿಡ್ ನಿಯಂತ್ರಣ ಸಾಮಗ್ರಿಗಳ ಖರೀದಿಯಲ್ಲಿ ಹೆಚ್ಚುವರಿ ವೆಚ್ಚ, ಖರೀದಿ ಪ್ರಕ್ರಿಯೆಯಲ್ಲಿನ ಲೋಪಗಳ ಬಗ್ಗೆ ಸಮಿತಿ ತೀವ್ರ ಆಕ್ಷೇಪ ವ್ಯಕ್ತಪಡಿಸಿತು ಎನ್ನಲಾಗಿದೆ.

ಮುಖ್ಯವಾಗಿ '3–ಪಾರ್ಟ್ ಹೆಮಟೊಲಾಜಿ ಸೆಲ್ ಕೌಂಟ್ಸ್' ಯೂನಿಟ್‌ಗಳ ಖರೀದಿಗೆ ಸಂಬಂಧ ಪಟ್ಟಂತೆ ಕೇರಳ, ಹಿಮಾಚಲ ಪ್ರದೇಶದ ಖರೀದಿಗೆ ಹೋಲಿಸಿದರೆ ರಾಜ್ಯವು ರೂ.25 ಕೋಟಿ ಹೆಚ್ಚುವರಿ ವೆಚ್ಚ ಮಾಡಿರುವುದು. 5–ಫಾರ್ಟ್ ಹೆಮಟೊಲಾಜಿ ಸೆಲ್ ಕೌಂಟ್ಸ್' ಯೂನಿಟ್‌ಗಳ ಖರೀದಿ ಕುರಿತಂತೆ ಕೇರಳ ರಾಜ್ಯದ ಖರೀದಿ ದರಕ್ಕೆ ಹೋಲಿಸಿದರೆ ರಾಜ್ಯವು ರು.6.18 ಕೋಟಿ ಅಧಿಕ ವೆಚ್ಚಮಾಡಿರುವ ಬಗ್ಗೆ ಸಮಿತಿ ಅಸಮಾಧಾನ ವ್ಯಕ್ತಪಡಿಸಿತು ಎಂದು ತಿಳಿದು ಬಂದಿದೆ. ಇಲಾಖೆಯಿಂದ ಖರೀದಿಸಲಾದ 30 ಲಕ್ಷ ಕಿಟ್‌ಗೆ ಸಂಬಂಧ ಪಟ್ಟಂತೆ ರೂ.3.79 ಕೋಟಿ ಹೆಚ್ಚುವರಿ ಪಾವತಿ ಮಾಡಲಾಗಿದೆ. ಮೊದಲ ಬಾರಿ ಆಹ್ವಾನಿಸಿದ ದರಪಟ್ಟಿಯನ್ನು ಯಾವ ಕಾರಣಕ್ಕೆ ಅಂತಿಮಗೊಳಿಸಲಿಲ್ಲ. ಮೊದಲ ಬಾರಿ ಭಾಗವಹಿಸಿದ

ಸಂಸ್ಥೆಗಳೇ ಎರಡನೇ ದರಪಟ್ಟಿಯಲ್ಲಿ ಭಾಗವಹಿಸಿದ್ದರೂ ಹೆಚ್ಚು ದರ ಉಲ್ಲೇಖಿಸಲು ಕಾರಣವೇನು ಎಂದು ಪ್ರಶ್ನಿಸಿದ್ದು ಈ ಬಗ್ಗೆ ಮಾಹಿತಿ ಕೇಳಿದೆ ಎನ್ನಲಾಗಿದೆ.

ಸಭೆ ಬಳಿಕ ಪ್ರತಿಕ್ರಿಯಿಸಿದ ರಾಮಲಿಂಗಾರೆಡ್ಡಿ "ಆರೋಗ್ಯ ಇಲಾಖೆಗೆ ಕೋವಿಡ್ ನಿರ್ವಹಣೆಯಲ್ಲಿನ ನ್ಯೂನತೆ ಬಗ್ಗೆ ಒಟ್ಟು 21 ಪ್ರಶ್ನಾವಳಿ ಕೇಳಲಾಗಿತ್ತು. ಅದಕ್ಕೆ ಇಲಾಖೆ ನೀಡಿರುವ ಉತ್ತರ ಸಮಾಧಾನ ತಂದಿಲ್ಲ. ಹಾಗಾಗಿ ಕೆಲ ಸೂಚನೆ ನೀಡಲಾಗಿದೆ," ಎಂದರು.

ಆಧಾರ: ವಿಜಯ ಕರ್ನಾಟಕ, ದಿನಾಂಕ:18.08.2021.

## 30. ನೆರೆ ಹಾನಿಗೆ ಮತ್ತೆ 25 ತಾಲ್ಲೂಕು ಸೇರ್ಪಡೆ

ಜುಲೈ ಅಂತ್ಯದಲ್ಲಿ ಸುರಿದ ಭಾರಿ ಮಳೆಯಿಂದಾಗಿ ನೆರೆ ಹಾವಳಿಗೆ ತುತ್ತಾಗಿರುವ ರಾಜ್ಯದ 25 ತಾಲ್ಲೂಕುಗಳನ್ನು ನೆರೆ ಪೀಡಿತ ಪ್ರದೇಶಗಳೆಂದು ರಾಜ್ಯ ಸರ್ಕಾರ ಹೊಸದಾಗಿ ಘೋಷಿಸಿದೆ. ಈ ಹಿನ್ನೆಲೆ ನೆರೆಗೆ ತುತ್ತಾಗಿರುವ ತಾಲ್ಲೂಕುಗಳ ಸಂಖ್ಯೆ 86 ಕ್ಕೆ ಏರಿದೆ. ಆಗಸ್ಟ್ 11 ರಂದು 13 ಜಿಲ್ಲೆಗಳ 61 ತಾಲ್ಲೂಕುಗಳನ್ನು ನೆರೆ ಪೀಡಿತ ಎಂದು ರಾಜ್ಯ ಸರ್ಕಾರ ಘೋಷಿಸಿತ್ತು.

ನೆರೆ ಪೀಡಿತ ಪ್ರದೇಶಗಳೆಂದು ಘೋಷಿಸಿರುವ ತಾಲ್ಲೂಕುಗಳಲ್ಲಿ ಎಸ್‌ಡಿಆರ್‌ಎಫ್ ಮತ್ತು ಎನ್‌ಡಿಆರ್‌ಎಫ್ ಅನ್ವಯ ಪರಿಹಾರ ಕ್ರಮಗಳನ್ನು ಜಾರಿಗೊಳಿಸಲು ಆಯಾ ಜಿಲ್ಲಾಧಿಕಾರಿಗಳಿಗೆ ಸೂಚಿಸಿದೆ. ವಿಪತ್ತು ನಿರ್ವಹಣಾ ನಿಧಿ ಮತ್ತು ವಿಪತ್ತು ಪರಿಹಾರ ನಿಧಿಯಿಂದ ಸಂಪನ್ಮೂಲವನ್ನು ಬಳಸಲು ಜಿಲ್ಲಾಧಿಕಾರಿಗೆ ತಿಳಿಸಲಾಗಿದೆ.

ದಾವಣಗೆರೆ ಜಿಲ್ಲೆಯ ಚನ್ನಗಿರಿ, ದಾವಣಗೆರೆ, ಧಾರವಾಡ ಜಿಲ್ಲೆಯ ಅಣ್ಣಿಗೇರಿ, ಹುಬ್ಬಳ್ಳಿ ನಗರ, ಹುಬ್ಬಳ್ಳಿ ತಾಲ್ಲೂಕು, ವಿಜಯಪುರದ ನಿಡಗುಂದಿ, ಬಬಲೇಶ್ವರ, ಕೋಲಾರ, ಮುದ್ದೇಬಿಹಾಳ, ವಿಜಯನಗರ ಜಿಲ್ಲೆಯ ಹರಪನಹಳ್ಳಿ, ಗದಗ ಜಿಲ್ಲೆಯ ಲಕ್ಷ್ಮೇಶ್ವರ, ಬೆಳಗಾವಿ ತಾಲ್ಲೂಕು, ಚಿಕ್ಕಮಗಳೂರು ಜಿಲ್ಲೆಯ ಕಡೂರು, ಚಿಕ್ಕಮಗಳೂರು, ತರೀಕೇರಿ, ಮೂಡಿಗೆರೆ, ಕೊಪ್ಪ, ಶೃಂಗೇರಿ, ಉತ್ತರ ಕನ್ನಡ ಜಿಲ್ಲೆಯ, ದಾಂಡೇಲಿ, ಸೂಪ, ಮುಂಡಗೋಡ, ಹಾಸನ ಜಿಲ್ಲೆಯ ಆಲೂರು, ಶಿವಮೊಗ್ಗ ಜಿಲ್ಲೆಯ ಭದ್ರಾವತಿ, ತೀರ್ಥಹಳ್ಳಿ ಹಾಗೂ ಹೊಸನಗರ ತಾಲ್ಲೂಕುಗಳನ್ನು ನೆರೆಪೀಡಿತ ಎಂದು ಘೋಷಿಸಲಾಗಿದೆ. ಮೂಡಿಗೆರೆಯ ಶಾಸಕ ಎಂ.ಪಿ.ಕುಮಾರಸ್ವಾಮಿಯ ಹೋರಾಟಕ್ಕೆ ಕೊನೆಗೂ ಸರ್ಕಾರ ಮಣಿದಿದೆ. ಮೂಡಿಗೆರೆ ತಾಲ್ಲೂಕನ್ನು ನೆರೆ ಪೀಡಿತ ಪ್ರದೇಶಗಳ ಪಟ್ಟಿಗೆ ಸೇರಿಸಲಾಗಿದೆ. ವಿಧಾನಸೌಧ ಮುಂದೆ ಏಕಾಂಗಿಯಾಗಿ ಕುಮಾರಸ್ವಾಮಿ ಪ್ರತಿಭಟನೆ ನಡೆಸಿದ್ದರು.

ಆಧಾರ: ವಿಜಯ ಕರ್ನಾಟಕ, ದಿನಾಂಕ:18.08.2021.

## 31. ಅವಧಿ ಮುಗಿದ ಸಂಘಗಳನ್ನು ಚುನಾವಣೆ ಇಲ್ಲದೆ ಮುಂದುವರಿಸಲು ಯತ್ನ

ಅವಧಿ ಮುಗಿದ ಸಹಕಾರ ಸಂಘಗಳಿಗೆ ಚುನಾವಣೆ ನಡೆಸುವ ಬದಲು ಅನ್ಯ ಮಾರ್ಗದಿಂದ ಮರುಜೀವ ಕೊಡಲು ಸರ್ಕಾರ ಮುಂದಾಗಿದೆ. ಆ ಮೂಲಕ ಸಂವಿಧಾನ ಮತ್ತು ಸಹಕಾರ ಕಾಯ್ದೆಯ ಆಶಯಗಳನ್ನು ಬದಿಗೊತ್ತಿ ಪಟ್ಟಭದ್ರ ಹಿತಾಸಕ್ತಿಗಳನ್ನು ರಕ್ಷಿಸುತ್ತಿರುವ ಆರೋಪ ಕೇಳಿಬಂದಿದೆ. ರಾಜ್ಯದಲ್ಲಿ ಸುಮಾರು 36,000 ವಿವಿಧ ಸಹಕಾರ ಸಂಘಗಳಿದ್ದು ಲಕ್ಷಾಂತರ ಸದಸ್ಯರಿದ್ದಾರೆ. ಗ್ರಾಮೀಣ ಪ್ರದೇಶದ ಜನರ ಆಗು–ಹೋಗುಗಳಿಗೆ ಈ ಸಂಘಗಳು ಸಹಕಾರಿಯಾಗಿವೆ. ಕೊರೋನಾ ಕಾರಣದಿಂದ ಚುನಾವಣೆ ನಡೆಸಲು ಸಾಧ್ಯವಾಗದ ಕಾರಣಕ್ಕೆ ಸುಮಾರು 4 ಸಾವಿರ ಸಹಕಾರ ಸಂಘಗಳ ಚುನಾವಣೆಯನ್ನು ಡಿಸೆಂಬರ್‌ವರೆಗೆ ಮುಂದೂಡಿ ಆಡಳಿತಾಧಿಕಾರಿ ನೇಮಿಸಲಾಗಿತ್ತು. ಸರ್ಕಾರ ಈಗ ಏಕಾಏಕಿ ಆಡಳಿತಾಧಿಕಾರಿಯನ್ನು ಹಿಂಪಡೆದು ಹಿಂದಿದ್ದ ಆಡಳಿತ ಮಂಡಳಿಯನ್ನೇ ಮುಂದುವರಿಸುವ ಸಲುವಾಗಿ

ಕಾಯ್ದೆಗೆ ವಿನಾಯಿತಿ ನೀಡುವ ಪ್ರಸ್ತಾವನೆಯನ್ನು ಸಚಿವ ಸಂಪುಟದ ಮುಂದೆ ತರಲು ತುದಿಗಾಲ ಮೇಲೆ ನಿಂತಿದೆ. ಮುಂಬರುವ ಸಂಪುಟ ಸಭೆಯಲ್ಲೇ ಕುರಿತು ನಿರ್ಣಯ ಕೈಗೊಳ್ಳುವ ಸಾಧ್ಯತೆಗಳಿವೆ.

**ಕಾಯ್ದೆಗೆ ಕೊಡಲಿ ಏಟು:** ಸಹಕಾರ ಸಂಘಗಳು ಮೂರು ಹಂತದಲ್ಲಿ ಕಾರ್ಯ ನಿರ್ವಹಿಸುತ್ತವೆ. ಪ್ರಾಥಮಿಕ ಸಹಕಾರ ಸಂಘಗಳು, ಅಲ್ಲಿಂದ ತಾಲ್ಲೂಕು/ಜಿಲ್ಲಾ ಹಂತದ ಸಂಘಗಳು ತರುವಾಯ ರಾಜ್ಯ ಮಟ್ಟದ ಒಕ್ಕೂಟಗಳ ಮಾದರಿಯಲ್ಲಿ ಕಾರ್ಯಾಚರಣೆ ಮಾಡುತ್ತವೆ.

ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1960 ಕಲಂ 18 ಬಿ/1 ಪ್ರಕಾರ ಆಡಳಿತ ಮಂಡಳಿಗಳ ಅವಧಿ ಮುಗಿದ ಕೂಡಲೇ ಸದಸ್ಯತ್ವ ತನ್ನಿಂದ ತಾನೇ ಸಮಾಪನಗೊಳ್ಳುತ್ತದೆ. ಆಡಳಿತಾವಧಿ ಮುಗಿಯುವ 6 ತಿಂಗಳ ಮೊದಲೇ ಚುನಾವಣೆಗೆ ಸಿದ್ಧತೆ ಮಾಡಿಕೊಳ್ಳಬೇಕು. ಚುನಾವಣೆ ನಡೆಸಲು ಸಾಧ್ಯವಿಲ್ಲದೇ ಇದ್ದಾಗ ಆಡಳಿತಾಧಿಕಾರಿ ನೇಮಿಸಬೇಕಾಗುತ್ತದೆ. ಆಡಳಿತ ಮಂಡಳಿಗಳ ಪ್ರೈಮರಿ ಹಂತದ ನಿರ್ದೇಶಕ ಸ್ಥಾನ ಅಂತ್ಯಗೊಂಡರೆ ಎರಡು ಮತ್ತು ಮೂರನೇ ಹಂತದಲ್ಲಿ ಇದ್ದ ಅಧಿಕಾರವು ತನ್ನಿಂದ ತಾನೇ ಸಮಾಪನಗೊಳ್ಳುತ್ತದೆ. ಮೇಲ್ಮಟ್ಟದ ಸಹಕಾರ ಸಂಘಗಳಲ್ಲಿ ಅಧಿಕಾರದಲ್ಲಿರುವವರ ಹಿತಕಾಯಲು ಸರ್ಕಾರ ಸಹಕಾರ ತತ್ವದ ಮೂಲ ಆಶಯಗಳನ್ನೆ ಬುಡಮೇಲು ಮಾಡಲು ಹೊರಟಿದೆ ಎಂಬ ಆರೋಪಗಳು ಕೇಳಿ ಬರುತ್ತಿವೆ.

**ಕೈಬಿಟ್ಟರೂ ನಷ್ಟವೇನಿಲ್ಲ** : ಸೆಕೆಂಡರಿ ಹಂತದ ನಿರ್ದೇಶಕ ಸ್ಥಾನ ರದ್ದುಗೊಂಡರೂ ಸಹಕಾರ ಸಂಘ/ಬ್ಯಾಂಕ್‌ಗಳ ಆಡಳಿತ ನಿರ್ವಹಣೆಗೇನು ಬಾಧಕವಾಗುವುದಿಲ್ಲ. ಪರ್ಯಾಯ ಮಾರ್ಗಗಳ ಮೂಲಕ ಸ್ಥಾನ ಭರ್ತಿ ಮಾಡಿಕೊಂಡು ನಿರ್ವಹಣೆ ಮಾಡುವ ವ್ಯವಸ್ಥೆ ರೂಢಿಯಲ್ಲಿದೆ. ಸರ್ಕಾರ ಅವಧಿ ಪೂರ್ಣಗೊಂಡ ಸಂಘಗಳಿಗೆ ಮರುಜೀವ ಕೊಡಲು ಮುಂದಾಗಿರುವುದು ಅನುಮಾನಕ್ಕೆ ಎಡೆಮಾಡಿಕೊಟ್ಟಿದೆ.

ಆಧಾರ: ವಿಜಯವಾಣಿ, ದಿನಾಂಕ:18.08.2021.

## 32. ಸರ್ಕಾರಿ ನೌಕರರಿಗೆ ಸಿಹಿ

ರಾಜ್ಯ ಸರ್ಕಾರಿ ನೌಕರರು, ಅವರ ಅವಲಂಬಿತ ಕುಟುಂಬದ ಸದಸ್ಯರಿಗೆ ನಗದು ರಹಿತ ವೈದ್ಯಕೀಯ ಚಿಕಿತ್ಸೆ ಒದಗಿಸುವ ಸಂಬಂಧ ಕರ್ನಾಟಕ ಆರೋಗ್ಯ ಸಂಜೀವಿನಿ ಯೋಜನೆ ಜಾರಿಗೆ ರೂಪುರೇಷೆ ಸಿದ್ದಪಡಿಸಲು ಸುವರ್ಣ ಆರೋಗ್ಯ ಟ್ರಸ್ಟ್‌ಗೆ ಸರ್ಕಾರ ಆದೇಶಿಸಿದೆ 2021–22ನೇ ಸಾಲಿನ ಬಜೆಟ್‌ನಲ್ಲಿ ಈ ಯೋಜನೆ ಘೋಷಿಸಲಾಗಿತ್ತು. ಇದರಡಿ ಹೃದ್ರೋಗ, ಕ್ಯಾನ್ಸರ್, ನ್ಯೂರೋ ಸರ್ಜರಿ, ಸುಟ್ಟ ಗಾಯ, ಗಂಭೀರ ಗಾಯಗಳು, ಪೀಡಿಯಾಟ್ರೀಕ್, ನವಜಾತ ಶಿಶುಗಳ ಶಸ್ತ್ರ ಚಿಕಿತ್ಸೆ ಸೇರಿ 7 ಮಾರಣಾಂತಿಕ ಕಾಯಿಲೆಗಳನ್ನು ಗುರುತಿಸಲಾಗಿದೆ.

ಈ ಕಾಯಿಲೆಗಳಿಗೆ ಸರ್ಕಾರಿ ನೌಕರರು, ಕುಟುಂಬ ಸದಸ್ಯರು ಜ್ಯೋತಿ ಸಂಜೀವಿನಿ ಯೋಜನೆಯಡಿ ನೋಂದಾಯಿತ ಖಾಸಗಿ ಆಸ್ಪತ್ರೆಗಳಲ್ಲಿ ನಗದು ರಹಿತವಾಗಿ ಚಿಕಿತ್ಸೆ ಪಡೆಯಲು ಅವಕಾಶ ಕಲ್ಪಿಸಲಾಗಿದೆ. ಈ ನೂತನ ಯೋಜನೆ ಅನುಷ್ಠಾನಗೊಳಿಸುವ ಪೂರ್ವದಲ್ಲಿ ಈ ಯೋಜನೆಯ ಕಾರ್ಯ ಸ್ವರೂಪ, ಯೋಜನಾ ವೆಚ್ಚ, ಆಯವ್ಯಯ, ವೈದ್ಯಕೀಯ ಚಿಕಿತ್ಸಾ ವಿಧಾನ, ಚಿಕಿತ್ಸಾ ದರಗಳು, ಫಲಾನುಭವಿಗಳು, ಖಾಸಗಿ ವೈದ್ಯಕೀಯ ಆಸ್ಪತ್ರೆಗಳು, ಅವುಗಳೊಂದಿಗೆ ಮಾಡಿಕೊಳ್ಳಬೇಕಾದ ಒಡಂಬಡಿಕೆ, ಯೋಜಗೆ ಅಗತ್ಯವಿರುವ ತಂತ್ರಜ್ಞಾನದ ಅಭಿವೃದ್ಧಿ ಮತ್ತಿತರ ಅಂಶಗಳ ಬಗ್ಗೆ ವಿಸ್ತೃತ ಯೋಜನಾ ವರದಿ ಸಿದ್ಧಪಡಿಸುವುದು ಅತ್ಯಗತ್ಯವೆಂದು ಸರ್ಕಾರ ಹೇಳಿದೆ. ಕರ್ನಾಟಕ ಆರೋಗ್ಯ ಸಂಜೀವಿನಿ ಯೋಜನೆಯ ಯೋಜನಾ ವರದಿಯನ್ನು 2 ತಿಂಗಳೊಳಗಾಗಿ ಸಿದ್ಧಪಡಿಸಿ ಸರ್ಕಾರಕ್ಕೆ ಸಲ್ಲಿಸಲು ಕಾರ್ಯಕಾರಿ ನಿರ್ದೇಶಕರು, ಸುವರ್ಣ ಆರೋಗ್ಯ ಸುರಕ್ಷಾ ಟ್ರಸ್ಟ್ ಕಾರ್ಯಕಾರಿ ನಿರ್ದೇಶಕರಿಗೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ ಆದೇಶಿಸಿದೆ.

ಆಧಾರ: ವಿಜಯವಾಣಿ, ದಿನಾಂಕ:18.08.2021.

## 33. 2023–24 ಕ್ಕೆ ರೈತರ ಆದಾಯ ದ್ವಿಗುಣ ಗೊಳಿಸಲು ಸಮಿತಿ ರಚನೆ

2023–24ಕ್ಕೆ ರೈತರ ಆದಾಯ ದ್ವಿಗುಣಗೊಳಿಸುವ ಮೊದಲನೇ ರಾಜ್ಯ ಕರ್ನಾಟಕವಾಗಬೇಕು ಎಂದು ಮುಖ್ಯಮಂತ್ರಿಯವರು ಆಶಯ ವ್ಯಕ್ತಪಡಿಸಿದರು.

ಮುಖ್ಯಮಂತ್ರಿಯವರು ಗೃಹ ಕಚೇರಿ ಕೃಷ್ಣಾದಲ್ಲಿ ರೈತರ ಆದಾಯ ದ್ವಿಗುಣಗೊಳಿಸುವ ಕಾರ್ಯತಂತ್ರಗಳ ಕುರಿತಂತೆ ಕೇಂದ್ರ ಕೃಷಿ ಸಚಿವಾಲಯದ ಡಾ.ಅಶೋಕ್ ದಳವಾಯಿ ಪ್ರಾತ್ಯಕ್ಷಿಕೆ ನಡೆಸಿಕೊಟ್ಟರು. ಈ ವೇಳೆ ಸುದ್ದಿಗಾರರೊಂದಿಗೆ ಮಾತನಾಡಿದ ಮುಖ್ಯಮಂತ್ರಿಯವರು, ಅಶೋಕ್ ದಳವಾಯಿ ಅವರು ರೈತರ ಆದಾಯ ದ್ವಿಗುಣಗೊಳಿಸುವ ಸಂಬಂಧ ವರದಿ ನೀಡಿದ್ದಾರೆ. ಕರ್ನಾಟಕ ರೈತರ ಆದಾಯ ದ್ವಿಗುಣಕ್ಕೆ ಬಹಳಷ್ಟು ಆಸಕ್ತಿ ವಹಿಸಿ ರೈತರ ಆದಾಯ ದ್ವಿಗುಣಗೊಳಿಸುವ ಮೊದಲ ರಾಜ್ಯ ಕರ್ನಾಟಕವಾಗಬೇಕೆಂಬ ಉದ್ದೇಶ ನಮ್ಮದಾಗಿದೆ. ಇದಕ್ಕೆ ಕೇಂದ್ರ ಸರ್ಕಾರ ಕೈಜೋಡಿಸಿದೆ. ಕೃಷಿಕರ ಆದಾಯ ವೃದ್ಧಿಸಲು ರೈತರ ಸಮಿತಿಯನ್ನು ನೇಮಿಸಿದ್ದೇವೆ. ಅವರು ಕೇಂದ್ರದ ಜೊತೆ ನಿರಂತರ ಸಂಪರ್ಕ ಸಾಧಿಸಿ, ವರದಿ ನೀಡಲಿದ್ದಾರೆ ಎಂದರು.

ಆಧಾರ: ವಿಶ್ವವಾಣಿ, ದಿನಾಂಕ:26.08.2021.

## 34. Get computer certified before March 2022

Having made computer skill’s certification mandatory for government jobs , the state government has now set a seven-month deadline for all its employees to get a computer skill certification.

A recent government order in this regard issued by Department of Personnel and Administrative Reforms (DPAR) has set a deadline of March 22, 2022 for the staff to get themselves certified through Karnataka State Electornics Development Corporation (KEONICS).

The order cites the Karnataka State Civil Service (Computer Literacy Test) Rules, 2012, which specifies that all employees have to be computer literate and certified to be eligible for promotions or increments. Employees who overshoot the March deadline will not be considered for either promotions or increments, the order stated.

Even though the government set the Rules in 2012, the guidelines were not issued until 2017 and after that, the deadline was extended for several reasons including the issue of exam centres being restricted only to a few districts such as Bengaluru, Mangalore, Kalaburagi and Mysuru, explained C S Shadakshari, President, Karnataka State Government Employees Association. Now, the government has set up centres in all districts, he said.

With the recently issued deadline, several government employees are now rushing to pass the computer test.”I myself passed the test only few days ago. With the literacy test being linked to the state’s Human Resources Management system(HRMS), employees of several boards and corporations where HRMS was not implemented, could not take the test earlier, Since the HRMS is now in place, several of us are taking the test,” Shadakshari added.

While majority of the employees have cleared the exam, some new recruits and older employees who were intimidated by the process were left out of the loop. All of them will now take the exam." although one may know how to use a computer, answering technical questions and writing an exam, needs preparation. The employees association has also distributed training material to help staff clear the exam," according to Raghu, treasurer of the association.

The syllabus prescribes basics of usage of mail, power-point, creating slides and usage of internet among others.

Courtesy: The Hindu, Dated: 26.08.2021

## 35. ಸುಪ್ರೀಂ ಮೊರೆಗೆ ಸಿದ್ಧತೆ

ಪಂಚ ಜಲ ಸವಾಲುಗಳನ್ನು ಬಗೆಹರಿಸುವ ನಿಟ್ಟಿನಲ್ಲಿ ದೆಹಲಿಗೆ ತೆರಳಿರುವ ಮುಖ್ಯಮಂತ್ರಿಯವರು, ಸುಪ್ರೀಂಕೋರ್ಟ್‌ನಲ್ಲಿ ರಾಜ್ಯದ ಪರ ವಾದ ಮಾಡುವ ಕಾನೂನು ತಂಡದ ಜೊತೆ ಸಮಾಲೋಚನೆ ನಡೆಸಿ, ಸಮರ್ಥ ವಾದ ಮಂಡಿಸುವಂತೆ ಸೂಚನೆ ನೀಡಿದ್ದಾರೆ. ಕೃಷ್ಣಾ ಮೇಲ್ದಂಡೆ, ತಮಿಳುನಾಡು ಕೈಗೆತ್ತಿಕೊಂಡಿರುವ ಯೋಜನೆಗಳ ಕುರಿತು ಸುಪ್ರೀಂಕೋರ್ಟ್‌ಗೆ ಅರ್ಜಿ ಸಲ್ಲಿಸಲು ತೀರ್ಮಾನಿಸಲಾಗಿದೆ ಎಂದು ಹೇಳಿದರು. ಇದರ ನಡುವೆಯೇ ಕೇಂದ್ರ ವಿತ್ತ ಸಚಿವೆ ನಿರ್ಮಲಾ ಸೀತಾರಾಮನ್ ಅವರನ್ನು ಭೇಟಿಯಾದ ಮುಖ್ಯಮಂತ್ರಿಯವರು, ಕೇಂದ್ರದಿಂದ ಸಿಗಬೇಕಾಗಿರುವ ಜಿಎಸ್‌ಟಿ ಪರಿಹಾರವನ್ನು ಇನ್ನೂ ಮೂರು ವರ್ಷ ವಿಸ್ತರಿಸುವಂತೆಯೂ ಮನವಿ ಮಾಡಿದರು.

ಸದ್ಯ ರಾಜ್ಯದ ಮುಂದೆ ಕೃಷ್ಣಾ ಮೇಲ್ದಂಡೆ ಯೋಜನೆಗೆ ಕೇಂದ್ರದ ಸಹಕಾರ, ಕಳಸಾ ಬಂಡೂರಿ ಯೋಜನೆ, ಮೇಕೆದಾಟು ಯೋಜನೆಗೆ ಒಪ್ಪಿಗೆ ಮತ್ತು ಎತ್ತಿನಹೊಳೆ ಹಾಗೂ ಭದ್ರಾ ಯೋಜನೆಗೆ ರಾಷ್ಟ್ರೀಯ ಮಾನ್ಯತೆ ಕೊಡಿಸುವ ನಿಟ್ಟಿನಲ್ಲಿ ಜಲ ತಜ್ಞರೂ ಆಗಿರುವ ಮುಖ್ಯಮಂತ್ರಿಯವರು ಪ್ರಯತ್ನಿಸುತ್ತಿದ್ದಾರೆ. ಈ ಹಿನ್ನೆಲೆಯಲ್ಲಿ ಕೇಂದ್ರ ಜಲಶಕ್ತಿ ಸಚಿವರ ಜೊತೆ ಮಾತುಕತೆ ನಡೆಸಿದ್ದ ಅವರು, ಕಾನೂನು ಕ್ಷೇತ್ರ ಮತ್ತು ಜಲ ತಜ್ಞರ ಜೊತೆಗೆ ಚರ್ಚಿಸಿ, 'ರಾಜ್ಯದ ನೀರಾವರಿ ಯೋಜನೆಗಳ ಬಗ್ಗೆ ಕಾನೂನು ಕ್ಷೇತ್ರ ಮತ್ತು ತಾಂತ್ರಿಕತಜ್ಞರೊಂದಿಗೆ ಸುದೀರ್ಘ ಚರ್ಚೆ ನಡೆಸಲಾಗಿದೆ. ಕೃಷ್ಣಾ ಮೇಲ್ದಂಡೆ ಯೋಜನೆ, ತಮಿಳುನಾಡು ಕೈಗೆತ್ತಿಕೊಂಡಿರುವ ಯೋಜನೆಗಳ ಕುರಿತು ಸುಪ್ರೀಂಗೆ ಅರ್ಜಿ ಸಲ್ಲಿಸಲು ತೀರ್ಮಾನಿಸಲಾಗಿದೆ' ಎಂದರು.

ವಿಶೇಷ ರಜಾಕಾಲದ ಅರ್ಜಿಗೆ ಸಂಬಂಧಿಸಿದ ಸಮಸ್ಯೆಗಳ ಇತ್ಯರ್ಥ ಮಾಡಲು ತೀರ್ಮಾನಿಸಲಾಗಿದೆ ಎಂದ ಮುಖ್ಯಮಂತ್ರಿಯವರು, ತಮಿಳುನಾಡು ನದಿ ಜೋಡಣೆ ಯೋಜನೆಗಳು ಕಾನೂನು ಬಾಹಿರವಾಗಿದ್ದು, ಆ ಬಗ್ಗೆ ಚರ್ಚಿಸಲಾಗಿದೆ. ಮೇಕೆದಾಟು ಯೋಜನೆಯ ಬಗ್ಗೆ ನ್ಯಾಯಾಲಯದಲ್ಲಿ ವಿಚಾರಣೆಗೆ ಬಂದಾಗ ನಮ್ಮ ನಿಲುವನ್ನು ಸ್ಪಷ್ಟಪಡಿಸುವ ಕುರಿತು ಹಾಗೂ ತಮಿಳುನಾಡು ಮಧುರೈ ನ್ಯಾಯಾಲಯದಲ್ಲಿ ಪ್ರಕರಣವೊಂದು ದಾಖಲಾಗಿದೆ. ಇದು ಮಧುರೈ ವ್ಯಾಪ್ತಿಗೆ ಒಳಪಡದಿರುವುದರಿಂದ ಪ್ರಕರಣವನ್ನು ಕೈಬಿಡಲು ಕ್ರಮ ವಹಿಸಲಾಗುವುದು ಎಂದರು.

**3 ವರ್ಷ ಅನುದಾನ ಕೊಡಿ:** ಕೇಂದ್ರದಿಂದ ಸಿಗಬೇಕಿರುವ ಜಿ.ಎಸ್.ಟಿ ಪರಿಹಾರವನ್ನು ಇನ್ನು ಮೂರು ವರ್ಷಗಳಿಗೆ ಮುಂದುವರಿಸುವಂತೆ ಮುಖ್ಯಮಂತ್ರಿಯವರು ವಿತ್ತ ಸಚಿವೆ ನಿರ್ಮಲಾ ಸೀತಾರಾಮನ್‌ಗೆ ಮನವಿ ಮಾಡಿದ್ದಾರೆ. ಸೋಂಕಿನಿಂದಾಗಿ ರಾಜ್ಯಗಳ ತೆರಿಗೆ ಸಂಗ್ರಹ ಕಡಿಮೆಯಾಗಿದೆ. ಸಾಮಾನ್ಯ ಸ್ಥಿತಿಗೆ ಬರಲು ಕೆಲವು ವರ್ಷಗಳೇ ಬೇಕಾಗಬಹುದು. ಕಳೆದ ವರ್ಷ ಜಿಎಸ್‌ಟಿ ಪರಿಹಾರ ಸಾಲ ಒದಗಿಸಲಾಗಿತ್ತು. ಈ ವರ್ಷವು ಈ ಸೌಲಭ್ಯ ವಿಸ್ತರಿಸಲಾಗಿದೆ. ರಾಜ್ಯಗಳ ಹಣಕಾಸು ಸ್ಥಿತಿ

ಸುಧಾರಿಸುವವರೆಗೆ ಕೇಂದ್ರದ ನೆರವು ಅತಿ ಅಗತ್ಯವಾಗಿದ್ದು ಮೂರು ವರ್ಷಗಳ ಅವಧಿಗೆ ಜಿ.ಎಸ್.ಟಿ ಪರಿಹಾರ ವಿಸ್ತರಿಸುವಂತೆ ಮನವಿ ಮಾಡಿದರು.

2021 ರಿಂದ 2026ರ ಅವಧಿಗೆ ರಾಜ್ಯಗಳಿಗೆ ತೆರಿಗೆ ಹಂಚಿಕೆಗೆ ಮಾಡಿದ ಶಿಫಾರಸ್ಸಿನ ಅನ್ವಯ ರಾಜ್ಯದ ಹಂಚಿಕೆ 14ನೇ ಹಣಕಾಸು ಆಯೋಗ ಶಿಫಾರಸ್ಸು ಮಾಡಿದ ಶೇ 4.71 ರಿಂದ ಶೇ. 3.64 ಕ್ಕೆ ಇಳಿಕೆಯಾಗಿದೆ. 15ನೇ ಹಣಕಾಸು ಆಯೋಗವು ತನ್ನ ಶಿಫಾರಸ್ಸಿನಲ್ಲಿ ರಾಜ್ಯ ನಿರ್ದಿಷ್ಟ ಅನುದಾನದಡಿ ಬೆಂಗಳೂರಿನ ಜಲಮೂಲಗಳು ಹಾಗೂ ಫೆರಿಫರಲ್ ರಿಂಗ್ ರಸ್ತೆಗೆ ರೂ.6000 ಕೋಟಿ ನಿಗದಿಪಡಿಸಿದೆ. ಕೇಂದ್ರ ಸರ್ಕಾರದ ಎಕ್ಸಪ್ಲೆನೇಟರಿ ಮೆಮೋರಾಂಡಂನಲ್ಲಿ ಆಯೋಗ ಈ ಶಿಫಾರಸ್ಸನ್ನು ಪ್ರಸ್ತಾಪಿಸಿಲ್ಲ. ತೆರಿಗೆ ಹಂಚಿಕೆಯಲ್ಲಿ ಇಳಿಕೆಯಾಗಿರುವ ರಾಜ್ಯಕ್ಕೆ ಇನ್ನಷ್ಟು ಹಿನ್ನಡೆಯಾಗಲಿದೆ ಎಂದು ವಿತ್ತ ಸಚಿವರಿಗೆ ಮನವರಿಕೆ ಮಾಡಿಕೊಟ್ಟರು.

ಆಧಾರ: ಉದಯವಾಣಿ, ದಿನಾಂಕ:27.08.2021.

## 36. ಜಾಹೀರಾತುಗಳಲ್ಲಿ ಜನಪ್ರತಿನಿಧಿಗಳ ಭಾವಚಿತ್ರ ನಿಷೇಧ: ಸುತ್ತೋಲೆ

ರಾಜ್ಯದ ಎಲ್ಲ ನಗರ ಸ್ಥಳೀಯ ಸಂಸ್ಥೆಗಳು, ನಗರಾಭಿವೃದ್ಧಿ ಇಲಾಖೆಯ ಅಧೀನದ ನಗರ ಯೋಜನಾ ಪ್ರಾಧಿಕಾರ, ನಿಗಮ ಮತ್ತು ಮಂಡಳಿಗಳಲ್ಲಿ ಸರ್ಕಾರದ ಅನುದಾನದಿಂದ ಕೈಗೊಳ್ಳುವ ಕಾಮಗಾರಿಗಳಿಗೆ ಸಂಬಂಧಿಸಿದಂತೆ ಜನಪ್ರತಿನಿಧಿಗಳ ಭಾವಚಿತ್ರಗಳೊಂದಿಗೆ ಜಾಹೀರಾತು ಪ್ರದರ್ಶಿಸುವುದನ್ನು ನಿಷೇಧಿಸಿ ನಗರಾಭಿವೃದ್ಧಿ ಇಲಾಖೆ ಸುತ್ತೋಲೆ ಹೊರಡಿಸಿದೆ.

ಸರ್ಕಾರದ ಅನುದಾನದಲ್ಲಿ ನಡೆಯುವ ಕಾಮಗಾರಿಗಳು ಮತ್ತು ಸಾರ್ವಜನಿಕ ಕೆಲಸಗಳಿಗೆ ಸಂಬಂಧಿಸಿದ ಜಾಹೀರಾತುಗಳಲ್ಲಿ ಜನಪ್ರತಿನಿಧಿಗಳ ಭಾವಚಿತ್ರ ಪ್ರದರ್ಶಿಸುವುದನ್ನು ಪ್ರಶ್ನಿಸಿ ಸಾಮಾಜಿಕ ಹೋರಾಟಗಾರ ಹೆಚ್. ಎಂ. ವೆಂಕಟೇಶ್ ಹೈಕೋರ್ಟ್‌ಗೆ ಸಾರ್ವಜನಿಕ ಹಿತಾಸಕ್ತಿ ಅರ್ಜಿ ಸಲ್ಲಿಸಿದ್ದರು. ಇಂದೇ ವಿಚಾರದಲ್ಲಿ ಸುಪ್ರೀಂ ಕೋರ್ಟ್ 2015ರಲ್ಲಿ ಹೊರಡಿಸುವ ಆದೇಶ ಪಾಲನೆಗೆ ನಿರ್ದೇಶನ ನೀಡುವಂತೆ ಕೋರಿದ್ದರು.

ಅರ್ಜಿಯ ವಿಚಾರಣೆಯ ನಡೆಸಿದ ಹೈಕೋರ್ಟ್, ಸರ್ಕಾರಿ ವೆಚ್ಚದಲ್ಲಿ ನಡೆಯುವ ಕಾಮಗಾರಿಗಳು ಮತ್ತು ಕೆಲಸಗಳಿಗೆ ಸಂಬಂಧಿಸಿದಂತೆ ಜನಪ್ರತಿನಿಧಿಗಳ ಭಾವಚಿತ್ರಗಳೊಂದಿಗೆ ಹಾಕದಿರುವ ಜಾಹೀರಾತುಗಳ ತೆರವಿಗೆ ಆದೇಶ ಹೊರಡಿಸುವಂತೆ ಇಂದೇ 6 ರಂದು ನಿರ್ದೇಶನ ನೀಡಿತ್ತು. 24ರಂದು ಸುತ್ತೋಲೆ ಹೊರಡಿಸಿರುವ ನಗರಾಭಿವೃದ್ಧಿ ಇಲಾಖೆ, ಅಂತಹ ಎಲ್ಲ ಜಾಹೀರಾತುಗಳನ್ನು ತಕ್ಷಣ ತೆರವುಗೊಳಿಸುಂತೆ ಆದೇಶಿಸಿದೆ.

'ಮುಂದೆ ಇಂತಹ ಯಾವುದೇ ಜಾಹೀರಾತು ಪ್ರದರ್ಶಿಸದಂತೆ ಕ್ರಮ ವಹಿಸಬೇಕು. ಇಂತಹ ಪ್ರಕರಣಗಳು ಮರುಕಳಿಸಿದಲ್ಲಿ ಸಂಬಂಧಿಸಿದವರ ವಿರುದ್ಧ ಸ್ಥಳೀಯ ಪೊಲೀಸ್ ಠಾಣೆಯಲ್ಲಿ ಕ್ರಿಮಿನಲ್ ಪ್ರಕರಣ ದಾಖಲಿಸಬೇಕು. ಈ ಆದೇಶ ಅನುಷ್ಠಾನಗೊಳಿಸಲು ವಿಫಲರಾಗುವ ಅಧಿಕಾರಿಗಳ ವಿರುದ್ಧ ಶಿಸ್ತುಕ್ರಮ ಜರುಗಿಸಲಾಗುವುದು ಎಂದು ಸುತ್ತೋಲೆಯಲ್ಲಿ ಎಚ್ಚರಿಕೆ ನೀಡಲಾಗಿದೆ.

ಆಧಾರ: ಪ್ರಜಾವಾಣಿ, ದಿನಾಂಕ:28.08.2021.

## 37. ಮೇಕೆದಾಟು ನಮ್ಮ ಹಕ್ಕು

ಮೇಕೆದಾಟು ಯೋಜನೆ ನಮ್ಮ ಹಕ್ಕು. ಯಾವುದೇ ಕಾರಣಕ್ಕೂ ಹೆಜ್ಜೆ ಹಿಂದಿಡುವ ಪ್ರಶ್ನೆಯೇ ಇಲ್ಲ. ನ್ಯಾಯಾಲಯದಲ್ಲಿ ವಿಚಾರಣೆ ಹಂತದಲ್ಲಿದ್ದು, ಕಾನೂನು ತಜ್ಞರ ಜೊತೆ ಚರ್ಚಿಸಲಾಗುತ್ತಿದೆ. ಮಹದಾಯಿ ಯೋಜನೆ ಕುರಿತಂತೆಯೂ ದಿಲ್ಲಿಯಲ್ಲಿ ಚರ್ಚಿಸಿರುವೆ ಎಂದು ಮುಖ್ಯಮಂತ್ರಿಯವರು ಹೇಳಿದರು.

"ಕೃಷ್ಣಾ ಮೇಲ್ದಂಡೆ ಯೋಜನೆಯಡಿ ಆಲಮಟ್ಟಿ ಜಲಾಶಯದಲ್ಲಿ ಈಗಿರುವ 514 ಅಡಿ ಸಂಗ್ರಹ ಸಾಮರ್ಥ್ಯವನ್ನು 524ಕ್ಕೆ ಹೆಚ್ಚಿಸುವ ನಿರ್ಧಾರಕ್ಕೆ ಸಂಬಂಧಿಸಿದಂತೆ ದಿಲ್ಲಿಯಲ್ಲಿ ಚರ್ಚಿಸಲಾಗಿದೆ. ಈ ಕುರಿತು ನೋಟಿಫಿಕೇಷನ್ ಸಹ ಹೊರಡಿಸಲಾಗಿದೆ," ಎಂದು ಮುಖ್ಯಮಂತ್ರಿಯವರು ತಿಳಿಸಿದರು.

ಹಾವೇರಿ ಹೊರವಲಯದ ಹಾಲು ಉತ್ಪಾದನಾ ಘಟಕದಲ್ಲಿ ರೂ.90 ಕೋಟಿ ವೆಚ್ಚದ ಮೆಗಾ ಡೇರಿ ಮತ್ತು ಯುಎಚ್‌ಟಿ ಹಾಲು ಪ್ಯಾಕಿಂಗ್ ಘಟಕ ಸ್ಥಾಪನೆಗೆ ಭೂಮಿಪೂಜೆ ನೆರವೇರಿಸಿದ ನಂತರ ಸುದ್ದಿಗೋಷ್ಠಿಯಲ್ಲಿ ಅವರು ಮಾತನಾಡಿದರು.

"ದಿಲ್ಲಿ ಭೇಟಿ ವೇಳೆ ಕೈಗಾರಿಕಗಳ ಉತ್ತೇಜನದ ಜೊತೆಗೆ ಉದ್ಯೋಗ ಹೆಚ್ಚಳಕ್ಕೆ ಮೆಗಾ ಜವಳಿ ಸ್ಥಾಪನೆ ಕುರಿತು ಚರ್ಚಿಸಿರುವೆ. ಹಾವೇರಿ ಜಿಲ್ಲೆ ಸೇರಿದಂತೆ ರಾಜ್ಯದ ಪ್ರಮುಖ ಜಿಲ್ಲೆಗಳಲ್ಲಿ ಮೆಗಾ ಜವಳಿ ಪಾರ್ಕ್ ಸ್ಥಾಪಿಸಲು ಯೋಜಿಸಲಾಗುವುದು" ಎಂದು ಮುಖ್ಯಮಂತ್ರಿಯವರು ತಿಳಿಸಿದರು.

**ಅಕ್ಟೋಬರ್ 1 ರಿಂದ ಎನ್‌ಇಪಿ:** ರಾಷ್ಟ್ರೀಯ ಹೊಸ ಶಿಕ್ಷಣ ನೀತಿ ಜಾರಿ ಕುರಿತು ಈಗಾಗಲೇ ತಜ್ಞರ ಸಮಿತಿ ವರದಿ ಸಿಕ್ಕಿದೆ. ಈ ವರದಿ ಆಧರಿಸಿ ಇದೇ ಅಕ್ಟೋಬರ 1 ರಿಂದ ಹೊಸ ಶಿಕ್ಷಣ ವ್ಯವಸ್ಥೆ ಜಾರಿಗೊಳ್ಳಲಿದೆ ಎಂದು ಮುಖ್ಯಮಂತ್ರಿಯವರು ತಿಳಿಸಿದರು.

ಆಧಾರ: ವಿಜಯ ಕರ್ನಾಟಕ, ದಿನಾಂಕ:29.08.2021.

## 38. 6-8 ನೇ ತರಗತಿ ಅಸ್ತು

ಬಹುಪಾಲು ಪಾಲಕರ ನಿರೀಕ್ಷೆ, ಶಿಕ್ಷಣ-ಸಾಮಾಜಿಕ ತಜ್ಞರ ಒಲವು-ನಿಲುವಿಗೆ ಮಣೆ ಹಾಕಿರುವ ರಾಜ್ಯ ಸರ್ಕಾರ ಸೆಪ್ಟಂಬರ್ 6ರಿಂದಲೇ 6 ರಿಂದ 8 ರವರೆಗೆ ಭೌತಿಕ ತರಗತಿ ಆರಂಭಕ್ಕೆ ಅಸ್ತು ಎಂದಿದೆ. ಸೋಂಕು ದೃಢತೆ ದರ ಶೇ.2ಕ್ಕಿಂತ ಕಡಿಮೆಯಿರುವ ತಾಲ್ಲೂಕುಗಳಿಗೆ ಇದು ಅನ್ವಯ. ವಾರದಲ್ಲಿ ಐದು ದಿವಸ, ದಿನ ಬಿಟ್ಟು ದಿನ ಭೌತಿಕ ತರಗತಿ ನಡೆದರೆ ಉಳಿದೆರಡು ದಿನ ಶಾಲೆ ಸ್ವಚ್ಛತಾ ಚಟುವಟಿಕೆಗಳಿಗೆ ಮೀಸಲಿಡಲಾಗಿದೆ. ಮತ್ತೊಂದೆಡೆ, ಸ್ವಪಕ್ಷೀಯರು, ವಿವಿಧ ಸಂಘಟನೆಗಳು ಒತ್ತಡ ಹೇರಿ, ಕಾತುರದಿಂದ ಕಾಯುತ್ತಿದ್ದ ಸಾರ್ವಜನಿಕ ಗಣೇಶೋತ್ಸವಕ್ಕೆ ಅನುಮತಿ ನೀಡುವ ವಿಚಾರದಲ್ಲಿ ಸರ್ಕಾರ ಕಾದು ನೋಡುವ ತಂತ್ರಕ್ಕೆ ಮೊರೆಹೋಗಿದೆ.

ಸಿಎಂ ಗೃಹ ಕಚೇರಿ ಕೃಷ್ಣಾದಲ್ಲಿ ಕೊರೋನಾ ಮೂರನೇ ಅಲೆ ಹತೋಟಿಗೆ ಸಂಬಂಧಿಸಿದಂತೆ ಮುಖ್ಯಮಂತ್ರಿಯವರು ಅಧ್ಯಕ್ಷತೆಯಲ್ಲಿ ಉನ್ನತ ಮಟ್ಟದ ಸಭೆ ನಡೆಯಿತು. ರಾಜ್ಯದ ವಸ್ತುಸ್ಥಿತಿ, ಕೇರಳ ಮತ್ತು ಮಹಾರಾಷ್ಟ್ರಗಳ ಪರಿಸ್ಥಿತಿ, ಕೇಂದ್ರ ಸರ್ಕಾರದ ಸೂಚನೆಗಳನ್ನು ಗಮನದಲ್ಲಿಟ್ಟುಕೊಂಡು ಚರ್ಚಿಸಿ, ಹಲವು ಮಹತ್ವದ ನಿರ್ಣಯಗಳನ್ನು ತೆಗೆದುಕೊಂಡಿದೆ. ಒಂದು ತಿಂಗಳ ಬಳಿಕ ಪರಿಸ್ಥಿತಿ ಅವಲೋಕಿಸಿ ಮೂರನೇ ಹಾಗೂ ಅಂತಿಮ ಹಂತದಲ್ಲಿ ಒಂದರಿಂದ 5ನೇ ತರಗತಿ ಶಾಲೆಗಳನ್ನು ತೆರೆಯುವ ಬಗ್ಗೆ ತೀರ್ಮಾನ ಕೈಗೊಳ್ಳಲು ಉದ್ದೇಶಿಸಲಾಗಿದೆ.

**ಉತ್ಸಾಹಕ್ಕೆ ಸ್ಪಂದನೆ:** ಸಭೆ ನಂತರ ಸಚಿವರಾದ ಆರ್.ಅಶೋಕ್, ಬಿ.ಸಿ.ನಾಗೇಶ್ ಸುದ್ದಿಗಾರರೊಂದಿಗೆ ಮಾತನಾಡಿ, ಸರ್ಕಾರಿ ಶಾಲೆ, ಪದವಿ ಪೂರ್ವ ಕಾಲೇಜುಗಳಲ್ಲಿ 9, 10 ಹಾಗೂ ಪಿಯು ಭೌತಿಕ ತರಗತಿಗಳು ಉತ್ಸಾಹ ಭರಿತ ಆರಂಭ ಕಂಡಿವೆ. ಈ ಹಿನ್ನೆಲೆಯಲ್ಲಿ ಪಾಲಕರು ಸಹಿತ ಎಲ್ಲ ವಲಯಗಳ ಅಪೇಕ್ಷೆಗೆ ಸ್ಪಂದಿಸಿ ಸೆಪ್ಟೆಂಬರ್ 6ರಿಂದ 6-8ನೇ ವರೆಗೆ ನೇರ ತರಗತಿಗೆ ಸಮ್ಮತಿಸಲಾಗಿದೆ. ಶಿಕ್ಷಣ ಹಾಗೂ ಆರೋಗ್ಯ ರಕ್ಷಣೆ ಮುಖ್ಯವಾಗಿದೆ. ಪಾಸಿಟಿವಿಟಿ ದರ ಶೇ.2ಕ್ಕಿಂತ ಕಡಿಮೆಯಿರುವ ಬೆಂಗಳೂರು ನಗರ ಸೇರಿದಂತೆ ಎಲ್ಲ ತಾಲ್ಲೂಕುಗಳಲ್ಲಿ ವಾರದಲ್ಲಿ ಐದು ದಿನಗಳೂ ಶಾಲೆಗಳು ತೆರೆಯಲಿವೆ ಎಂದರು.

ಭೌತಿಕ ತರಗತಿಗಳು ಪ್ರಾರಂಭವಾಗಿರುವ ಪ್ರೌಢಶಾಲೆ, ಪಿಯು ಕಾಲೇಜುಗಳಲ್ಲಿ ಪ್ರಮಾಣಿತ ಕಾರ್ಯವಿಧಾನ(ಎಸ್‌ಒಪಿ)ವನ್ನು ಪರಿಣಾಮಕಾರಿಯಾಗಿ ಅನುಷ್ಠಾನಕ್ಕೆ ತರಲಾಗಿದೆ 6–8ನೇ ತರಗತಿ ಶಾಲೆಗಳಲ್ಲೂ ಎಸ್‌ಒಪಿ ಪಾಲನೆ ಕಡ್ಡಾಯವಾಗಿದೆ.

**ಕೇರಳದಿಂದ ಬರುವವರಿಗೆ ಕ್ವಾರಂಟೈನ್:** ಕೇರಳದಲ್ಲಿ ಪಾಸಿಟಿವಿಟಿ ದರ ಶೇ.19 ಕ್ಕೇರಿದ್ದು, ಪ್ರತಿದಿನ 30,000ಕ್ಕು ಹೆಚ್ಚು ಪ್ರಕರಣಗಳು ವರದಿಯಾಗುತ್ತಿವೆ. ಈ ಹಿನ್ನೆಲೆಯಲ್ಲಿ ಕೇರಳದಿಂದ ಬರುವವರಿಗೆ 1 ವಾರ ಸಾಂಸ್ಥಿಕ ಕ್ವಾರಂಟೈನ್ ಕಡ್ಡಾಯಗೊಳಿಸಲಾಗಿದೆ.

ಕ್ವಾರಂಟೈನ್ ಮುಗಿಯುವ ದಿನ ಅಂದರೆ ಏಳನೇ ದಿನ ಕೊರೋನಾ ಮಾದರಿ ಪರೀಕ್ಷೆಗೆ ಒಳಪಡಿಸಿ, ನೆಗೆಟಿವ್ ವರದಿ ದೊರೆತ ನಂತರ ರಾಜ್ಯ ಪ್ರವೇಶಕ್ಕೆ ಅನುಮತಿ ದೊರೆಯಲಿದೆ. ಒಂದು ಅಥವಾ ಎರಡು ಲಸಿಕೆ ಹಾಕಿಸಿಕೊಂಡಿದ್ದರೂ, ಆರ್‌ಟಿಪಿಸಿಆರ್ ಟೆಸ್ಟ್ ಮಾಡಿಸಿಕೊಂಡು ನೆಗೆಟಿವ್ ಪ್ರಮಾಣಪತ್ರ ಹೊಂದಿದ್ದರೂ ಸಾಂಸ್ಥಿಕ ಕ್ವಾರಂಟೈನ್ ಕಡ್ಡಾಯವೆಂದು ಆರ್.ಅಶೋಕ್ ಸ್ಪಷ್ಟಪಡಿಸಿದರು.

ಆಧಾರ: ವಿಜಯವಾಣಿ, ದಿನಾಂಕ:31.08.2021.

## 39. ಅಭಿವೃದ್ಧಿಗೆ ಮೀಸಲಿಟ್ಟ ಹಣ ಆ ಸಮುದಾಯದ ಅಗತ್ಯಕ್ಕೆ ಬಳಸಬೇಕು

ಪರಿಶಿಷ್ಟ ಜಾತಿ(ಎಸ್‌ಸಿ), ಪರಿಶಿಷ್ಟ ವರ್ಗ(ಎಸ್‌ಟಿ) ಸಮುದಾಯದ ದೌರ್ಜನ್ಯ ಪ್ರಕರಣಗಳಿಗೆ ಸಂಬಂಧಿಸಿದಂತೆ ಮೂರು ತಿಂಗಳಿಗೊಮ್ಮೆ ಸಮಾಜ ಕಲ್ಯಾಣ ಇಲಾಖೆಯ ಪ್ರಧಾನ ಕಾರ್ಯದರ್ಶಿ ನೇತೃತ್ವದಲ್ಲಿ ನಡೆಯುವ ಸಭೆಯನ್ನು ತಿಂಗಳಿಗೊಮ್ಮೆ ಸಭೆ ನಡೆಸಲು ಮತ್ತು ವಿಶೇಷ ಸಂದರ್ಭಗಳಲ್ಲಿ ಸಿಎಂ ಅಧ್ಯಕ್ಷತೆಯಲ್ಲಿ ಮೂರು ತಿಂಗಳಿಗೊಮ್ಮ ಸಭೆ ನಡೆಸಲು ತೀರ್ಮಾನಿಸಲಾಗಿದೆ ಎಂದು ಮುಖ್ಯಮಂತ್ರಿಯವರು ತಿಳಿಸಿದರು.

ದೌರ್ಜನ್ಯ ಪ್ರತಿಬಂಧ ಕಾಯಿದೆ–1989 (ತಿದ್ದುಪಡಿ ಕಾಯಿದೆ–2015) ಮತ್ತು ನಿಯಮಗಳು–1995 (ತಿದ್ದುಪಡಿ ನಿಯಮಗಳು–2016) ಅಡಿ ರಾಜ್ಯ ಮಟ್ಟದ ಜಾಗೃತ ಮತ್ತು ಉಸ್ತುವಾರಿ ಸಮಿತಿಯ ಸಭೆಯ ಬಳಿಕ ಸುದ್ದಿಗಾರರ ಜೊತೆ ಮಾತನಾಡಿದ ಅವರು, ಎಸ್‌ಸಿ, ಎಸ್‌ಟಿ ಸಮುದಾಯಗಳ ಮೇಲಿನ ದೌರ್ಜನ್ಯ ಸೇರಿದಂತೆ ಹಲವು ಸಮಸ್ಯೆಗಳ ಬಗ್ಗೆ ಸಭೆಯಲ್ಲಿ ಚರ್ಚೆ ನಡೆಯಿತು ಎಂದರು.

ಸುಮಾರು ಪ್ರಕರಣಗಳಲ್ಲಿ ತನಿಖೆ ವಿಳಂಬವಾಗಿದೆ. ದೋಷಾರೋಪ ಪಟ್ಟಿ ಸಲ್ಲಿಕೆಯಾದ ಬಳಿಕ ವಿಚಾರಣೆ ಹಂತದಲ್ಲೂ ವಿಳಂಬ ಆಗಿದೆ. ಈ ಎರಡೂ ಹಂತಗಳಲ್ಲಿ ಪ್ರಗತಿ ಪರಿಶೀಲನೆ ನಡೆಸಿ, ಯಾವುದೇ ವಿಳಂಬ ಆಗದಂತೆ ಕ್ರಮ ತೆಗೆದುಕೊಳ್ಳಲು ಗೃಹ ಮತ್ತು ಕಾನೂನು ಇಲಾಖೆಗೆ ಸೂಚಿಸಿದ್ದೇನೆ. ಅದರ ಮೇಲುಸ್ತುವಾರಿಯನ್ನು ಸಮಾಜ ಕಲ್ಯಾಣ ಇಲಾಖೆಯ ಪ್ರಧಾನ ಕಾರ್ಯದರ್ಶಿ ಮಾಡಬೇಕು ಎಂದರು.

ಅರಣ್ಯ ಹಕ್ಕು ಕಾಯಿದೆಯಲ್ಲಿ 1.80 ಲಕ್ಷ ಅರ್ಜಿಗಳು ತಿರಸ್ಕೃತವಾಗಿದೆ. ಅವುಗಳನ್ನು ಮರು ಪರಿಶೀಲಿಸಲು ರಾಜ್ಯ ಮಟ್ಟದ ಸಮಿತಿ ರಚಿಸಲಾಗುವುದು. ಆ ಸಮಿತಿಗೆ ಮೂರು ಮಂದಿಯನ್ನು ನೇಮಿಸಲಾಗುವುದು. ಎಸ್‌ಸಿ ನಕಲಿ ಜಾತಿ ಪ್ರಮಾಣಪತ್ರಗಳನ್ನು ರದ್ದು ಮಾಡುವ ಜೊತೆಗೆ, ಯಾವ ಅಧಿಕಾರಿ ಕೊಟ್ಟಿದ್ದಾರೆ ಅಂಥವರ ಮೇಲೆ ಕ್ರಮ ತೆಗೆದುಕೊಳ್ಳಲು ತೀರ್ಮಾನಿಸಲಾಗಿದೆ ಎಂದು ತಿಳಿಸಿದರು.

ಎಸ್‌ಸಿ, ಎಸ್‌ಟಿ ಅನುಕಂಪದ ಆಧಾರದಲ್ಲಿ ನೌಕರಿಗೆ ಸೇರಲು ಹೆಚ್ಚಿನ ಕಾಲಾವಕಾಶ ಕೊಡಲು ಕಾನೂನು ತಿದ್ದುಪಡಿ ಮಾಡುವ ಬಗ್ಗೆಯೂ ತೀರ್ಮಾನಿಸಲಾಗಿದೆ. ಎಸ್‌ಸಿಪಿ, ಟಿಎಸ್‌ಟಿ ಯೋಜನೆಗಳ ಅನುಷ್ಠಾನವನ್ನು ಕಾಲಮಿತಿಯಲ್ಲಿ ಮುಗಿಸಬೇಕು. ಬಾಕಿ ಇರುವ ಕೊಳವೆ ಬಾವಿ ಅನುಮತಿ, ವಿದ್ಯುತ್ ಸಂಪರ್ಕ ಕೆಲಸವನ್ನು ಮುಂದಿನ 4 ತಿಂಗಳ ಒಳಗೆ ಪೂರ್ಣಗೊಳಿಸಬೇಕು. ಎಸ್‌ಸಿ, ಎಸ್‌ಟಿ

ಅಭಿವೃದ್ಧಿಗೆ ಮೀಸಲಿಟ್ಟ ಹಣ ಆ ಸಮುದಾಯದ ಅಗತ್ಯಕ್ಕೆ ಬಳಸಬೇಕು. ಈ ಬಗ್ಗೆ ಅಗತ್ಯ ಇದ್ದರೆ ಕಾನೂನು ತಿದ್ದುಪಡಿಗೂ ಕಾನೂನು ಇಲಾಖೆಗೆ ಸೂಚಿಸಿದ್ದೇನೆ ಎಂದರು.

ಸಭೆಯಲ್ಲಿ ಕಾನೂನು ಮತ್ತು ಸಂಸದೀಯ ಸಚಿವ ಜೆ.ಸಿ.ಮಾಧುಸ್ವಾಮಿ, ಸಮಾಜ ಕಲ್ಯಾಣ ಸಚಿವ ಕೋಟ ಶ್ರೀನಿವಾಸ ಪೂಜಾರಿ, ಸಾರಿಗೆ ಮತ್ತು ಪರಿಶಿಷ್ಟ ವರ್ಗಗಳ ಕಲ್ಯಾಣ ಸಚಿವ ಬಿ.ಶ್ರೀರಾಮುಲು, ಸಮಿತಿಯ ಸದಸ್ಯರಾದ ಸಂಸದರು, ಶಾಸಕರು ಮತ್ತು ಮುಖ್ಯ ಕಾರ್ಯದರ್ಶಿ ಪಿ.ರವಿಕುಮಾರ್ ಇದ್ದರು.

ಆಧಾರ: ವಿಶ್ವವಾಣಿ, ದಿನಾಂಕ:31.08.2021.

## 40. ಮೀಸಲು ಪರಾಮರ್ಶೆ: ಸಮಿತಿ ಪುನಾರಚನೆ

ರಾಜ್ಯ ಸರ್ಕಾರ ಮೀಸಲಾತಿ ಪರಾಮರ್ಶಿಸುವ ಉನ್ನತ ಮಟ್ಟದ ಸಮಿತಿಯನ್ನು ಪುನಾರಚನೆ ಮಾಡಿದ್ದು, ನಿವೃತ್ತ ನ್ಯಾಯಮೂರ್ತಿ ಸುಭಾಷ್ ಆಡಿ ಅವರ ನೇತೃತ್ವದಲ್ಲಿ ಸಮಿತಿ ರಚನೆ ಮಾಡಿದೆ.

ಹಿಂದುಳಿದ ವರ್ಗಗಳ ಪಟ್ಟಿಗೆ ಸೇರ್ಪಡೆ ಮಾಡುವ ಅಧಿಕಾರವನ್ನು ಕೇಂದ್ರ ಸರ್ಕಾರ ರಾಜ್ಯಗಳಿಗೆ  ನೀಡಿರುವುದರಿಂದ ರಾಜ್ಯ ಸರ್ಕಾರ ಈಗ ಬೇಡಿಕೆ ಇಟ್ಟಿರುವ ಸಮುದಾಯಗಳ ಬಗ್ಗೆ ಪರಿಶೀಲನೆ ನಡೆಸಲು ಈ ಸಮಿತಿಗೆ ಸೂಚಿಸಿದೆ. ಈ ಸಮಿತಿ ಪಂಚಮ ಸಾಲಿ ಸಮುದಾಯವನ್ನು 2ಎ ಪ್ರವರ್ಗಕ್ಕೆ ಸೇರಿಸುವ ಕುರಿತು ಪರಾಮರ್ಶಿಸಿ ವರದಿ ನೀಡಲು ಸೂಚಿಸಲಾಗಿದೆ. 2ಎ ಪ್ರವರ್ಗಕ್ಕೆ ಸೇರಿಸಲು ಸೂಕ್ತ ಕಾರಣ ನೀಡುವಂತೆ ಆದೇಶದಲ್ಲಿ ಸೂಚಿಸಲಾಗಿದೆ.

ಕುರುಬ ಸಮುದಾಯವನ್ನು ಎಸ್ಟಿ ಸಮುದಾಯಕ್ಕೆ ಸೇರಿಸಲು ಅವಕಾಶ ಇದೆಯಾ ಎನ್ನುವ ಬಗ್ಗೆಯೂ ಪರಿಶೀಲನೆ ನಡೆಸಲು ಸೂಚಿಸಲಾಗಿದೆ. ಅಲ್ಲದೆ ವಾಲ್ಮೀಕಿ ಸಮುದಾಯುದ ಮೀಸಲಾತಿ ಪ್ರಮಾಣವನ್ನು ಹೆಚ್ಚಳ ಮಾಡುವ ಕುರಿತು ನ್ಯಾಯಮೂರ್ತಿ ನಾಗಮೋಹನ ದಾಸ್ ಅವರು ನೀಡಿರುವ ವರದಿಯ ಶಿಫಾರಸ್ಸುಗಳನ್ನು ಪರಿಶೀಲಿಸಲು ಸೂಚಿಸಲಾಗಿದೆ.

ಅದೇ ರೀತಿ ವೀರಶೈವ ಲಿಂಗಾಯತ ಹಾಗೂ ಒಕ್ಕಲಿಗ ಸಮುದಾಯವನ್ನು ಕೇಂದ್ರದ ಮೀಸಲಾತಿ ಪಟ್ಟಿಯಲ್ಲಿ ಸೇರಿಸಲು ಅವಕಾಶ ಕಲ್ಪಿಸುವ ಬಗ್ಗೆಯೂ ಪರಿಶೀಲಿಸಲು ಸೂಚಿಸಲಾಗಿದೆ. ಅದರೊಂದಿಗೆ ಸಮಿತಿ ಬೇರೆ ಯಾವುದೇ ಶಿಫಾರಸ್ಸನ್ನು ಪರಿಶೀಲಿಸಲು ಅವಕಾಶ ಕಲ್ಪಿಸಲಾಗಿದೆ.

ನೂತನ ಸಮಿತಿ ಸದಸ್ಯರಾಗಿ ನಿವೃತ್ತ ಐಎಎಸ್ ಅಧಿಕಾರಿ ಎಂ.ಆರ್.ಕಾಂಬ್ಳೆ, ಕರ್ನಾಟಕ ಸಾಹಿತ್ಯ ಅಕಾಡೆಮಿ ಅಧ್ಯಕ್ಷ ಡಾ.ವಿ.ವಸಂತಕುಮಾರ್, ಪದನಿಮಿತ್ತ ಸದಸ್ಯ ಕಾರ್ಯದರ್ಶಿಯಾಗಿ ಡಾ.ಸಬೀರ್ ಅಹಮದ್ ಮುಲ್ಲಾ ಅವರನ್ನು ನೇಮಿಸಲಾಗಿದ್ದು, ಸಮಿತಿ ಅಧಿಕಾರ ವಹಿಸಿಕೊಂಡು ಸಮಾಜ ಕಲ್ಯಾಣ ಇಲಾಖೆ ಹಾಗೂ ಹಿಂದುಳಿದ ವರ್ಗಗಳ ಇಲಾಖೆ ಕಾರ್ಯದರ್ಶಿಗಳ ಜೊತೆಗೆ ಮೊದಲ ಸುತ್ತಿನ ಸಭೆ ನಡೆಸಿದೆ.

ಆಧಾರ: ಉದಯವಾಣಿ, ದಿನಾಂಕ:31.08.2021.

## 41. ಸಾರಿಗೆ ನಿಗಮಗಳ ಪುನಶ್ಚೇತನಕ್ಕೆ ತಜ್ಞರ ಸಮಿತಿ

ರಾಜ್ಯ ಸರ್ಕಾರಿ ಸ್ವಾಮ್ಯದ ನಾಲ್ಕು ಸಾರಿಗೆ ನಿಗಮಗಳ ಪುನಶ್ಚೇತನಕ್ಕೆ ತಜ್ಞರ ಸಮಿತಿ ನೇಮಿಸಲಾಗುವುದು ಎಂದು ಮುಖ್ಯಮಂತ್ರಿಯವರು ತಿಳಿಸಿದರು.

ವಿಧಾನಸೌಧದ ಬ್ಯಾಂಕ್ವೆಟ್ ಹಾಲ್‌ನಲ್ಲಿ ನಡೆದ ಕರ್ನಾಟಕ ರಾಜ್ಯ ರಸ್ತೆ ಸಾರಿಗೆ ನಿಗಮದ (ಕೆಎಸ್‌ಆರ್‌ಟಿಸಿ) 60ನೇ ವರ್ಷಾಚರಣೆ ಕಾರ್ಯಕ್ರಮದಲ್ಲಿ ನಾಲ್ಕು ಸಾರಿಗೆ ನಿಗಮಗಳ 60 ಮಂದಿ

ಚಾಲಕರಿಗೆ ಅಪಘಾತ ರಹಿತ ಚಾಲನೆಗಾಗಿ ಮುಖ್ಯಮಂತ್ರಿಯವರ ಚಿನ್ನದ ಪದಕ ಪ್ರದಾನ ಮಾಡಿ ಅವರು ಮಾತನಾಡಿದರು.

ವರಮಾನಗಳಿಸುವ ಮಾದರಿಯ ಆಧಾರದಲ್ಲಿ ಸಾರಿಗೆ ನಿಗಮಗಳು ಕಾರ್ಯನಿರ್ವಹಿಸುತ್ತಿವೆ. ಆದರೂ, ನಷ್ಟದ ಸುಳಿಗೆ ಏಕೆ ಸಿಲುಕಿವೆ ಎಂಬ ಪ್ರಶ್ನೆಗೆ ಉತ್ತರ ಕಂಡುಕೊಳ್ಳಬೇಕಿದೆ. ಸಮಸ್ಯೆಗೆ ಕಾರಣ ಮತ್ತು ಪುನಶ್ಚೇತನಕ್ಕೆ ಇರುವ ಅವಕಾಶಗಳ ಕುರಿತು ಅಧ್ಯಯನ ನಡೆಸುವಂತೆ ತಜ್ಞರ ಸಮಿತಿಗೆ ಸೂಚಿಸಲಾಗುವುದು. ಡಿಸೆಂಬರ್ ಅಂತ್ಯದೊಳಗೆ ಅಧ್ಯಯನ ವರದಿ ಪಡೆದು, ಮುಂದಿನ ಬಜೆಟ್‌ಲ್ಲಿ ಅಗತ್ಯ ಯೋಜನೆಗಳನ್ನು ಪ್ರಕಟಿಸಲಾಗುವುದು' ಎಂದರು.

ಸಾರಿಗೆ ನಿಗಮಗಳು ಅತ್ಯಾಧುನಿಕ ಕಾರ್ಯಾಗಾರ ಮತ್ತು ಯಂತ್ರೋಪಕರಣಗಳನ್ನು ಹೊಂದಿವೆ. ಅವುಗಳ ಸಮರ್ಪಕ ಬಳಕೆ ಕುರಿತು ಯೋಚಿಸಬೇಕಿದೆ. ಸರ್ಕಾರಿ ಸ್ವಾಮ್ಯದ ಕಾರ್ಯಗಾರಗಳಲ್ಲಿ ಖಾಸಗಿ ಬಸ್‌ಗಳಿಗೂ ಸೇವೆ ನೀಡುವ ಕುರಿತು ಪರಿಶೀಲನೆ ನಡೆಯಬೇಕಿದೆ. ಇರುವ ಎಲ್ಲ ಸಂಪನ್ಮೂಲಗಳನ್ನು ಬಳಸಿಕೊಂಡು ಈ ಸಂಸ್ಥೆಗಳನ್ನು ಲಾಭದಾಯಕವಾಗಿ ಪರಿವರ್ತಿಸಬೇಕು ಎಂದರು.

**ಹೆಚ್ಚಿನ ನೆರವು:** ಸಾರಿಗೆ ನಿಗಮಗಳಿಗೆ ಎಲ್ಲ ಅವಧಿಯಲ್ಲೂ ಸಹಕಾರ ದೊರಕಿದೆ. ಬಿ.ಎಸ್.ಯಡಿಯೂರಪ್ಪ ಅವರು ಮುಖ್ಯಮಂತ್ರಿಯಾಗಿದ್ದ ಅವಧಿಯಲ್ಲಿ ರೂ.2,300 ಕೋಟಿ ನೀಡಲಾಗಿತ್ತು. ತಾವು ಅಧಿಕಾರ ಸ್ವೀಕರಿಸಿದ ಬಳಿಕ ರೂ.130 ಕೋಟಿ ನೀಡಲಾಗಿದೆ ಎಂದು ಮುಖ್ಯಮಂತ್ರಿಯವರು ಮಾಹಿತಿ ನೀಡಿದರು.

ಸಮಾಜ ಕಲ್ಯಾಣ ಸಚಿವ ಕೋಟ ಶ್ರೀನಿವಾಸ ಪೂಜಾರಿ ಮಾತನಾಡಿ, 'ಸರ್ಕಾರಿ ಸ್ವಾಮ್ಯದ ಸಾರಿಗೆ ನಿಗಮಗಳು ರಾಜ್ಯದ ಸಾರಿಗೆ ಕ್ಷೇತ್ರದ ದಿಕ್ಸೂಚಿಯಾಗಿ ಬದಲಾಗಬೇಕು. ನಿಗಮಗಳು ಬಿಟ್ಟ ಮಾರ್ಗಗಳಲ್ಲಿ ಮಾತ್ರ ಖಾಸಗಿಯವರು ಬಸ್ ಓಡಿಸುವಂತಹ ಸ್ಥಿತಿ ನಿರ್ಮಾಣವಾಗಬೇಕು. ಆಗ ನಿಗಮಗಳು ಬಲಿಷ್ಠವಾಗಿ ಬೆಳೆಯಲು ಸಾಧ್ಯ' ಎಂದರು.

ಸಾರಿಗೆ ಸಚಿವ ಬಿ.ಶ್ರೀರಾಮುಲು ಮಾತನಾಡಿ, 'ನಾಲ್ಕು ನಿಗಮಗಳ ಎಲ್ಲ ಸಮಸ್ಯೆಗಳಿಗೆ ಪರಿಹಾರ ಒದಗಿಸುವುದಾಗಿ ಮುಖ್ಯಮಂತ್ರಿಯವರು ಭರವಸೆ ನೀಡಿದ್ದಾರೆ. ಈ ದಿಸೆಯಲ್ಲಿ ನೌಕರರು ಸಂಪೂರ್ಣ ಸಹಕಾರ ನೀಡಬೇಕು' ಎಂದು ಮನವಿ ಮಾಡಿದರು.

ಸಕಾಲ ಖಾತೆ ಸಚಿವ ಬಿ.ಸಿ.ನಾಗೇಶ್, ಆನ್‌ಲೈನ್ ಮೂಲಕ ಅಹವಾಲು ಸಲ್ಲಿಸುವ ವ್ಯವಸ್ಥೆಗೆ ಚಾಲನೆ ನೀಡಿ ಮಾತನಾಡಿದರು. ಸಾರಿಗೆ ನಿಗಮಗಳ ಸಿಬ್ಬಂದಿ, ಕುಟುಂಬದವರು ಹಾಗೂ ಮಕ್ಕಳಿಗೆ ಆನ್‌ಲೈನ್ ಮೂಲಕ ಕೌಶಲ ಅಭಿವೃದ್ಧಿ ತರಬೇತಿ ನೀಡುವ ಒಪ್ಪಂಧವನ್ನು ಕೆಎಸ್‌ಆರ್‌ಟಿಸಿ ವ್ಯವಸ್ಥಾಪಕ ನಿರ್ದೇಶಕ ಶಿವಯೋಗಿ ಕಳಸದ ಮತ್ತು ಇನ್ಫೋಸಿಸ್ ಕಂಪನಿಯ ಶಿಕ್ಷಣ, ತರಬೇತಿ ಮತ್ತು ಮೌಲ್ಯಮಾಪನ ವಿಭಾಗದ ಹಿರಿಯ ಉಪಾಧ್ಯಕ್ಷ ತಿರುಮಲ ಅರೋಹಿ ವಿನಿಮಯ ಮಾಡಿಕೊಂಡರು.

ಶಿವಾಜಿನಗರ ಶಾಸಕ ರಿಜ್ವಾನ್ ಅರ್ಷದ್ ಅಧ್ಯಕ್ಷತೆ ವಹಿಸಿದ್ದರು. ಕೆಎಸ್‌ಆರ್‌ಟಿಸಿ ಅಧ್ಯಕ್ಷ ಎನ್.ಎಸ್.ನಂದೀಶ್ ರೆಡ್ಡಿ, ಎಂ.ಆರ್.ವೆಂಕಟೇಶ್, ವಾಯುವ್ಯ ಕರ್ನಾಟಕ ಸಾರಿಗೆ ಸಂಸ್ಥೆ ಅಧ್ಯಕ್ಷ ವಿ.ಎಸ್,ಪಾಟೀಲ, ಉಪಾಧ್ಯಕ್ಷ ಬಸವರಾಜ ಎಸ್.ಕೇಲಗಾರ, ಸಾರಿಗೆ ಇಲಾಖೆ ಪ್ರಧಾನ ಕಾರ್ಯದರ್ಶಿ ರಾಜೇಂದರ್ ಕುಮಾರ್ ಕಟಾರಿಯಾ, ಮುಖ್ಯ ಪೋಸ್ಟ್ ಮಾಸ್ಟರ್ ಜನರಲ್ ಶಾರದಾ ಸಂಪತ್, ಬಿಎಂಟಿಸಿ ವ್ಯವಸ್ಥಾಪಕ ಎಂದು ಎಂ.ಟಿ. ರೇಜು ಉಪಸ್ಥಿತರಿದ್ದರು.

ಆಧಾರ: ಪ್ರಜಾವಾಣಿ, ದಿನಾಂಕ:04.09.2021.

## 42. ನ್ಯಾಯಾಂಗ, ಶಾಸಕಾಂಗ ಮಧ್ಯೆ ಉತ್ತಮ ಸಂಬಂಧ ಇರಬೇಕು

ನ್ಯಾಯಾಂಗವು ಪ್ರಜಾಪ್ರಭುತ್ವದ ಆಧಾರ ಎಂದು ಮುಖ್ಯಮಂತ್ರಿಯವರು ಹೇಳಿದರು. ಬೆಂಗಳೂರು ವಕೀಲರ ವತಿಯಿಂದ ವಿಧಾನಸೌಧದ ಬ್ಯಾಂಕ್ವೆಟ್ ಹಾಲ್‌ನಲ್ಲಿ ಆಯೋಜಿಸಿದ್ದ ಸರ್ವೋಚ್ಚ ನ್ಯಾಯಮೂರ್ತಿಗಳಾಗಿ ನೇಮಕಗೊಂಡಿರುವ ನ್ಯಾ. ಅಭಯ್ ಶ್ರೀನಿವಾಸ ಓಕಾ ಹಾಗೂ ಬಿ.ವಿ.ನಾಗರತ್ನ ಅವರ ಸನ್ಮಾನ ಕಾರ್ಯಕ್ರಮದಲ್ಲಿ ಮಾತನಾಡಿದರು.

ನ್ಯಾಯಾಂಗ ಮತ್ತು ಶಾಸಕಾಂಗದ ಮಧ್ಯೆ ಉತ್ತಮ ಸಂಬಂಧ ಇರಬೇಕು. ನ್ಯಾಯಾಂಗವು ಸಹ ಇಂದು ಸಂಸ್ಕೃತಿಯೇ ಎಂದು ಅಭಿಪ್ರಾಯಪಟ್ಟ ಮುಖ್ಯಮಂತ್ರಿಗಳು, ಸಂವಿಧಾನವು ಪ್ರಜಾಪ್ರಭುತ್ವದ ಆಧಾರದ ಮೇಲೆ ಕಲ್ಯಾಣ ರಾಜ್ಯವನ್ನು ಸ್ಥಾಪಿಸಬೇಕೆಂದು ಸಂವಿಧಾನ ರಚಿಸಿದ ಹಿರಿಯರು ಹೇಳಿದ್ದಾರೆ ಎಂದು ತಿಳಿಸಿದರು.

ಶಾಸಕಾಂಗ ಮತ್ತು ನ್ಯಾಯಾಂಗದ ನಡುವೆ ಪರಸ್ಪರ ಅವಲಂಬನೆ ಇದ್ದು, ಇದರಿಂದ ಎರಡೂ ಸಂಸ್ಥೆಗಳಲ್ಲಿ ಹೊಣೆಗಾರಿಕೆಯನ್ನು ಉಂಟು ಮಾಡುತ್ತದೆ. ಅಭಯ್ ಶ್ರೀನಿವಾಸ್ ಓಕಾ ಅವರು ವಿಶಿಷ್ಟ ಹಾಗೂ ಅತ್ಯುತ್ತಮ ಸಾಮರ್ಥ್ಯವುಳ್ಳ ನ್ಯಾಯಮೂರ್ತಿಗಳು, ನ್ಯಾಯಾಂಗ ವ್ಯವಸ್ಥೆಯಲ್ಲಿ ತಂದ ಬದಲಾವಣೆಗಳು ಗಮನಾರ್ಹವಾದುದ್ದು. ಅಪರಾಧಿಗಳಿಗೆ ತಿದ್ದಿಕೊಳ್ಳಲು ನೀಡುವ ಅವಕಾಶವೇ ಸೂಕ್ತ ಶಿಕ್ಷೆ ಎನ್ನುವ ಪದ್ಧತಿಯನ್ನು ಅಳವಡಿಸಿಕೊಂಡಿದ್ದರು ಎಂದರು.

ಕರ್ನಾಟಕದಿಂದ ಸರ್ವೋಚ್ಚ ನ್ಯಾಯಾಲಯಕ್ಕೆ ಅವರ ಪಯಣವನ್ನು ಓಕಾ ಅವರು ತೆಗೆದುಕೊಂಡು ಹೋಗಲಿದ್ದಾರೆ ಹಾಗೂ ಕರ್ನಾಟಕ ರಾಜ್ಯ ಅವರನ್ನು ಸದಾ ಸ್ಮರಿಸುತ್ತದೆ ಎಂದು ಹೇಳಿದರು.

ನ್ಯಾಯಮೂರ್ತಿ ಬಿ.ವಿ.ನಾಗರತ್ನ ಅವರು ಉನ್ನತ ಹುದ್ದೆಗೇರಿರುವುದರಿಂದ ಹೃದಯ ತುಂಬಿ ಬಂದಿದೆ. ಅತ್ಯಂತ ವಿನಮ್ರ ಹಾಗೂ ಸರಳ ಸ್ವಭಾವದವರು. ಸಾಮಾನ್ಯರು ಅವರನ್ನು ಸುಲಭವಾಗಿ ಮಾತನಾಡಿಸಬಹುದಾಗಿತ್ತು. ಅವರು ಕರ್ನಾಟಕದ ಸಂಸ್ಕಾರವನ್ನು ಪ್ರತಿನಿಧಿಸಲಿದ್ದಾರೆ ಎನ್ನುವುದು ನಮ್ಮ ಹೆಮ್ಮೆ. ನಾಗರಿಕತೆಯೊಂದಿಗೆ ಸಂಸ್ಕೃತಿ ಉಳಿದಾಗ ಮಾತ್ರ ದೇಶ ಸುಭಿಕ್ಷವಾಗುತ್ತದೆ. ಅವರು ಭಾರತದ ಮುಖ್ಯ ನ್ಯಾಯಾಧೀಶರಾಗಲಿ ಎಂದು ಹಾರೈಸಿದರು.

ಇದೊಂದು ಅಪರೂಪದ ಸಮಾರಂಭ. ಬಹಳಷ್ಟು ಮುಖ್ಯಮಂತ್ರಿಗಳಿಗೆ ಈ ಅವಕಾಶ ಸಿಕ್ಕಿಲ್ಲ. ಕರ್ನಾಟಕದ ಇಬ್ಬರು ಶ್ರೇಷ್ಠ ನ್ಯಾಯಮೂರ್ತಿಗಳು, ಸರ್ವೋಚ್ಚನ್ಯಾಯಾಲಯದ ನ್ಯಾಯಮೂರ್ತಿಗಳಾಗಿ ಉನ್ನತ ಹುದ್ದೆಗೆ ಏರಿರುವ ಹೊತ್ತಿನಲ್ಲಿ ಆತ್ಮೀಯವಾಗಿ ಸನ್ಮಾನಿಸುವ ಅವಕಾಶ ದೊರೆತಿರುವುದು ಸೌಭಾಗ್ಯ ಎಂದರು. ಉಚ್ಚ ನ್ಯಾಯಾಲಯದ ಮುಖ್ಯ ನ್ಯಾಯಾಧೀಶ ಸತೀಶ್ ಚಂದ್ರ ಶರ್ಮಾ, ಅಡ್ವೊಕೇಟ್ ಜನರಲ್ ಪ್ರಭುಲಿಂಗ್. ಕೆ.ನಾವಡಗಿ, ವಕೀಲರ ಸಂಘದ ಅಧ್ಯಕ್ಷ ಎ.ಪಿ.ರಂಗನಾಥ್ ಉಪಸ್ಥಿತರಿದ್ದರು.

ಆಧಾರ: ಉದಯವಾಣಿ, ದಿನಾಂಕ:05.09.2021.

## 43. ಕ್ಷೇತ್ರ ಪುನರ್ ವಿಂಗಡಣೆಗೆ ಆಯೋಗ ರಚನೆ

ಚುನಾವಣೆ ಸಂದರ್ಭದಲ್ಲಿ ಕ್ಷೇತ್ರಗಳ ಪುನರ್ ವಿಂಗಡಣೆ ಮಾಡಲು ರಾಜ್ಯ ಸರ್ಕಾರ ಪ್ರತ್ಯೇಕ ಕ್ಷೇತ್ರ ಪುನರ್ ವಿಂಗಡಣಾ ಆಯೋಗ ರಚನೆಗೆ ತೀರ್ಮಾನಿಸಿದೆ. ಈ ಮೂಲಕ ಸರ್ಕಾರ ತಾಲ್ಲೂಕು ಹಾಗೂ ಜಿಲ್ಲಾ ಪಂಚಾಯತ್ ಕ್ಷೇತ್ರಗಳ ಮರು ಪುನರ್ ವಿಂಗಡಣೆಗೆ ಮುಂದಾಗಿದ್ದು ಚುನಾವಣೆ ಮುಂದೂಡುವ ಲೆಕ್ಕಾಚಾರ ಹಾಕಿಕೊಂಡಿದೆ.

ಮುಖ್ಯಮಂತ್ರಿಯವರ ನೇತೃತ್ವದಲ್ಲಿ ನಡೆದ ಸಚಿವಸಂಪುಟ ಸಭೆಯಲ್ಲಿ ಈ ತೀರ್ಮಾನ ತೆಗೆದುಕೊಳ್ಳಲಾಗಿದ್ದು. ಚುನಾವಣಾ ಆಯೋಗಕ್ಕೆ ನೀಡಲಾಗಿರುವ ಪುನರ್ ವಿಂಗಡಣೆ ಮಾಡುವ ಅಧಿಕಾರವನ್ನು ರಾಜ್ಯ ಸರ್ಕಾರ ವಾಪಸ್ಸು ಪಡೆಯಲು ನಿರ್ಧರಿಸಿದೆ.

ಚುನಾವಣಾ ಆಯೋಗ ಯಾವುದೇ ವೈಜ್ಞಾನಿಕ ಮಾನದಂಡ ಅನುಸರಿಸದೇ ತಾಲ್ಲೂಕು ಮತ್ತು ಜಿಲ್ಲಾ ಪಂಚಾಯಿತಿ ಕ್ಷೇತ್ರಗಳಲ್ಲಿ ಪುನರ್ ವಿಂಗಡಣೆ ಮಾಡಿರುವುದರಿಂದ ಸಾಕಷ್ಟು ದೂರುಗಳು ಬಂದಿವೆ. ಈ ಪ್ರಕರಣ ಹೈಕೋರ್ಟ್‌ನಲ್ಲಿದೆ. ಹೈಕೋರ್ಟ್‌ಗೆ ರಾಜ್ಯ ಸರ್ಕಾರ ಪುನರ್ ವಿಂಗಡಣಾ ಆಯೋಗ ರಚನೆ ಮಾಡಿರುವ ಬಗ್ಗೆ ಮಾಹಿತಿ ನೀಡಲು ತೀರ್ಮಾನಿಸಲಾಗಿದೆ.

ಕ್ಷೇತ್ರ ಪುನರ್ ವಿಂಗಡಣೆ ಮಾಡಲು ಹೈಕೋರ್ಟ್ ಅನುಮತಿ ನೀಡಿದರೆ ಈಗಾಗಲೇ ರಾಜ್ಯ ಚುನಾವಣಾ ಆಯೋಗ ಹೊರಡಿಸಿರುವ ಕ್ಷೇತ್ರಗಳ ಮೀಸಲಾತಿ ಕೂಡ ಬದಲಾಗಲಿದೆ. ಸಭೆಯ ನಂತರ ಮಾತನಾಡಿದ ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವ ಜೆ.ಸಿ.ಮಧುಸ್ವಾಮಿ, ಕ್ಷೇತ್ರ ಪುನರ್ ವಿಂಗಡಣೆಗೆ ಪ್ರತೇಕ ಆಯೋಗ ರಚನೆ ಮಾಡುವುದರಿಂದ ಚುನಾವಣಾ ಆಯೋಗದ ಕೆಲಸ ಕಡಿಮೆಯಾಗಲಿದೆ. ಈ ಮೊದಲು ಕ್ಷೇತ್ರಗಳ ಪುನರ್ ವಿಂಗಡಣೆ ಮಾಡುವ ಜವಾಬ್ದಾರಿ ಸರ್ಕಾರಕ್ಕೆ ಇತ್ತು. ಈಗ ಅದನ್ನು ವಾಪಸ್ಸು ಪಡೆಯಲಾಗುತ್ತದೆ. ಕ್ಷೇತ್ರ ಪುನರ್ ವಿಂಗಡಣಾ ಆಯೋಗಕ್ಕೆ ರಾಜ್ಯ ಸರ್ಕಾರದ ನಿವೃತ್ತ ಹೆಚ್ಚುವರಿ ಮುಖ್ಯ ಕಾರ್ಯದರ್ಶಿ ಅಧ್ಯಕ್ಷರಾಗಿರುತ್ತಾರೆ. ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ ಪ್ರಧಾನ ಕಾರ್ಯದರ್ಶಿ ಪದನಿಮಿತ್ತ ಸದಸ್ಯರಾಗಿರುತ್ತಾರೆ.

**ಪ್ರಮುಖ ತೀರ್ಮಾನಗಳು:**

- ಕರ್ನಾಟಕ ರಾಜ್ಯ ಬೀಜ ನಿಗಮ ನಿಯಮಿತ ಇವರಿಗೆ ರಸಗೊಬ್ಬರ ಕಾಪು ದಾಸ್ತಾನು ಯೋಜನೆಗೆ ಬೇಕಾಗಿರುವ ರೂ.400 ಕೋಟಿ ದುಡಿಯುವ ಬಂಡವಾಳ ಸಾಲ ಸೌಲಭ್ಯಕ್ಕೆ ಸರ್ಕಾರದ ಗ್ಯಾರಂಟಿಯನ್ನು ನೀಡಲು ನಿರ್ಧಾರ.
- ಕರ್ನಾಟಕ ಉಪ ಖನಿಜ ರಿಯಾಯಿತಿ (ತಿದ್ದುಪಡಿ) ನಿಯಮಗಳು–2021ಕ್ಕೆ ಅನುಮೋದನೆ.
- ರಾಜ್ಯದಲ್ಲಿ ಬಂಡವಾಳ ಹೂಡಿಕೆಗಾಗಿ ಸಮಾಲೋಚಕ ಪಾಲುದಾರರಾಗಿರುವ ಮೆ|ಬೋಸ್ಟನ್ ಕನ್ಸಲಟಿಂಗ್ ಗ್ರೂಪ್ ಇಂಡಿಯಾ ಪ್ರೈವೇಟ್ ಲಿಮಿಟೆಡ್ (ಬಿಸಿಜಿ) ಸೇವೆಯನ್ನು ಮುಂದಿನ ಒಂದು ವರ್ಷದ ಅವಧಿಗೆ ವಿಸ್ತರಿಸಲು ಒಪ್ಪಿಗೆ. ವರ್ಷಕ್ಕೆ ರೂ.12 ಕೋಟಿ ಗೌರವ ಧನ ನೀಡಲು ತೀರ್ಮಾನ.
- ತಾಂತ್ರಿಕ ಶಿಕ್ಷಣ ಇಲಾಖೆಯ 3 ವರ್ಷಗಳ ಡಿಪ್ಲೋಮಾ ಕೋರ್ಸ್ ಶಿಕ್ಷಣವನ್ನು ಪಿಯುಸಿಗೆ ತತ್ಸಮಾನ ವಿದ್ಯಾರ್ಹತೆಯೆಂದು (ಉನ್ನತ ಶಿಕ್ಷಣ ಹಾಗೂ ಅನುಕಂಪದ ಆಧಾರದ ನೇಮಕಾತಿಗೆ)ಪರಿಗಣಿಸಲು ತೀರ್ಮಾನ.
- ಕರ್ನಾಟಕ ಕೊಳಗೇರಿ ಅಭಿವೃದ್ಧಿ ಮಂಡಳಿ ಹಾಗೂ ರಾಜೀವ್ ಗಾಂಧಿ ವಸತಿ ನಿಗಮ ವತಿಯಿಂದ ಅನುಷ್ಠಾನಗೊಳಿಸುತ್ತಿರುವ ಮನೆಗಳ ಟೆಂಡರ್ ಅನುಮೋದನೆಗೆ ಸಂಬಂಧಿಸಿದಂತೆ ಒಂದು ಲಕ್ಷ ಬಹುಮಹಡಿ ಬೆಂಗಳೂರು ವಸತಿ ಯೋಜನೆಯ 2,928 ಮನೆಗಳ 11 ಟೆಂಡರ್‌ಗಳಿಗೆ ಹಾಗೂ 4,556 ಮನೆಗಳ ಅಂದಾಜು ಪಟ್ಟಿಗೆ ಆಡಳಿತಾತ್ಮಕ ಅನುಮೋದನೆಗೆ ವಿಧಿಸಿದ ಷರತ್ತುಗಳಿಗೆ ವಿನಾಯಿತಿ ನೀಡಲು ಒಪ್ಪಿಗೆ.
- ಕರ್ನಾಟಕ ಗೃಹ ಮಂಡಳಿಯಿಂದ ಸೂರ್ಯನಗರ 2ನೇ ಹಂತದ ವಸತಿ ಯೋಜನೆಗಾಗಿ ಆನೇಕಲ್ ತಾಲ್ಲೂಕಿನ ಲಿಂಗಾಪುರ ಗ್ರಾಮದಲ್ಲಿ ಭೂಸ್ವಾದೀನಕ್ಕೆ ಒಳಪಡಿಸಿರುವ 110–118

ಎಕರೆ ಜಮೀನಿಗೆ ಭೂ ಮಾಲೀಕರ ಕೋರಿಕೆಯಂತೆ 50:50 ಅನುಪಾತದಡಿಯಲ್ಲಿ ಅಭಿವೃದ್ಧಿ ಪಡಿಸಲು ಅನುಮೋದನೆ.

- ಬೆಳಗಾವಿ ಜಿಲ್ಲೆ, ಸವದತ್ತಿ ತಾಲ್ಲೂಕಿನ ಸವದತ್ತಿ ಗ್ರಾಮದಲ್ಲಿನ 32ಎಕರೆ ಗ್ರಾಮೀಣ ಜಮೀನನ್ನು ಪವನ ವಿದ್ಯುತ್ ಯೋಜನೆಗಾಗಿ ರೋಹನ್ ಸೋಲಾರ್ ಪವನ ಪ್ರೈವೇಟ್ ಲಿಮಿಟೆಡ್ 30 ವರ್ಷಗಳ ಅವಧಿಗೆ ಗುತ್ತಿಗೆ ನೀಡಲು ತೀರ್ಮಾನ.
- ಬಂಜಾರ ಭವನ ನಿರ್ಮಾಣಕ್ಕಾಗಿ ಉಪಯೋಗಿಸಿಕೊಂಡಿರುವ ಖಾಸಗಿ ಜಮೀನಿಗೆ ಬದಲಾಗಿ ರಾಯಚೂರು ಜಿಲ್ಲೆಯ ರಾಯಚೂರು ತಾಲ್ಲೂಕಿನ ಸಿದ್ದಾರಾಂಪೂರ ಗ್ರಾಮದಲ್ಲಿ 4.20ಎಕರೆ ಸರ್ಕಾರಿ ಜಮೀನನ್ನು ರಾಜೇಶ್ ಪಿ. ಪಾಟೀಲ್ ಎಂಬುವವರಿಗೆ ಮಂಜೂರು ಮಾಡಲು ಒಪ್ಪಿಗೆ.
- ಭದ್ರಾ ಮೇಲ್ದಂಡೆ ಯೋಜನೆ ಪ್ಯಾಕೇಜ್ 1,2 ಮತ್ತು 3ರ ಕಾಮಗಾರಿಗಳಿಗೆ ಭೂಸ್ವಾಧೀನ ಪಡಿಸಿಕೊಂಡ ಜಮೀನುಗಳಿಗೆ ಹೈಕೋರ್ಟ್ ಮಧ್ಯಂತರ ಆದೇಶದಂತೆ ಬೆಲೆ ಮರು ನಿಗದಿ ಪಡಿಸಲು ಒಪ್ಪಿಗೆ ಇದರಿಂದ ಸರ್ಕಾರಕ್ಕೆ ಸುಮಾರು 1.97 ಕೋಟಿ ಹೆಚ್ಚುವರಿ ವೆಚ್ಚ ಆಗಲಿದೆ.
- ನೋಂದಣಿ ಮತ್ತು ಮುದ್ರಾಂಕ ಇಲಾಖೆಯ ಕಚೇರಿಗಳಿಗೆ ಯುಪಿಎಸ್ ಮತ್ತು ಬ್ಯಾಟರಿಗಳನ್ನು ರೂ.12.65 ಕೋಟಿ ವೆಚ್ಚದಲ್ಲಿ ಖರೀದಿಸಲು ಆಡಳಿತಾತ್ಮಕ ಅನುಮೋದನೆ ನೀಡಿರುವುದಕ್ಕೆ ಸಚಿವ ಸಂಪುಟದ ಘಟನೋತ್ತರ ಅನುಮೋದನೆ.
- 2021–22ನೇ ಸಾಲಿನಲ್ಲಿ ರಾಜ್ಯದ ಎಲ್ಲ ಐಟಿಐಗಳಲ್ಲಿ ತರಬೇತಿ ಪಡೆಯುತ್ತಿರುವ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿದ ವಿದ್ಯಾರ್ಥಿಗಳಿಗೆ ನೀಡಲು 13.061 ಟೂಲ್ ಕಿಟ್‌ಗಳನ್ನು ರೂ.17.18 ಕೋಟಿ ಅಂದಾಜು ವೆಚ್ಚದಲ್ಲಿ ಖರೀದಿಸಿ ವಿತರಿಸಲು ಒಪ್ಪಿಗೆ.
- ಕಾಂಗ್ರೆಸ್ ಸರ್ಕಾರದ ಅವಧಿಯಲ್ಲಿ ಸರ್ಕಾರಿ ವೈಮಾನಿಕ ತರಬೇತಿ ಶಾಲೆ ಜಕ್ಕೂರಿನಲ್ಲಿ ರಾಜೀವ್ ಗಾಂಧಿ ಏರೋ ಸ್ಪೋರ್ಟ್ಸ್ ಸೊಸೈಟಿ ಸ್ಥಾಪನೆ ಮಾಡಿರುವ ಆದೇಶವನ್ನು ಹಿಂಪಡೆದು, ಸಾರ್ವಜನಿಕ ಖಾಸಗಿ ಸಹಭಾಗಿತ್ವದಲ್ಲಿ ಅಭಿವೃದ್ಧಿ ಪಡಿಸಲು ನಿರ್ಧಾರ.
- ಕೊರೋನಾ ಮೂರನೇ ಅಲೆ ನಿರ್ವಹಣೆ ಸಂಬಂಧ ವಿವಿಧ ಔಷಧಗಳ ಖರೀದಿಗಾಗಿ ರೂ.17.72 ಕೋಟಿ ಮೊತ್ತಕ್ಕೆ ಅನುಮೋದನೆ.

ಆಧಾರ: ಉದಯವಾಣಿ, ದಿನಾಂಕ:05.09.2021.

## 44. ಮುಖ್ಯಮಂತ್ರಿ ರೈತ ವಿದ್ಯಾನಿಧಿಗೆ ಚಾಲನೆ

ರೈತರ ಮಕ್ಕಳ ಶಿಕ್ಷಣಕ್ಕೆ ಆರ್ಥಿಕ ನೆರವು ನೀಡುವ ಸರ್ಕಾರದ ಕನಸಿನ ಯೋಜನೆ 'ಮುಖ್ಯಮಂತ್ರಿ ರೈತ ವಿದ್ಯಾನಿಧಿ' ಯೋಜನೆಗೆ ಚಾಲನೆ ದೊರೆಯಿತು. ಯೋಜನೆ ಘೋಷಿಸಿದ ಅಂದಾಜು ತಿಂಗಳ ಅಂತರದಲ್ಲಿ ರೈತರ ಮಕ್ಕಳ ಖಾತೆಗೆ 'ಮುಖ್ಯಮಂತ್ರಿ ರೈತ ವಿದ್ಯಾನಿಧಿ' ಅನುಷ್ಠಾನಗೊಂಡಿದ್ದು ಮೊದಲ ದಿನವೇ ಪಿಯುಸಿ ವ್ಯಾಸಂಗ ಮಾಡುತ್ತಿರುವ ನೂರು ಗಂಡುಮಕ್ಕಳ ಹಾಗೂ 52 ಹೆಣ್ಣು ಮಕ್ಕಳಿಗೆ ಕ್ರಮವಾಗಿ ರೂ.2,500 ಹಾಗೂ 3,000 ಶಿಷ್ಯವೇತನ ನೇರ ನಗದು ವರ್ಗಾವಣೆ (ಡಿಬಿಟಿ) ರೂಪದಲ್ಲಿ ಜಮೆ ಆಗಿದೆ.

ವಿಧಾನಸೌಧದ ಬ್ಯಾಂಕ್ವೆಟ್ ಹಾಲ್‌ನಲ್ಲಿ ಕೃಷಿ ಇಲಾಖೆ ಹಮ್ಮಿಕೊಂಡಿದ್ದ ಕಾರ್ಯಕ್ರಮದಲ್ಲಿ ಮುಖ್ಯಮಂತ್ರಿಯವರು ಲ್ಯಾಪ್‌ಟಾಪ್‌ನಲ್ಲಿ ಗುಂಡಿ ಒತ್ತುತ್ತಿದ್ದಂತೆ ಫಲಾನುಭವಿಗಳಿಗೆ ಏಕಕಾಲದಲ್ಲಿ

ಶಿಷ್ಯವೇತನ ವರ್ಗಾವಣೆಗೊಂಡಿತು. ಮುಂದಿನ ದಿನಗಳಲ್ಲಿ ಮುಖ್ಯಮಂತ್ರಿಯವರು ಲ್ಯಾಪ್‌ಟಾಪ್‌ನಲ್ಲಿ ಗುಂಡಿ ಒತ್ತುತ್ತಿದ್ದಂತೆ ಫಲಾನುಭವಿಗಳಿಗೆ ಏಕಕಾಲದಲ್ಲಿ ಶಿಷ್ಯ ವೇತನ ವರ್ಗಾವಣೆಗೊಂಡಿತು. ಮುಂದಿನ ದಿನಗಳಲ್ಲಿ ಪಿಯುಸಿ, ಐಟಿಐ, ಡಿಪ್ಲೋಮಾ ಐಟಿಐ, ಡಿಪ್ಲೊಮೋದಿಂದ ಪದವಿ, ಸ್ನಾತಕೋತ್ತರ ಮತ್ತು ವೃತ್ತಿ ಪರ ಕೋರ್ಸ್‌ಗಳ ವ್ಯಾಸಂಗ ಮಾಡುತ್ತಿರುವ ಸುಮಾರು 18 ಲಕ್ಷ ರೈತ ಮಕ್ಕಳಿಗೆ ಕನಿಷ್ಠ 2,500 ರಿಂದ ಗರಿಷ್ಠ ರೂ.11 ಸಾವಿರ ವರೆಗೆ ಹಂತ–ಹಂತವಾಗಿ ಶಿಷ್ಯವೇತನ ವರ್ಗಾವಣೆ ಆಗಲಿದೆ.

ಕಾರ್ಯಕ್ರಮಕ್ಕೆ ಚಾಲನೆ ನೀಡಿ ಮಾತನಾಡಿದ ಮುಖ್ಯಮಂತ್ರಿಯವರು, 'ನನ್ನ ಮಕ್ಕಳಿಗೆ ಪಿಯುಸಿಯಲ್ಲಿ ಬಯಸಿದ ಕಾಲೇಜುಗಳಲ್ಲಿ ಪ್ರವೇಶ ದೊರೆತಾಗ ಸಿಕ್ಕಂತಹ ನೂರುಪಟ್ಟು ಹೆಚ್ಚು ಸಂಭ್ರಮ ಇಂದು ರೈತ ಮಕ್ಕಳಿಗೆ ಸ್ಕಾಲರ್‌ಶಿಪ್ ನೀಡುತ್ತಿರುವಾಗ ಆಗುತ್ತಿದೆ. ನನ್ನ ಪ್ರಕಾರ ಒಬ್ಬ ಜನಪ್ರತಿನಿಧಿಗೆ ತಾನು ಘೋಷಿಸಿದ ಯೋಜನೆ ಅತ್ಯಲ್ಪ ಅವಧಿಯಲ್ಲಿ ಅನುಷ್ಠಾನಗೊಳ್ಳುತ್ತಿರುವುದಕ್ಕಿಂತ ಹೆಚ್ಚಿನ ಸಂತೋಷ ಮತ್ತು ಸಾರ್ಥಕತೆ ಮತ್ತೊಂದಿಲ್ಲ. ಇದರ ಲಾಭ ಪಡೆದು, ರೈತ ಮಕ್ಕಳು ಭವಿಷ್ಯದಲ್ಲಿ ಸಮಾಜಕ್ಕೆ ದೊಡ್ಡ ಕೊಡುಗೆ ನೀಡಬೇಕು. ಆಗ, ಯೋಜನೆ ಮತ್ತಷ್ಟು ಸಾರ್ಥಕತೆ ಪಡೆದುಕೊಳ್ಳುತ್ತದೆ' ಎಂದು ಹೇಳಿದರು.

ಸರ್ಕಾರವು 18 ಲಕ್ಷ ರೈತ ಮಕ್ಕಳಿಗೆ ಒಟ್ಟರೆ ಸಾವಿರ ಕೋಟಿ ರೂ. ಶಿಷ್ಯ ವೇತನ ನೀಡಲಿದೆ. ಇದು ಸರ್ಕಾರದ ಮೇಲಿನ ಹೊರೆ ಅಲ್ಲ ಭವಿಷ್ಯದ ಆದಾಯಕ್ಕೆ ಹೂಡಿಕೆ ಅಷ್ಟೇ. ರೈತ ಮಕ್ಕಳ ವಿವಿಧ ಕ್ಷೇತ್ರಗಳಲ್ಲಿ ಉನ್ನತ ಸ್ಥಾನ ತಲುಪಿದಾಗ, ಇದರ ಲಾಭ ಸಮಾಜಕ್ಕೆ ದೊರೆಯಲಿದೆ ಎಂದು ಮುಖ್ಯಮಂತ್ರಿ ಪ್ರತಿಪಾದಿಸಿದರು.

**ಕೃಷಿ ಉತ್ಪನ್ನಗಳ ರಫ್ತಿಗೆ ಪ್ರತ್ಯೇಕ ಸೆಲ್:** ಕೇಂದ್ರ ಕೃಷಿ ರೈತರ ಕಲ್ಯಾಣ ಖಾತೆ ರಾಜ್ಯ ಸಚಿವೆ ಶೋಭಾ ಕರಂದ್ಲಾಜೆ, ರಾಜ್ಯ ಸರ್ಕಾರವು ಕೃಷಿ ಉತ್ಪನ್ನಗಳ ರಫ್ತಿಗೆ ಕೈಗಾರಿಕೆ ಇಲಾಖೆಯಲ್ಲಿ ಪ್ರತ್ಯೇಕ ಘಟಕ ನಿರ್ಮಿಸಬೇಕು. ಇದರಿಂದ ಹೆಚ್ಚು ಒತ್ತುಕೊಟ್ಟು ಕೆಲಸ ಮಾಡಲು ಅನುಕೂಲ ಆಗುತ್ತದೆ. ಆ ಘಟಕಗಳಿಗೆ ಕೃಷಿ ಮತ್ತು ತೋಟಗಾರಿಕೆ ಇಲಾಖೆಗಳ ಅಧಿಕಾರಿಯನ್ನು ಕೂಡ ನೇಮಿಸಲಾಗುವುದು. ಇದರಿಂದ ರೈತರಿಗೆ ಸಾಕಷ್ಟು ಅನುಕೂಲ ಆಗಲಿದೆ ಎಂದು ಹೇಳಿದರು.

ಕೃಷಿ ಸಚಿವ ಬಿ.ಸಿ. ಪಾಟೀಲ್ ಮಾತನಾಡಿ, ರಾಜ್ಯದಲ್ಲಿ ರೈತರಿಗೆ ತ್ವರಿತ ಸೇವೆಗಳನ್ನು ಒದಗಿಸಲು 60 ರೈತ ಸಂಜೀವಿನಿ ವಾಹನಗಳನ್ನು ಒದಗಿಸಲಾಗಿದೆ. ಇವು ಪರಿಣಾಮಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದು, ಮುಂದಿನ ದಿನಗಳಲ್ಲಿ ಎಲ್ಲ 743 ರೈತ ಸಂಪರ್ಕ ಕೇಂದ್ರಗಳಿಗೆ ತಲಾ ಒಂದು ಈ ಮಾದರಿಯ ವಾಹನಗಳನ್ನು ನೀಡಲು ಮುಖ್ಯಮಂತ್ರಿಗಳು ಅನುಮತಿ ನೀಡಬೇಕೆಂದು ಮನವಿ ಮಾಡಿದರು.

78 ಲಕ್ಷ ರೈತರಿಗೆ ಗುರುತಿನ ಚೀಟಿ ಹಾಗೂ ಆರ್‌ಟಿಸಿಗಾಗಿ ಅಲೆದಾಟ ಕೂಡ ತಪ್ಪಲಿದೆ. ಈ ನಿಟ್ಟಿನಲ್ಲಿ ಅವಕಾಶ ಕಲ್ಪಿಸಬೇಕು ಎಂದು ಕೋರಿದರು. ಸಚಿವರಾದ ಪ್ರಭು ಚೌವ್ಹಾಣ್, ಎನ್.ಮುನಿರತ್ನ, ನಾಗೇಶ್, ರಾಜ್ಯ ಸಾವಯವ ಮಿಷನ್ ಅಧ್ಯಕ್ಷ ಎ.ಎಸ್.ಆನಂದ್ ಮತ್ತಿತ್ತರು ಉಪಸ್ಥಿತರಿದ್ದರು.

ಆಧಾರ: ಉದಯವಾಣಿ, ದಿನಾಂಕ:06.09.2021.

## 45. ಆನ್‌ಲೈನ್ ಜೂಜು ಆಫ್‌ಗ್ಯಾಂಬ್ಲಿಂಗ್ ರಾಜ್ಯ ಸಚಿವ ಸಂಪುಟ ತೀರ್ಮಾನ

ರಾಜ್ಯದಲ್ಲಿ ಆನ್‌ಲೈನ್ ಜೂಜು ಅಥವಾ ಬೆಟ್ಟಿಂಗ್ ನಿಷೇಧ ಹೇರಲು ರಾಜ್ಯ ಸಚಿವ ಸಂಪುಟ ನಿರ್ಧರಿಸಿದೆ. ಇದಕ್ಕಾಗಿ ಕರ್ನಾಟಕ ಪೊಲೀಸ್ ಕಾಯ್ದೆ, 1963ಕ್ಕೆ ತಿದ್ದುಪಡಿ ತರಲಾಗುತ್ತದೆ. ಕಂಪ್ಯೂಟರ್ ಡಿವೈಸ್, ಮೊಬೈಲ್, ಮೊಬೈಲ್ ಆ್ಯಪ್, ಎಲೆಕ್ಟ್ರಾನಿಕ್ ಸಾಧನ ಬಳಸಿ ಆನ್‌ಲೈನ್ ಮೂಲಕ ಹಣದ ವ್ಯವಹಾರ ನಡೆಸುವ ಜೂಜಾಟವನ್ನು ನಿಷೇಧಿಸಲು ನಿರ್ಧರಿಸಲಾಗಿದೆ. ಲಾಟರಿ ಅಥವಾ ಕುದುರೆ ರೇಸ್

ಮೇಲೆ ಬೆಟ್ಟಿಂಗ್ ಮಾಡುವುದು ಈ ನಿಷೇಧದ ವ್ಯಾಪ್ತಿಗೆ ಬರುವುದಿಲ್ಲ ಎಂದು ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವ ಜೆ.ಸಿ.ಮಾಧುಸ್ವಾಮಿ ಹೇಳಿದ್ದಾರೆ.

ಈ ಕುರಿತು ಹೈಕೋರ್ಟ್‌ಗೆ ರಿಟ್ ಅರ್ಜಿಯೂ ಸಲ್ಲಿಕೆಯಾಗಿತ್ತು. ಆನ್‌ಲೈನ್ ಬೆಟ್ಟಿಂಗ್ ಕುರಿತು ಸ್ಪಷ್ಟ ನಿಲುವು ತೆಗೆದುಕೊಳ್ಳುವಂತೆ ಸರ್ಕಾರಕ್ಕೆ ರಾಜ್ಯ ಹೈಕೋರ್ಟ್ ಹಲವು ಬಾರಿ ತಾಕೀತು ಮಾಡಿತ್ತು. ಸಚಿವ ಸಂಪುಟವು ಕರ್ನಾಟಕ ಪೊಲೀಸ್ ಕಾಯ್ದೆ 1963ಕ್ಕೆ ತಿದ್ದುಪಡಿ ತರುವ ಕರಡು ವಿಧೇಯಕಕ್ಕೆ ಒಪ್ಪಿಗೆ ನೀಡಿದ್ದು, ಇದೇ 13 ರಿಂದ ಆರಂಭವಾಗಲಿರುವ ವಿಧಾನಸಭೆ ಅಧಿವೇಶನದಲ್ಲಿ ವಿಧೇಯಕವನ್ನು ಮಂಡಿಸಲಾಗುತ್ತದೆ ಎಂದು ಸಚಿವ ಮಾಧುಸ್ವಾಮಿ ತಿಳಿಸಿದ್ದಾರೆ.

**ಯಾವುದಕ್ಕೆ ನಿಷೇಧ:** ಆನ್‌ಲೈನ್ ಮೂಲಕ ಗೇಮ್ಸ್, ಬೆಟ್ಟಿಂಗ್, ಟೋಕನ್ ಮೂಲಕ ಹಣದ ಆಟ ಆಡುವುದು, ಎಲೆಕ್ಟ್ರಾನಿಕ್ ಮನಿ, ಯಾವುದೇ ಆಟಕ್ಕೆ ಆನ್‌ಲೈನ್ ಮೂಲಕ ಹಣ ವರ್ಗಾವಣೆ ಮಾಡುವುದಕ್ಕೆ ನಿಷೇಧವಿರಲಿದೆ. ನೇರವಾಗಿ ಅಥವಾ ಪರೋಕ್ಷವಾಗಿ ಆಟಗಳಿಗೆ ಹಣ ವರ್ಗಾವಣೆ ಮಾಡುವುದನ್ನು ನಿರ್ಬಂಧಿಸಲಾಗುತ್ತದೆ. ಕಂಪ್ಯೂಟರ್, ಮೊಬೈಲ್ ಆ್ಯಪ್, ಸೈಬರ್ ಸ್ಪೇಸ್, ಎಲೆಕ್ಟ್ರಾನಿಕ್ ಅಪ್ಲಿಕೇಷನ್, ಡ್ಯಾಕುಮೆಂಟ್ ರೆಕಾರ್ಡ್, ಇಂಟರ್‌ನೆಟ್, ವರ್ಚುವಲ್ ಪ್ಲಾಟ್ ಫಾರಂ ಮೂಲಕ ನಡೆವ ಆಟಗಳಿಗೂ ನಿಷೇಧವಿರಲಿದೆ ಎಂದು ಮಾಧುಸ್ವಾಮಿ ಹೇಳಿದ್ದಾರೆ.

**ಶಿಕ್ಷೆ ಪ್ರಮಾಣವು ಹೆಚ್ಚಳ:** ಈಗಿರುವ ಕಾಯ್ದೆಯಲ್ಲಿ ಆನ್‌ಲೈನ್ ಗ್ಯಾಂಬ್ಲಿಂಗ್ ನಿಷೇಧಕ್ಕೆ ಅವಕಾಶ ಇರಲಿಲ್ಲ. ತಿದ್ದುಪಡಿ ಮೂಲಕ ಶಿಕ್ಷೆಯ ಪ್ರಮಾಣವನ್ನು ಹೆಚ್ಚಳ ಮಾಡಲು ಸಂಪುಟ ನಿರ್ಧರಿಸಿದೆ. ಸೆಕ್ಷನ್ 78ಎ/3 ಪ್ರಕಾರ, ಈಗಿರುವ 1 ತಿಂಗಳ ಜೈಲು ಶಿಕ್ಷೆ ಪ್ರಮಾಣವನ್ನು 6 ತಿಂಗಳಿಗೆ ವಿಸ್ತರಿಸುವುದು, 1 ವರ್ಷದ ಶಿಕ್ಷೆ 3 ವರ್ಷಕ್ಕೆ ಹೆಚ್ಚಳ, ಈಗಿರುವ ರೂ.500 ದಂಡವನ್ನು ರೂ.10 ಸಾವಿರಗೆ ಹೆಚ್ಚಳ ರೂ.1000 ದಂಡ ರೂ.1 ಲಕ್ಷ ಕ್ಕೆ ಹೆಚ್ಚಳ ಮಾಡಲು ತೀರ್ಮಾನಿಸಲಾಗುತ್ತದೆ.

ಆಧಾರ: ಉದಯವಾಣಿ, ದಿನಾಂಕ:06.09.2021.

## 46. ರಾಜ್ಯದ ಯೋಜನೆಗಳಿಗೆ ಕೇಂದ್ರದ ಬಂಪರ್ ನೆರವು

ಎರಡು ದಿನಗಳ ದೆಹಲಿ ಪ್ರವಾಸವು ಬಹಳ ಫಲಪ್ರದವಾಗಿದ್ದು, ವಿವಿಧ ಇಲಾಖೆಯಲ್ಲಿನ ಬಾಕಿ ಉಳಿದಿರುವ ರಾಜ್ಯದ ಯೋಜನೆಗಳ ಬಗ್ಗೆ ಕೇಂದ್ರ ಸರ್ಕಾರ ಸಕಾರಾತ್ಮಕವಾಗಿ ಸ್ಪಂದಿಸಿದೆ ಎಂದು ಮುಖ್ಯಮಂತ್ರಿಯವರು ತಿಳಿಸಿದ್ದಾರೆ.

ಸುದ್ದಿಗಾರರ ಜೊತೆ ಮಾತನಾಡಿದ ಅವರು, ಕೇಂದ್ರ ಭೂ ಸಾರಿಗೆ ಮತ್ತು ಹೆದ್ದಾರಿ ಸಚಿವ ನಿತಿನ್ ಗಡ್ಕರಿ ಅವರನ್ನು ಭೇಟಿಯಾಗಿ ಹಲವು ಯೋಜನೆಗಳ ಬಗ್ಗೆ ಚರ್ಚೆ ನಡೆಸಿದ್ದೇವೆ. ನೆನೆಗುದಿಗೆ ಬಿದ್ದಿದ್ದ ಬೆಂಗಳೂರು ಹೊರವಲಯದ ದಾಬಸ್‌ಪೇಟೆಯಿಂದ ಹೊಸೂರುವರೆಗಿನ ಉಪನಗರ ರಿಂಗ್‌ರೋಡ್ ಅನ್ನು ಭಾರತ್ ಮಾಲಾ ಮೊದಲನೆ ಯೋಜನೆಯಡಿ ಕೈಗೊಳ್ಳಲಾಗಿದೆ. ಅದರ ಭೂಸ್ವಾಧೀನ ವಿವಾದವನ್ನು ಬಗೆಹರಿಸಲಾಗಿದೆ. ಮುಂದಿನ ಆರು ತಿಂಗಳಲ್ಲಿ ರಸ್ತೆ ನಿರ್ಮಾಣ ಕೆಲಸ ಪ್ರಾರಂಭವಾಗಲಿದೆ. ವಿಜಯಪುರ ಸಂಕೇಶ್ವರ ಹೆದ್ದಾರಿ ವಿಸ್ತರಣೆಗೆ ಒಪ್ಪಿಕೊಳ್ಳಲಾಗಿದ್ದು. ಡಿಪಿಆರ್ ನಡೆಯುತ್ತದೆ. ಇನ್ನೂ ನಾಲ್ಕು ಹೆದ್ದಾರಿಗಳನ್ನು ಭಾರತ್ ಮಾಲಾ ಎರಡನೇ ಹಂತದಲ್ಲಿ ತೆಗೆದುಕೊಳ್ಳಲು ಕೇಂದ್ರವು ಒಪ್ಪಿಕೊಂಡಿದೆ ಎಂದು ಮಾಹಿತಿ ನೀಡಿದರು.

ಶಿರಾಡಿ ಘಾಟ್ ರಸ್ತೆ ಕುರಿತು ಮಾತುಕತೆ ನಡೆಸಲಾಗಿದೆ. ಶಿರಾಡಿ ಘಾಟ್‌ನಲ್ಲಿ ನಾಲ್ಕು ಪಥದ ರಸ್ತೆ ನಿರ್ಮಾಣ ಮಾಡಬೇಕಾಗಿದೆ. ಅದನ್ನು ಸಹ ಮಾಡಿಕೊಡಲು ಕೇಂದ್ರ ಸಚಿವ ಗಡ್ಕರಿ ಆಶ್ವಾಸನೆ ನೀಡಿದ್ದಾರೆ. ಚತುಷ್ಪಥ ಮಾರ್ಗ ನಿರ್ಮಾಣದ ಬಗ್ಗೆ ಆದಷ್ಟು ಬೇಗ ಕಾಮಗಾರಿ ಪ್ರಾರಂಭಿಸಲು ಮಾತುಕತೆ ನಡೆಸಲಾಗಿದೆ ಎಂದರು.

**ರೈಲ್ವೆ ಯೋಜನೆ, ಜೆಇಎಸ್‌ಟಿ ಪರಿಹಾರ:** ಉಪ ನಗರ ರೈಲ್ವೆ ಮತ್ತು ಬೈಯಪ್ಪನಹಳ್ಳಿ ನಿಲ್ದಾಣದ ಕಾಮಗಾರಿ ಕೂಡಲೇ ತೆಗೆದುಕೊಳ್ಳಲು ರೈಲ್ವೆ ಸಚಿವರು ಭರವಸೆ ನೀಡಿದ್ದಾರೆ. ಪ್ರಮುಖ ಮಾರ್ಗಗಳ ಕುರಿತು ಸಹ ಚರ್ಚೆ ನಡೆಸಲಾಗಿದೆ. ತುಮಕೂರಿನಿಂದ ದಾವಣಗೆರೆ, ಹುಬ್ಬಳ್ಳಿಯಿಂದ ಬೆಳಗಾವಿ, ಬೀದರ್–ಕಲಬುರಗಿ ಮಾರ್ಗಗಳನ್ನು ಆದಷ್ಟು ಬೇಗ ಕಾರ್ಯಗತ ಮಾಡಬೇಕು ಎಂದು ಮನವಿ ಮಾಡಲಾಗಿದೆ. ರಾಜ್ಯದಿಂದ ಭೂಮಿ ನೀಡಬೇಕಾಗಿದ್ದು, ಶೇ.50ರಷ್ಟು ವೆಚ್ಚ ಭರಿಸಲು' ನಾವು ಸಿದ್ದರಿದ್ದೇವೆ ಎನ್ನುವ ಮಾಹಿತಿಯನ್ನು ನೀಡಲಾಗಿದೆ. ಕೇಂದ್ರ ಹಣಕಾಸು ಸಚಿವೆ ನಿರ್ಮಲಾ ಸೀತಾರಾಮನ್ ಅವರನ್ನು ಭೇಟಿಯಾಗಿ ಜಿಎಸ್‌ಟಿ ಪರಿಹಾರವನ್ನು ಮತ್ತೆ ಮುಂದುವರಿಸಬೇಕು. ನಬಾರ್ಡ್ ಯೋಜನೆಯನ್ನು ಕರ್ನಾಟಕಕ್ಕೆ ವಿಶೇಷ ಅನುಷ್ಠಾನ ಮಾಡಬೇಕು ಎಂದು ಕೋರಲಾಗಿದೆ. ಈ ಸಂಬಂಧ ಒಂದು ಸಭೆ ಮಾಡಲಾಗಿದ್ದು, ಮತ್ತೊಂದು ಸಭೆ ನಡೆಸಿ ಅವರೇ ಬಂದು ಪ್ರಾರಂಭಿಸುವುದಾಗಿ ಹೇಳಿದ್ದಾರೆ ಎಂದು ತಿಳಿಸಿದರು.

**ಆರ್‌ಸಿ ಜೊತೆ ಫಲಪ್ರದ ಮಾತುಕತೆ:** ಕೇಂದ್ರ ಕೌಶಲ್ಯಾಭಿವೃದ್ಧಿ ಇಲಾಖೆ ರಾಜ್ಯ ಸಚಿವ ರಾಜೀವ್ ಚಂದ್ರಶೇಖರ್ ಅವರನ್ನು ಭೇಟಿಯಾಗಿ ಮಾತುಕತೆ ನಡೆಸಲಾಗಿದೆ. ಗ್ರಾಮೀಣ ಭಾಗಗಳಲ್ಲಿ ಇಂಟರ್ನೆಟ್ ಸಂಪರ್ಕಕ್ಕೆ ವಿಶೇಷ ಕಾರ್ಯಕ್ರಮ ನೀಡುವ ಕುರಿತು ಚರ್ಚಿಸಲಾಗಿದೆ. ಡಿಜಿಟೈಸೇಶನ್ ಹೆಚ್ಚಿಸಲು ಕೇಂದ್ರ ಮತ್ತು ರಾಜ್ಯ ಸರ್ಕಾರ ಮಾತುಕತೆ ನಡೆಸಿ ಮುಂದುವರಿಯಬೇಕು ಎಂದಿದ್ದಾರೆ. ಬೆಂಗಳೂರು ಮತ್ತು ಕೋಲಾರ ಮಾರ್ಗದಲ್ಲಿ ಎಲೆಕ್ಟ್ರಾನಿಕ್ ಹಾರ್ಡ್‌ವೇರ್ ಪಾರ್ಕ್ ಅನ್ನು 400 ಎಕರೆ ಜಾಗದಲ್ಲಿ ನಿರ್ಮಿಸಲಾಗಿದೆ. ಆಪ್ಟಿಕಲ್ ಫೈಬರ್ ಕೇಬಲ್ ಜಾಲವನ್ನು ವಿಸ್ತರಣೆ ಮಾಡುವ ಯೋಜನೆಗೆ ಒಪ್ಪಿಗೆ ನೀಡಿದ್ದಾರೆ. ಸ್ಕಿಲ್ ವಿಶ್ವವಿದ್ಯಾಲಯ ಮಾಡಬೇಕು ಎನ್ನುವ ಉದ್ದೇಶ ಅವರಿಗಿದೆ ಎಂದರು.

ಆಧಾರ: ಕನ್ನಡ ಪ್ರಭು, ದಿನಾಂಕ:10.09.2021.

## 47. ಸ್ವಾತಂತ್ರ್ಯ ಹೋರಾಟಗಾರನಿಗೆ ಗೌರವಧನ ಕೊಡಲು ಆದೇಶ

ನನ್ನ ಜೊತೆ ಜೈಲುವಾಸ ಅನುಭವಿಸಿದವರಲ್ಲಿ ಕೇವಲ ಒಬ್ಬ ಬದುಕುಳಿದಿದ್ದು, ಇತರ ಸಹಬಂಧಿಗಳು ಮೃತಪಟ್ಟಿದ್ದಾರೆ ಎಂದು 2021ರ ಜನವರಿ 20 ರಂದು ಅರ್ಜಿದಾರ ಬರೆದಿರುವ ಪತ್ರದಲ್ಲಿ ಸ್ಪಷ್ಟವಾಗಿ ಹೇಳಿದ್ದಾರೆ ಇಬ್ಬರು ಸಹಬಂಧಿಗಳಿಂದ ಪ್ರಮಾಣ ಪತ್ರ ತರುವಂತೆ ಒತ್ತಾಯಿಸುವುದು ಮೃತ ದೇಹಗಳನ್ನು ಸಮಾಧಿಯಿಂದ ಹೊರತೆಗೆದು, ಅದಕ್ಕೆ ಜೀವ ತುಂಬಿ, ಪ್ರಮಾಣಪತ್ರ ಪಡೆಯಬೇಕು ಎನ್ನುವಂತಿದೆ ಎಂದು ಸರ್ಕಾರದ ನಿಯಮಕ್ಕೆ ಹೈಕೋರ್ಟ್ ಅತೃಪ್ತಿ ವ್ಯಕ್ತಪಡಿಸಿದೆ. ಶಾಸನಗಳು ವಿಧಿಸಿರುವ ಷರತ್ತುಗಳನ್ನು ಪಾಲಿಸುವುದು ಅಸಾಧ್ಯವೆನಿಸಿದಾಗ ಅವುಗಳನ್ನು ಪಾಲನೆ ಮಾಡಲಾಗಿದೆ ಎಂದೇ ಪರಿಗಣಿಸ ಬೇಕಾಗುತ್ತದೆಂದು ಅಭಿಪ್ರಾಯಪಟ್ಟಿರುವ ಹೈಕೋರ್ಟ್, ನಿಯಮ ಪಾಲನೆಯಾಗಿಲ್ಲ ಎಂಬ ಕಾರಣಕ್ಕೆ ಸ್ವಾತಂತ್ರ್ಯ ಹೋರಾಟಗಾರರೊಬ್ಬರಿಗೆ ಪಿಂಚಣಿ ನಿರಾಕರಿಸಿ ಸರ್ಕಾರ ನೀಡಿದ್ದ ಹಿಂಬರಹವನ್ನು ರದ್ದುಪಡಿಸಿ, ಗೌರವಧನ ಕೊಡಲು ಆದೇಶಿಸಿದೆ.

ಸ್ವಾತಂತ್ರ್ಯ ಹೋರಾಟಗಾರರಿಗೆ ನೀಡುವ ಗೌರವಧನ ಮಂಜೂರು ಮಾಡಲು ನಿರಾಕರಿಸಿದ್ದ ಸರ್ಕಾರದ ಕ್ರಮ ಪ್ರಶ್ನಿಸಿ ಬಳ್ಳಾರಿ ಜಿಲ್ಲೆಯ ಕಮಲಾಪುರ ನಿವಾಸಿ 94 ವರ್ಷದ ಗುಂಡೂರಾವ್ ದೇಸಾಯಿ ಸಲ್ಲಿಸಿದ್ದ ಅರ್ಜಿಯನ್ನು ಇತ್ತೀಚೆಗೆ ಮಾನ್ಯ ಮಾಡಿರುವ ನ್ಯಾಯಮೂರ್ತಿ ಕೃಷ್ಣ ಎಸ್. ದೀಕ್ಷಿತ್ ಅವರಿದ್ದ ಪೀಠ ಈ ಆದೇಶ ನೀಡಿದೆ. 1998ರ ಮಾರ್ಚ್ 19ರಿಂದ ಪೂರ್ವಾನ್ವಯವಾಗುವಂತೆ ಅರ್ಜಿದಾರರಿಗೆ ಪಿಂಚಣಿಯನ್ನು ಎಲ್ಲ ಹಿಂಬಾಕಿಗಳೊಂದಿಗೆ ಪಾವತಿಸಬೇಕು ಎಂದು ಗೃಹ ಇಲಾಖೆ, ಬಳ್ಳಾರಿ ಜಿಲ್ಲಾಧಿಕಾರಿ ಹಾಗೂ ಹೊಸಪೇಟೆ ಸಹಾಯಕ ಆಯುಕ್ತರಿಗೆ ನಿರ್ದೇಶಿಸಿದೆ. ಪಿಂಚಣಿಯನ್ನು 6 ವಾರಗಳ ಒಳಗೆ ಪಾವತಿಸಬೇಕು. ತಪ್ಪಿದರೆ, ಪ್ರತಿ ದಿನದ ವಿಳಂಬಕ್ಕೆ ತಲಾ ರೂ.1 ಸಾವಿರಗಳಂತೆ ಪಾವತಿಸಬೇಕು ಎಂದು ಪೀಠ ಸೂಚಿಸಿದೆ.

ಆಧಾರ: ವಿಜಯವಾಣಿ, ದಿನಾಂಕ:10.09.2021.

## 48. ತೆರವು ಕಾರ್ಯಕ್ಕೆ 93 ದೇಗುಲಗಳ ಪಟ್ಟಿ ಸಿದ್ಧ

ಸಾಂಸ್ಕೃತಿಕ ನಗರಿ ಮೈಸೂರಿನಲ್ಲಿರುವ 93 ಧಾರ್ಮಿಕ ಕಟ್ಟಡಗಳ ತೆರವಿಗೆ ಮಹಾನಗರ ಪಾಲಿಕೆ ಮುಂದಾಗಿದ್ದು, ಇದಕ್ಕೆ ಭಾರೀ ವಿರೋಧ ವ್ಯಕ್ತವಾಗುತ್ತಿದೆ. ಸರ್ಕಾರದ ಜಾಗ, ಸಾರ್ವಜನಿಕ ಸ್ಥಳ, ರಸ್ತೆ ಬದಿಯಲ್ಲಿ ಅನಧಿಕೃತವಾಗಿ ಧಾರ್ಮಿಕ ಕಟ್ಟಡಗಳಿದ್ದರೆ, ಅವುಗಳನ್ನು ತೆರವು ಮಾಡುವಂತೆ ಸುಪ್ರೀಂ ಕೋರ್ಟ್ 2013ರಲ್ಲಿ ನೀಡಿದ್ದ ತೀರ್ಪಿನ ಹಿನ್ನೆಲೆಯಲ್ಲಿ ಈ ಕ್ರಮ ತೆಗೆದುಕೊಳ್ಳಲಾಗುತ್ತದೆ. ಜೊತೆಗೆ ಈಗಾಗಲೇ ಕೆಲವೊಂದು ಧಾರ್ಮಿಕ ಕಟ್ಟಡಗಳನ್ನು ತೆರವು ಮಾಡಲಾಗಿದೆ.

ಈ ನಡುವೆ, ಸಾರ್ವಜನಿಕರಿಂದ ಭಾರೀ ಆಕ್ರೋಶ ವ್ಯಕ್ತವಾಗಿರುವ ಕಾರಣ, ತೆರವು ಕಾರ್ಯಾಚರಣೆ ಸ್ಥಗಿತ ಮಾಡಲಾಗಿದೆ. ಜೊತೆಗೆ ಈವರೆಗೆ ತೆರವು ಮಾಡಿರುವ ಕಟ್ಟಡಗಳು, ಪಟ್ಟಿಯಲ್ಲಿರುವ ಕಟ್ಟಡಗಳ ಬಗ್ಗೆ ಸರ್ಕಾರಕ್ಕೆ ವರದಿ ನೀಡಲು ಮುಂದಾಗಿದೆ.

**93 ಕಟ್ಟಡಗಳ ಗುರುತು:** ನಗರದ ವಿವಿಧ ಭಾಗಗಳಲ್ಲಿ ಇರುವ 88 ಹಿಂದೂ ದೇಗುಲ, ಸೇಂಟ್ ಮೇರಿಸ್ ರಸ್ತೆಯ ಸಿಎಸ್ಐ ಚರ್ಚ್, ದೇವರಾಜ್ ಅರಸು ರಸ್ತೆಯಲ್ಲಿನ ಗೋರಿ, ರೋಟರಿ ಶಾಲೆಯ ಪಕ್ಕದಲ್ಲಿರುವ ಗೋರಿ, ಪೀಪಲ್ಸ್ ಪಾರ್ಕ್ ಬಳಿಯ ಗೋರಿ ಹಾಗೂ ಕಾಂತರಾಜ ಅರಸ್ ರಸ್ತೆಯಲ್ಲಿನ ದರ್ಗಾ ಸೇರಿ ಒಟ್ಟು 93 ಧಾರ್ಮಿಕ ಕಟ್ಟಡಗಳನ್ನು ನೆಲಸಮ ಮಾಡಲು ಜಿಲ್ಲಾಡಳಿತ ಮತ್ತು ಮಹಾನಗರ ಪಾಲಿಕೆ ಮುಂದಾಗಿದೆ.

ಈಗಾಗಲೇ ಐದಕ್ಕೂ ಹೆಚ್ಚು ದೇಗುಲಗಳನ್ನು ತೆರವು ಮಾಡಿದ್ದು ಉಳಿದ ದೇಗುಲಗಳ ತೆರವಿಗೆ ದೇವಾಲಯ ಸಮಿತಿಗಳಿಗೆ ಪಾಲಿಕೆ ನೋಟಿಸ್ ನೀಡಿದೆ. ಇದರಿಂದ ಕುಪಿತಗೊಂಡಿರುವ ದೇವಸ್ಥಾನ ಆಡಳಿತ ಮಂಡಳಿ, ಜನಪ್ರತಿನಿಧಿಗಳು ಹಾಗೂ ಸಾರ್ವಜನಿಕರು ದೇಗುಲಗಳನ್ನು ತೆರವು ಮಾಡದಂತೆ ಆಗ್ರಹಿಸಿದ್ದಾರೆ. ನಂಜನಗೂಡು ಉಚ್ಚಗಣಿ ಗ್ರಾಮದ ಆದಿಶಕ್ತಿ ಮಹದೇವಮ್ಮ ದೇವಾಲಯವನ್ನು ರಾತ್ರೋರಾತ್ರಿ ಜಿಲ್ಲಾಡಳಿತ ತೆರವು ಮಾಡಿರುವ ಸಂಬಂಧ ರಾಜ್ಯಾದ್ಯಂತ ವಿರೋಧ ವ್ಯಕ್ತವಾದ ಹಿನ್ನೆಲೆ ಜಿಲ್ಲಾಢಳಿತ ಅನಧಿಕೃತ ಧಾರ್ಮಿಕ ಕಟ್ಟಡಗಳ ತೆರವು ಕಾರ್ಯಾಚರಣೆಯನ್ನು ತಾತ್ಕಾಲಿಕವಾಗಿ ಸ್ಥಗಿತಗೊಳಿಸಿದೆ.

ಆಧಾರ: ಉದಯವಾಣಿ, ದಿನಾಂಕ:13.09.2021.

## 49. ಶುಲ್ಕ ವಿನಾಯಿತಿ ಶೇ.15 ಮಾತ್ರ

ಖಾಸಗಿ ಮತ್ತು ಅನುದಾನಿತ ಶಾಲೆಗಳು ಶೇ.30ರಷ್ಟು ಶುಲ್ಕ ಕಡಿತ ಮಾಡಬೇಕು ಎಂಬ ರಾಜ್ಯ ಸರ್ಕಾರದ ಆದೇಶವನ್ನು ರದ್ದುಪಡಿಸಿರುವ ಹೈಕೋರ್ಟ್, ವಿನಾಯಿತಿ ಪ್ರಮಾಣವನ್ನು ಶೇ.15ಕ್ಕೆ ಇಳಿಸಿ ಆದೇಶ ಹೊರಡಿಸಿದೆ.

ಕೊರೋನಾ ಹಿನ್ನೆಲೆ ಮತ್ತು ಭೌತಿಕ ತರಗತಿಗಳು ನಡೆಯದೆ ಇರುವುದರಿಂದ ಶಾಲಾ ಶುಲ್ಕದಲ್ಲಿ ಶೇ.30 ರಷ್ಟು ಕಡಿತ ಮಾಡಬೇಕು ಎಂದು ಸರ್ಕಾರ ಆದೇಶಿಸಿದ್ದನ್ನು ಪ್ರಶ್ನಿಸಿ ಪ್ರಾಥಮಿಕ ಮತ್ತು ಪ್ರೌಢ ಶಾಲೆಗಳ ಆಡಳಿತ ಮಂಡಳಿಗಳ ಒಕ್ಕೂಟ (ಕ್ಯಾಮ್ಸ್) ಸೇರಿ ಹಲವು ಸಂಘಟನೆಗಳು ಹೈಕೋರ್ಟ್ ಮೆಟ್ಟಿಲೇರಿದ್ದವು. ಈ ಅರ್ಜಿಗಳನ್ನು ಆಲಿಸಿ ತೀರ್ಪು ಕಾಯ್ದಿರಿಸಿದ್ದ ನ್ಯಾ.ಆರ್.ದೇವದಾಸ್ ಅವರಿದ್ದ ಏಕಸದಸ್ಯ ಪೀಠ 2019-20ನೇ ಸಾಲಿನಲ್ಲಿ ಸಂಗ್ರಹಿಸಿದ ಶುಲ್ಕದಲ್ಲಿ ಶೇ.15 ರಷ್ಟು ವಿನಾಯಿತಿ ನೀಡಿ 2020-21ನೇ ಸಾಲಿನ ಶುಲ್ಕ ಸಂಗ್ರಹಿಸಬಹುದು ಎಂದು ಹೇಳಿದೆ.

ಜೋಧ್‌ಪುರದ ಇಂಡಿಯನ್ ಸ್ಕೂಲ್ ವರ್ಸಸ್ ರಾಜಾಸ್ಥಾನ ಪ್ರಕರಣದಲ್ಲಿ ಸುಪ್ರೀಂಕೋರ್ಟ್ ಶೇ.15 ರಷ್ಟು ವಿನಾಯಿತಿ ನೀಡಿ. ಶೇ.85ರಷ್ಟು ಶುಲ್ಕ ಸಂಗ್ರಹಕ್ಕೆ ಶಾಲೆಗಳಿಗೆ ಅವಕಾಶ ನೀಡಿತ್ತು. ಈ

ತೀರ್ಪನ್ನು ಆಧರಿಸಿ ಹೈಕೋರ್ಟ್ ರಾಜ್ಯದಲ್ಲೂ ಖಾಸಗಿ ಶಾಲೆಗಳಿಗೆ 2020–21ನೇ ಸಾಲಿಗೆ ಶುಲ್ಕ ವಿನಾಯಿತಿ ಮಿತಿಯನ್ನು ಶೇ.15ಕ್ಕೆ ಸೀಮಿತಗೊಳಿಸಿದೆ.

**ಈ ವರ್ಷಕ್ಕೂ ಶೇ.30ರಷ್ಟು ವಿನಾಯಿತಿ:** ಈ ನಡುವೆ ಹೈಕೋರ್ಟ್ ಶೇ.15 ಶುಲ್ಕ ವಿನಾಯಿತಿ ನೀಡಿದ್ದರು ತಮ್ಮ ಸಂಘಟನೆ ಅಡಿ ಬರುವ ಶಾಲೆಗಳಲ್ಲಿ ಈ ವರ್ಷವು ಶೇ.30ರಷ್ಟು ಶುಲ್ಕ ವಿನಾಯಿತಿ ನೀಡುವುದಾಗಿ ರುಪ್ಸಾ ಸಂಘಟನೆ ಹೇಳಿದೆ.

**ಖಾಸಗಿ ಶಾಲೆಗಳ ವಾದವೇನಿತ್ತು:**

- ಕೋವಿಡ್ ಇದ್ದಾಗಲೂ ಖಾಸಗಿ ಶಾಲೆಗಳು ಆನ್‌ಲೈನ್‌ನಲ್ಲಿ ತರಗತಿ ನಡೆಸಿವೆ. ಶಿಕ್ಷಕರು, ಸಿಬ್ಬಂದಿಗಳಿಗೆ ವೇತನ ಪಾವತಿಸಲಾಗಿದೆ. ಶಾಲೆಗಳು ಆರ್ಥಿಕ ಸಂಕಷ್ಟದಲ್ಲಿವೆ.
- ಖಾಸಗಿ ಶಾಲೆಗಳ ಶುಲ್ಕವನ್ನು ನಿಗದಿಪಡಿಸುವ ಅಧಿಕಾರ ಸರ್ಕಾರಕ್ಕಿಲ್ಲ ಎಂದು ಸುಪ್ರಿಂಕೋರ್ಟ್ ಹೇಳಿದೆ.
- ಹಲವು ಪೋಷಕರು ಶುಲ್ಕ ಭರಿಸುವ ಸ್ಥಿತಿಯಲ್ಲಿದ್ದರೂ ಸರ್ಕಾರದ ಆದೇಶದಿಂದಾಗಿ ಪಾವತಿ ಮಾಡುತ್ತಿಲ್ಲ.

**ಪರಿಣಾಮಗಳೇನು:**

- ಕಳೆದ ವರ್ಷ ಪೂರ್ಣ ಶುಲ್ಕ ವಸೂಲಿ ಮಾಡಿದ ಶಾಲೆಗಳು ಹೆಚ್ಚುವರಿ ಹಣ ವಾಪಸ್ ಕೊಡಬೇಕು.
- ತೀರ್ಪಿನಿಂದ ಖಾಸಗಿ ಶಿಕ್ಷಣ ಸಂಸ್ಥೆಗಳಿಗೆ ಎಲ್ಲರಿಂದಲೂ ಶುಲ್ಕ ಸಂಗ್ರಹಿಸಲು ಅನುಕೂಲವಾಗಲಿದೆ.
- ಸಮರ್ಪಕ ಶುಲ್ಕ ಸಂಗ್ರಹವಾದರೆ ಶಿಕ್ಷಣ ಸಂಸ್ಥೆಗಳ ಆರ್ಥಿಕ ಸ್ಥಿತಿ ಸುಧಾರಿಸಬಹುದು.
- ಶಿಕ್ಷಕರು ಹಾಗೂ ಬೋಧಕೇತರ ಸಿಬ್ಬಂದಿಗೆ ಪೂರ್ಣ ಪ್ರಮಾಣದಲ್ಲಿ ಸಂಬಳ ಸಿಗಬಹುದು.
- ಕಳೆದ ಸಾಲಿನಲ್ಲಿ ಶೇ.70 ರಷ್ಟು ಶುಲ್ಕ ಕಟ್ಟಿಸಿಕೊಂಡಿರುವ ಶಾಲೆಗಳು ಹೆಚ್ಚುವರಿ ಶುಲ್ಕ ಕೇಳುವ ಸಾಧ್ಯತೆ.
- 2021–22ನೇ ಸಾಲಿನ ಶುಲ್ಕ ಬಗ್ಗೆ ಸ್ಪಷ್ಟತೆ ಇಲ್ಲದಿರುವುದರಿಂದ ಗೊಂದಲ ಮುಂದುವರಿಯಲಿದೆ.

**ಹೈಕೋರ್ಟ್ ನಡೆಯೇನಿತ್ತು:** ಖಾಸಗಿ ಶಾಲೆಗಳ ಶುಲ್ಕ ಪಡೆಯುವಾಗ ಪ್ರತಿಯೊಬ್ಬ ಪೋಷಕರ ಅಹವಾಲು ಪರಿಗಣಿಸಬೇಕು ಎಂದು ಹೈಕೋರ್ಟ್ ಮಧ್ಯಂತರ ಆದೇಶದಲ್ಲಿ ಹೇಳಿತ್ತು. ಮಧ್ಯಂತರ ಅರ್ಜಿ ಸಲ್ಲಿಸಿದ್ದ ಸರ್ಕಾರ ಹೈಕೋರ್ಟ್ ನಿವೃತ್ತ ನ್ಯಾಯಮೂರ್ತಿ ನೇತೃತ್ವದ ಸಮಿತಿ ರಚನೆಗೆ ಪ್ರಸ್ತಾವ ಮುಂದಿಟ್ಟಿತ್ತು.

**2021–22ನೇ ಸಾಲಿನ ಪ್ರಸ್ತಾಪವಿಲ್ಲ:** ಹೈಕೋರ್ಟ್ ಸೂಚಿಸಿದ ಶೇ.15ರಷ್ಟು ಶುಲ್ಕ ವಿನಾಯಿತಿ ಕಳೆದ ಶೈಕ್ಷಣಿಕ ವರ್ಷಕ್ಕೆ ಸೀಮಿತವೇ 2021–22ನೇ ಸಾಲಿಗೂ ಅನ್ವಯವೇ ಎನ್ನುವುದರ ಸ್ಪಷ್ಟತೆ ಇಲ್ಲ. ಕೆಲವು ಖಾಸಗಿ ಶಾಲೆಗಳು ಹಾಲಿ ಸಾಲಿಗೆ ಶೇ.20 ರಿಂದ ಶೇ.40 ರಷ್ಟು ಶುಲ್ಕ ಏರಿಸಿವೆ ಎಂದು

ಪೋಷಕರು ದೂರಿದ್ದಾರೆ. ಶೇ.15 ರಷ್ಟು ವಿನಾಯಿತಿ ಈ ವರ್ಷಕ್ಕೂ ಅನ್ವಯಿಸಬೇಕು ಎಂದು ಕೆಲವರು ಕೋರಿದ್ದಾರೆ.

ಆಧಾರ:ವಿಜಯ ಕರ್ನಾಟಕ, ದಿನಾಂಕ:17.09.2021.

## 50. ಆಗಸ್ಟ್ 1 ರಿಂದ ಇಲಾಖಾ ಮುಖ್ಯಸ್ಥರಿಗೆ 'ಇ–ಆಫೀಸ್' ಕಡ್ಡಾಯ

ಜಿಲ್ಲಾಧಿಕಾರಿಗಳು, ಜಿಲ್ಲಾ ಪಂಚಾಯತಿಗಳ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು ಮತ್ತು ಇಲಾಖೆಗಳ ಮುಖ್ಯಸ್ಥರು ತಮ್ಮ ಪ್ರಸ್ತಾವನೆ ಪತ್ರಗಳು, ವರದಿಗಳನ್ನು ಅಗಸ್ಟ್–1ರಿಂದ ಸಂಬಂಧಪಟ್ಟ ಕಾರ್ಯದರ್ಶಿಗಳಿಗೆ 'ಇ–ಆಫೀಸ್' ತಂತ್ರಾಂಶದ ಮೂಲಕವೇ ಕಳುಹಿಸಬೇಕು ಎಂದು ಮುಖ್ಯ ಕಾರ್ಯದರ್ಶಿ ಪಿ. ರವಿಕುಮಾರ್ ಆದೇಶ ಹೊರಡಿಸಿದ್ದಾರೆ.

ಕಾರ್ಯದರ್ಶಿಗಳು ಸಾಧ್ಯವಾದಷ್ಟು ತಮ್ಮ ಹಂತದಲ್ಲೇ ಕಡತಗಳನ್ನು ವಿಲೇವಾರಿ ಮಾಡಬೇಕು ಅಥವಾ ಸಂಬಂಧಿಸಿದ ಸಚಿವರಿಗೆ ಆದೇಶಕ್ಕಾಗಿ ಕಳುಹಿಸಬೇಕು. ಹೆಚ್ಚುವರಿ ಮಾಹಿತಿ ವಿಶೇಷ ಪ್ರಕರಣಗಳಲ್ಲಿ ಅಥವಾ ಸಚಿವ ಸಂಪುಟದ ಟಿಪ್ಪಣಿಯ 'ಇ–ಆಫೀಸ್' ಕಡತಗಳನ್ನು ಮಾತ್ರ ಉಪ ಕಾರ್ಯದರ್ಶಿಗೆ ಕಳುಹಿಸಬಹುದು ಸಚಿವಾಲಯಗಳಿಗೆ ಕಳುಹಿಸುವ ಕಡತಗಳನ್ನು 'ಇ–ಆಫೀಸ್' ನಲ್ಲೇ ಸಲ್ಲಿಸಬೇಕು ಎಂದು ಅವರು ಆದೇಶದಲ್ಲಿ ಸ್ಪಷ್ಟಪಡಿಸಿದ್ದಾರೆ.

ಈ ಆದೇಶವನ್ನು ಉಲ್ಲಂಘಿಸಿದರೆ, ಅಂಥ ಅಧಿಕಾರಿಗಳ ಮೇಲೆ ಕ್ರಮ ತೆಗೆದುಕೊಳ್ಳಲಾಗುವುದು ಎಂದು ಅವರು ಎಚ್ಚರಿಕೆ ನೀಡಿದ್ದಾರೆ.

ಆಧಾರ: ಪ್ರಜಾವಾಣಿ, ದಿನಾಂಕ:17.09.2021

## 51. ಅಧಿಕಾರಿಗಳ ಅನಪೇಕ್ಷಿತ ಹೇಳಿಕೆಗೆ ಲಗಾಮು

ಜನಪ್ರತಿನಿಧಿಗಳ ವಿರುದ್ಧವೇ ಬಹಿರಂಗ ಹೇಳಿಕೆ ನೀಡುತ್ತಿರುವ ಅಧಿಕಾರಿಗಳ ವರ್ತನೆಗೆ ಶಾಸಕರು ಸದನದಲ್ಲಿ ಆಕ್ಷೇಪ ವ್ಯಕ್ತಪಡಿಸಿದ ಬೆನ್ನಲ್ಲೇ ಸರ್ಕಾರ ಅಧಿಕಾರಿಗಳ ಅನಪೇಕ್ಷಿತ ಹೇಳಿಕೆ ನಿರ್ಬಂಧಿಸಿ ಮುಖ್ಯ ಕಾರ್ಯದರ್ಶಿ ಪಿ.ರವಿಕುಮಾರ್ ಸುತ್ತೋಲೆ ಹೊರಡಿಸಿದ್ದಾರೆ. ಸಾಮಾಜಿಕ ಮಾಧ್ಯಮಗಳಲ್ಲಿ ಯಾವುದೇ ಅಧಿಕಾರಿ ಸರ್ಕಾರದ ಸಾಧನೆ ತನ್ನದೆಂದು ಬಿಂಬಿಸುವುದನ್ನು ಕಡ್ಡಾಯವಾಗಿ ನಿರ್ಬಂಧಿಸಲಾಗಿದೆ.

ಅಧಿಕಾರಿಗಳು ಅಧಿಕೃತ ಕರ್ತವ್ಯ ನಿರ್ವಹಣೆ ಹೊರತುಪಡಿಸಿ ಪತ್ರಿಕಾಗೋಷ್ಠಿ/ಪತ್ರಿಕಾ ಪ್ರಕಟಣೆ ಮೂಲಕ ಅನಪೇಕ್ಷಿತ ಹೇಳಿಕೆ ನೀಡುವುದು ಸೇರಿದಂತೆ ಕೇಂದ್ರ, ರಾಜ್ಯ ಸರ್ಕಾರದ ನೀತಿ, ಕ್ರಮದ ಬಗ್ಗೆ ಪ್ರತಿಕೂಲ ಹೇಳಿಕೆ ನೀಡದಂತೆಯೂ ಸೂಚನೆ ನೀಡಲಾಗಿದೆ. ಈ ನಿಯಮ ಉಲ್ಲಂಘಿಸಿದರೆ ನಿಯಮಾನುಸಾರ ಶಿಸ್ತು ಕ್ರಮ ಜರುಗಿಸುವುದಾಗಿ ಎಚ್ಚರಿಕೆ ನೀಡಿದ್ದಾರೆ.

ಅನಪೇಕ್ಷಿತ ಹೇಳಿಕೆಗಳು ಆಡಳಿತದ ಮೇಲೆ ದುಷ್ಪರಿಣಾಮ ಬೀರುತ್ತದೆ. ಜೊತೆಗೆ ಸರ್ಕಾರಕ್ಕೆ ಮುಜುಗರ ಉಂಟು ಮಾಡುತ್ತಿದೆ. ಅಧಿಕಾರಿಗಳ ಇಂತಹ ನಡೆಯನ್ನು ಸರ್ಕಾರ ಗಂಭೀರವಾಗಿ ಪರಿಗಣಿಸಿದೆ. ಅಧಿಕಾರಿಗಳು ನಂಬಿಕಾರ್ಹ ಅಧಿಕೃತ ಕರ್ತವ್ಯ ನಿರ್ವಹಣೆ ಹೊರತುಪಡಿಸಿ ಉಳಿದ್ದೆಲ್ಲ ಹೇಳಿಕೆ, ಪ್ರಕಟಣೆ ನೀಡುವುದನ್ನು ನಿಷೇಧಿಸಲಾಗಿದೆ ಎಂದು ರವಿಕುಮಾರ್ ಸುತ್ತೋಲೆಯಲ್ಲಿ ತಿಳಿಸಿದ್ದಾರೆ.

1968ರ ಅಖಿಲ ಭಾರತ ಸೇವೆಗಳು (ನಡತೆ) ನಿಯಮ 17ರಲ್ಲಿ ಈ ಬಗ್ಗೆ ಸ್ಪಷ್ಟ ಉಲ್ಲೇಖವಿದೆ. ಅದರಂತೆ ಕರ್ನಾಟಕ ರಾಜ್ಯ ನಾಗರಿಕ ಸೇವಾ (ನಡತೆ) ನಿಯಮಗಳು 2021ರಲ್ಲೂ ಈ ಬಗ್ಗೆ ಪ್ರಸ್ತಾಪವಿದೆ. ರಾಜ್ಯ ಅಥವಾ ಕೇಂದ್ರ ಸರ್ಕಾರದ ಇಲ್ಲವೇ ಯಾವುದೇ ರಾಜ್ಯ ಸರ್ಕಾರದ

ಪ್ರಸ್ತುತ/ಇತ್ತೀಚಿನ ಯಾವುದೇ ನೀತಿ/ಕ್ರಮದ ಬಗ್ಗೆ ಪ್ರತಿಕೂಲ ಟೀಕೆ ಪರಿಣಾಮ ಹೊಂದಿರುವ ಯಾವುದೇ ನಿರೂಪಣೆ ಅಭಿಪ್ರಾಯ ವ್ಯಕ್ತಪಡಿಸುವಂತಿಲ್ಲ ಎಂದು ಸ್ಪಷ್ಟವಾಗಿ ತಿಳಿಸಿದ್ದಾರೆ.

**ಸಮರ್ಥನೆಗೆ ಪೂರ್ವಾನುಮತಿ ಅಗತ್ಯ:** "ಪೂರ್ವಾನುಮತಿ ಪಡೆಯದೆ ಯಾವುದೇ ಸರ್ಕಾರಿ ನೌಕರರು ಪ್ರತಿಕೂಲ ಟೀಕೆ ಅಥವಾ ಮಾನಹಾನಿ ಸ್ವರೂಪದ ನಿಂದನೆ ವಸ್ತು ವಿಷಯವಾಗಿರುವುದೋ ಆ ಯಾವುದೇ ಅಧಿಕೃತ ಕೃತ್ಯದ ಸಮರ್ಥನೆಗಾಗಿ ಯಾವುದೇ ನ್ಯಾಯಾಲಯ ಅಥವಾ ಪತ್ರಿಕೆಯ ಮೊರೆ ಹೋಗುವಂತಿಲ್ಲ. ಅಕಾಶವಾಣಿ, ದೂರದರ್ಶನ, ಸಾರ್ವಜನಿಕ ಮಾಧ್ಯಮಗಳಲ್ಲಿ ವಾಸ್ತವ ಹೇಳಿಕೆ/ಅಭಿಪ್ರಾಯ ನೀಡುವುದು. ನೌಕರರು ತನ್ನ ಹೆಸರಿನಲ್ಲಿ ಅಥವಾ ಗುಪ್ತನಾಮದಲ್ಲಿ ಇನ್ನ್ಯಾವುದೇ ರೂಪದಲ್ಲಿ ದಸ್ತಾವೇಜು/ಪತ್ರಿಕೆಗೆ ಬರೆದು ಯಾವುದೇ ಪತ್ರದಲ್ಲಿ ಯಾವುದೇ ಹೇಳಿಕೆಯಲ್ಲಿ ಟೀಕೆ ಮಾನಹಾನಿ ಅಂಶಗಳು ಇರುವಂತಿಲ್ಲ" ಎಂದು ಸೂಚಿಸಿದ್ದಾರೆ.

"ಈ ನಿಯಮಗಳಿಗೆ ವಿರುದ್ಧವಾಗಿ ಯಾವುದೇ ಅಧಿಕಾರಿಯು ಸರ್ಕಾರದ ಕಾರ್ಯನೀತಿಗೆ ವ್ಯತಿರಿಕ್ತವಾಗಿ ಅನಪೇಕ್ಷಿತ ವೇದಿಕೆಗಳಲ್ಲಿ ತಮ್ಮ ಅನಿಸಿಕೆ ವ್ಯಕ್ತಪಡಿಸಿ ಸರ್ಕಾರದ ವರ್ಚಸ್ಸಿಗೆ ಧಕ್ಕೆ ಉಂಟು ಮಾಡುವುದು. ಸರ್ಕಾರಕ್ಕೆ ಮುಜುಗರ ಉಂಟು ಮಾಡುವುದು ಕಂಡುಬಂದರೆ ಅಂತಹವರ ವಿರುದ್ಧ ನಿಯಮಾನುಸಾರ ಶಿಸ್ತು ಕ್ರಮ ಜರುಗಿಸಲಾಗುವುದು" ಎಂದು ಎಚ್ಚರಿಕೆ ನೀಡಿದ್ದಾರೆ.

ಮಾಜಿ ಸಚಿವ ಸಾ.ರಾ. ಮಹೇಶ್ ಇತ್ತೀಚೆಗೆ ವಿಧಾನಸಭೆಯಲ್ಲಿ ಐಎಎಸ್ ಅಧಿಕಾರಿ ರೋಹಿಣಿ ಸಿಂಧೂರಿ ವಿರುದ್ಧ ಹಕ್ಕುಚ್ಯುತಿ ಮಂಡನೆಗೆ ಅವಕಾಶ ಕೋರಿದ್ದರು. ವಿಧಾನಸಭೆಯಲ್ಲಿ ಇದೇ ವಿಚಾರ ಪ್ರಸ್ತಾಪ ಮಾಡಿ ಕೆಲ ಐಎಎಸ್ ಅಧಿಕಾರಿಗಳು ಜನಪ್ರತಿನಿಧಿಗಳ ವಿರುದ್ಧ ಮಾಧ್ಯಮಗಳಲ್ಲಿ ಆರೋಪಿಸಿ ಹೇಳಿಕೆ ನೀಡುತ್ತಿದ್ದು ಸಭಾಧ್ಯಕ್ಷರು ಸದಸ್ಯರ ನೆರವಿಗೆ ಧಾವಿಸಬೇಕು ಎಂದು ಕೋರಿದ್ದರು. ಈ ಸಂಬಂಧ ಸೂಚನೆ ನೀಡಿರುವುದಾಗಿ ಸಭಾಧ್ಯಕ್ಷರು ಸದನಕ್ಕೆ ತಿಳಿಸಿದ್ದರು. ಬಳಿಕ ಸಚಿವ ಆರ್.ಆಶೋಕ್ ಈ ಸಂಬಂಧ ಸ್ಪಷ್ಟ ಸೂಚನೆ ನೀಡುವಂತೆ ಮುಖ್ಯ ಕಾರ್ಯದರ್ಶಿಯವರಿಗೆ ಸೂಚಿಸುವುದಾಗಿ ಭರವಸೆ ನೀಡಿದ್ದರು. ಅದರಂತೆ, ಸುತ್ತೋಲೆ ಹೊರಬಿದ್ದಿದೆ.

**ನೌಕರರು ಸಾಧನೆ ಬಿಂಬಿಸುವಂತಿಲ್ಲ:** ಸಾಮಾಜಿಕ ಮಾಧ್ಯಮಗಳನ್ನು ವೇದಿಕೆಯಾಗಿಸಿಕೊಂಡು ಇಲಾಖೆಯ ಸರ್ಕಾರದ ಸಾಧನೆಗಳನ್ನು ಅಧಿಕಾರಿಗಳ ವೈಯಕ್ತಿಕ ಸಾಧನೆ ಎಂಬಂತೆ ಪ್ರದರ್ಶಿಸುವುದನ್ನು ಕಡ್ಡಾಯವಾಗಿ ನಿಷೇಧಿಸಲಾಗಿದೆ. ಈ ನಿಟ್ಟಿನಲ್ಲಿ ಇಲಾಖೆ ಸಾಧನೆ, ಸರ್ಕಾರದ ಯೋಜನೆಗಳ ಬಗ್ಗೆ ಮಾಹಿತಿ ಪ್ರಸಾರಕ್ಕೆ ಅಧಿಕಾರಿಗಳು ವೈಯಕ್ತಿಕ ಸಾಮಾಜಿಕ ಮಾಧ್ಯಮ ಬಳಸುವಂತಿಲ್ಲ. ಸರ್ಕಾರದ ಆಡಳಿತದ ಹೆಸರಿನಲ್ಲಿ ತೆರೆಯಲಾದ ಖಾತೆಗಳನ್ನೇ ಬಳಸಬೇಕು.

**ಅಗತ್ಯವಿದ್ದರೆ ಮಾತ್ರ ಬಳಕೆ:** ಸರ್ಕಾರದ ಯೋಜನೆ, ಇತರೆ ವಿಷಯಕ್ಕೆ ಸಂಬಂಧಪಟ್ಟಂತೆ ಅಧಿಕೃತ ಮಾಹಿತಿ ಪ್ರಸಾರ ಸೇರಿದಂತೆ ಇತರೆ ಅಧಿಕೃತ ಕರ್ತವ್ಯಗಳಿಗೆ ಅಗತ್ಯವಿದ್ದರಷ್ಟೇ ಮಾಧ್ಯಮಗಳನ್ನು ಬಳಸಬಹುದು. ಕುಂದು ಕೊರತೆ ವ್ಯಕ್ತಪಡಿಸಲು ಮಾಧ್ಯಮಗಳನ್ನು ಬಳಸುವುದನ್ನು ನಿಷೇಧಿಸಲಾಗಿದೆ ಎಂದು ಸುತ್ತೋಲೆಯಲ್ಲಿ ಉಲ್ಲೇಖಿಸಿದ್ದಾರೆ.

ಆಧಾರ:ವಿಜಯ ಕರ್ನಾಟಕ, ದಿನಾಂಕ:19.09.2021

## 52. ಲಸಿಕೋತ್ಸವ ರಾಜ್ಯಕ್ಕೆ ಅಗ್ರಸ್ಥಾನ

ಪ್ರಧಾನಿ ನರೇಂದ್ರ ಮೋದಿ ಜನ್ಮದಿನದ ಅಂಗವಾಗಿ ದೇಶಾದ್ಯಂತ ನಡೆದ ಕೊರೋನಾ ಲಸಿಕೆ ಅಭಿಯಾನದಲ್ಲಿ ಕರ್ನಾಟಕ ಅಗ್ರಸ್ಥಾನ ಪಡೆದು ದಾಖಲೆ ನಿರ್ಮಿಸಿದೆ. ರಾಜ್ಯದಲ್ಲಿ 29.50 ಲಕ್ಷ ಡೋಸ್ ಲಸಿಕೆ ವಿತರಿಸಲಾಗಿದ್ದು, ಬಾಕಿ 1.68 ಲಸಿಕೆ ಡೋಸ್ ವಿತರಣೆ ದತ್ತಾಂಶ ಅಪ್‌ಲೋಡ್‌ಗೆ ಕೇಂದ್ರ ಸರ್ಕಾರ ಅವಕಾಶ ನೀಡಿದೆ. ಬಾಕಿ ದತ್ತಾಂಶ ಅಪ್‌ಲೋಡ್ ಮಾಡಿದರೆ ಒಟ್ಟು 31 ಲಕ್ಷಕ್ಕೂ ಅಧಿಕ ಡೋಸ್ ವಿತರಿಸಿ ರಾಜ್ಯ ಮೊದಲ ಸ್ಥಾನಗಳಿಸಲಿದೆ. ಪ್ರತಿ 10 ಲಕ್ಷ ಜನಸಂಖ್ಯೆಗೆ ಹೆಚ್ಚು ಲಸಿಕೆ ನೀಡಿದ

ರಾಜ್ಯಗಳಲ್ಲೂ ಕರ್ನಾಟಕ 62,003 ಲಸಿಕೆ ವಿತರಿಸಿ ದೇಶದಲ್ಲಿಯೇ ನಂ.1 ಸ್ಥಾನ ಪಡೆದಿದೆ. 14.401 ಲಸಿಕೆ ವಿತರಣೆ ಕೇಂದ್ರ ತೆರೆದು, ಪ್ರತಿ ಕೇಂದ್ರದಲ್ಲಿ ಸರಾಸರಿ 205 ಲಸಿಕೆ ನೀಡಲಾಗಿದೆ ಎಂದು ಆರೋಗ್ಯ ಸಚಿವ ಡಾ:ಸುಧಾಕರ್ ಮಾಹಿತಿ ನೀಡಿದರು.

ದೇಶದಲ್ಲಿ ಅತಿ ಹೆಚ್ಚು ಲಸಿಕೆ ನೀಡಿದ ಪಟ್ಟಿಯಲ್ಲಿ ಬಿಬಿಎಂಪಿ (4.09 ಲಕ್ಷ) ಬೆಳಗಾವಿ (2.09 ಲಕ್ಷ) ಜಿಲ್ಲಾಮಟ್ಟದ ಸಾಧನೆಯಲ್ಲಿ ಮೊದಲ 2 ಸ್ಥಾನ ಪಡೆದಿವೆ. ಮಹಿಳೆಯರು 14.96 ಲಕ್ಷ ಪುರುಷರು 14.53 ಲಕ್ಷ ಡೋಸ್ ಪಡೆದಿದ್ದಾರೆ.

ನಿಗದಿತ ಗುರಿಯಲ್ಲಿ 14 ಜಿಲ್ಲೆಗಳು ಗುರಿ ಮೀರಿ ಸಾಧನೆ ಮಾಡಿದ್ದರೆ ನಾಲ್ಕು ಜಿಲ್ಲೆಗಳು ಗುರಿಯಲ್ಲಿ ಶೇ.75 ರಷ್ಟು ಪ್ರಗತಿ ಸಾಧಿಸಿವೆ. ಬೆಂಗಳೂರು ನಗರ, ಶಿವಮೊಗ್ಗ, ಧಾರವಾಡ, ಹಾಸನ, ರಾಮನಗರ, ಚಿಕ್ಕಬಳ್ಳಾಪುರ, ದಾವಣಗೆರೆ ಜಿಲ್ಲೆಗಳು ಗುರಿ ಮೀರಿದ್ದರೆ, ಉಡುಪಿ, ಕೊಪ್ಪಳ ಮತ್ತು ಕಲಬುರಗಿ ಜಿಲ್ಲೆಗಳು ಕೊನೆಯ ಸ್ಥಾನದಲ್ಲಿವೆ ಎಂದು ಡಾ:ಕೆ.ಸುಧಾಕರ್ ಮಾಹಿತಿ ನೀಡಿದರು. ರಾಜ್ಯಾದ್ಯಂತ ಎರಡು ವಾರಗಳ ರಕ್ತದಾನ ಶಿಬಿರ ಪ್ರಾರಂಭಿಸಿದ್ದು, ತಲಾ 450 ಎಂಎಲ್‌ನ 5,201 ಯೂನಿಟ್ ರಕ್ತ ಸಂಗ್ರಹಿಸಲಾಗಿದೆ. ರಾಜ್ಯದ ಒಟ್ಟು ಜನಸಂಖ್ಯೆಯಲ್ಲಿ ಶೇ.1 ಜನರಿಗೆ ರಕ್ತ ಬೇಕಾಗಿದ್ದು, ಶಿಬಿರದ ಅವಧಿಯಲ್ಲಿ ಒಟ್ಟು ಒಂದು ಲಕ್ಷ ಯೂನಿಟ್ ರಕ್ತ ಸಂಗ್ರಹಿಸುವ ಉದ್ದೇಶವಿದೆ ಎಂದರು.

**ಅಭಿಯಾನದಲ್ಲಿ ಹಿಂದುಳಿದ ಕಲಬುರಗಿ:** ಕೋವಿಡ್ ಲಸಿಕೆ ಅಭಿಯಾನದಲ್ಲಿ ಕಲಬುರಗಿ ಹಿಂದೆ ಬಿದ್ದಿದೆ. ದೇಶಾದ್ಯಂತ ಮೆಗಾ ಮೇಳದಲ್ಲಿ ಕಲಬುರಗಿ ಜಿಲ್ಲೆ 60,058 (ಶೇ.40) ಡೋಸ್ ನೀಡಿ ಕೊನೆ ಸ್ಥಾನಕ್ಕೆ ಬಂದಿದೆ. ಬಳ್ಳಾರಿ ಜಿಲ್ಲೆಗೆ 1.5 ಲಕ್ಷ ಲಸಿಕೆ ಗುರಿಯಿತ್ತು. ಆದರೆ, 1,53,944 ಜನರಿಗೆ ಲಸಿಕೆ ಹಾಕಲಾಗಿದೆ. ಬೀದರ್ ಜಿಲ್ಲೆಗೆ 70 ಸಾವಿರ ಲಸಿಕೆ ಗುರಿಯಿದ್ದು, 61,688 ಜನರಿಗೆ ನೀಡಿ ಶೇ.88 ಗುರಿ ಸಾಧಿಸಲಾಗಿದೆ. ಯಾದಗಿರಿ ಜಿಲ್ಲೆಗೆ ನೀಡಿದ್ದ 45 ಸಾವಿರ ಗುರಿಯಲ್ಲಿ 38,963 (ಶೇ.87) ರಾಯಚೂರು ಜಿಲ್ಲೆಗೆ ನೀಡಿದ್ದ 85 ಸಾವಿರ ಗುರಿಯಲ್ಲಿ 52,635 (ಶೇ.62) ಕೊಪ್ಪಳ ಜಿಲ್ಲೆಗೆ ನೀಡಿದಂಥ 60 ಸಾವಿರ ಗುರಿಯಲ್ಲಿ 30,045 (ಶೇ.60) ಜನರಿಗೆ ವಾಕ್ಸಿನ್ ನೀಡಲಾಗಿದೆ.

ಆಧಾರ:ವಿಜಯವಾಣಿ, ದಿನಾಂಕ:19.09.2021

## 53. ಲಿಂಗಾಧಾರಿತ ಬಜೆಟ್ ಘೋಷಣೆಗೆ ಸೀಮಿತ

ಲಿಂಗ ತಾರತಮ್ಯ ನಿವಾರಣೆಗಾಗಿ ಲಿಂಗಾಧಾರಿತ ಬಜೆಟ್ ಪರಿಕಲ್ಪನೆಯ ಅಡಿಯಲ್ಲಿ ಕೆಲವು ವರ್ಷಗಳಿಂದ ಈಚೆಗೆ ಮಹಿಳಾ ಉದ್ದೇಶಿತ ಕಾರ್ಯಕ್ರಮಗಳಿಗೆ ಹೆಚ್ಚಿನ ಅನುದಾನ ಘೋಷಿಸಿದ್ದರೂ, ವಾಸ್ತವಿಕ ವೆಚ್ಚದಲ್ಲಿ ಕುಸಿತವಾಗಿದೆ. ಲಿಂಗಾಧಾರಿತ ಬಜೆಟ್ ಘೋಷಣೆಗೆ ಸೀಮಿತವಾಗಿದೆ ಎಂದು ಮಹಾಲೇಖಪಾಲರ (ಸಿಎಜಿ) ವರದಿ ಹೇಳಿದೆ.

ಲಿಂಗಾಧಾರಿತ ಬಜೆಟ್ ಎಂಬುದು ಮಹಿಳೆಯರ ಅಭಿವೃದ್ಧಿ ಕಾರ್ಯಕ್ರಮಗಳಿಗೆ ಅನುದಾನ ಮೀಸಲಿಡುವುದಕ್ಕೆ ಸೀಮಿತವಾಗಿದೆ. ಅವುಗಳನ್ನು ಸರಿಯಾಗಿ ಅನುಷ್ಠಾನಕ್ಕೆ ತರುವ ಉದ್ದೇಶದಿಂದ ಮೌಲ್ಯಮಾಪನ ಮತ್ತು ಸಮಗ್ರ ಮಾಹಿತಿ ಸಂಗ್ರಹಿಸುವ ಅಗತ್ಯವಿದೆ ಎಂದು ವರದಿಯಲ್ಲಿ ಶಿಫಾರಸ್ಸು ಮಾಡಲಾಗಿದೆ.

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಗೆ ಅನುದಾನದ ಹಂಚಿಕೆ 2016–17ರಿಂದಲೂ ಜಾಸ್ತಿಯಾಗಿತ್ತು. 2019–20ರಲ್ಲಿ ತುಸು ಇಳಿಕೆ ಕಂಡುಬಂದಿದೆ. ವಾಸ್ತವಿಕ ವೆಚ್ಚದಲ್ಲಿ 2015–16 ಹೊರತುಪಡಿಸಿದರೆ ಎಲ್ಲ ವರ್ಷಗಳಲ್ಲೂ ಕಡಿಮೆಯೇ ಇತ್ತು ಎಂಬುದು ಲೆಕ್ಕಪರಿಶೋಧನೆಯಲ್ಲಿ ಪತ್ತೆಯಾಗಿದೆ.

ಅಪ್ರಾಪ್ತ ಬಾಲಕಿಯರ ಸಬಲೀಕರಣಕ್ಕಾಗಿ ಜಾರಿಯಲ್ಲಿರುವ ಸಬಲ ಯೋಜನೆಗೆ 2018–19ರಲ್ಲಿ ರೂ.4.23 ಕೋಟಿ ಹಂಚಿಕೆ ಮಾಡಲಾಗಿತ್ತು. 2019–20 ರಲ್ಲಿ ಈ ಯೋಜನೆಯ ಅನುದಾನವನ್ನು ರೂ.9 ಕೋಟಿಗೆ ಹೆಚ್ಚಿಸಿದ್ದರು, ವಾಸ್ತವವಾಗಿ ಮಾಡಿರುವ ವೆಚ್ಚ ರೂ.76 ಲಕ್ಷ (ಶೇ.8.44) ಮಾತ್ರ ಹಾಲುಣಿಸುವ ತಾಯಂದಿರು ಮತ್ತು ಗರ್ಭಿಣಿಯರ ಆರೋಗ್ಯ ಸುಧಾರಣೆಗಾಗಿ ಜಾರಿಯಲ್ಲಿರುವ ಮಾತೃಶ್ರೀ ಯೋಜನೆಗೆ 2018–19ರಲ್ಲಿ ರೂ.350 ಕೋಟಿ ಒದಗಿಸಲಾಗಿತ್ತು. 2019–20ರಲ್ಲಿ ಅದನ್ನು ರೂ.450 ಕೋಟಿಗೆ ಹೆಚ್ಚಿಸಿದ್ದರು ರೂ.78.24 (ಶೇ.16.64) ಮಾತ್ರ ವೆಚ್ಚ ಮಾಡಲಾಗಿತ್ತು ಎಂದು ಸಿಎಜಿ ತಿಳಿಸಿದೆ.

2019–20ರ ಬಜೆಟ್‌ನಲ್ಲಿ ಅಂಗನವಾಡಿ ಕಾರ್ಯಕರ್ತೆಯರಿಗೆ ಹೊಸ ಪಿಂಚಣಿ ಯೋಜನೆ, ಸುರಕ್ಷಾ ಯೋಜನೆ, ಉಜ್ವಲಾ ಯೋಜನೆ, ಕರ್ನಾಟಕ ರಾಜ್ಯ ಹಣಕಾಸು ನಿಗಮದ ಮೂಲಕ ಮಹಿಳೆಯರಿಗೆ ಬಡ್ಡಿ ಸಹಾಯಧನ ವಿತರಣೆ, ಅಂಗನವಾಡಿ ಕಾರ್ಯಕರ್ತೆಯರಿಗೆ ತರಬೇತಿ ಮತ್ತು ಪ್ರಧಾನಮಂತ್ರಿ ಮಾತೃವಂದನಾ ಕಾರ್ಯಕ್ರಮದ ಅನುದಾನದ ಹಂಚಿಕೆಯಲ್ಲಿ ಗಣನೀಯ ಕುಸಿತವಾಗಿದೆ ಎಂಬ ಉಲ್ಲೇಖ ವರದಿಯಲ್ಲಿದೆ.

**ಯೋಜನೆಗಳ ಕೊರತೆ**: ಕೃಷಿ, ಜವಳಿ ಮತ್ತು ಆಹಾರ ಕೈಗಾರಿಕೆಗಳು, ಪೊಲೀಸ್, ಸಾರಿಗೆ ಮುಂತಾದ ಕ್ಷೇತ್ರಗಳಲ್ಲಿ ಮಹಿಳೆಯರು ದುಡಿಯುತ್ತಿದ್ದರು ಅವರಿಗಾಗಿ ಯಾವುದೇ ನಿರ್ದಿಷ್ಟ ಯೋಜನೆಗಳನ್ನು ರೂಪಿಸಿಲ್ಲ ಎಂದು ಸಿಎಜಿ ಆಕ್ಷೇಪಿಸಿದೆ.

ಕೇಂದ್ರ ಸರ್ಕಾರವು 2003ರಲ್ಲಿ ರಚಿಸಿದ್ದ ತಜ್ಞರ ತಂಡವು ರಕ್ಷಣೆ, ಆರ್ಥಿಕ ಮತ್ತು ಸಾಮಾಜಿಕ ಸೇವಾ ವಲಯಗಳಿಂದ ಕ್ರಮಬದ್ಧವಾದ ಮಾಹಿತಿ ಸಂಗ್ರಹಿಸಿ ಲಿಂಗಾಧಾರಿತ ಬಜೆಟ್ ರೂಪಿಸುವಂತೆ ಸಲಹೆ ನೀಡಿತ್ತು. ಈ ಸಲಹೆಯನ್ನು ರಾಜ್ಯ ಸರ್ಕಾರ ಅನುಷ್ಠಾನಕ್ಕೆ ತಂದಿಲ್ಲ ಎಂದು ಹೇಳಿದೆ.

ಆಧಾರ:ಪ್ರಜಾವಾಣಿ, ದಿನಾಂಕ:20.09.2021

## 54. ಎನ್‌ಸಿಎಫ್ ರಚನೆಗೆ ಕಸ್ತೂರಿರಂಗನ್ ಸಮಿತಿ

ನೂತನ ರಾಷ್ಟ್ರೀಯ ಶಿಕ್ಷಣ ನೀತಿಯ ರಾಷ್ಟ್ರೀಯ ಪಠ್ಯಕ್ರಮ ಚೌಕಟ್ಟು (ಎನ್‌ಸಿಎಫ್) ರಚನೆಗೆ 12 ಸದಸ್ಯರ ಸಮಿತಿಯನ್ನು ರಚನೆ ಮಾಡಿದೆ.

ಎನ್‌ಇಪಿ ರಚನೆ ಸಮಿತಿ ಅಧ್ಯಕ್ಷತೆವಹಿಸಿದ್ದ ಇಸ್ರೋ ನಿವೃತ್ತ ಅಧ್ಯಕ್ಷ ಡಾ:ಕಸ್ತೂರಿರಂಗನ್ ಅವರನ್ನೇ ಎನ್‌ಸಿಎಫ್ ಸಮಿತಿಗೂ ಅಧ್ಯಕ್ಷರನ್ನಾಗಿ ನೇಮಿಸಿದ್ದು, ಮೂರು ವರ್ಷದ ಅವಧಿ ಹೊಂದಿರುವ ಸಮಿತಿಯ ನಾಲ್ಕು ರೀತಿಯ ಎನ್‌ಸಿಎಫ್ ಸಿದ್ಧಪಡಿಸಬೇಕು ಎಂದು ಕೇಂದ್ರ ಶಿಕ್ಷಣ ಸಚಿವಾಲಯ ಆದೇಶಿಸಿದೆ. ರಾಜ್ಯದ ಇಬ್ಬರು ಸಮಿತಿಯಲ್ಲಿದ್ದಾರೆ.

ಈಗ ರಚನೆ ಮಾಡಲಾಗಿರುವ ಸಮಿತಿಯು ಶಾಲಾ ಶಿಕ್ಷಣ, ಬಾಲ್ಯ ಶುಶ್ರೂಷೆ ಹಾಗೂ ಶಿಕ್ಷಣ, ಶಿಕ್ಷಕರ ಶಿಕ್ಷಣ ಹಾಗೂ ವಯಸ್ಕರ ಶಿಕ್ಷಣಗಳಿಗೆ ಒಟ್ಟು ನಾಲ್ಕು ಮಾದರಿಯ ಎನ್‌ಸಿಎಫ್ ರಚನೆ ಮಾಡಲಿದೆ. ಕೋವಿಡ್–19ರ ಸಂದರ್ಭದಲ್ಲಿ ಇಡೀ ಶಿಕ್ಷಣ ವ್ಯವಸ್ಥೆಯ ಮೇಲೆ ಆದ ಪರಿಣಾಮವನ್ನು ಈ ವೇಳೆ ಗಣನೆಗೆ ತೆಗೆದುಕೊಳ್ಳಲಾಗಿದ್ದು. ಕೋವಿಡ್–19 ಹಾಗೂ ಭವಿಷ್ಯದಲ್ಲಿ ಇಂತಹ ಸಂದರ್ಭಗಳು ಎದುರಾದರೆ ಹೇಗೆ ಶಿಕ್ಷಣ ವ್ಯವಸ್ಥೆ ಮುಂದುವರಿಯಬೇಕು ಎಂಬ ಕುರಿತು ವಿವರಿಸಬೇಕು ಎಂದು ತಿಳಿಸಲಾಗಿದೆ.

**12 ಸದಸ್ಯರ ಸಮಿತಿ:** ಸಮಿತಿ ಅಧ್ಯಕ್ಷರಾಗಿ ಡಾ:ಕಸ್ತೂರಿರಂಗನ್ ಇರಲಿದ್ದಾರೆ. ಸದಸ್ಯರಾಗಿ ಎನ್‌ಐಇಪಿಎ ಅಧ್ಯಕ್ಷ ಮಹೇಶ್‌ಚಂದ್ರ ಪಂತ್, ನ್ಯಾಷನಲ್ ಬುಕ್ ಟ್ರಸ್ಟ್ ಅಧ್ಯಕ್ಷ ಗೋವಿಂದ್ ಪ್ರಸಾದ್ ಶರ್ಮ, ಜಾಮಿಯಾ ಮಿಲಿಯಾ ಇಸ್ಲಾಮಿಯಾ ವಿವಿ ಕುಲಪತಿ ನಜ್ಮಾ ಅಖ್ತರ್, ಕರ್ನಾಟಕದವರಾದ

ಸದ್ಯ ಆಂಧ್ರಪ್ರದೇಶದ ಕೇಂದ್ರೀಯ ಬುಡಕಟ್ಟು ವಿವಿ (ಸಿಟಿಯುಎಪಿ) ಕುಲಪತಿ ಪ್ರೊ.ಟಿ.ಬಿ ಕಟ್ಟೀಮನಿ (ತೇಜಸ್ವಿ ಕಟ್ಟೀಮನಿ) ಫ್ರೆಂಚ್ ಮೂಲಕ ಶಿಕ್ಷಣ ತಜ್ಞ ಮೈಖಲ್ ಡ್ಯಾನಿನೋ, ಜಮ್ಮು ಐಐಎಂ ಅಧ್ಯಕ್ಷ ಮಿಲಿಂದ್ ಕಾಂಬ್ಲೆ, ಪಂಜಾಬ್ ಕೇಂದ್ರೀಯ ವಿವಿ ಕುಲಪತಿ ಪ್ರೊ ಜಗಬೀರ್ ಸಿಂಗ್, ಭಾರತೀಯ ಮೂಲದ ಅಮೆರಿಕನ್ ಗಣಿತ ತಜ್ಞ ಮಂಜುಲ್ ಭಾರ್ಗವ, ಎನ್‌ಎಪಿ–20ರ ಕರಡು ರಚನೆ ಸಮಿತಿಯ ಸದಸ್ಯರಾಗಿದ್ದ ಕರ್ನಾಟಕದ ಪ್ರೊ:ಎಂ.ಕೆ.ಶ್ರೀಧರ್, ಭಾಷಾ ತಜ್ಞ ಡಾ:ಧೀರ್ ಝಿಂಗ್ರನ್, ಎಕ್ ಸ್ಟೆಪ್ ಪ್ರತಿಷ್ಠಾನದ ಸ್ಥಾಪಕ ಶಂಕರ್ ಮರುವಾಡಾ ಸದಸ್ಯರಾಗಿದ್ದಾರೆ.

ಆಧಾರ:ವಿಜಯವಾಣಿ, ದಿನಾಂಕ:22.09.2021

## 55. ನಾಲ್ಕು ಹೊಸ ಪಠ್ಯ ಕ್ರಮ ಚೌಕಟ್ಟು ರಚನೆಗೆ ಕಸ್ತೂರಿ ರಂಗನ್ ನೇತೃತ್ವದ ಸಮಿತಿ

ಪೂರ್ವಪ್ರಾಥಮಿಕ ಶಾಖೆ, ಶಿಕ್ಷಕರು ಮತ್ತು ವಯಸ್ಕರ ಶಿಕ್ಷಣಕ್ಕೆ ಹೊಸ ಪಠ್ಯ ಕ್ರಮದ ಚೌಕಟ್ಟು ರಚಿಸಲು ಕೇಂದ್ರ ಸರ್ಕಾರ 12 ಜನರ ಸಮಿತಿಯೊಂದನ್ನು ರಚಿಸಿದೆ. ಕೇಂದ್ರ ಶಿಕ್ಷಣ ಇಲಾಖೆ ರಚಿಸಿರುವ ಈ ಸಮಿತಿಯ ಅಧ್ಯಕ್ಷತೆಯನ್ನು ಇಸ್ರೋದ ಮಾಜಿ ಮುಖ್ಯಸ್ಥ ಕನ್ನಡಿಗ ಕಸ್ತೂರಿ ರಂಗನ್ ಅವರಿಗೆ ನೀಡಲಾಗಿದೆ. ಈಗಾಗಲೇ ಜಾರಿಗೆ ಬಂದಿರುವ ನೂತನ ರಾಷ್ಟ್ರೀಯ ಶಿಕ್ಷಣ ನೀತಿಯಲ್ಲಿನ ಅಂಶಗಳಿಗೆ ಅನುಗುಣವಾಗಿ ಈ ಸಮಿತಿಯ ಹೊಸ ಪಠ್ಯ ಕ್ರಮದ ಚೌಕಟ್ಟನ್ನು ರೂಪಿಸಿಕೊಡಲಿದೆ. ಈ ಸಂಬಂಧ ಪ್ರತಿಕ್ರಿಯಿಸಿದ ಕಸ್ತೂರಿ ರಂಗನ್ ಅವರು ನೂತನ ಶಾಲಾ ಪಠ್ಯಕ್ರಮಗಳ ರಚನೆಯ ಸಮಿತಿಗೆ ನೇತೃತ್ವ ವಹಿಸುವುದು. ಗೌರವದ ಜವಾಬ್ದಾರಿ. ಸಮಿತಿ ಸದಸ್ಯರು ಶಿಕ್ಷಣದ ಬಗ್ಗೆ ಆಳವಾದ ಜ್ಞಾನ ಹೊಂದಿದವರಾಗಿದ್ದು, ಅವರ ಜೊತೆ ಕೆಲಸ ಮಾಡುವುದು ನನಗೆ ಬಂದ ವಿಶೇಷ ಅವಕಾಶವಾಗಿದೆ ಎಂದು ಹೇಳಿದ್ದಾರೆ. ನೂತನ ಶಿಕ್ಷಣ ನೀತಿ –2021 ರ ಕರಡು ಸಮಿತಿಗೂ ರಸ್ತೂರಿ ರಂಗನ್ ಅವರೇ ಅಧ್ಯಕ್ಷರಾಗಿದ್ದರು.

ಆಧಾರ: ಕನ್ನಡ ಪ್ರಭಾ, ದಿನಾಂಕ:23.09.2021

## 56. ರೂ.50 ಸಾವಿರ ಪರಿಹಾರ

ಕೊರೋನಾ ಸೋಂಕಿನಿಂದ ಮೃತರಾದವರ ಕುಟುಂಬಗಳಿಗೆ ಪರಿಹಾರ ನೀಡಬೇಕು ಎಂಬ ಒತ್ತಾಯಕ್ಕೆ ಮಣಿದಿರುವ ಕೇಂದ್ರ ಸರ್ಕಾರ, ತಲಾ 50 ಸಾವಿರ ಪರಿಹಾರ ನೀಡಲಾಗುತ್ತದೆ ಎಂದು ಘೋಷಿಸಿದೆ. ಈ ಪರಿಹಾರ ಹಣವನ್ನು ರಾಜ್ಯ ವಿಪತ್ತು ನಿರ್ವಹಣಾ ಪ್ರಾಧಿಕಾರದಿಂದ ನೀಡಲಾಗುತ್ತದೆ. ಅರ್ಜಿ ಸಲ್ಲಿಸಿದ 30 ದಿನಗಳಲ್ಲಿ ಪರಿಹಾರ ನೀಡಲಾಗುತ್ತದೆ ಎಂದು ಹೇಳಿದೆ.

ಸುಪ್ರೀಂಕೋರ್ಟ್‌ಗೆ ಆಫಿಡವಿಟ್ ಸಲ್ಲಿಸಿರುವ ಕೇಂದ್ರ ಸರ್ಕಾರ ಕೊರೋನಾದಿಂದ ಮೃತಪಟ್ಟ ಕುಟುಂಬಗಳಿಗೆ ತಲಾ ರೂ.50 ಸಾವಿರಗಳನ್ನು ರಾಜ್ಯ ವಿಪತ್ತು ನಿರ್ವಹಣಾ ಪ್ರಾಧಿಕಾರದ ಮೂಲಕ ನೀಡಲಾಗುವುದು ಎಂದಿತು. ಈ ಪರಿಹಾರ ಇದುವರೆಗೆ ಮೃತಪಟ್ಟಿರುವವರಿಗೆ ಮಾತ್ರವಲ್ಲದೆ ಮುಂದೆ ಏನಾದರೂ ಕೊರೋನಾದಿಂದ ಸಾವನ್ನಪ್ಪಿದರೆ ಅವರಿಗೂ ಸಿಗಲಿದೆ ಎಂದು ಹೇಳಿದೆ.

ಪರಿಹಾರವನ್ನು ವಿಪತ್ತು ನಿಧಿಗಳ ಮೂಲಕ ಕೊಡಲಾಗುತ್ತದೆ. ಎಲ್ಲಾ ವಿಪತ್ತು ನಿರ್ವಹಣಾ ಪ್ರಾಧಿಕಾರಗಳು ಈ ವಿಷಯದಲ್ಲಿ ಕೆಲಸ ಮಾಡಲಿವೆ ಎಂದು ಅಫಿಡವಿಟ್‌ನಲ್ಲಿ ತಿಳಿಸಿದೆ.

ಪರಿಹಾರ ಪಡೆಯುವ ಸಲುವಾಗಿ ಮೃತಪಟ್ಟವರ ಕುಟುಂಬಗಳು, ಸಂಬಂಧಿಸಿದ ದಾಖಲೆಗಳು, ಮರಣ ಪ್ರಮಾಣ ಪತ್ರ ಸಲ್ಲಿಸಬೇಕು. ಜಿಲ್ಲಾ ವಿಪತ್ತು ನಿರ್ವಹಣಾ ಪ್ರಾಧಿಕಾರಗಳು ಪರಿಹಾರ ಪ್ರಕ್ರಿಯೆಯನ್ನು ನಡೆಸಲಿವೆ. ಅರ್ಜಿ ಸಲ್ಲಿಕೆ ಪರಿಶೀಲನೆ, ಒಪ್ಪಿಗೆ ಮತ್ತು ವಿತರಣೆಯ ಕೆಲಸ ಮಾಡಲಿವೆ. ಆಧಾರ್ ದಾಖಲೆ ಮೂಲಕ ಕುಟುಂಬ ಸದಸ್ಯರ ಬ್ಯಾಂಕ್ ಖಾತೆಗೆ ಹಣ ಸಂದಾಯವಾಗಲಿದೆ. ಈ

ಎಲ್ಲಾ ಪ್ರಕ್ರಿಯೆ ಅರ್ಜಿ ಸಲ್ಲಿಸಿದ 30 ದಿನದಲ್ಲಿ ಮುಗಿಯಲಿದೆ. ಈ ಬಗ್ಗೆ ಗೊಂದಲಗಳಿದ್ದರೆ ಹೆಚ್ಚುವರಿ ಜಿಲ್ಲಾಧಿಕಾರಿ ನೇತೃತ್ವದ ಸಮಿತಿ ನೋಡಿಕೊಳ್ಳಲಿದೆ.

**ಭಾರತಕ್ಕಿಲ್ಲ ಫೈಜರ್, ಮಾಡೆರ್ನಾ:** ಭಾರತದಲ್ಲೇ ಕೋವಿಶೀಲ್ಡ್ ಮತ್ತು ಕೋವಾಕ್ಸಿನ್ ಲಸಿಕೆಗಳ ಉತ್ಪಾದನಾ ಪ್ರಮಾಣ ಹೆಚ್ಚಾಗುತ್ತಿರುವ ಹಿನ್ನೆಲೆಯಲ್ಲಿ ಕೇಂದ್ರ ಸರ್ಕಾರ ಅಮೆರಿಕದ ಫೈಜರ್ ಮತ್ತು ಮಾಡೆರ್ನಾ ಲಸಿಕೆಗಳನ್ನು ತರಿಸುವ ಪ್ರಕ್ರಿಯೆಯನ್ನು ಕೈಬಿಟ್ಟಿದೆ. ಭಾರತದ ಕಾನೂನಿನಿಂದ ರಕ್ಷಣೆ ನೀಡಬೇಕು ಎಂಬ ಈ ಎರಡು ಕಂಪನಿಗಳ ವಾದವನ್ನು ಭಾರತ ತಿರಸ್ಕರಿಸಿದೆ. ಈ ಮೊದಲು ಲಸಿಕೆಯಲ್ಲಿ ಕೊರತೆ ಇದ್ದ ಕಾರಣ, ಈ ಎರಡು ಲಸಿಕೆಗಳನ್ನು ತರಿಸಿಕೊಳ್ಳಲು ನಿರ್ಧರಿಸಿದ್ದೆವು. ಆದರೆ ನಮ್ಮಲ್ಲೇ ಹೆಚ್ಚು ಲಸಿಕೆ ಉತ್ಪಾದನೆಯಾಗುತ್ತಿದೆ. ಅಮೆರಿಕದ ಲಸಿಕೆಗಳು ನಮಗೆ ಬೇಡ ಎಂದು ಆರೋಗ್ಯ ಇಲಾಖೆ ಅಧಿಕಾರಿಗಳು ಹೇಳಿದ್ದಾರೆ.

**ಹತ್ತು ಲಕ್ಷ ಮಂದಿಗೆ ಲಸಿಕೆ:** ಲಸಿಕೆ ಮೇಳದ ಹಿನ್ನೆಲೆ ದೇಶದಲ್ಲಿಯೇ 2ನೇ ಅತಿ ಹೆಚ್ಚು 10.1 ಲಕ್ಷ ಮಂದಿ ಲಸಿಕೆ ಪಡೆದಿದ್ದಾರೆ. ಲಸಿಕೆ ಅಭಿಯಾನಕ್ಕೆ ವೇಗ ನೀಡುವ ನಿಟ್ಟಿನಲ್ಲಿ ಪ್ರತಿ ಬುಧವಾರ ಲಸಿಕಾ ಮೇಳ ಹಮ್ಮಿಕೊಳ್ಳಲು ರಾಜ್ಯ ಸರ್ಕಾರ ನಿರ್ಧರಿಸಿತ್ತು. 31 ಲಕ್ಷ ಮಂದಿ ಲಸಿಕೆ ಪಡೆದಿದ್ದಾರೆ. ಈ ಮೂಲಕ ಇದೇ ತಿಂಗಳಲ್ಲಿ 3ನೇ ಬಾರಿ (ಒಟ್ಟಾರೆಯಾಗಿ 4ನೇ ಬಾರಿ) ಹತ್ತು ಲಕ್ಷಕ್ಕೂ ಅಧಿಕ ಮಂದಿ ಲಸಿಕೆ ಪಡೆದಂತಾಗಿದೆ. 15 ಲಕ್ಷ ಮಂದಿಗೆ ಲಸಿಕೆ ನೀಡುವ ಗುರಿಯೊಂದಿಗೆ ಪ್ರಾಥಮಿಕ, ಸಮುದಾಯ ಆರೋಗ್ಯ ಕೇಂದ್ರ, ತಾಲ್ಲೂಕು, ಜಿಲ್ಲಾ ಆಸ್ಪತ್ರೆ ಸೇರಿದಂತೆ ಸರ್ಕಾರಿ ವಲಯದ 8,540, ಖಾಸಗಿ ವಲಯ 384 ಲಸಿಕಾ ಕೇಂದ್ರಗಳು ಸೇರಿ ಒಟ್ಟು 8,924 ಲಸಿಕೆ ಕೇಂದ್ರಗಳಲ್ಲಿ ಲಸಿಕೆ ವಿತರಣೆ ಮಾಡಲಾಗಿದೆ. ದೇವಸ್ಥಾನಗಳು, ಶಾಲಾ ಕಾಲೇಜು ಕಟ್ಟಡಗಳು, ಸಮುದಾಯ ಭವನಗಳು, ವಸತಿ ಸಮುಚ್ಚಯಗಳು, ಬಸ್ ನಿಲ್ದಾಣಗಳು, ಬೃಹತ್ ವಾಣಿಜ್ಯ ಮಳಿಗೆಗಳಲ್ಲಿ ಲಸಿಕೆ ಶಿಬಿರ ನಡೆಸಲಾಗಿದೆ. ದೇಶದಲ್ಲಿ 50 ಲಕ್ಷ ಮಂದಿಗೆ ಲಸಿಕೆ ನೀಡಿದ್ದು, ಈ ಪೈಕಿ ಮೊದಲ ಸ್ಥಾನದಲ್ಲಿ ಮಹಾರಾಷ್ಟ್ರ(10.9ಲಕ್ಷ ಮಂದಿ) ಆನಂತರದ ಸ್ಥಾನದಲ್ಲಿ ಕರ್ನಾಟಕವಿದೆ. ಬೆಂಗಳೂರಿನಲ್ಲಿಯೂ 1.9 ಲಕ್ಷ ಮಂದಿ ಲಸಿಕೆ ಪಡೆದಿದ್ದು, ಮಹಾನಗರಗಳ ಪೈಕಿ ಮೊದಲ ಸ್ಥಾನದಲ್ಲಿದೆ.

**4 ಲಕ್ಷಕ್ಕೂ ಅಧಿಕ ಲಕ್ಷ ಮಂದಿ ಮೊದಲ ಡೋಸ್:** ಮೇಳದಲ್ಲಿ 4.3 ಮಂದಿ ಮೊದಲ ಮತ್ತು 5.8 ಲಕ್ಷ ಮಂದಿ ಎರಡನೇ ಡೋಸ್ ಪಡೆದಿದ್ದಾರೆ. ಲಸಿಕೆ ವ್ಯಾಪ್ತಿಗೆ ಬರುವವರ ಸಂಖ್ಯೆ:4.95 ಕೋಟಿ ಇದೆ. ರಾಜ್ಯದಲ್ಲಿ ಮೊದಲ ಡೋಸ್ ಪಡೆದವರ ಸಂಖ್ಯೆ 3.812ಕೋಟಿಗೆ ಹೆಚ್ಚಳವಾಗಿದ್ದು, ಶೇ.77 ಗುರಿಸಾಧನೆಯಾಗಿದೆ. 1.55 ಕೋಟಿ ಮಂದಿ ಎರಡು ಡೋಸ್ ಪೂರ್ಣಗೊಳಿಸಿದ್ದಾರೆ.

**ಕೋವಿಶೀಲ್ಡ್‌ಗೆ ಓಕೆ ಪ್ರಮಾಣ ಪತ್ರ ಇಲ್ಲ:** ಭಾರತ ಮತ್ತು ಯುನೈಟೆಡ್ ಕಿಂಗ್‌ಡಮ್ ನಡುವಿನ ಕ್ವಾರಂಟೈನ್ ಬಿಕ್ಕಟ್ಟು ಹೊಸ ಮಜಲು ಪ್ರವೇಶಿಸಿದೆ. ಕೋವಿಶೀಲ್ಡ್‌ಗೆ ಮಾನ್ಯತೆ ಕೊಟ್ಟಿರುವ ಯುಕೆ, ಭಾರತದ ಪ್ರಮಾಣ ಪತ್ರ ಒಪ್ಪಲು ಸಾಧ್ಯವಿಲ್ಲ ಎಂದಿದೆ. ಜೊತೆಗೆ ಭಾರತವನ್ನು ಲಸಿಕೆ ಹಾಕದ ರಾಷ್ಟ್ರಗಳ ಪ್ರಜೆಗಳು ಅನುಸರಿಸಿರುವ ನಿಯಮ ಪಾಲನೆ ಮಾಡಬೇಕಾಗುತ್ತದೆ. ಭಾರತದ ಆಕ್ಷೇಪಣೆ ಹಿನ್ನೆಲೆಯಲ್ಲಿ ನಿಯಮ ಬದಲಿಸಿರುವ ಯುಕೆ, ಇಡೀ ಬೆಳವಣಿಗೆಯನ್ನು ಮತ್ತಷ್ಟು ಗೋಜಲಾಗಿಸಿದೆ. ಯುನೈಟೆಡ್ ಕಿಂಗ್‌ಡಮ್ ಸರ್ಕಾರದ ವಾದವನ್ನು ರಾಷ್ಟ್ರೀಯ ಆರೋಗ್ಯ ಪ್ರಾಧಿಕಾರದ ಸಿಇಓ ಆರ್ ಶರ್ಮಾ ತಿರಸ್ಕರಿಸಿದ್ದಾರೆ. ಕೋವಿನ್ ಆ್ಯಪ್ ಅಥವಾ ವೆಬ್‌ಸೈಟ್ ಮೂಲಕ ನೀಡಲಾಗುವ ಕೊರೋನಾ ಲಸಿಕೆ ಹಾಕಿಸಿಕೊಂಡ ಪ್ರಮಾಣಪತ್ರ ನೀಡುವಿಕೆಯಲ್ಲಿ ಯು.ಕೆ. ಸರ್ಕಾರ ಆರೋಪಿಸಿದಂಥ ಯಾವುದೇ ಅಂಶಗಳಿಲ್ಲ ವಿಶ್ವ ಆರೋಗ್ಯ ಸಂಸ್ಥೆ ರೂಪಿಸಿದ ನಿಯಮಗಳ ಪ್ರಕಾರವೇ ಅದನ್ನು ನೀಡಲಾಗುತ್ತದೆ ಎಂದು ಹೇಳಿದ್ದಾರೆ.

ಆಧಾರ: ಉದಯವಾಣಿ, ದಿನಾಂಕ:23.09.2021

## 57. ಹಳ್ಳಿಗಳ ಅಭಿವೃದ್ಧಿಗೆ ಅಮೃತ ಗ್ರಾಮ ಪಂಚಾಯತ್ ಆರಂಭ

ರಾಜ್ಯದ 750 ಗ್ರಾಮ ಪಂಚಾಯತಿ ವ್ಯಾಪ್ತಿಯಲ್ಲಿ ಸಂಪೂರ್ಣವಾಗಿ ಬೀದಿ ದೀಪ, ಎಲ್ಲ ಮನೆಗೆ ಕುಡಿಯುವ ನೀರಿನ ಕೊಳಾಯಿ ಸಂಪರ್ಕ, ಶಾಲೆ ಅಂಗನವಾಡಿಗಳಿಗೆ ಕುಡಿಯುವ ನೀರು, ಶೌಚಾಲಯ ಸೌಲಭ್ಯ, ಗೋದಾಮು ನಿರ್ಮಾಣ, ಕೆರೆ ಕಲ್ಯಾಣಿಗಳ ಪುನಶ್ಚೇತನ ಸೇರಿದಂತೆ ಇಡಿ ಪಂಚಾಯಿತಿಯನ್ನು ಸಮಗ್ರವಾಗಿ ಅಭಿವೃದ್ಧಿ ಪಡಿಸುವ ರಾಜ್ಯ ಸರ್ಕಾರದ ಮಹತ್ವದ ಅಮೃತ ಗ್ರಾಮ ಪಂಚಾಯಿತಿ ಯೋಜನೆಗೆ ಚಾಲನೆ ನೀಡಲಾಯಿತು.

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ ಅನುಷ್ಠಾನಕ್ಕೆ ತರಲಿರುವ ಈ ಯೋಜನೆಯನ್ನು ವಿಧಾನಸೌಧ ಬ್ಯಾಂಕ್ವೆಟ್ ಸಭಾಂಗಣದಲ್ಲಿ ನಡೆದ ಸಮಾರಂಭದಲ್ಲಿ ಕೇಂದ್ರ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವ ಗಿರಿರಾಜ್ ಸಿಂಗ್ ಉದ್ಘಾಟಿಸಿದರು.

ಈ ಸಂದರ್ಭದಲ್ಲಿ ಮಾತನಾಡಿದ ಮುಖ್ಯಮಂತ್ರಿಯವರು ಅಮೃತ ಗ್ರಾಮ ಪಂಚಾಯತ್ ಯೋಜನೆಯಲ್ಲಿ 750 ಗ್ರಾಮ ಪಂಚಾಯಿತಿಗಳ ಸರ್ವಾಂಗೀಣ ಅಭಿವೃದ್ಧಿಯ ಗುರಿ ಹೊಂದಲಾಗಿದೆ. ಈ ನಿಟ್ಟಿನಲ್ಲಿ ಪ್ರತಿ ಪಂಚಾಯಿತಿಗೆ ಸರಾಸರಿ ರೂ.3 ಕೋಟಿಗಳಂತೆ ಸುಮಾರು ರೂ.2,300 ಕೋಟಿ ರೂಪಾಯಿ ವೆಚ್ಚ ಮಾಡಲಾಗುತ್ತಿದೆ. 2022ರ ಮಾರ್ಚ್ ಅಂತ್ಯದೊಳಗೆ ಯೋಜನೆ ಪೂರ್ಣಗೊಳಿಸಿದ ಪಂಚಾಯಿತಿಗಳಿಗೆ ಹೆಚ್ಚುವರಿಯಾಗಿ 25 ಲಕ್ಷ ಪ್ರೋತ್ಸಾಹ ಧನ ನೀಡಲಾಗುವುದು ಎಂದು ಹೇಳಿದರು.

ಕೇಂದ್ರ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವ ಗಿರಿರಾಜ್ ಸಿಂಗ್ ಮಾತನಾಡಿ ರಾಜ್ಯದಲ್ಲಿ ಯಾವ ಸರ್ಕಾರ ಅಧಿಕಾರದಲ್ಲಿದೆ ಎಂಬುದನ್ನು ಪರಿಗಣನೆಗೆ ತೆಗೆದುಕೊಳ್ಳದೆ ಕೇಂದ್ರದಿಂದ ಅತಿ ಹೆಚ್ಚು ಅನುದಾನ ನೀಡಲಾಗಿದೆ. ರಾಜ್ಯ ಸರ್ಕಾರ ನೂತನವಾಗಿ ಜಾರಿ ಮಾಡಿರುವ ಅಮೃತ ಗ್ರಾಮ ಪಂಚಾಯತ್ ಯೋಜನೆಯಲ್ಲಿ ಇ–ಗ್ರಂಥಾಲಯ ಪರಿಕಲ್ಪನೆ ಉತ್ತಮ ಸೇವೆಯಾಗಿದೆ ಎಂದು ಶ್ಲಾಘಿಸಿದರು.

ಗ್ರಾಮೀನಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವ ಕೆ.ಎಸ್. ಈಶ್ವರಪ್ಪ ಯೋಜನೆ ಬಗ್ಗೆ ವಿವರಿಸಿ ನರೇಗಾ ಯೋಜನೆಯಡಿ ರಾಜ್ಯಕ್ಕೆ ನೀಡಿದ ರೂ.13 ಕೋಟಿ ಮಾನವ ದಿನಗಳನ್ನು ಯಶಸ್ವಿಯಾಗಿ ಪೂರೈಸಿದ್ದು, ರೂ.20 ಕೋಟಿಗೆ ಮಾನವ ದಿನಗಳಿಗೆ ಹೆಚ್ಚಳ ಮಾಡಬೇಕು. 1,700 ಕಿ.ಮೀ ರಸ್ತೆ ನಿರ್ಮಾಣ ಹಾಗೂ ನರೇಗಾ ಯೋಜನೆಯಡಿ ಗ್ರಾಮೀಣ ಪ್ರದೇಶದ ಶಾಲೆಗಳ ದುರಸ್ಥಿಗೆ ಅವಕಾಶ ಕಲ್ಪಿಸಬೇಕು ಎಂದು ಕೋರಿದರು.

ಉನ್ನತ ಶಿಕ್ಷಣ ಸಚಿವ ಡಾ:ಸಿ.ಎನ್.ಅಶ್ವತ್ಥನಾರಾಯಣ, ಸಹಕಾರಿ ಸಚಿವ ಎಸ್.ಟಿ. ಸೋಮಶೇಖರ್ ತೋಟಗಾರಿಕೆ ಸಚಿವ ಮುನಿರತ್ನ, ಶಿಕ್ಷಣ ಸಚಿವ ಬಿ.ಸಿ. ನಾಗೇಶ್ ಮತ್ತಿತರರು ಈ ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದರು.

**ಹಳ್ಳಿಗಳಲ್ಲೂ ಮನೆ ಬಾಗಿಲಿಗೆ ಸರ್ಕಾರಿ ಸೇವೆ:** ಸರ್ಕಾರದ ವಿವಿಧ ಸೇವೆಗಳನ್ನು ಗ್ರಾಮ ಪಂಚಾಯತ್‌ಗಳ ಮೂಲಕ ಜನ ಸಾಮಾನ್ಯರಿಗೆ ತಲುಪಿಸಲು ಹೊಸ ಯೋಜನೆ ರೂಪಿಸುತ್ತಿದ್ದು, ಜನವರಿ 26 ರಂದು ಐದು ಜಿಲ್ಲೆಗಳಲ್ಲಿ ಪ್ರಾಯೋಗಿಕವಾಗಿ ಪ್ರಾರಂಭಿಸಲಾಗುವುದು ಎಂದು ಮುಖ್ಯಮಂತ್ರಿಯವರು ಪ್ರಕಟಿಸಿದರು. ಪಿಂಚಣಿ ಸೇರಿದಂತೆ ಎಲ್ಲ ಸೌಲಭ್ಯಗಳನ್ನು ಗ್ರಾಮ ಪಂಚಾಯತ್‌ಗಳ ಮೂಲಕ ಜನರ ಮನೆ ಬಾಗಿಲಿಗೆ ತಲುಪಿಸಲಾಗುವುದು. ಈ ಸೌಲಭ್ಯಗಳನ್ನು ಪಡೆದುಕೊಳ್ಳಲು ಎಲ್ಲ ಗ್ರಾಮ ಪಂಚಾಯತ್‌ಗಳಲ್ಲಿ ಆನ್‌ಲೈನ್ ಸೇವೆ ಒದಗಿಸಲಾಗುವುದು. ಜೊತೆಗೆ ಗ್ರಾಮ ಸೇವಾ ಎಂಬ ಹೊಸ ಯೋಜನೆಗಳನ್ನು ಜಾರಿ ಮಾಡಲಾಗುವುದು ಎಂದು ಹೇಳಿದರು.

**ಏನಿದು ಅಮೃತ ಗ್ರಾಮ ಪಂಚಾಯತಿ ಯೋಜನೆ:** 750 ಗ್ರಾಮ ಪಂಚಾಯತ್‌ಗಳನ್ನು 2022ರ ಮಾರ್ಚ್ ಅಂತ್ಯದ ವೇಳೆಗೆ ಸಮಗ್ರವಾಗಿ ಅಭಿವೃದ್ಧಿಪಡಿಸಲಾಗುವುದು. ಆಯ್ಕೆಯಾದ ಪ್ರತಿ

ಗ್ರಾಮಪಂಚಾಯತಿಯ ವ್ಯಾಪ್ತಿಯಲ್ಲಿ ಶೇ.100ರಷ್ಟು ಘನ ತ್ಯಾಜ್ಯ ವಿಂಗಡಣೆ ಮತ್ತು ವಿಲೇವಾರಿ ವೈಜ್ಞಾನಿಕವಾಗಿ ತ್ಯಾಜ್ಯ ನೀರು ವೈಜ್ಞಾನಿಕ ನಿರ್ವಹಣೆ, ಗ್ರಾಮ ಪಂಚಾಯತಿ ಕಟ್ಟೆಗಳಿಗೆ ಸೌರ ವಿದ್ಯುತ್ ಅಳವಡಿಕೆ, ಅಮೃತ್ ಉದ್ಯಾನವನಗಳ ನಿರ್ಮಾಣ, ಗ್ರಂಥಾಲಯಗಳ ಡಿಜಿಟಲೀಕರಣ, ಆಟದ ಮೈದಾನ ಹಾಗೂ ಆವರಣ ಗೋಡೆಗಳನ್ನು ನಿರ್ಮಾಣ, ರೈತರಿಗೆ ಗೋದಾಮು ನಿರ್ಮಾಣ ಹಾಗೂ ಕೆರೆಗಳ ಮತ್ತು ಕಲ್ಯಾಣಿಗಳ ಪುನಶ್ಚೇತನಗೊಳಿಸಲಾಗುವುದು.

ಆಧಾರ: ಕನ್ನಡಪ್ರಭ, ದಿನಾಂಕ:24.09.2021

## 58. ಕನ್ನಡ ಕಲಿಯುತ್ತಿರುವ ರಾಜ್ಯಪಾಲ

ಕರ್ನಾಟಕದ ರಾಜ್ಯಪಾಲ ಥಾಮರಚಂದ್ ಗೆಹಲೋತ್ ಅವರು ಕನ್ನಡ ಕಲಿಯಲು ಮುಂದಡಿ ಇಟ್ಟಿದ್ದಾರೆ. ಇದೇ ವರ್ಷದ ಜುಲೈನಲ್ಲಿ ರಾಜ್ಯಪಾಲರಾಗಿ ಅಧಿಕಾರ ಸ್ವೀಕರಿಸಿದ ಬಳಿಕ ಕನ್ನಡ ಕಲಿಕೆಗೆ ಆಸಕ್ತಿ ವಹಿಸಿರುವ ಗೆಹಲೋತ್ ಅವರು ರಾಜಭವನದ ಅಧಿಕಾರಿಗಳು, ಸಿಬ್ಬಂದಿ ಮತ್ತು ನಿಘಂಟುಗಳ ನೆರವಿನೊಂದಿಗೆ ಈ ಪ್ರಯತ್ನ ಕೈಗೊಂಡಿದ್ದಾರೆ.

ರಾಜಭವನದ ಅಧಿಕಾರಿಗಳು ಮತ್ತು ಸಿಬ್ಬಂದಿ ನಿತ್ಯ ಅವರಿಗೆ ಹೊಸ ಶಬ್ದಗಳು ಮತ್ತು ವಾಕ್ಯ ರಚನೆ ಕುರಿತು ಕನ್ನಡ ಕಲಿಸುವ ಪ್ರಯತ್ನದಲ್ಲಿ ತೊಡಗಿದ್ದಾರೆ. ಅಧಿಕಾರಿಗಳು ಮತ್ತು ಸಿಬ್ಬಂದಿ ಜೊತೆಯೂ ಕನ್ನಡದಲ್ಲೇ ಮಾತನಾಡುವ ಪ್ರಯತ್ನವನ್ನು ರಾಜ್ಯಪಾಲರು ಮಾಡುತ್ತಿದ್ದಾರೆ.

ಮಧ್ಯ ಪ್ರದೇಶದ ಗೆಹಲೋತ್ ಅವರು ಕನ್ನಡ ಕಲಿಯುವ ಮೂಲಕ ರಾಜ್ಯ ಭಾಷೆಯ ಬಗ್ಗೆ ತಮ್ಮ ಪ್ರೇಮ ವ್ಯಕ್ತಪಡಿಸಿದ್ದಾರೆ ಎಂಬು ರಾಜಭವನದ ಅಧಿಕಾರಿಗಳು ತಿಳಿಸಿದರು.

ಹಿಂದಿನ ರಾಜ್ಯಪಾಲ ವಜುಬಾಯಿ ವಾಲಾ ಅವರು ಅಧಿವೇಶನದಲ್ಲಿನ ಭಾಷಣ ಸೇರಿದಂತೆ ಎಲ್ಲ ಕಾರ್ಯಕ್ರಮಗಳಲ್ಲಿ ಹಿಂದಿಯಲ್ಲೇ ಭಾಷಣ ಮಾಡುತ್ತಿದ್ದರು. ವಿಧಾನಮಂಡಲದ ಜಂಟಿ ಅಧಿವೇಶನ ಉದ್ದೇಶಿಸಿ ರಾಜ್ಯಪಾಲರು ಮಾಡುತ್ತಿದ್ದ ಭಾಷಣದ ಪ್ರತಿ ಮೊದಲು ಇಂಗ್ಲೀಷ್ ಮತ್ತು ಕನ್ನಡದಲ್ಲಿ ಇರುತ್ತಿತ್ತು. ವಾಲಾ ಬಂದ ಬಳಿಕ ಹಿಂದಿಯಲ್ಲಿ ಮುದ್ರಿತವಾದ ಭಾಷಣದ ಪ್ರತಿ ನೀಡುವ ಪದ್ಧತಿ ಜಾರಿಗೆ ಬಂದಿತ್ತು. ಆದರೆ, ರಾಜಭವನದಿಂದ ಹೊರಡಿಸುತ್ತಿದ್ದ ಪತ್ರಿಕಾ ಪ್ರಕಟಣೆಗಳು ಅಲ್ಲಿಯವರೆಗೆ ಇಂಗ್ಲಿಷ್‌ನಲ್ಲಿ ಇರುತ್ತಿದ್ದವು. ವಾಲಾ ಬಂದ ಬಳಿಕ ಹಿಂದಿ ಮತ್ತು ಕನ್ನಡದಲ್ಲೂ ಪ್ರಕಟಣೆಗಳನ್ನು ಹೊರಡಿಸಲಾಗುತ್ತಿತ್ತು.

ಅದಕ್ಕೂ ಮೊದಲು ರಾಜ್ಯಪಾಲರಾಗಿದ್ದ ಹೆಚ್.ಆರ್. ಭಾರದ್ವಾಜ್ ಅವರು ಕನ್ನಡ ಕಲಿಯುವುದಾಗಿ ಹೇಳಿಕೊಂಡಿದ್ದರು. ಆದರೆ ಕಲಿತಿರಲಿಲ್ಲ. ರಾಜ್ಯಪಾಲರಾಗಿದ್ದ ವಿ.ಎಸ್.ರಮಾದೇವಿ ಕನ್ನಡದಲ್ಲೇ ಮಾತನಾಡುತ್ತಿದ್ದರು.

ಆಧಾರ: ಪ್ರಜಾವಾಣಿ, ದಿನಾಂಕ:24.09.2021

## 59. ಸುವರ್ಣ ಸೌಧಕ್ಕೆ ಕಛೇರಿ

ಬೆಳಗಾವಿಯ ಸುವರ್ಣ ವಿಧಾನಸೌಧದಲ್ಲಿ ಅಕ್ಟೋಬರ್ 2 ಅಥವಾ 3ನೇ ತಾರೀಖಿನಿಂದ ಸಕ್ಕರೆ ಆಯುಕ್ತರ ಕಛೇರಿ ಆರಂಭವಾಗಲಿದೆ ಎಂದು ಮುಖ್ಯಮಂತ್ರಿಯವರು ರೈತರಿಗೆ ಭರವಸೆ ನೀಡಿದ್ದಾರೆ.

ಕಬ್ಬಿನ ಬಾಕಿ ಬಿಲ್ ಪಾವತಿ ಸೇರಿದಂತೆ ವಿವಿಧ ಬೇಡಿಕೆಗಳ ಈಡೇರಿಕೆಗೆ ಒತ್ತಾಯಿಸಿ ಜಿಲ್ಲಾಧಿಕಾರಿ ಕಛೇರಿ ಬಳಿ ಪ್ರತಿಭಟನೆ ನಡೆಸುತ್ತಿದ್ದ ರೈತರೊಂದಿಗ ಮೊಬೈಲ್‌ನಲ್ಲಿಯೇ ಮಾತನಾಡಿ ಅವರು ಈ ವಿಷಯ ತಿಳಿಸಿದರು. ರೈತ ಮುಖಂಡ ಚೂನಪ್ಪ ಪೂಜಾರಿ ಅವರೊಂದಿಗೆ ಮಾತನಾಡಿದ ಮುಖ್ಯಮಂತ್ರಿಯವರು ಸುವರ್ಣ ವಿಧಾನಸೌಧದಲ್ಲಿ ಸಕ್ಕರೆ ಆಯುಕ್ತಾಲಯ ಕಚೇರಿ ಆರಂಭಕ್ಕೆ ಈಗಾಗಲೇ ಆದೇಶಿಸಲಾಗಿದೆ. ಶೀಘ್ರ ಕಛೇರಿ ಆರಂಭವಾಗಲಿದೆ ಎಂದರು.

ಬೆಳಗಾವಿಯಲ್ಲಿ ಸಕ್ಕರೆ ಕಾರ್ಖಾನೆ ಆಯುಕ್ತರ ಕಛೇರಿ ಸ್ಥಳಾಂತರಿಸಬೇಕು ಮತ್ತು ಸಕ್ಕರೆ ಕಾರ್ಖಾನೆಗಳು ಬಾಕಿ ಉಳಿಸಿಕೊಂಡಿರುವ ರೈತರ ಬಿಲ್‌ಗಳನ್ನು ಪಾವತಿಸಬೇಕು ಎನ್ನುವುದು ಸೇರಿದಂತೆ ವಿವಿಧ ಬೇಡಿಕೆಗಳನ್ನು ಈಡೇರಿಸುವಂತೆ ಆಗ್ರಹಿಸಿ ಕರ್ನಾಟಕ ರಾಜ್ಯ ರೈತ ಸಂಘ ಹಾಗೂ ಹಸಿರು ಸೇನೆ ಕಾರ್ಯಕರ್ತರು ಜಿಲ್ಲಾಧಿಕಾರಿ ಕಛೇರಿ ಎದುರು ಪ್ರತಿಭಟನೆ ನಡೆಸುತ್ತಿದ್ದರು. ಸಂಜೆ ಕರೆ ಮಾಡಿ ಮುಖ್ಯಮಂತ್ರಿಯವರು ರೈತರ ಸಮಸ್ಯೆ ಆಲಿಸಿದರು.

ಸಕ್ಕರೆ ಕಾರ್ಖಾನೆಗಳು ಸುಮಾರು ರೂ.25 ಕೋಟಿ ರೈತರ ಕಬ್ಬಿನ ಬಿಲ್ ಬಾಕಿ ಉಳಿಸಿಕೊಂಡಿವೆ. ನಾಲ್ಕು ವರ್ಷಗಳಿಂದ ಒಂದು ರೂಪಾಯಿ ಕೊಟ್ಟಿಲ್ಲ. ಆಪೆಕ್ಸ್ ಬ್ಯಾಂಕ್‌ಗೆ ರೂ.25 ಕೋಟಿ ಮಂಜೂರು ಮಾಡಿ ರೈತರಿಗೆ ಸಾಲ ಕೊಡುವ ವ್ಯವಸ್ಥೆ ಮಾಡಬೇಕು ಎಂದು ಚೂನಪ್ಪ ಪೂಜಾತಿ ಮುಖ್ಯಮಂತ್ರಿಯವರನ್ನು ವಿನಂತಿಸಿದರು.

ಈ ವಿಚಾರವಾಗಿ ಸಕ್ಕರೆ ಕಾರ್ಖಾನೆ ಮಾಲೀಕರು ಮತ್ತು ಆಪೆಕ್ಸ್ ಬ್ಯಾಂಕ್ ಅಧಿಕಾರಿಗಳೊಂದಿಗೆ ಬೆಂಗಳೂರಿನಲ್ಲಿ ಸಭೆ ನಡೆಸುವುದಾಗಿ ಮುಖ್ಯಮಂತ್ರಿಯವರು ಭರವಸೆ ನೀಡಿದರು.

**ರೈತರೊಂದಿಗೆ ಚರ್ಚೆ:** ಘಟಪ್ರಭಾ, ಮಲಪ್ರಭಾ, ಕೃಷ್ಣನದಿ ಪಾತ್ರದಲ್ಲಿ ಪ್ರವಾಹದಿಂದ ಸಾಕಷ್ಟು ಹಾನಿಯಾಗಿದೆ. ಪರಿಹಾರಕ್ಕೆ ವಿಶೇಷ ಪ್ಯಾಕೇಜ್ ಘೋಷಣೆ ಮಾಡಬೇಕು. ರೈತರ ಸಮಸ್ಯೆಗಳನ್ನು ಚರ್ಚಿಸಲು ಸಭೆ ಕರೆಯಬೇಕು ಎಂದು ರೈತರು ವಿನಂತಿಸಿದರು. ಪ್ರವಾಹ ಹಾನಿ ಸಂಬಂಧ ಜಿಲ್ಲಾಧಿಕಾರಿ ಅವರೊಂದಿಗೆ ಚರ್ಚೆ ಮಾಡುತ್ತೇನೆ ಎಂದ ಮುಖ್ಯಮಂತ್ರಿ, ರೈತರ ಸಮಸ್ಯೆಗಳ ಬಗ್ಗೆ ಚರ್ಚಿಸಲು ಹತ್ತು ರೈತರನ್ನು ಆಹ್ವಾನಿಸಿದರು. ರೈತರನ್ನು ಭೇಟಿಯಾಗಲು ಒಪ್ಪಿದರು. ಮುಖ್ಯಮಂತ್ರಿಯವರ ಪ್ರತಿಕ್ರಿಯೆಗೆ ಹರ್ಷ ವ್ಯಕ್ತಪಡಿಸಿದ ಪ್ರತಿಭಟನಾಕಾರರು ಪ್ರತಿಭಟನೆ ಹಿಂಪಡೆಯುವುದಾಗಿ ಹೇಳಿದರು.

ಆಧಾರ: ವಿಜಯ ಕರ್ನಾಟಕ, ದಿನಾಂಕ:26.09.2021

## 60. ವಿಧಾನಸಭಾ ಕ್ಷೇತ್ರಗಳೇ ಗಡಿ

ಜಿಲ್ಲಾ ಹಾಗೂ ತಾಲ್ಲೂಕು ಪಂಚಾಯತಿಗಳ ಕ್ಷೇತ್ರಗಳ ಮರುವಿಂಗಡಣೆಗೆ ಆಯೋಗ ರಚನೆ ಮಾಡಿರುವ ಸರ್ಕಾರ ವಿಧಾನಸಭಾ ಕ್ಷೇತ್ರಗಳನ್ನು ಗಡಿಯಾಗಿಟ್ಟುಕೊಂಡು ಕ್ಷೇತ್ರಗಳ ಮರುವಿಂಗಡಣೆಗೆ ಚಿಂತನೆ ನಡೆಸಿದೆ.

ರಾಜ್ಯ ಚುನಾವಣಾ ಆಯೋಗ ಈಗಾಗಲೇ ತಾಲ್ಲೂಕು ಹಾಗೂ ಜಿಲ್ಲಾ ಪಂಚಾಯಿತಿ ಚುನಾವಣೆಗೆ ಸಿದ್ಧತೆ ಮಾಡಿಕೊಂಡು ಕ್ಷೇತ್ರಗಳ ಮರುವಿಂಗಡಣೆಯನ್ನು ಮಾಡಿದೆ. ಈಗಾಗಲೇ ಚುನಾವಣಾ ಆಯೋಗ ಕ್ಷೇತ್ರ ವಿಂಗಡಣೆ ಮಾಡಿರುವ ಪ್ರಕಾರ ಕಂದಾಯ ತಾಲ್ಲೂಕುಗಳನ್ನು ಗಡಿಯನ್ನಾಗಿಟ್ಟುಕೊಂಡು ತಾಲ್ಲೂಕು ಹಾಗೂ ಜಿಲ್ಲಾ ಪಂಚಾಯತಿ ಕ್ಷೇತ್ರ ಗಡಿಗಳನ್ನು ನಿಗದಿ ಮಾಡಲಾಗಿತ್ತು. ಇದುವರೆಗೂ ರಾಜ್ಯ ಚುನಾವಣಾ ಆಯೋಗ ಕಂದಾಯ ತಾಲ್ಲೂಕು ಮಾದರಿಯಲ್ಲಿ ಕ್ಷೇತ್ರಗಳ ಪುನರ್ ವಿಂಗಡಣೆ ಮಾಡುತ್ತಾ ಬಂದಿದೆ.

**ಶಾಸಕರಿಗೆ ಅನಾನುಕೂಲ:** ಜಿಲ್ಲಾ, ತಾಲ್ಲೂಕುಗಳ ಗಡಿಯನ್ನು ತಾಲ್ಲೂಕು ಹಾಗೂ ಜಿಲ್ಲೆಯ ವ್ಯಾಪ್ತಿಯಲ್ಲೇ ನಿಗದಿ ಮಾಡುವುದರಿಂದ ಶಾಸಕರಿಗೆ ಅಭಿವೃದ್ಧಿ ಕೈಗೊಳ್ಳಲು ಅನಾನುಕೂಲವಾಗುತ್ತಿದೆ ಎನ್ನುವುದು ಸರ್ಕಾರದ ಲೆಕ್ಕಾಚಾರ. ಕೆಲ ವಿಧಾನಸಭಾ ಕ್ಷೇತ್ರಗಳು 2–3 ತಾಲ್ಲೂಕುಗಳನ್ನು ಒಳಗೊಂಡು ವಿಧಾನಸಭಾ ಕ್ಷೇತ್ರದ ಗಡಿ ಹಂಚಿಕೊಂಡಿರುವುದರಿಂದ ತಾಲ್ಲೂಕು ಪಂಚಾಯತ್ ಕ್ಷೇತ್ರದ ಗಡಿ ನಿಗದಿ ಮಾಡುವುದರಿಂದ ಅಭಿವೃದ್ಧಿ ಕಾರ್ಯಗಳನ್ನು ಕೈಗೊಳ್ಳಲು ಶಾಸಕರಿಗೆ ಸಮಸ್ಯೆಯಾಗುತ್ತದೆ. ಒಬ್ಬ ಶಾಸಕರು ಪ್ರತಿನಿಧಿಸುವ ವಿಧಾನ ಸಭಾ ಕ್ಷೇತ್ರವನ್ನು ಗಡಿಯಾಗಿಟ್ಟುಕೊಂಡು ತಾಲ್ಲೂಕು ಪಂಚಾಯತಿ,

ಜಿಲ್ಲಾ ಪಂಚಾಯತಿ ಕ್ಷೇತ್ರಗಳ ಗಡಿ ನಿಗದಿ ಮಾಡಿದರೆ ಶಾಸಕರಿಗೆ ಅನುಕೂಲ ಎಂದು ಸರ್ಕಾರ ಆಲೋಚಿಸಿದೆ.

ಅದೇ ಕಾರಣಕ್ಕೆ ತಾಲ್ಲೂಕು ಗಡಿಯನ್ನಾಗಿ ಪರಿಗಣಿಸದೇ ಇಡೀ ವಿಧಾನಸಭಾ ಕ್ಷೇತ್ರವನ್ನು ಗಡಿಯನ್ನಾಗಿ ಪರಿಗಣಿಸಿ, ಶಾಸಕರಿಗೆ ಅನುಕೂಲ ಮಾಡುವ ಆಲೋಚನೆ ನಡೆಸಲಾಗುತ್ತಿದೆ. ಸರ್ಕಾರ ಈಗಾಗಲೇ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಕಾಯ್ದೆಗೆ ತಿದ್ದುಪಡಿ ತಂದು ತಾಲ್ಲೂಕು, ಜಿಲ್ಲಾ ಪಂಚಾಯತಿಗಳ ಸೀಮಾ ನಿರ್ಣಯ ಆಯೋಗ ರಚಿಸಿದ್ದು ಶೀಘ್ರವೇ ಆಯೋಗದ ಅಧ್ಯಕ್ಷರು, ಸದಸ್ಯರನ್ನು ನೇಮಿಸಿ, ಗಡಿ ನಿರ್ಣಯ ಮಾಡುವ ನಿಯಮಗಳನ್ನು ರೂಪಿಸಲಿದೆ ಎಂದು ತಿಳಿದು ಬಂದಿದೆ.

**ಸಂಭಾವ್ಯರ ಪಟ್ಟಿ ಮುಖ್ಯಮಂತ್ರಿಗೆ:** ಕರ್ನಾಟಕ ಪಂಚಾಯತ್ ರಾಜ್ ಸೀಮಾ ನಿರ್ಣಯಾ ಆಯೋಗದ ಅಧ್ಯಕ್ಷರ ನೇಮಕ ಮಾಡಲು ಗ್ರಾಮೀಣಾಭಿವೃದ್ಧಿ ಇಲಾಖೆ ಮುಖ್ಯಮಂತ್ರಿಯವರಿಗೆ ಸಂಭಾವ್ಯರ ಪಟ್ಟಿ ಕಳುಹಿಸಿದೆ ಎಂಬ ಮಾಹಿತಿ ಲಭ್ಯವಾಗಿದೆ. ಮುಖ್ಯಕಾರ್ಯದರ್ಶಿ ಹಾಗೂ ಹೆಚ್ಚುವರಿ ಮುಖ್ಯ ಕಾರ್ಯದರ್ಶಿಯಾಗಿ ನಿವೃತ್ತಿಯಾಗಿರುವ ಅಧಿಕಾರಿಗಳ ಹೆಸರು ಶಿಫಾರಸ್ಸು ಮಾಡಲಾಗಿದೆ. ಮುಖ್ಯ ಕಾರ್ಯದರ್ಶಿಯಾಗಿ ನಿವೃತ್ತರಾದವರಲ್ಲಿ ಕನ್ನಡಿಗರಿಲ್ಲ ಎನ್ನುವ ಕಾರಣಕ್ಕೆ ಎಸಿಎಸ್ ಆಗಿ ನಿವೃತ್ತಿಯಾಗಿರುವ ವಿ.ಪಿ.ಬಳಿಗಾರ್, ಉಮೇಶ್, ಮಹೇಶ್ ಜೈನ್ ಸೇರಿ ನಾಲ್ಕೈದು ಅಧಿಕಾರಿಗಳ ಹೆಸರು ಶಿಫಾರಸ್ಸು ಮಾಡಲಾಗಿದೆ ಎಂದು ತಿಳಿದು ಬಂದಿದೆ. ಈ ವಾರದಲ್ಲಿ ಆಯೋಗದ ಅಧ್ಯಕ್ಷರ ನೇಮಕವಾಗುವ ಸಾಧ್ಯತೆ ಇದೆ ಎಂದು ಮೂಲಗಳು ತಿಳಿಸಿವೆ.

**ಎರಡು ತಿಂಗಳಲ್ಲಿ ಕ್ಷೇತ್ರಗಳ ಸೀಮಾ ನಿಗದಿ:** ರಾಜ್ಯ ಸರ್ಕಾರ ಹೊಸ ಆಯೋಗ ರಚನೆ ಮಾಡಿ 2, 3 ತಿಂಗಳಲ್ಲಿ ಹೊಸದಾಗಿ ತಾಲ್ಲೂಕು ಪಂಚಾಯತಿ, ಜಿಲ್ಲಾ ಪಂಚಾಯಿತಿ ಕ್ಷೇತ್ರಗಳ ಗಡಿ ನಿರ್ಣಯ ಮಾಡಲು ನಿರ್ಧರಿಸಿದೆ. ಈಗಾಗಲೇ ರಾಜ್ಯ ಚುನಾವಣಾ ಆಯೋಗ ಮಾಡಿರುವ ಕ್ಷೇತ್ರ ಮರು ವಿಂಗಡಣೆ ಅವೈಜ್ಞಾನಿಕವಾಗಿದೆ ಎನ್ನುವ ಕಾರಣಕ್ಕೆ ಸರ್ಕಾರ ಹೊಸದಾಗಿ ಸೀಮಾ ನಿರ್ಣಯ ಆಯೋಗದ ಮೂಲಕ ಮರು ವಿಂಗಡಣೆಗೆ ನಿರ್ಧರಿಸಿದೆ. ಈ ಆಯೋಗಕ್ಕೆ ತಾಲ್ಲೂಕು ಪಂಚಾಯತಿ, ಜಿಲ್ಲಾ ಪಂಚಾಯತಿ ಗಡಿ ಯಾವ ರೀತಿ ಇರಬೇಕು ಎನ್ನುವ ನಿಯಮ ರಚಿಸಿ ರಾಜ್ಯ ಸರ್ಕಾರ ನೀಡಲಿದೆ. ಆಯೋಗ ಗಡಿ ನಿಗದಿಪಡಿಸಿ ಕ್ಷೇತ್ರಗಳ ಮರು ವಿಂಗಡಣೆ ಮಾಡಿದ ನಂತರ ರಾಜ್ಯ ಚುನಾವಣಾ ಆಯೋಗ ಮತ್ತೆ ತಾಲ್ಲೂಕು ಪಂಚಾಯತಿ, ಜಿಲ್ಲಾ ಪಂಚಾಯತಿ ಕ್ಷೇತ್ರಗಳಿಗೆ ಮೀಸಲಾತಿ ನಿಗದಿಪಡಿಸಬೇಕಾಗುತ್ತದೆ. ಮೀಸಲಾತಿ ಬಳಿಕ ಜಿಲ್ಲಾ ಪಂಚಾಯತಿ, ತಾಲ್ಲೂಕು ಚುನಾವಣೆ ನಡೆಯಲಿದೆ. ಈಗಿರುವ ಲೆಕ್ಕಾಚಾರದಂತೆ, ಸರ್ಕಾರ ಜನವರಿಯಲ್ಲಿ ಚುನಾವಣೆ ನಡೆಸುವ ಆಲೋಚನೆ ಹೊಂದಿದೆ.

ಆಧಾರ: ಉದಯವಾಣಿ, ದಿನಾಂಕ:27.09.2021

## 61. ಬೆಳಗಾವಿಗೆ ಸರ್ಕಾರಿ ಕಚೇರಿ ಸ್ಥಳಾಂತರಕ್ಕೆ ಮುಹೂರ್ತ

ಆಕ್ಟೋಬರ್ 3 ರಿಂದ ಸಕ್ಕರೆ ನಿರ್ದೇಶನಾಲಯ ಬೆಳಗಾವಿಯಲ್ಲಿ ಕಾರ್ಯಾರಂಭ ಮಾಡಲಿದೆ. ಡಿಸೆಂಬರ್‌ನಲ್ಲಿ ಚಳಿಗಾಲದ ಅಧಿವೇಶನವನ್ನು ಬೆಳಗಾವಿಯಲ್ಲಿ ನಡೆಸಲಾಗುವುದು. ಆ ವೇಳೆಗೆ ಸಾಧ್ಯವಿರುವಷ್ಟು ಕಛೇರಿಗಳನ್ನು ಬೆಳಗಾವಿಗೆ ಸ್ಥಳಾಂತರ ಮಾಡಲಾಗುವುದು ಎಂದು ಮುಖ್ಯಮಂತ್ರಿಯವರು ತಿಳಿಸಿದರು.

ಬೆಳಗಾವಿಯಲ್ಲಿ ಸುದ್ದಿಗಾರರೊಂದಿಗೆ ಮಾತನಾಡಿದ ಅವರು, 2019–20ನೇ ಸಾಲಿನಲ್ಲಿ ಬೆಳಗಾವಿಯಲ್ಲಿ ಅತ್ಯಧಿಕ ಮಳೆಯಾಗಿ ಮನೆಗಳು ಹಾಗೂ ಬೆಳೆಗಳು ಹಾನಿಗೊಳಗಾಗಿವೆ. ಆ ಸಂದರ್ಭದಲ್ಲಿ ನಮ್ಮ ನಾಯಕ ಬಿ.ಎಸ್.ಯಡಿಯೂರಪ್ಪ ಅವರು ಹಲವು ಸೌಲಭ್ಯಗಳನ್ನು ಪ್ರಕಟಿಸಿದ್ದರು. ಒಟ್ಟು 44205 ಮನೆಗಳಿಗೆ ಪರಿಹಾರ ನೀಡುವ ಕಾರ್ಯ ಪ್ರಾರಂಭವಾಗಿದೆ. ಎ ಮತ್ತು

ಬಿ ಕೆಟಗೆರಿ ಮನೆಗಳಿಗೆ ರೂ.718, ಬಿ. ಕೆಟಗರಿಗೆ ರೂ.9,64, ಸಿ. ಕೆಟಗರಿಗೆ ರೂ.132 ಕೋಟಿಗಳು ಸೇರಿದಂತೆ ಒಟ್ಟು ರೂ.1864 ಕೋಟಿಗಳನ್ನು ನೀಡಲಾಗಿದ್ದು, ಬೆಳೆ ಹಾನಿಗೆ ರೂ.263 ಕೋಟಿಗಳ ಪರಿಹಾರವನ್ನು 1.56 ಲಕ್ಷ ರೈತರಿಗೆ ಈಗಾಗಲೇ ನೀಡಿದೆ ಎಂದು ತಿಳಿಸಿದರು.

ಪರಿಹಾರ ಪಾವತಿಗೆ ತೊಡಕಿರುವ ಅಂಶಗಳ ಬಗ್ಗೆ ಕಳೆದ ಬಾರಿಯ ಪ್ರಗತಿ ಪರಿಶೀಲನಾ ಸಭೆಯಲ್ಲಿ ಜಿಲ್ಲಾಧಿಕಾರಿಗಳಿಗೆ ಸೂಚಿಸಲಾಗಿದೆ. ಕಂದಾಯ ಇಲಾಖೆ ಕೋರಿರುವ ವಿವರಗಳನ್ನು ಒದಗಿಸಿ ಆರ್ಥಿಕ ಇಲಾಖೆಯೊಂದಿಗೆ ಚರ್ಚೆ ಮಾಡಿ ಪರಿಹಾರ ನೀಡಲಾಗುವುದು. ಒಟ್ಟಾರೆ ರಾಜ್ಯದಲ್ಲಿ ಮಳೆಯಿಂದ ಹಾನಿಯಾಗಿರುವ ಎಲ್ಲ ಮನೆಗಳಿಗೂ ತ್ವರಿತವಾಗಿ ಪರಿಹಾರ ವಿತರಣೆ ಮಾಡಲಾಗುತ್ತದೆ ಎಂದು ಅವರು ಹೇಳಿದರು. ಕಬ್ಬು ಬೆಳೆಗಾರರ ಬಾಕಿ ಹಣ ಪಾವತಿಗೆ ಸಂಬಂಧಪಟ್ಟಂತೆ ಈಗಾಗಲೇ ಮಾತುಕತೆ ನಡೆದಿದೆ. ಬಾಕಿ ಹಣವನ್ನು ನೀಡದಿದ್ದರೆ ಕಾನೂನಾತ್ಮಕವಾಗಿ ಕ್ರಮ ಜರುಗಿಸಲಾಗುವುದು. ಈ ಮಧ್ಯೆ ಸಕ್ಕರೆ ಕಾರ್ಖಾನೆಗಳು, ಸಕ್ಕರೆ ನಿರ್ದೇಶನಾಲಯ ಹಾಗೂ ಅಪೆಕ್ಸ್ ಬ್ಯಾಂಕ್ ಅವರೊಟ್ಟಿಗೆ ಮಾತುಕತೆ ನಡೆಸಿ ಹಣ ಪಾವತಿಗೆ ಕ್ರಮ ವಹಿಸಲಾಗುವುದು ಎಂದು ಹೇಳಿದರು.

ಭಾರತ್ ಬಂದ್ ನಡೆಸುವುದು ಸೂಕ್ತವಲ್ಲ. ಕೋವಿಡ್‌ನಿಂದ ಈಗ ತಾನೇ ಚೇತರಿಸಿಕೊಳ್ಳುತ್ತಿರುವ ಹೊತ್ತಿನಲ್ಲಿ ಜನ ಸಾಮಾನ್ಯರಿಗೆ ತೊಂದರೆಯಾಗುತ್ತಿದೆ. ಆರ್ಥಿಕ ಚಟುವಟಿಕೆಗಳಿಗೆ ಅನುವು ಮಾಡಿಕೊಡಬೇಕು. ಹೀಗಾಗಿ ಭಾರತ್ ಬಂದ್ ಬೇಡ ಎಂದು ಸಲಹೆ ನೀಡಿದರು.

ರಾಜ್ಯದಲ್ಲಿ ವೈರಲ್ ಜ್ವರದ ಬಗ್ಗೆ ಸಂಪೂರ್ಣ ಕ್ರಮಕೈಗೊಳ್ಳಲು ಆರೋಗ್ಯ ಇಲಾಖೆಗೆ ಸೂಚನೆ ನೀಡಲಾಗಿದೆ ಎಂದರು. ಜಿಲ್ಲಾಸ್ಪತ್ರೆಗಳಲ್ಲಿ ಚಿಕಿತ್ಸೆ, ಆರೋಗ್ಯ ತಪಾಸಣಾ ಶಿಬಿರ ಆಯೋಜಿಸಲು ಸೂಚಿಸಲಾಗಿದೆ ಎಂದರು.

**ಪ್ರಮುಖ ಅಂಶಗಳು:–**

- ಕಬ್ಬು ಬೆಳೆಗಾರರಿಗೆ ಬಾಕಿ ಹಣ ಪಾವತಿಗೆ ಮಾತುಕತೆ
- ದಿವಂಗತ ಸುರೇಶ್ ಅಂಗಡಿ ಪ್ರತಿಮೆ ಅನಾವರಣ
- ಮಳೆಯಿಂದ ಹಾನಿಗೊಂಡ ಮನೆಗಳಿಗೆ ಪರಿಹಾರಕ್ಕೆ ಚಾಲನೆ
- ಭಾರತ ಬಂದ್‌ನಿಂದ ಜನಸಾಮಾನ್ಯರಿಗೆ ತೊಂದರೆ.
- ವೈರಲ್ ಜ್ವರ–ಎಲ್ಲ ಜಿಲ್ಲಾಸ್ಪತ್ರೆಗಳಲ್ಲಿ ಆರೋಗ್ಯ ತಪಾಸಣೆ

ಆಧಾರ: ಸಂಯುಕ್ತ ಕರ್ನಾಟಕ, ದಿನಾಂಕ:27.09.2021

## 62. ಸಂವಿಧಾನ ಸಮಾನತೆ ಕಲ್ಪಿಸಿದೆ: ರಮೇಶ್ ಕುಮಾರ್ ಅಭಿಮತ

ಸಂವಿಧಾನ ತಿಳಿಯದೇ ಮಾತನಾಡುವ ಅವಿವೇಕಿಗಳಿಗೆ ಏನೇ ಹೇಳಿದರೂ ಅರ್ಥವಾಗುವುದಿಲ್ಲ ಎಂದು ವಿಧಾನ ಸಭೆ ಮಾಜಿ ಸ್ಪೀಕರ್ ಕೆ. ಆರ್. ರಮೇಶ್ ಕುಮಾರ್ ಅಭಿಪ್ರಾಯಪಟ್ಟಿದ್ದಾರೆ.

ಸಂವಿಧಾನ ಸಂರಕ್ಷಣಾ ಸಮಿತಿ ವತಿಯಿಂದ ನಗರ ಖಾಸಗಿ ಹೋಟೆಲ್‌ನಲ್ಲಿ ಹಮ್ಮಿಕೊಂಡಿದ್ದ ಭಾರತೀಯ ಚುನಾವಣಾ ಆಯೋಗ ಮಾಜಿ ಆಯುಕ್ತ ಎಸ್. ವೈ. ಖುರೇಶಿ ಅವರ ದಿ ಪಾಪುಲೇಷನ್ ಮಿತ್: ಇಸ್ಲಾಂ ಫ್ಯಾಮಿಲಿ ಪ್ಲಾನಿಂಗ್ ಆ್ಯಂಡ್ ಪಾಲಿಟಿಕ್ಸ್ ಇನ್ ಇಂಡಿಯಾ ಪುಸ್ತಕ ಬಿಡುಗಡೆಗೊಳಿಸಿ ಮಾತನಾಡಿದರು.

ದೇಶದ ಸಂವಿಧಾನವು ಎಲ್ಲರಿಗೂ ಸಮಾನತೆಯನ್ನು ಕಲ್ಪಿಸಿದೆ. ಅದನ್ನು ತಿಳಿದುಕೊಳ್ಳದೆ ಸಂಬಿಧಾನವನ್ನು ಕಡೆಗಣಿಸಿ ಮಾತನಾಡಬಾರದು. ಪರಿಶ್ರಮದಿಂದ ಓದಿದರೆ ಸಂವಿಧಾನ ಏನೆಂದೂ

ಅರ್ಥವಾಗುತ್ತದೆ. ಎಲ್ಲಾ ವರ್ಗ–ಸಮುದಾಯಗಳನ್ನು ಗಮನದಲ್ಲಿರಿಸಿಕೊಂಡು ರಚಿಸಲಾದ ಗ್ರಂಥವಾಗಿದೆ. ಜನಸಾಮನ್ಯನಿಗೆ ಸಂವಿಧಾನವು ಒಂದು ಪ್ರಬಲ ಆಸ್ತ್ರವಾಗಲಿದೆ ಎಂದು ರಮೇಶ್ ಕುಮಾರ್ ತಿಳಿಸಿದರು.

ಕಾರ್ಯಕ್ರಮದಲ್ಲಿ ಲೇಖಕ ಎಸ್.ವೈ ಖುರೇಶಿ, ಮಾಜಿ ಕೇಂದ್ರ ಸಚಿವ ಕೆ.ರೆಹ್ಮಾನ್ ಖಾನ್, ಮಾಜಿ ಸಚಿವ ಡಾ: ಹೆಚ್.ಸಿ. ಮಹದೇವಪ್ಪ, ವಿಧಾನ ಪರಿಷತ್ ಸದಸ್ಯ ನಸೀರ್ ಅಹ್ಮದ್ ದಲಿತ ಮುಖಂಡ ಮಾವಳ್ಳಿ ಶಂಕರ್ ಇದ್ದರು.

ಆಧಾರ: ಉದಯವಾಣಿ, ದಿನಾಂಕ:27.09.2021

## 65. As buildings collapse, BBMP report gathers dust

At a time when the city is witnessing back-to-back building collapses a report of a survey commissioned by the Bruhat Bengaluru Mahanagara Palike (BBMP) in 2019 to assess dilapidated structure is gathering dust.

The civic body had taken up the survey to identify structurally outdated buildings after the sudden collapse of a abuilding in JP Nagar two years ago. The report according to officials had listed over 200 such buildings in various BBMP zones across the city. Even though a detailed report was submitted any action till date.

BBMP Chief Commissioner acknowledged that a survey was indeed conducted. I agree that action should have been taken then. Also, I am not sure about the status of the report or those buildings. I have asked all Joint Commissioners at the zonal level to submit a report within two days about the action taken against the buildings identified during the survey he said.

Gupta added that the recent collapse of buildings has necessitated the resumption of such surveys. These incidents are not new but we should prevent them and ensure the safety of citizens he said.

Courtesy:-Deccan Herald, Dated:29.09.2021

## 66. 3 ಸಂಸದ, 30 ಶಾಸಕ ಸ್ಥಾನಗಳಿಗೆ ಅಕ್ಟೋಬರ್ 30ಕ್ಕೆ ಉಪಸಮರ

ಕರ್ನಾಟಕದ ಹಾನಗಲ್ ಮತ್ತು ಸಿಂದಗಿ ಸೇರಿದಂತೆ ದೇಶದ 14 ರಾಜ್ಯಗಳ 30 ವಿಧಾನ ಸಭಾ ಕ್ಷೇತ್ರಗಳು ಹಾಗೂ ಮೂರು ಲೋಕಸಭಾ ಕ್ಷೇತ್ರಗಳ ಉಪ ಚುನಾವಣಾ ದಿನಾಂಕ ಘೋಷಣೆಯಾಗಿದೆ. ಅಕ್ಟೋಬರ್ 30ರಂದು ಈ ಎಲ್ಲ ಕ್ಷೇತ್ರಗಳಿಗೂ ಉಪ ಚುನಾವಣೆ ನಡೆಯಲಿದ್ದು ನವೆಂಬರ್ 2 ರಂದು ಫಲಿತಾಂಶ ಪ್ರಕಟವಾಗಲಿದೆ.

ದಾದ್ರಾ ಮತ್ತು ನಗರ್ ಹವೇಲಿ, ಹಿಮಾಚಲಪ್ರದೇಶದ ಮಂಡಿ ಮತ್ತು ಮಧ್ಯಪ್ರದೇಶದ ಖಾಂಡ್ವದಲ್ಲಿ ಲೋಕಸಭೆ ಉಪ 'ಚುನಾವಣೆ ನಡೆಯಲಿದೆ. ಹಾಲಿ ಲೋಕಸಭಾ ಸಂಸದ ನಿಧನದ ಹಿನ್ನೆಲೆಯಲ್ಲಿ ತೆರವಾದ ಕ್ಷೇತ್ರಗಳಿವು.

ಇನ್ನು ಅಸ್ಸಾಂನ 5, ಪಶ್ಚಿಮ ಬಂಗಾಳದ 4, ಮಧ್ಯಪ್ರದೇಶ, ಹಿಮಾಚಲಪ್ರದೇಶ ಮತ್ತು ಮೇಘಾಲಯದ ತಲಾ ಮೂರು, ಕರ್ನಟಕ, ಬಿಹಾರ ಮತ್ತು ರಾಜಸ್ಥಾನದ ತಲಾ ಎರಡು ಮತ್ತು

ಆಂಧ್ರಪ್ರದೇಶ, ಹರಿಯಾಣ, ಮಹಾರಾಷ್ಟ್ರ ಮಿಜೋರಾಂ, ನಾಗಾಲ್ಯಾಂಡ್ ಮತ್ತು ತೆಲಂಗಾಣದ ತಲಾ ಒಂದು ಸೇರಿದಂತೆ ಒಟ್ಟಾರೆ 14 ರಾಜ್ಯಗಳ 30 ವಿಧಾನಸಭಾ ಕ್ಷೇತ್ರಗಳಿಗೂ ಚುನಾವಣೆ ನಡೆಯಲಿದೆ.

**ನಿರ್ಬಂಧಗಳೇನು:** ನಾಮಪತ್ರ ಸಲ್ಲಿಸುವ ಮುನ್ನ ಮತ್ತು ನಂತರ ಮೆರವಣಿಗೆ ಮಾಡುವುದಕ್ಕೆ ನಿಷೇಧ ಹೇರಲಾಗಿದೆ. ಹೊರಾಂಗಣದಲ್ಲಿ ಪ್ರಚಾರ ನಡೆಸಬೇಕೆಂದರೆ ಶೇ.50 ರಷ್ಟು ಆಸನ ಸಾಮರ್ಥ್ಯಕ್ಕೆ ಮಾತ್ರ ಅವಕಾಶ. ರಾಷ್ಟ್ರೀಯ ಮತ್ತು ರಾಜ್ಯ ಮಾನ್ಯತೆ ಹೊಂದಿರುವ ಪಕ್ಷಗಳ ಗರಿಷ್ಠ 20 ಸ್ಟಾರ್ ಪ್ರಚಾರಕರಿಗಷ್ಟೇ ಅವಕಾಶ ನೀಡಲಾಗಿದೆ ಎಂದು ಚುನಾವಣಾ ಆಯೋಗ ತಿಳಿಸಿದೆ.

ಆಧಾರ: ಉದಯವಾಣಿ, ದಿನಾಂಕ:29.09.2021

## 65. ಬಿಪಿಎಲ್ ರೂ.1.50 ಲಕ್ಷ ಪರಿಹಾರ

ಕೊರೋನಾದಿಂದ ಮೃತಪಟ್ಟವರ ಸಂಖ್ಯೆ ಹಾಗೂ ಪರಿಹಾರ ನಿಗದಿ ವಿಷಯದಲ್ಲಿ ಯಾವುದೇ ಗೊಂದಲವಿಲ್ಲ. ಕೇಂದ್ರ ಸರ್ಕಾರದ ಸೂಚನೆಯಂತೆ ಪರಿಷ್ಕೃತ ಆದೇಶವನ್ನು ಹೊರಡಿಸಲಾಗಿದೆ ಎಂದು ಕಂದಾಯ ಸಚಿವ ಆರ್. ಅಶೋಕ್ ತಿಳಿಸಿದರು. ವಿಧಾನಸೌಧದಲ್ಲಿ ಸುದ್ಧಿಗಾರರೊಂದಿಗೆ ಮಾತನಾಡಿದ ಅವರು ಕೊರೋನಾದಿಂದ ಮೃತಪಟ್ಟ ಎಲ್ಲರಿಗೂ ಕೇಂದ್ರದ ಎಸ್‌ಡಿಆರ್‌ಎಫ್ ನಿಧಿಯಡಿ ತಲಾ ರೂ.50 ಸಾವಿರ ಪರಿಹಾರ ದೊರೆಯಲಿದೆ. ಜೊತೆಗೆ ರಾಜ್ಯ ಸರ್ಕಾರದಿಂದ ಈಗಾಗಲೇ ಪ್ರಕಟಿಸಿದಂತೆ ಬಿಪಿಎಲ್ ಕುಟುಂಬದ ಒಬ್ಬರಿಗೆ ರೂ.1 ಲಕ್ಷ ನೀಡಲಾಗುವುದು. ಇದರಿಂದಾಗಿ ಬಿಪಿಎಲ್ ಕುಟುಂಬದ ಒಬ್ಬರು ಮೃತಪಟ್ಟರೆ ರೂ.1.50 ಲಕ್ಷ ಪರಿಹಾರ ದೊರೆಯಲಿದೆ ಎಂದು ವಿವರಿಸಿದರು. ಕೇಂದ್ರದ ನೆರವು ಎಸ್‌ಡಿಆರ್‌ಎಫ್ ಅಡಿ ವಿತರಿಸಿದರೆ, ರಾಜ್ಯ ಸಹಾಯಧನವನ್ನು ಸಾಮಾಜಿಕ ಭದ್ರತಾ ಯೋಜನೆಯಡಿ ನೀಡಲಾಗುವುದು. ಈ ಸಂಬಂಧ ಸ್ಪಷ್ಟ ಆದೇಶ ಹೊರಡಿಸಿದ್ದು, ಆಯಾ ಜಿಲ್ಲಾಧಿಕಾರಿಗಳಿಗೆ ಸೂಕ್ತ ನಿರ್ದೇಶನ ನೀಡಲಾಗಿದೆ ಎಂದರು.

**ಅರ್ಜಿ ಜೊತೆಗೆ ಏನೆಲ್ಲ ಇರಬೇಕು:** ಕೊರೋನಾ ಪಾಸಿಟಿವ್ ವರದಿ, ರೋಗಿಯ ಪಿ.ನಂಬರ್, ಮರಣ ಪ್ರಮಾಣಪತ್ರ, ಆಧಾರ್ ಕಾರ್ಡ್‌ಪ್ರತಿ, ಅರ್ಜಿದಾರರ ಬ್ಯಾಂಕ್ ಖಾತೆ ನಂಬರ್ ಜೊತೆಗೆ ಆಯಾ ತಹಸೀಲ್ದಾರ್ ಅಥವಾ ಜಿಲ್ಲಾಧಿಕಾರಿಗೆ ಅರ್ಜಿ ಸಲ್ಲಿಸಬಹುದಾಗಿದೆ. ಸ್ವತ: ಪರಿಹಾರ ಕೋರುವ ಅರ್ಜಿದಾರರು ಸ್ವಯಂ ಘೋಷಣಾ ಫಾರಂ ನಂಬರ್-2, ಕುಟುಂಬದ ಉಳಿದವರಿಗೆ ಫಾರಂ ನಂಬರ್-3 ಅರ್ಜಿ ಸಲ್ಲಿಸಬಹುದಾಗಿದ್ದು, ಕೇಂದ್ರ ಸರ್ಕಾರದ ನೆರವು ಆರ್‌ಟಿಜಿಎಸ್ ಮೂಲಕ ನೇರ ಬ್ಯಾಂಕ್ ಖಾತೆಗೆ ಜಮೆಯಾಗಲಿದೆ ಎಂದು ಮಾಹಿತಿ ನೀಡಿದರು.

**ರೂ.ಐದು ಲಕ್ಷ ನೀಡಲು ಸಿದ್ದು ಆಗ್ರಹ:** ಷರತ್ತು ರಹಿತವಾಗಿ ಪ್ರಕೃತಿ ವಿಕೋಪ ನಿಯಮಗಳಡಿ ನೀಡುವ ಪರಿಹಾರದಂತೆಯೇ, ಕೋವಿಡ್‌ನಿಂದ ಮೃತಪಟ್ಟ ಎಲ್ಲರ ವಾರಸುದಾರರಿಗೂ ರೂ.5 ಲಕ್ಷ ನೀಡಬೇಕೆಂದು ಪ್ರತಿಪಕ್ಷ ನಾಯಕ ಸಿದ್ದರಾಮಯ್ಯ ಆಗ್ರಹಿಸಿದ್ದಾರೆ. ವಿಕೋಪಗಳಿಂದ ಮರಣ ಹೊಂದಿದ ಪ್ರತಿಯೊಬ್ಬರಿಗೂ ಪರಿಹಾರ ನೀಡಬೇಕು ಎಂಬ ಪ್ರಕೃತಿ ವಿಕೋಪ ನಿಯಮಗಳನ್ನು ತಿರುಚಿರುವ ಸರ್ಕಾರದ ಕ್ರಮ ಸರಿಯಲ್ಲ. ರಾಜ್ಯದಲ್ಲಿ ಕೋವಿಡ್-19ರ ಎರಡು ಅಲೆಗಳಿಂದ ಕನಿಷ್ಠವೆಂದರೂ ರೂ.4 ಲಕ್ಷ ಜನ ಮರಣ ಹೊಂದಿದ್ದಾರೆ. ಕೇಂದ್ರ, ರಾಜ್ಯ ಸರ್ಕಾರಗಳೆರಡು ಪರಿಹಾರ ನೀಡುವುದರಿಂದ ತಪ್ಪಿಸಿಕೊಳ್ಳಲು ಪ್ರಕೃತಿ ವಿಕೋಪಕ್ಕೆ ಸಂಬಂಧಿಸಿದ ಸಾಮಾನ್ಯ ನಿಯಮಗಳನ್ನು ತಮಗೆ ಬೇಕಾದಂತೆ ತಿರುಚಿಕೊಂಡು ನೊಂದ ಜನರಿಗೆ ದ್ರೋಹವೆಸಗುತ್ತಿವೆ ಎಂದು ಟೀಕಿಸಿದರು.

**ಸಮಿತಿ ರಚನೆ:** ಅರ್ಜಿಗಳ ತ್ವರಿತ ವಿಲೇವಾರಿ, ನೈಜ ಸಂತ್ರಸ್ತರಿಗೆ ಪರಿಹಾರ ತಲುಪಲೆಂದು ಜಿಲ್ಲಾಧಿಕಾರಿ ಅಧ್ಯಕ್ಷತೆಯಲ್ಲಿ ಸಮಿತಿ ರಚಿಸಲಾಗಿದ್ದು, ವೈದ್ಯಾಧಿಕಾರಿ ಸದಸ್ಯ ಕಾರ್ಯದರ್ಶಿಯಾಗಿರುತ್ತಾರೆ. ಬಿಬಿಎಂಪಿ ವ್ಯಾಪ್ತಿಯಲ್ಲಿ ವಲಯ ಜಂಟಿ ಆಯುಕ್ತರು ಇರಲಿದ್ದಾರೆ. ಸಲ್ಲಿಕೆಯಾದ ಅರ್ಜಿಗಳ ಪರಿಶೀಲನೆ ಜವಾಬ್ದಾರಿಯನ್ನು ಆರೋಗ್ಯ ಇಲಾಖೆಗೆ ಒಪ್ಪಿಸಲಾಗಿದೆ.

**ಮತಾಂತರ ನಿಷೇಧಕ್ಕೆ ಕಾಯ್ದೆ ಆಗತ್ಯ:** ರಾಜ್ಯದಲ್ಲಿ ಬಲವಂತದ ಮತದಾನ ನಿಷೇಧಕ್ಕೆ ಸೂಕ್ತ ಅಗತ್ಯವಿದ್ದು, ಈ ಕುರಿತು ಮುಖ್ಯಮಂತ್ರಿಯವರು ಹಾಗೂ ಕಂದಾಯ ಇಲಾಖೆ ಅಧಿಕಾರಿಗಳ ಜೊತೆಗೆ ಚರ್ಚಿಸಲಾಗುವುದು ಎಂದು ಆರ್. ಅಶೋಕ್ ಹೇಳಿದರು.

**ಆರೋಪವಷ್ಟೇ:** ಕೊರೋನಾದಿಂದ ಮೃತಪಟ್ಟವರ ಸಂಖ್ಯೆಯಲ್ಲಿ ವ್ಯತ್ಯಾಸವಿದೆ ಎಂದು ಕೆಪಿಸಿಸಿ ಅಧ್ಯಕ್ಷ ಡಿ.ಕೆ. ಶಿವಕುಮಾರ್ ಹೇಳಿರುವುದು ಆರೋಪವಷ್ಟೇ. ಯಾವುದೇ ಅಂಕಿ–ಸಂಖ್ಯೆಯನ್ನು ಮುಚ್ಚಿಡಲಾಗದು, ಎಲ್ಲವು ದಾಖಲೀಕರಣವಾಗಿರುತ್ತದೆ. ಸತ್ತವರ ಅಧಿಕೃತ ಮಾಹಿತಿ, ವೈದ್ಯರ ಪ್ರಮಾಣಪತ್ರ ತಹಸೀಲ್ದಾರ್ ಮತ್ತು ಕಂದಾಯ ಇಲಾಖೆಯ ವರದಿ, ಪ್ರತಿಯೊಬ್ಬ ರೋಗಿಗೆ ಆಸ್ಪತ್ರೆಯಿಂದ ಪಿ. ನಂಬರ್ ನೀಡಿರುತ್ತಾರೆ. ಬೋಗಸ್ ಆಗುವುದಕ್ಕೆ ಅವಕಾಶವಿಲ್ಲ. ಆರೋಪ ಮಾಡುವುದು ಕಾಂಗ್ರೆಸ್‌ಗೆ ಚಟವಾಗಿದೆ ಎಂದು ಆರ್. ಅಶೋಕ್ ಕುಟುಕಿದರು.

**ಶಾಲಾ ಮಕ್ಕಳಲ್ಲಿ ಶೇ.01 ಸೋಂಕು ಪತ್ತೆ:** ರಾಜ್ಯದಲ್ಲಿ ಸಂಭಾವ್ಯ ಕೋವಿಡ್ ಮೂರನೇ ಅಲೆ ಆತಂಕದ ನಡುವೆಯು 6 ರಿಂದ 12ನೇ ತರಗತಿವರೆಗೂ ಆರಂಭವಾಗಿದ್ದು, ಈ ಮಕ್ಕಳಲ್ಲಿ ಶೇ.01 ಕೋವಿಡ್ ಸೋಂಕು ಪ್ರಕರಣಗಳು ದೃಢಪಟ್ಟಿವೆ ಶಾಲೆ ನಡೆಸುವ ಬಗ್ಗೆ ಆತಂಕ ಪಡುವ ಅಗತ್ಯವಿಲ್ಲ. ಆದರೆ ಮಾಸ್ಕ್, ಸಾಮಾಜಿಕ ಅಂತರ ಹಾಗೂ ವೈಯಕ್ತಿಕ ಸ್ವಚ್ಚತೆಗೆ ಮುಂದೆಯೂ ಹೆಚ್ಚು ಅದ್ಯತೆ ನೀಡುವ ಅಗತ್ಯವಿದೆ ಎಂದು ರಾಜ್ಯ ಕೋವಿಡ್ ತಾಂತ್ರಿಕ ಸಲಹಾ ಸಮಿತಿ ಸದಸ್ಯರು ಎಚ್ಚರಿಸಿದ್ದಾರೆ. ಮಕ್ಕಳ ಭವಿಷ್ಯದ ದೃಷ್ಠಿಯಿಂದ ಶಾಲೆಗಳನ್ನು ಪ್ರಾರಂಭಿಸುವ ಅಗತ್ಯವಿದೆ. ಆದರೆ, 1–6ನೇ ತರಗತಿವರೆಗಿನ ಮಕ್ಕಳಿಗೆ ಶಾಲೆ ನಡೆಸಬೇಕೆ ಬೇಡವೇ ಎಂಬ ಬಗ್ಗೆ ದಸರಾ ನಂತರದ ಕೋವಿಡ್ ವರದಿಯನ್ನು ಆಧರಿಸಿ ಏನು ಮಾಡಬೇಕು ಎಂಬ ಬಗ್ಗೆ ಸರ್ಕಾರಕ್ಕೆ ಸಲಹೆ ನೀಡಲಾಗುವುದು ಎಂದು ಸಮಿತಿ ಅಧ್ಯಕ್ಷ ಡಾ: ಎಂ.ಕೆ. ಸುದರ್ಶನ್ ತಿಳಿಸಿದ್ದಾರೆ.

**539 ಮಂದಿಗೆ ಸೋಂಕು ದೃಢ:** ರಾಜ್ಯದಲ್ಲಿ ಒಂದೆಡೆ ಕೋವಿಡ್ ಸೋಂಕು ಪ್ರಮಾಣ ಇಳಿಕೆಯಾಗುತ್ತಿದ್ದರೆ ಮತ್ತೊಂದೆಡೆ ಮರಣ ಪ್ರಮಾಣ ದರ ಏರಿಕೆಯಲ್ಲಿಯೇ ಇದೆ. 539 ಮಂದಿಯಲ್ಲಿ ಸೋಂಕು ದೃಢಪಟ್ಟಿದೆ ಚಿಕಿತ್ಸೆ ಫಲಿಸದೇ 17 ಮಂದಿ ಮೃತಪಟ್ಟಿದ್ದಾರೆ. 24 ಗಂಟೆಗಳಲ್ಲಿ ಸೋಂಕಿತರಲ್ಲಿ 591 ಮಂದಿ ಆಸ್ಪತ್ರೆಯಿಂದ ಬಿಡುಗಡೆ ಹೊಂದಿದ್ದು, ಗುಣಮುಖರ ಒಟ್ಟು ಸಂಖ್ಯೆ 29.24 ಲಕ್ಷ ಮೀರಿದೆ. ಈವರೆಗೂ 29.75 ಲಕ್ಷಕ್ಕೂ ಅಧಿಕ ಮಂದಿ ಸೋಂಕಿನಿಂದ ಬಳಲಿದ್ದು, 37,780 ಮಂದಿ ಚಿಕಿತ್ಸೆ ಫಲಿಸದೆ ಮೃತಪಟ್ಟಿದ್ದಾರೆ. ಒಂದೇ ದಿನ ರಾಜ್ಯಾದ್ಯಂತ 10.26 ಲಕ್ಷ ಲಸಿಕೆ ವಿತರಿಸಲಾಗಿದೆ.

ಆಧಾರ:ವಿಜಯವಾಣಿ, ದಿನಾಂಕ:30.09.2021

## 66. ಕ್ಷೀರಬ್ಯಾಂಕ್ ಸ್ಥಾಪನೆಗೆ ನೂರು ಕೋಟಿ ರೂಪಾಯಿ

ರಾಜ್ಯದಲ್ಲಿ ಹಾಲು ಉತ್ಪಾದನಾ ಘಟಕಗಳು ಸೇರಿ ಸಹಕಾರ ತತ್ವದ ಅಡಿಯಲ್ಲಿ ಸುಸಜ್ಜಿತ ಹಾಲಿನ ಬ್ಯಾಂಕ್ ಸ್ಥಾಪನೆ ಮಾಡಿದರೆ ಅದಕ್ಕಾಗಿ ಸರ್ಕಾರದ ವತಿಯಿಂದ ನೂರು ಕೋಟಿ ರೂಪಾಯಿ ಅನುದಾನ ನೀಡಲಾಗುವುದು ಎಂದು ಮುಖ್ಯಮಂತ್ರಿಯವರು ಭರವಸೆ ನೀಡಿದ್ದಾರೆ.

ಬೆಂಗಳೂರಿನ ಅರಮನೆ ಮೈದಾನದಲ್ಲಿ ಕರ್ನಾಟಕ ಹಾಲು ಮಹಾಮಂಡಳದ ವತಿಯಿಂದ ಏರ್ಪಡಿಸಲಾಗಿದ್ದ ನೂತನ ಯೋಜನೆಗಳ ಸಾಮೂಹಿಕ ಉದ್ಘಾಟನಾ ಕಾರ್ಯಕ್ರಮಕ್ಕೆ ಚಾಲನೆ ನೀಡಿ ಬಳಿಕ ಮಾತನಾಡಿದ ಅವರು ಹಾಲು ಉತ್ಪಾದಕರುಗಳ ದುಡಿಮೆ ಪರಿಶ್ರಮದಿಂದ ಕೆಎಂಎಫ್ ಸಂಸ್ಥೆ ಬೆಳೆದು ನಿಂತಿದೆ. ರಾಜ್ಯದಲ್ಲಿನ ಒಟ್ಟು 14 ಹಾಲು ಉತ್ಪಾದನಾ ಘಟಕಗಳವರೆಲ್ಲ ಸೇರಿ ಸಹಕಾರಿ ತತ್ವದ ಅಡಿಯಲ್ಲಿ ಸುಸಜ್ಜಿತವಾದ ಹಾಲಿನ ಬ್ಯಾಂಕ್‌ವೊಂದನ್ನು ಸ್ಥಾಪಿಸುವುದು ಅಗತ್ಯವಾಗಿದೆ ಇದು ನಮ್ಮ ಆಶಯವು ಆಗಿದೆ ಎಂದರು.

ಹಾಲಿನ ಬ್ಯಾಂಕ್‌ನಿಂದ ಕ್ಷೀರೋದ್ಯಮಕ್ಕೆ ಉತ್ತೇಜನ ದೊರೆಯಲಿದೆ. ಈ ಮೂಲಕ ಹಾಲಿನ ಉತ್ಪಾದನೆಯು ಮತ್ತು ಮಾರುಕಟ್ಟೆಯು ವೃದ್ಧಿಸಲಿದ್ದು ಇದರಿಂದ ರೈತರಿಗೂ ಲಾಭವಾಗುತ್ತದೆ. ಹಾಲಿನ ಬ್ಯಾಂಕ್‌ಗೆ ಬೇರೆಯವರಿಂದ ಬಂಡವಾಳವು ಹರಿದು ಬರಲಿದೆ. ಸಹಕಾರಿ ರಂಗದ ಉದ್ದೇಶವು ಈಡೇರಿದಂತಾಗುತ್ತದೆ. ಹಾಲಿನ ಬ್ಯಾಂಕ್ ಮೂಲಕ ರೈತರಿಗೆ ಆರ್ಥಿಕ ಚಟುವಟಿಕೆಗಳಿಗೂ ಪ್ರೇರಪಣೆ ಸಿಕ್ಕಿಂತಾಗುತ್ತದೆ.

14 ಸಾವಿರ ಸಹಕಾರ ಸಂಸ್ಥೆಗಳಲ್ಲಿ ಸುಮಾರು 25 ಲಕ್ಷ ಸದಸ್ಯರಿದ್ದಾರೆ. ಕ್ಷೀರ ಬ್ಯಾಂಕ್ ಅನ್ನು ಕೆಎಂಎಫ್ ಸುವ್ಯವಸ್ಥಿತ ರೀತಿಯಲ್ಲಿ ನಿರ್ವಹಿಸಬಹುದಾಗಿದೆ ಎಂದು ಮುಖ್ಯಮಂತ್ರಿಯವರು ಕೆಎಂಎಫ್ ಆಡಳಿತ ಮಂಡಳಿಗೆ ಇದೇ ವೇಳೆ ಸಲಹೆ ನೀಡಿದರು.

ಹಾಲು ಮತ್ತು ಹಾಲಿನ ಉತ್ಪನ್ನಗಳ ಮಾರಾಟದಲ್ಲಿ ನಮ್ಮ ಕೆಎಂಎಫ್ ದೇಶದಲ್ಲಿ ದ್ವಿತೀಯ ಸ್ಥಾನದಲ್ಲಿದ್ದು, ಮುಂದಿನ ದಿನಗಳಲ್ಲಿ ಮೊದಲ ಸ್ಥಾನಕ್ಕೆ ಏರಬೇಕೆಂಬುದು ನಮ್ಮ ಆಶಯ. ಮಹಾರಾಷ್ಟ್ರ ಮತ್ತು ಗುಜರಾತ್ ರಾಜ್ಯಗಳಲ್ಲಿ ಸಹಕಾರಿ ಕ್ಷೇತ್ರವೇ ಸರ್ಕಾರವನ್ನು ಆಳುವಂತಿದೆ. ಅಷ್ಟೊಂದು ಪ್ರಬಲವಾಗಿ ಸಹಕಾರಿ ರಂಗವು ಬೆಳೆದಿದೆ. ನಮ್ಮಲ್ಲಿ ಸರ್ಕಾರಗಳೇ ಸಹಕಾರ ಕ್ಷೇತ್ರವನ್ನು ಆಳುವಂತಾಗಿದೆ. ಮುಂದಿನ ದಿನಗಳಲ್ಲಿ ಸಹಕಾರ ರಂಗಗಳ ಕೈ ಮೇಲಾಗಬೇಕೆಂದು ಮುಖ್ಯಮಂತ್ರಿಯವರು ಒತ್ತಿ ಹೇಳಿದರು.

ರಾಜ್ಯದ ಪ್ರತಿಯೊಂದು ಜಿಲ್ಲೆಗಳಲ್ಲೂ ಗೋಶಾಲೆ ಆರಂಭಿಸಲಾಗುವುದು. ಸರ್ಕಾರಿ ಗೋಶಾಲೆಗಳಲ್ಲಿ ಗೋವಿನ ಆರೈಕೆ, ಆಹಾರ ಸೇರಿದಂತೆ ಎಲ್ಲವನ್ನು ಕೆಎಂಎಫ್ ನೋಡಿಕೊಳ್ಳಬೇಕಾಗುತ್ತದೆ. ಹಾಲು ಕೊಡುವುದನ್ನು ನಿಲ್ಲಿಸಿದಂಥ ಗೋವುಗಳನ್ನು ಆರೈಕೆ ಮಾಡುವ ಮೂಲಕ ನಾವೆಲ್ಲರೂ ಗೋಮಾತೆಯ ಋಣವನ್ನು ತೀರಿಸೋಣ ಎಂದು ಮುಖ್ಯಮಂತ್ರಿಯವರು ಹೇಳಿದರು.

ಇದಕ್ಕೂ ಮುನ್ನ ಮುಖ್ಯಮಂತ್ರಿಯವರು ಗೋವಿಗೆ ಹಣ್ಣು ಬೆಲ್ಲ ತಿನ್ನಿಸಿ ಗೋಮಾತೆಗೆ ಪೂಜೆ ನೆರವೇರಿಸಿ ಮುತ್ತಿಕ್ಕುವ ಮೂಲಕ ಗೋವು ಪ್ರೀತಿ ಮೆರೆದರು. ಇದೇ ವೇಳೆ ಕೆ.ಎಂ.ಎಫ್.ವತಿಯಿಂದ ಹೊರ ತಂದ ಸುವರ್ಣಪಥ ಸ್ಮರಣ ಸಂಚಿಕೆ ಮತ್ತು ಪಶು ಸಂಗೋಪನಾ ಇಲಾಖೆಯಿಂದ ಹೊರ ತಂದ 2 ವರ್ಷದ ಸಾಧನಾ ಸಂಚಿಕೆಯನ್ನು ಅವರು ಬಿಡುಗಡೆ ಮಾಡಿದರು.

ಸಚಿವರಾದ ಡಾ:ಸಿ.ಎನ್.ಅಶ್ವತ್ಥ ನಾರಾಯಣ, ಎಸ್.ಟಿ. ಸೋಮಶೇಖರ್, ಪ್ರಭು ಚೌಹಾಣ್ ಕೆಎಂಎಫ್ ಅಧ್ಯಕ್ಷ ಶಾಸಕ ಬಾಲಚಂದ್ರ ಜಾರಕಿಹೊಳಿ, ಸಂಸದರಾದ ಡಾ:ಉಮೇಶ್ ಜಾಧವ್, ಕೆಎಂಎಫ್ ವ್ಯವಸ್ಥಾಪಕ ನಿರ್ದೇಶಕರಾದ ಸತೀಶ್ ಅವರು ಸೇರಿದಂತೆ ಹಾಲು ಮಹಾಮಂಡಲ ಒಕ್ಕೂಟಗಳ ಪದಾಧಿಕಾರಿಗಳು ಮತ್ತಿತರರು ಹಾಜರಿದ್ದರು.

ಆಧಾರ: ಸಂಯುಕ್ತ ಕರ್ನಾಟಕ, ದಿನಾಂಕ:30.09.2021

# ಭಾಗ–5

# ರಾಜ್ಯ ಜಲ, ನೆಲ, ಭಾಷೆ ಸುದ್ದಿಗಳು

## 1. ಮೇಕೆದಾಟು ಯೋಜನೆ ಅನುಷ್ಠಾನ ಎಂದ ಸಿಎಂ

ಮೇಕೆದಾಟು ಯೋಜನೆಗೆ ಅಗತ್ಯವಿರುವ ತೀರುವಳಿ ಪಡೆದು ಅನುಷ್ಠಾನ ಮಾಡಲು ಕ್ರಮ ಕೈಗೊಳ್ಳಲಾಗುವುದು ಎಂದು ರಾಜ್ಯ ಸರ್ಕಾರ ಸ್ಪಷ್ಟಪಡಿಸಿದೆ.

ಈ ಸಂಬಂಧ ಮುಖ್ಯಮಂತ್ರಿ ಅವರು ಪ್ರಕಟಣೆ ಹೊರಡಿಸಿದ್ದು, ಈ ಯೋಜನೆ ಅನುಷ್ಠಾನದಿಂದ ತಮಿಳುನಾಡಿಗೆ ಯಾವುದೇ ತೊಂದರೆ ಆಗುವುದಿಲ್ಲ, ರಾಜಕೀಯ ಕಾರಣಗಳಿಗೆ ತಮಿಳುನಾಡು ವಿರೋಧಿಸುತ್ತಿದೆ ಎಂದಿದ್ದಾರೆ.

ತಮಿಳುನಾಡು ಸರ್ಕಾರವು ಯೋಜನೆಯಿಂದ ತಮ್ಮ ರಾಜ್ಯಕ್ಕೆ ತೊಂದರೆಯಾಗುವುದಾಗಿ ವ್ಯಾಖ್ಯಾನಿಸಿದೆ. ಬೆಂಗಳೂರಿನ ಕುಡಿಯುವ ನೀರಿನ ಉದ್ದೇಶಕ್ಕೆ 4.75 ಟಿ.ಎಂ.ಸಿ ಒದಗಿಸಲು ಕೋರ್ಟ್ ಆದೇಶಿಸಿದೆ. ಇಷ್ಟು ನೀರು ಉಪಯೋಗಿಸಿಕೊಳ್ಳಲು 23.75 ಟಿಎಂಸಿ ನೀರು ಸಂಗ್ರಹಿಸಿಟ್ಟುಕೊಂಡು ಪೂರೈಸಬೇಕಾಗುತ್ತದೆ. ಇದರಿಂದ ತಮಿಳುನಾಡಿಗೆ ಸಮಸ್ಯೆಯಾಗಿದೆ ಎಂದಿದ್ದಾರೆ. ಯೋಜನೆ ಸಂಬಂಧ 2018ರಲ್ಲಿ ತಮಿಳುನಾಡು ಸರ್ಕಾರ ದಾವೆ (ಮಿಸಲೇನಿಯಸ್ ಅಪ್ಲಿಕೇಷನ್) ಸಲ್ಲಿಸಿದೆ. ಈ ನಡುವೆಯೂ ಯೋಜನೆ ಅನುಷ್ಠಾನಕ್ಕೆ ಯಾವುದೇ ಅಡೆತಡೆಯಿಲ್ಲ. ಮೇಕೆದಾಟು ಯೋಜನೆ ಕ್ರಮ ಕೈಗೊಳ್ಳಲಾಗುವುದು. ಶೀಘ್ರದಲ್ಲಿ ಈ ಪ್ರಕ್ರಿಯೆ ಕೈಗೊಂಡು ಯೋಜನೆ ಜಾರಿ ಮಾಡಲಾಗುವುದು ಎಂದು ಭರವಸೆ ನೀಡಿದ್ದಾರೆ.

**ಪತ್ರವ್ಯವಹಾರ ತಪ್ಪು–ಸಿದ್ದು:** ತಮಿಳುನಾಡು ಜೊತೆ ಪತ್ರ ವ್ಯವಹಾರ ಮಾಡಿದ್ದು ತಪ್ಪು. ಕೋರ್ಟ್ ಆದೇಶದ ಪ್ರಕಾರ ನಮ್ಮ ಕೆಲಸ ನಾವು ಮಾಡಬೇಕು ಎಂದು ಪ್ರತಿಪಕ್ಷ ನಾಯಕರು ಹೇಳಿದ್ದಾರೆ.

ಆಧಾರ:ವಿಜಯಕರ್ನಾಟಕ, ದಿನಾಂಕ:06.07.2021

## 2. ಮೇಕೆದಾಟುಗೆ ಓಕೆ

ಎಲ್ಲವೂ ಅಂದುಕೊಂಡತ್ತಾದರೆ ಸದ್ಯದಲ್ಲೇ ಮೇಕೆದಾಟು ಯೋಜನೆಗೆ ಕೇಂದ್ರ ಸರ್ಕಾರ ಅನುಮತಿ ನೀಡಲಿದೆ. ರಾಜ್ಯ ಪ್ರವಾಸದಲ್ಲಿರುವ ಜಲಶಕ್ತಿ ಸಚಿವರು ಸುಳಿವು ನೀಡಿದ್ದು ಸದ್ಯದಲ್ಲೇ ಯೋಜನೆಗೆ ಅನುಮತಿ ನೀಡುವುದಾಗಿ ಭರವಸೆ ನೀಡಿದ್ದಾರೆ. ವಿಧಾನಸೌಧದಲ್ಲಿ ಮುಖ್ಯಮಂತ್ರಿ, ರಾಜ್ಯದ ಸಚಿವರು ಹಾಗೂ ಜಲಸಂಪನ್ಮೂಲ ಇಲಾಖೆಯ ಅಧಿಕಾರಿಗಳ ಜೊತೆ ಶೆಖಾವತ್ ಸಭೆ ನಡೆಸಿದ್ದಾರೆ. ಈ ಸಂದರ್ಭದಲ್ಲಿ ಅಧಿಕಾರಿಗಳು ಮೇಕೆದಾಟು ಯೋಜನೆಯಿಂದಾಗಿ ಕರ್ನಾಟಕಕ್ಕೆ ಅಲ್ಲದೇ ತಮಿಳುನಾಡಿಗೂ ಅನುಕೂಲವಾಗಲಿದೆ ಎಂಬ ಬಗ್ಗೆ ಜಲಶಕ್ತಿ ಸಚಿವರಿಗೆ ಮನವರಿಕೆ ಮಾಡಿಕೊಡುವಲ್ಲಿ ಸಫಲರಾಗಿದ್ದಾರೆ ಎಂದು ತಿಳಿದುಬಂದಿದೆ. ಯೋಜನೆ ಜಾರಿಗೊಳಿಸುವಲ್ಲಿ ತಮಿಳುನಾಡಿನ ವಾದಕ್ಕೆ ಹೆಚ್ಚು ತಲೆಕೆಡಿಸಿಕೊಳ್ಳದೇ ಶೀಘ್ರವೇ ಅನುಮತಿ ನೀಡುವುದಾಗಿ ಶೇಖಾವತ್ ಅವರು ಭರವಸೆ ನೀಡಿದ್ದಾರೆ ಎಂದು ಹೇಳಲಾಗುತ್ತಿದೆ.

ತಮಿಳುನಾಡಿನ ರಾಜಕೀಯ ಪಕ್ಷಗಳು ಒಟ್ಟಾಗಿ ಮೇಕೆದಾಟು ಯೋಜನೆಗೆ ವಿರೋಧ ಮಾಡಿದ್ದವು. ಇದರ ನಡುವೆಯೇ ಕೇಂದ್ರ ಸಚಿವರಿಂದ ಒಪ್ಪಿಗೆಯ ಸುಳಿವು ಸಿಕ್ಕಿರುವುದು ಗಮನಾರ್ಹ.

ಪ್ರಸ್ತುತ ಮೇಕೆದಾಟು ಯೋಜನೆಗೆ ರಾಜ್ಯ ಸರ್ಕಾರ ಯೋಜನಾ ವರದಿ ಸಿದ್ಧಪಡಿಸಿದ್ದು, ಕೇಂದ್ರ ಸರ್ಕಾರದ ಅರಣ್ಯ ಇಲಾಖೆಯಿಂದ ಅನುಮತಿ ದೊರೆಯಬೇಕಿದೆ.

**ಯೋಜನೆಗಳ ಬಗ್ಗೆ ಚರ್ಚೆ:** ಸಭೆಯ ಬಳಿಕ ಮಾಧ್ಯಮಗಳೊಂದಿಗೆ ಮಾತನಾಡಿದ ಮುಖ್ಯಮಂತ್ರಿ ರಾಜ್ಯದ ನೀರಾವರಿ ಯೋಜನೆಗಳ ಕುರಿತು ಚರ್ಚೆ ನಡೆಸಿದ್ದೇವೆ. ಆದಷ್ಟು ಬೇಗ ಕೇಂದ್ರದಿಂದ ಎಲ್ಲ ರೀತಿಯ ಸಹಕಾರ ನೀಡುವುದಾಗಿ ಕೇಂದ್ರ ಸಚಿವರು ಹೇಳಿದ್ದಾರೆ. ಮೇಕೆದಾಟು ಯೋಜನೆ ಕುರಿತು ತಮಿಳುನಾಡು ಯಾವ ತೀರ್ಮಾನ ತೆಗೆದುಕೊಂಡಿದೆ ಎನ್ನುವ ಬಗ್ಗೆ ನಾನು ಮಾತನಾಡುವುದಿಲ್ಲ. ನಾವು ಮೇಕೆದಾಟು ಯೋಜನೆಯನ್ನು ಜಾರಿ ಮಾಡುತ್ತೇವೆ ಎಂದು ತಿಳಿಸಿದರು.

**ಭದ್ರಾ ಮೇಲ್ದಂಡೆ ಯೋಜನೆ:** ಮಧ್ಯ ಕರ್ನಾಟಕ ಭಾಗದ ಜಿಲ್ಲೆಗಳಲ್ಲಿ ನೀರಾವರಿ ಯೋಜನೆಗಳನ್ನು ಕೈಗೆತ್ತಿಕೊಳ್ಳಲು ಭದ್ರಾ ಮೇಲ್ದಂಡೆ ಯೋಜನೆ ಜಾರಿಗೆ ತರಲಾಗಿದ್ದು, ಈ ಯೋಜನೆ ಜಾರಿಯಿಂದ ಸುಮಾರು 2.5 ಲಕ್ಷ ಹೆಕ್ಟೇರ್ ಭೂಮಿ ನೀರಾವರಿ ವ್ಯಾಪ್ತಿಗೆ ಒಳಪಡಲಿದೆ. ಪ್ರಸ್ತುತ ಭದ್ರಾ ಮೇಲ್ದಂಡೆ ಯೋಜನೆಯಿಂದ ಚಿತ್ರದುರ್ಗ, ತುಮಕೂರು, ಚಿಕ್ಕಮಗಳೂರು ಸೇರಿ ವಿವಿಧ ಜಿಲ್ಲೆಗಳ ಕೆರೆ ತುಂಬಿಸುವ ಯೋಜನೆ ಕಾಮಗಾರಿಗಳು ಪ್ರಗತಿ ಹಂತದಲ್ಲಿವೆ. ಕೇಂದ್ರ ಸರ್ಕಾರ ರಾಷ್ಟ್ರೀಯ ಯೋಜನೆಯನ್ನಾಗಿ ಘೋಷಣೆ ಮಾಡಿದರೆ, ಕೇಂದ್ರದಿಂದ ಆರ್ಥಿಕ ಸಹಾಯ ದೊರೆಯಲಿದೆ. ಕೇಂದ್ರ ಸರ್ಕಾರವು ಈ ಯೋಜನೆಗೆ ಹಣಕಾಸು ಒದಗಿಸಲು ತಾತ್ವಿಕ ಒಪ್ಪಿಗೆ ನೀಡಿದ್ದು ಕೇಂದ್ರ ಸಚಿವ ಸಂಪುಟ ಅನುಮತಿ ದೊರೆಯಬೇಕಿದೆ.

**ಕೃಷ್ಣಾ ಮೇಲ್ದಂಡೆ ಯೋಜನೆ:** ಕೃಷ್ಣಾ ಜಲ ವಿವಾದದ ನ್ಯಾಯ ಮಂಡಳಿ ಮಹಾರಾಷ್ಟ್ರ, ಆಂಧ್ರಪ್ರದೇಶ ಹಾಗೂ ಕರ್ನಾಟಕಕ್ಕೆ ನೀರು ಹಂಚಿಕೆ ಮಾಡಿರುವ ಕುರಿತು ಕೇಂದ್ರ ಸರ್ಕಾರ ಅಧಿಕೃತ ಗೆಜೆಟ್ ನೋಟಿಫಿಕೇಶನ್ ಹೊರಡಿಸಬೇಕಿದೆ. ಈ ಕುರಿತು ರಾಜ್ಯ ಸರ್ಕಾರ ಕೇಂದ್ರ ಸಚಿವರ ಗಮನಕ್ಕೆ ತಂದಿದ್ದು ಈ ಕುರಿತು ಕೇಂದ್ರ ಸರ್ಕಾರ ಗೆಜೆಟ್ ನೋಟಿಫಿಕೇಶನ್ ಹೊರಡಿಸಿದರೆ, ಕೃಷ್ಣಾ ಮೇಲ್ದಂಡೆ ಮೂರನೇ ಹಂತದ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲು ರಾಜ್ಯ ಸರ್ಕಾರಕ್ಕೆ ಅನುಕೂಲವಾಗಲಿದೆ. ಆಲಮಟ್ಟಿ ಜಲಾಶಯದ ಎತ್ತರವನ್ನು 519 ಮೀಟರ್‌ನಿಂದ 524 ಮೀಟರ್‌ಗೆ ಹೆಚ್ಚಳ ಮಾಡಲು ಅವಕಾಶ ದೊರೆಯಲಿದೆ. ಈ ಯೋಜನೆ ಅನುಷ್ಠಾನಕ್ಕೆ ರಾಜ್ಯ ಸರ್ಕಾರ ಪ್ರತಿ ವರ್ಷ ಬಜೆಟ್‌ನಲ್ಲಿ ಹಣ ಮೀಸಲಿಟ್ಟಿದೆ.

**ಮಹದಾಯಿ ಯೋಜನೆ:** ಮಹದಾಯಿ ಯೋಜನೆ ಅನುಮತಿ ರಾಜ್ಯ ಸರ್ಕಾರ ಮನವಿ ಮಾಡಿದೆ. ಕೇಂದ್ರ ಜಲಶಕ್ತಿ ಸಚಿವರು ಮಹದಾಯಿ ಯೋಜನೆಗೆ ತಕ್ಷಣವೇ ಅನುಮತಿ ನೀಡುವ ಬಗ್ಗೆ ಸಕಾರಾತ್ಮಕವಾಗಿ ಸ್ಪಂದಿಸಿಲ್ಲ ಎಂದು ತಿಳಿದು ಬಂದಿದೆ. ಈ ಯೋಜನೆ ಜಾರಿಗೆ ಅಡ್ಡಿಪಡಿಸಿರುವ ಗೋವಾ ಸರ್ಕಾರದವರನ್ನು ದೆಹಲಿಗೆ ಕರೆಯಿಸಿಕೊಂಡು ಮಾತುಕತೆ ನಡೆಸಿ, ಯೋಜನೆಗೆ ಒಪ್ಪಿಗೆ ನೀಡುವ ಭರವಸೆ ನೀಡಿದ್ದಾರೆ ಎಂದು ತಿಳಿದು ಬಂದಿದೆ.

ಆಧಾರ:ಉದಯವಾಣಿ, ದಿನಾಂಕ:14.07.2021

### 3. ಜಲಜೀವನ್ ಮಿಷನ್ ಪೂರ್ಣಗೊಳಿಸಿ

ಮನೆ ಮನೆಗೂ ನಲ್ಲಿ ಮೂಲಕ ಶುದ್ಧ ಕುಡಿಯುವ ನೀರು ಒದಗಿಸುವ ಕರ್ನಾಟಕದ ಜಲಜೀವನ್ ಮಿಷನ್ ಕಾರ್ಯಕ್ರಮವನ್ನು ನಿಗದಿತ ಅವಧಿಯೊಳಗೆ ಪೂರ್ಣಗೊಳಿಸುವಂತೆ ಕೇಂದ್ರ ಜಲ ಶಕ್ತಿ ಸಚಿವರು ಸೂಚಿಸಿದ್ದಾರೆ.

ವಿಧಾನಸೌಧದ ಸಮಿತಿ ಕೊಠಡಿಯಲ್ಲಿ ಬಿ.ಎಸ್.ಯಡಿಯೂರಪ್ಪ ಹಾಗೂ ರಾಜ್ಯ ಮತ್ತು ಕೇಂದ್ರ ಸರ್ಕಾರದ ಹಿರಿಯ ಅಧಿಕಾರಿಗಳೊಂದಿಗೆ ಸಭೆ ನಡೆಸಿ, ಜಲಜೀವನ್ ಮಿಷನ್ ಯೋಜನೆಯ ಪ್ರಗತಿ ಪರಿಶೀಲಿಸಿದರು.

ಜಲಜೀವನ್ ಮಿಷನ್ ಯೋಜನೆ ಮೂಲಕ 2024ರ ವೇಳೆಗೆ ದೇಶದ 18.93 ಕೋಟಿ ಗ್ರಾಮೀಣ ಮನೆಗಳಲ್ಲಿ 15.70 ಕೋಟಿ ಮನೆಗಳಿಗೆ ಕ್ರಿಯಾತ್ಮಕ ನಳ ಸಂಪರ್ಕ ನೀಡುವ ಗುರಿ ಹೊಂದಲಾಗಿದೆ. ಈ ಯೋಜನೆಯಡಿ ಕೇವಲ ಸೌಲಭ್ಯ ಕಲ್ಪಿಸುವುದು ಮಾತ್ರವಲ್ಲ. ನಿರಂತರವಾಗಿ ಕುಡಿಯುವ ನೀರು ಒದಗಿಸುವುದು ಸರ್ಕಾರದ ಆದ್ಯತೆ. ಅಂತೆಯೇ ರಾಜ್ಯದಲ್ಲಿ ಆದ್ಯತಾ ಜಿಲ್ಲೆಗಳಾದ ರಾಯಚೂರು ಹಾಗೂ ಯಾದಗಿರಿ ಜಿಲ್ಲೆಗಳಲ್ಲಿ ಕ್ರಿಯಾತ್ಮಕ ನಳ ಸಂಪರ್ಕಗಳನ್ನು ಆದ್ಯತೆಯ ಮೇರೆಗೆ ಒದಗಿಸುವಂತೆ ಸಚಿವರು ತಿಳಿಸಿದರು.

ನಳ ಸಂಪರ್ಕ ನೀಡುವುದರೊಂದಿಗೆ ಪೂರೈಸುವ ನೀರಿನ ಗುಣಮಟ್ಟವನ್ನು ಖಾತರಿಪಡಿಸುವಂತೆ ಸಚಿವರು ಸಲಹೆ ನೀಡಿದರು. ರಾಜ್ಯದಲ್ಲಿ ಯೋಜನೆಯ ಪ್ರಗತಿಯ ಕುರಿತು ಮಾಹಿತಿ ನೀಡಿದ ಮುಖ್ಯಮಂತ್ರಿ ಅವರು ರಾಜ್ಯದ 91.19 ಲಕ್ಷ ಗ್ರಾಮೀಣ ಕುಟುಂಬಗಳಿಗೆ ತಲಾ 55 ಎಲ್‌ಪಿಸಿಡಿ ಶುದ್ಧ ನೀರು ಒದಗಿಸುವ ಗುರಿ ಹೊಂದಲಾಗಿದೆ ಎಂದು ವಿವರಿಸಿದರು.

ಅದ್ಯತಾ ಜಿಲ್ಲೆಗಳಾದ ರಾಯಚೂರು ಜಿಲ್ಲೆಗೆ 2000 ಕೋಟಿ ವೆಚ್ಚದಲ್ಲಿ ಬಹುಗ್ರಾಮ ಯೋಜನೆ ರೂಪಿಸಲಾಗಿದ್ದು ಸಚಿವ ಸಂಪುಟ ಅನುಮೋದನೆ ನೀಡಲಾಗಿದೆ. ಶೀಘ್ರವೇ ಟೆಂಡರ್ ಪ್ರಕ್ರಿಯೆ ಪ್ರಾರಂಭವಾಗಲಿದೆ. ಯಾದಗಿರಿ ಜಿಲ್ಲೆಯಲ್ಲಿಯೂ ಬಹುಗ್ರಾಮ ಯೋಜನೆ ರೂಪಿಸಲಾಗುತ್ತಿದೆ ಎಂದು ಮುಖ್ಯಮಂತ್ರಿಗಳು ವಿವರಿಸಿದರು.

ಗೃಹ ಸಚಿವ ಹಾಗೂ ಸಣ್ಣ ನೀರಾವರಿ ಹಾಗೂ ಕೇಂದ್ರ ಮತ್ತು ರಾಜ್ಯ ಸರ್ಕಾರದ ಹಿರಿಯ ಅಧಿಕಾರಿಗಳು ಸಭೆಯಲ್ಲಿ ಭಾಗವಹಿಸಿದ್ದರು.

ಆಧಾರ:ಉದಯವಾಣಿ, ದಿನಾಂಕ:14.07.2021

## 4. ರಾಜ್ಯದಲ್ಲಿ ರಣ ಮಳೆ

ರಾಜ್ಯದಲ್ಲಿ ಎರಡು ದಿನಗಳಿಂದ ಸುರಿಯುತ್ತಿರುವ ಮಳೆ ತನ್ನ ಉಗ್ರರೂಪ ಪ್ರದರ್ಶಿಸಿದ್ದು ಉತ್ತರ ಕನ್ನಡ ಸೇರಿ ಏಳು ಜಿಲ್ಲೆಗಳಲ್ಲಿ ಜನಜೀವನ ಅಸ್ತವ್ಯಸ್ತಗೊಂಡಿದೆ. ಉತ್ತರ ಕನ್ನಡದ ಮಲೆನಾಡಿನ ತಾಲ್ಲೂಕುಗಳಲ್ಲಿ ಪ್ರವಾಹ ಕಾಣಿಸಿಕೊಂಡಿದ್ದರೆ ಉತ್ತರ ಕರ್ನಾಟಕದಲ್ಲಿ ನದಿಗಳು ಅಪಾಯದ ಮಟ್ಟ ಮೀರಿ ಹರಿಯುತ್ತಿರುವ ಹಿನ್ನೆಲೆಯಲ್ಲಿ ಪ್ರವಾಹದ ಆತಂಕ ಕಾಣಿಸಿಕೊಂಡಿದೆ. ಚಾರ್ಮುಡಿ ಘಾಟ್ ಸೇರಿ ಕೊಡಗು, ಚಿಕ್ಕಮಗಳೂರು, ಉತ್ತರ ಕನ್ನಡದ ಹಲವೆಡೆ ಮತ್ತೆ ಭೂಕಂಪ ಸಂಭವಿಸಿದ್ದು, ವಾಹನ ಸಂಚಾರಕ್ಕೆ ಅಡ್ಡಿಯುಂಟಾಗಿದೆ. ಮಳೆ ಸಂಬಂಧಿ ಅನಾಹುತಗಳಿಗೆ ರಾಜ್ಯದಲ್ಲಿ ಬಾಲಕಿ ಸೇರಿ 9 ಮಂದಿ ಬಲಿಯಾಗಿದ್ದು, ಒಬ್ಬರು ನಾಪತ್ತೆಯಾಗಿದ್ದಾರೆ. ಉತ್ತರ ಕನ್ನಡದಲ್ಲಿ ಮಳೆ ಅನಾಹುತ ಸೃಷ್ಟಿಸಿದ್ದು, ಹೆಲಿಕ್ಯಾಪ್ಟರ್ ಬಳಸಿ ರಕ್ಷಣಾ ಕಾರ್ಯ ನಡೆಸಲಾಗುತ್ತಿದೆ. ಕಾಳಿ, ಅಘನಾಶಿನಿ, ಗಂಗಾವಳಿ, ಲಕ್ಷ್ಮಣತೀರ್ಥ, ಕಾವೇರಿಯಲ್ಲಿ ಪ್ರವಾಹ ಉಂಟಾಗಿದೆ.

ಆಧಾರ:ಕನ್ನಡ ಪ್ರಭ, ದಿನಾಂಕ:24.07.2021

## 5. ಕರಗದ ನೆರೆಯ ಹೊರೆ

ರಾಜ್ಯದಲ್ಲಿ ಮಳೆ ಪ್ರಮಾಣ ಕಡಿಮೆಯಾದರೂ ಪ್ರವಾಹದ ಅಬ್ಬರ ಜೋರಾಗಿಯೇ ಇದೆ. ಕರಾವಳಿ, ಮಲೆನಾಡು ಹಾಗೂ ಉತ್ತರ ಕರ್ನಾಟಕ ಭಾಗದಲ್ಲಿ ಮಳೆ ಮತ್ತು ಪ್ರವಾಹ ತೀವ್ರ ಹಾನಿಯುಂಟು ಮಾಡಿದೆ. ಇದುವರೆಗೆ 9 ಜನರ ಸಾವು ಸಂಭವಿಸಿದ್ದು, 11 ಜಿಲ್ಲೆಗಳ 45 ತಾಲ್ಲೂಕುಗಳಲ್ಲಿ ಮಳೆಯಿಂದಾಗಿ ಸಂಕಷ್ಟ ಎದುರಾಗಿದೆ. ಅಪಾರ ಪ್ರಮಾಣದ ಬೆಳೆ ಹಾನಿಯಾಗಿದೆ.

ಪ್ರವಾಹದಿಂದಾಗಿ ರಾಜ್ಯದಲ್ಲಿ 58,960 ಎಕರೆಯಲ್ಲಿ ಬೆಳೆದ ಬೆಳೆ ಹಾನಿಯುಂಟಾಗಿದ್ದು 1962 ಎಕರೆಯಲ್ಲಿ ಬೆಳೆದಿದ್ದ ತೋಟಗಾರಿಕೆ ಬೆಳೆಗಳು ಸಹ ನಷ್ಟವಾಗಿವೆ. ಸುಮಾರು 555 ಕಿ.ಮೀ. ರಸ್ತೆ ಹಾಗೂ 123 ಸೇತುವೆ 213 ಶಾಲೆ, 33 ಆರೋಗ್ಯ ಕೇಂದ್ರಗಳಿಗೆ ಹಾನಿವುಂಟಾಗಿದೆ.

**ಜಿಲ್ಲೆಯಲ್ಲೇ ಇರಿ:** ಪ್ರವಾಹ ಹಿನ್ನೆಲೆಯಲ್ಲಿ ಬಿ.ಎಸ್.ಯಡಿಯೂರಪ್ಪ ಅವರು ಬೆಳಗಾವಿ ಜಿಲ್ಲಾ ಪ್ರವಾಸ ಕೈಗೊಳ್ಳಲಿದ್ದು, ಜಿಲ್ಲಾ ಉಸ್ತುವಾರಿ ಸಚಿವರು ಆಯಾ ಜಿಲ್ಲೆಗಳಲ್ಲೇ ವಾಸ್ತವ್ಯ ಹೂಡಿ ಪರಿಹಾರ ಕಾರ್ಯ ನೋಡಿಕೊಳ್ಳುವಂತೆ ಉಸ್ತುವಾರಿ ಸಚಿವರಿಗೆ ನಿರ್ದೇಶನ ನೀಡಿದ್ದಾರೆ.

ಪ್ರವಾಹದಿಂದ ತೊಂದರೆಗೊಳಗಾಗಿರುವ ಜಿಲ್ಲೆಗಳ ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ಉಸ್ತುವಾರಿ ಸಚಿವರ ಜೊತೆ ಮಾತನಾಡಿ ಮಾಹಿತಿ ಪಡೆದರು. ಪ್ರವಾಹ ಪೀಡಿತ ಜಿಲ್ಲಾಧಿಕಾರಿಗಳ ಜೊತೆ ನಿರಂತರ ಸಂಪರ್ಕ ಸಾಧಿಸಿ ತುರ್ತು ಪರಿಹಾರ ಕಾರ್ಯ, ಪ್ರವಾಹದಲ್ಲಿ ಸಿಲುಕಿರುವ ಜನರ ರಕ್ಷಣೆ ಆಶ್ರಯ ಕೇಂದ್ರಗಳ ಸ್ಥಾಪನೆಗಳ ಬಗ್ಗೆ ನಿಗಾವಹಿಸುವಂತೆ ಸೂಚಿಸಿದ್ದಾರೆ.

**ಪ್ರವಾಹ ಸ್ಥಿತಿ ಎದುರಿಸಲು ಸಜ್ಜು:** ರಾಜ್ಯದಲ್ಲಿ ಪ್ರವಾಹ ಪರಿಸ್ಥಿತಿ ಎದುರಿಸಲು ಸುಮಾರು ರೂ.950 ಕೋಟಿ ಮೀಸಲಿರಿಸಲಾಗಿದ್ದ, ಪ್ರವಾಹ ಪೀಡಿತ ಪ್ರದೇಶಗಳಲ್ಲಿ ಬಳಸಿಕೊಳ್ಳಲು ಜಿಲ್ಲಾಧಿಕಾರಿಗಳಿಗೆ ಸೂಚನೆ ನೀಡಲಾಗಿದೆ ಎಂದು ಕಂದಾಯ ಸಚಿವರು ಹೇಳಿದ್ದಾರೆ. ಸಂಪೂರ್ಣವಾಗಿ ಮನೆ ಹಾನಿಯಾದ ಸಂತ್ರಸ್ತರಿಗೆ ರೂ. 5 ಲಕ್ಷ ನೀಡಲಾಗುವುದು ಹಾಗೂ ತಾತ್ಕಾಲಿಕವಾಗಿ ರೂ.10,000 ಗಳನ್ನು ನೀಡಲಾಗುತ್ತದೆ. ಪೂರ್ಣ ಹಾನಿಗೊಂಡಿರುವ ಮನೆಗಳಿಗೆ ತಕ್ಷಣ ರೂ.1.00 ಲಕ್ಷ ಬಿಡುಗಡೆ ಮಾಡಲು ಆಯಾ ಜಿಲ್ಲೆಗಳ ಜಿಲ್ಲಾಧಿಕಾರಿಗಳ ವಿವೇಚನೆಗೆ ಬಿಡಲಾಗಿದೆ ಎಂದರು.

ಆಧಾರ:ಉದಯವಾಣಿ, ದಿನಾಂಕ:25.07.2021

## 6. ಮಹಾ ಪ್ರವಾಹಕ್ಕೆ ಕೃಷ್ಣಾ, ತುಂಗ ಭದ್ರಾ ಕಣಿವೆ ತತ್ತರ

ರಾಜ್ಯದಲ್ಲಿ ಮಳೆಯ ಆರ್ಭಟ ಇಳಿದಿದೆ. ಇದರಿಂದ ಪ್ರವಾಹ ಕೆಲವೆಡೆ ಇಳಿದಿದ್ದು, ಮುಳುಗಿದ್ದ ಸೇತುವೆಗಳು ಸೇವೆಗೆ ಲಭ್ಯವಾಗಿವೆ. ಮಹಾರಾಷ್ಟ್ರದಲ್ಲಿ ಮಳೆ ಮುಂದುವರೆದಿರುವ ಕಾರಣ, ತುಂಗಾಭದ್ರ, ಕೃಷ್ಣಾ ಕೊಳ್ಳದಲ್ಲಿ ಪ್ರವಾಹ ಪರಿಸ್ಥಿತಿ ಮುಂದುವರಿದಿದೆ. ಬೆಳಗಾವಿ ಜಿಲ್ಲೆಯಲ್ಲಿ ಕೃಷ್ಣಾ ಘಟಪ್ರಭಾದಿಂದಾಗಿ ಪ್ರವಾಹ ಸ್ಥಿತಿ ಮುಂದುವರಿದಿದೆ. ನಿಪ್ಪಾಣಿ ತಾಲ್ಲೂಕಿನ ವೇದಗಂಗಾ ನದಿಯಲ್ಲಿ ನೀರು ಇಳಿದಿದ್ದು ಯಮಗರ್ಣಿ ಸೇತುವೆ ವಾಹನ ಸಂಚಾರ ಪುನಾರಂಭಗೊಂಡಿದೆ. ತುಂಗಾಭದ್ರ ನದಿಯಲ್ಲಿ ನೀರಿನ ಮಟ್ಟ ಯಥಾಸ್ಥಿತಿಯಲ್ಲಿದ್ದು, ಹಂಪಿಯ ಹಲವು ಸ್ಮಾರಕಗಳು ನೀರಿನಲ್ಲಿಯೇ ಮುಳುಗಿದೆ.

ಮಹಾರಾಷ್ಟ್ರದ ಘಟ್ಟ ಪ್ರದೇಶ ಮತ್ತು ಕೃಷ್ಣಾ ಕೊಳ್ಳದಿಂದ ಬರುತ್ತಿರುವ ನೀರಿನಿಂದಾಗಿ ಬೆಳಗಾವಿ ಜಿಲ್ಲೆಯ ಅಥಣಿ, ಕಾಗವಾಡ ತಾಲ್ಲೂಕುಗಳು ಹಾಗೂ ಬಾಗಲಕೋಟೆ ಜಿಲ್ಲೆಯ ಜಮಖಂಡಿ, ರಬಕವಿ–ಬಹನಟ್ಟಿ ತಾಲ್ಲೂಕಿನ ಕೆಲವು ಭಾಗಗಳಲ್ಲಿ ಪ್ರವಾಹ ಯಥಾಸ್ಥಿತಿಯಲ್ಲಿದೆ. ಮುಧೋಳ ತಾಲ್ಲೂಕಿನಲ್ಲಿ ಮಾತ್ರ ಯಥಾಸ್ಥಿತಿ ಮುಂದುವರಿದಿದೆ.

ಪ್ರವಾಹದಿಂದ ಬೆಳಗಾವಿ ಜಿಲ್ಲೆಯಲ್ಲಿ 106 ಗ್ರಾಮಗಳು ಬಾಧಿತವಾಗಿದ್ದು, 8270 ಪ್ರವಾಹದಿಂದ ಸಂತ್ರಸ್ತರಾಗಿದ್ದಾರೆ. ರಕ್ಷಣಾ ಸಿಬ್ಬಂದಿ ಕಾರ್ಯಾಚರಣೆ ನಡೆಸಿ 7995 ಜನರನ್ನು ಸುರಕ್ಷಿತ ಸ್ಥಳಕ್ಕೆ ಸ್ಥಳಾಂತರಿಸಿದ್ದಾರೆ. ಈವರೆಗೆ ಜಿಲ್ಲೆಯಲ್ಲಿ 1166 ಮನೆಗಳು ಭಾಗಶಃ ಬಿದ್ದಿದ್ದು 28 ಮನೆಗಳು ಸಂಪೂರ್ಣವಾಗಿ ಬಿದ್ದಿವೆ. 79 ಕಾಳಜಿ ಕೇಂದ್ರಗಳನ್ನು ತೆರೆಯಲಾಗಿದ್ದು, ಇಲ್ಲಿ ಒಟ್ಟು 4960 ಜನರು ತಾತ್ಕಾಲಿಕವಾಗಿ ಆಶ್ರಯ ಪಡೆದಿದ್ದಾರೆ. ಒಟ್ಟು 68 ಸೇತುವೆಗಳು ಇನ್ನೂ ಜಲಾವೃತಗೊಂಡಿವೆ. ಬಾಗಲಕೋಟೆ ಜಿಲ್ಲೆಯ 20ಕ್ಕೂ ಕೆಳಹಂತದ ಸೇತುವೆಗಳು ಸಂಪೂರ್ಣವಾಗಿ ಮುಳುಗಡೆಯಾಗಿವೆ.

**ಅಬ್ಬರಿಸುತ್ತಿರುವ ಕೃಷ್ಣಾ:** ಮಹಾರಾಷ್ಟ್ರದ ಘಟ್ಟ ಪ್ರದೇಶದಿಂದ ಕೃಷ್ಣಾ ನದಿಗೆ 3 ಲಕ್ಷ ಕ್ಯೂಸೆಕ್ಸ್ ನೀರು ಬರುತ್ತಿದೆ. ಆಲಮಟ್ಟಿಯಿಂದ ಅಷ್ಟೇ ಪ್ರಮಾಣದ ನೀರನ್ನು ಹೊರಗೆ ಬಿಡಲಾಗುತ್ತಿದೆ. ಬೆಳಗಾವಿಯಲ್ಲಿ ಕೃಷ್ಣಾ ನದಿ ತುಂಬಿ ಹರಿಯುತ್ತಿರುವ ಪರಿಣಾಮವಾಗಿ ಅಥಣಿ ತಾಲ್ಲೂಕಿನ 22 ಗ್ರಾಮಗಳಿಗೆ ನೀರು ನುಗ್ಗಿದೆ. ಘಟಪ್ರಭಾ ನದಿ ನೀರಿನ ಹರಿಯುವಿಕೆಯಲ್ಲಿ ಕಡಿಮೆಯಾಗಿದೆ. ಗೋಕಾಕ ನಗರ ಸೇರಿದಂತೆ ಹಲವಾರು ಹಳ್ಳಿಗಳಲ್ಲಿನ ನೀರಿನ ಮಟ್ಟ ಐದಾರು ಅಡಿಯವರೆಗೆ ಇಳಿಮುಖವಾಗಿದೆ.

ತುಂಗಾಭದ್ರಾ ಮತ್ತು ಮಲಪ್ರಭಾದ ಪ್ರವಾಹದಿಂದಾಗಿ ಎರಡೂ ಅಣೆಕಟ್ಟಿನಿಂದ ಹೆಚ್ಚುವರಿ ನೀರನ್ನು ನದಿಗೆ ಬಿಟ್ಟಿರುವ ಹಿನ್ನೆಲೆಯಲ್ಲಿ ನದಿಗಳ ತಟದಲ್ಲಿ ಪ್ರವಾಹ ಪರಿಸ್ಥಿತಿ ಗಂಭೀರವಾಗಿದೆ. ತುಂಗಾಭದ್ರಾ ಜಲಾಶಯದ ಎಲ್ಲ 33 ಗೇಟ್‌ಗಳನ್ನು ಎತ್ತರಿಸಿ 1.5 ಲಕ್ಷ ಕ್ಯೂಸೆಕ್ಸ್ ನೀರನ್ನು ನದಿಗೆ ಬಿಡಲಾಗಿದೆ. ಇದರಿಂದ ಹಂಪಿ, ಗಂಗಾವತಿ ಭಾಗದ ಹಲವಾರು ಸ್ಮಾರಕಗಳು ಜಲಾವೃತವಾಗಿವೆ. ಕೊಪ್ಪಳ–ಬಳ್ಳಾರಿಗೆ ಸಂಪರ್ಕ ಕಲ್ಪಿಸುವ ಗಂಗಾವತಿ–ಕಂಪ್ಲಿ ಸೇತುವೆಯ ಮೇಲೂ ನೀರು ಹರಿಯುತ್ತಿದೆ.

ಆಧಾರ:ಉದಯವಾಣಿ, ದಿನಾಂಕ:2607.2021

## 7. ಮತ್ತೆ 4 ದಿನ ಭಾರೀ ಮಳೆ ಆತಂಕ

ಹವಾಮಾನ ಏರಿಳಿತದಿಂದಾಗಿ ರಾಜ್ಯದಲ್ಲಿ ಜುಲೈ 30ರವರೆಗೆ ಮತ್ತು ಭಾರಿ ಪ್ರಮಾಣದಲ್ಲಿ ಮಳೆ ಆರ್ಭಟಿಸಲಿದೆ ಎಂದು ಹವಾಮಾನ ಇಲಾಖೆ ಮುನ್ಸೂಚನೆ ನೀಡಿದೆ.

ಕಳೆದ ಒಂದು ವಾರದಿಂದ ರಾಜ್ಯಾದ್ಯಂತ ಅಬ್ಬರಿಸಿದ ಮಳೆಯಿಂದಾಗಿ ಜನರು ಸಂಕಷ್ಟದಲ್ಲಿ ಸಿಲುಕಿ ಚೇತರಿಸಿಕೊಳ್ಳುವ ಮುನ್ನವೇ ಮತ್ತೊಮ್ಮೆ ಭಾರಿ ಪ್ರಮಾಣದಲ್ಲಿ ಮಳೆಯಾಗಲಿದೆ ಎಂದು ಹವಾಮಾನ ಇಲಾಖೆ ತಿಳಿಸಿದೆ. ಬಂಗಾಳ ಕೊಲ್ಲಿಯಲ್ಲಿ ಎದ್ದಿರುವ ಮೇಲ್ಮೈ ಸುಳಿಗಾಳಿ ತುಸು ತೀವ್ರಗೊಂಡಿದೆ. ಇದರ ತೀವ್ರತೆ ಜುಲೈ 28ರಂದು ಮತ್ತಷ್ಟು ಹೆಚ್ಚಾಗಿ ಬಂಗಾಳ ಕೊಲ್ಲಿಯಲ್ಲಿ ಉತ್ತರ ಭಾಗದಲ್ಲಿ ವಾಯುಭಾರ ಸೃಷ್ಟಿಯಾಗುವ ಸಾಧ್ಯತೆ ಇದೆ.

ಇದರ ಪ್ರವಾವದಿಂದ ಜುಲೈ 30ರವರೆಗೆ ಮಲೆನಾಡು ಭಾಗ ಕರಾವಳಿಯ ಉಡುಪಿ, ಉತ್ತರಕನ್ನಡ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಗುಡುಗು ಸಹಿತ ಭಾರಿ ಮಳೆಯಾಗಲಿದೆ. ಉತ್ತರ ಹಾಗೂ ದಕ್ಷಿಣ ಒಳನಾಡಿನ ಕೆಲವು ಜಿಲ್ಲೆಗಳಲ್ಲಿ ಅಲ್ಲಲ್ಲಿ ಜೋರಾದ ಮಳೆ ಆಗುವ ಸಂಭವವಿದೆ. ಮಂಗಳೂರು–ಕಾರವಾರ ಭಾಗದ ಸಮುದ್ರದಲ್ಲಿ ಸುಮಾರು 3.5 ಮೀಟರ್ ಎತ್ತರದ ಅಲೆಗಳು ತೀರಕ್ಕೆ ಬಂದಪ್ಪಳಿಸಲಿವೆ.

ಕಳೆದ 24 ಗಂಟೆಯಲ್ಲಿ ರಾಜ್ಯದಲ್ಲಿ ಮಳೆ ಕಡಿಮೆಯಾಗಿದ್ದು ಮೂರು ಜಿಲ್ಲೆ ವ್ಯಾಪ್ತಿಯಲ್ಲಿ ಮಾತ್ರ ಅಧಿಕ ಮಳೆಯಾಗಿದೆ. ಕೊಡಗಿನ ಭಾಗಮಂಡಲದಲ್ಲಿ 13 ಸೆಂ.ಮೀ. ದಕ್ಷಿಣ ಕನ್ನಡ ಜಿಲ್ಲಾ ವ್ಯಾಪ್ತಿಯ ಸುಬ್ರಮಣ್ಯದಲ್ಲಿ 11 ಸೆಂ.ಮೀ. ಪುತ್ತೂರು ಮತ್ತು ಉಪ್ಪಿನಂಗಡಿ ತಲಾ 10, ಸುಳ್ಯ ಮತ್ತು ಕೊಡಗಿನ ವಿರಾಜಪೇಟೆಯಲ್ಲಿ ತಲಾ 9, ದಕ್ಷಿಣ ಕನ್ನಡದ ಮಂಗಳೂರು ನಗರ, ಬೆಳ್ತಂಗಡಿ, ಧರ್ಮಸ್ಥಳ ತಲಾ 8 ಹಾಗೂ ಶಿವಮೊಗ್ಗದ ಆಗುಂಬೆಯಲ್ಲಿ 9 ಸೆಂ.ಮೀ. ಮಳೆ ದಾಖಲಾಗಿದೆ.

ಆಧಾರ:–ಕನ್ನಡ ಪ್ರಭ, ದಿನಾಂಕ:27.07.2021

## 8. ಕಲ್ಯಾಣ ಕರ್ನಾಟಕ ಕರಾವಳಿಯಲ್ಲಿ ಉತ್ತಮ ಮಳೆ

ಕಲ್ಯಾಣ ಕರ್ನಾಟಕ ಕರಾವಳಿ ಜಿಲ್ಲೆಗಳು ಹಾಗೂ ಕೊಡಗಿನಲ್ಲಿ ಉತ್ತಮ ಮಳೆಯಾಗಿದೆ. ಮಹಾರಾಷ್ಟ್ರದ ಹಲವೆಡೆ ಭಾರಿ ಮಳೆ ಸುರಿಯುತ್ತಿರುವುದರಿಂದ ಭೀಮಾ ನದಿ ತುಂಬಿ ಹರಿಯುತ್ತಿದೆ. 95 ಸಾವಿರ ಕ್ಯೂಸೆಕ್ಸ್ ನೀರನ್ನು ಸನ್ನತಿ ಬ್ರಿಜ್ ಕಂ ಬ್ಯಾರೇಜ್‌ನಿಂದ ಭೀಮಾ ನದಿಗೆ ಹರಿಸಲಾಗುತ್ತಿದೆ.

ಯಾದಗಿರಿ ಜಿಲ್ಲೆಯ ಭೀಮಾ ನದಿ ಸೇತುವೆ ಬಳಿ ಇರುವ ಕಂಗಳೇವರ ಹಾಗೂ ವಿರಾಂಜನೇಯ ದೇಗುಲಗಳು ಜಲಾವೃತವಾಗಿವೆ. ಯಾದಗಿರಿ ನಗರ ಸೇರಿದಂತೆ ಜಿಲ್ಲೆಯ ಶಹಾಪುರ, ಸುರಪುರ, ಯಾದಗಿರಿ, ಗುರುಮಠಕಲ್, ವಡಗೇರಾ, ಹುಣಸಗಿ ತಾಲ್ಲೂಕಿನಲ್ಲಿ ಮಳೆಯಾಗಿದೆ.

ಕಲಬುರ್ಗಿ ನಗರ ಸೇರಿದಂತೆ ಆಳಂದ, ಚಿಂಚೋಳಿ, ಕಾಳಗಿ, ಯಡ್ರಾಮಿ, ಸೇಡಂ, ಚಿತ್ತಾಪುರ ತಾಲ್ಲೂಕಿನ ಹಲವೆಡೆ ಮಳೆಯಾಗಿದೆ. ಚಿಂಚೋಳಿ ತಾಲ್ಲೂಕಿನ 20 ಕೆರೆಗಳು ಈಚೆಗೆ ಸುರಿದ ಮಳೆಯಿಂದಾಗಿ ಭರ್ತಿಯಾಗಿವೆ.

ಬೀದರ್ ಜಿಲ್ಲೆಯ ಭಾಲ್ಕಿ ತಾಲ್ಲೂಕಿನ ಕಾರಂಜಾ ಜಲಾಶಯ, ಬಸವಕಲ್ಯಾಣ ತಾಲ್ಲೂಕಿನ ಚುಳಕಿನಾಲಾ ಮೇಲ್ದಂಡೆ ಮುಲ್ಲಾಮರಿ ಜಲಾಶಯ ಭರ್ತಿಯಾಗಿದ್ದು, ಹೆಚ್ಚುವರಿ ನೀರನ್ನು ಹರಿಯ ಬಿಡಲಾಗುತ್ತಿದೆ.

ನಿರಂತರವಾಗಿ ಸುರಿಯುತ್ತಿರುವ ಮಳೆಗೆ ಬೆಳೆಗಳು ನೀರಿನಲ್ಲಿ ಮುಳುಗಿವೆ. ಮಳೆ ಕಾರಣ ಬೆಳೆ ಸಮೀಕ್ಷೆಗೆ ತೊಡಕಾಗಿದೆ ಎಂದು ಕೃಷಿ ಇಲಾಖೆ ಅಧಿಕಾರಿಗಳು ತಿಳಿಸಿದ್ದಾರೆ.

**ಕರಾವಳಿಯಲ್ಲಿ ಉತ್ತಮ ಮಳೆ:** ಕರಾವಳಿ ಜಿಲ್ಲೆಗಳಲ್ಲಿ ನಿರಂತರ ಮಳೆ ಮುಂದುವರಿದಿದ್ದು, ಒಂದು ಮನೆಗೆ ಭಾಗಶಃ ಹಾನಿಯಾಗಿದೆ. 4 ವಿದ್ಯುತ್ ಕಂಬಗಳು ಹಾಗೂ 200 ಮೀಟರ್ ವಿದ್ಯುತ್ ಮಾರ್ಗಕ್ಕೆ ಹಾನಿಯಾಗಿದೆ.

ಉಡುಪಿ ಜಿಲ್ಲೆಯ ಕುಂದಾಪುರ ತಾಲ್ಲೂಕಿನ ಕೋಣಿಯಲ್ಲಿ 10.9 ಸೆಂ.ಮೀ. ಮಳೆಯಾಗಿದೆ. ಬೈಂದೂರು ತಾಲ್ಲೂಕಿನ ಶಿರೂರು ಗ್ರಾಮದಲ್ಲಿ ಮರಬಿದ್ದು ಮನೆಗೆ ಹಾನಿಯಾಗಿದೆ. ಸೆಪ್ಟೆಂಬರ್ 12ರ ವರೆಗೆ ಕರಾವಳಿಯಾದ್ಯಂತ ಮಳೆಯಾಗಲಿದೆ ಎಂದು ಹವಾಮಾನ ಇಲಾಖೆ ಮುನ್ಸೂಚನೆ ನೀಡಿದೆ.

**ವ್ಯಕ್ತಿ ಸಾವು (ಶಿವಮೊಗ್ಗ ವರದಿ):** ಸಂತೇಬೆನ್ನೂರು ಸಮೀಪದ ದೊಡ್ಡಮಲ್ಲಾಪುರ ಗ್ರಾಮದಲ್ಲಿ ತಡರಾತ್ರಿ ಮನೆಗೋಡೆ ಕುಸಿದು ದೇವೇಂದ್ರಪ್ಪ (65) ಸಾವನ್ನಪ್ಪಿದ್ದಾರೆ.

**ಕೊಡಗಿನ ವಿವಿಧೆಡೆ ಧಾರಾಕಾರ ಮಳೆ:** ಕೊಡಗು ಜಿಲ್ಲೆಯ ಮಡಿಕೇರಿ ನಾಪೋಕ್ಲು, ಭಾಗಮಂಡಲ, ಮಾದಾಪುರ, ಸುಂಟಿಕೊಪ್ಪ, ಗರ್ವಾಲೆ, ಸೂರ್ಲಬ್ಬಿ ಭಾಗದಲ್ಲಿ ದಿನವಿಡೀ ಧಾರಾಕಾರ ಮಳೆಯಾಗಿದೆ. ಜಿಲ್ಲೆಯಲ್ಲಿ ಮತ್ತೆ ಬಿರುಸಿನ ಮಳೆಯಾಗುತ್ತಿದ್ದು ನದಿಗಳಲ್ಲಿ ನೀರಿನ ಮಟ್ಟ ಏರಿಕೆ ಕಂಡು ಬಂದಿದೆ.

**ಜಲಾಶಯದ ನೀರಿನ ಮಟ್ಟ (ಸಮುದ್ರ ಮಟ್ಟದಿಂದ)**

| ಜಲಾಶಯ | ಗರಿಷ್ಟ ಮಟ್ಟ (ಅಡಿಗಳಲ್ಲಿ) | ಇಂದಿನ ಮಟ್ಟ | ಒಳಹರಿವು | ಹೊರಹರಿವು |
|---|---|---|---|---|
| | | | ಕ್ಯೂಸೆಕ್ಸ್‌ಗಳಲ್ಲಿ | |
| ಕೆಆರ್‌ಎಸ್ | 124.80 | 115.98 | 10,479 | 10,786 |
| ಹಾರಂಗಿ | 2,859 | 2,857.89 | 2,899 | 3,553 |
| ಕಬಿನಿ | 2,284.00 | 2,279.81 | 4,554 | 700 |
| ಹೇಮಾವತಿ | 2,922 | 2,915 | 2,300 | 5,270 |
| ಲಿಂಗನಮಕ್ಕಿ | 1,819 | 1,913.20 | 12,748 | – |
| ಸೂಪಾ (ಮೀ) | 564 | 555.12 | 8,857 | 1,933 |

| ಜಲಾಶಯದ ನೀರಿನ ಮಟ್ಟ (ಸಮುದ್ರ ಮಟ್ಟದಿಂದ) | | | | |
|---|---|---|---|---|
| ಜಲಾಶಯ | ಗರಿಷ್ಟ ಮಟ್ಟ (ಅಡಿಗಳಲ್ಲಿ) | ಇಂದಿನ ಮಟ್ಟ | ಒಳಹರಿವು | ಹೊರಹರಿವು |
| | | | ಕ್ಯೂಸೆಕ್ಸ್‌ಗಳಲ್ಲಿ | |
| ಮಾಣಿ | 594 | 586.50 | 1648 | – |
| ತುಂಗಾಭದ್ರಾ | 1,633 | 1,632.86 | 11,856 | 14,940 |
| ಮಲಪ್ರಭಾ | 2,079.50 | 2,078.70 | 1,394 | 1,394 |
| ಘಟಪ್ರಭಾ | 2,175 | 2,175.00 | 1,579 | ,1579 |
| ಭದ್ರಾ | 186 | 185.40 | 3,751 | 3,751 |
| ಆಲಮಟ್ಟಿ (ಮೀ) | 519.60 | 519.60 | 5,432 | 5,432 |
| ನಾರಾಯಣಪುರ (ಮೀ) | 492.25 | 491.79 | 8,800 | 4,600 |
| | | | | ನೆಲಮಟ್ಟದಿಂದ |

ಆಧಾರ:ಪ್ರಜಾವಾಣಿ, ದಿನಾಂಕ:08.09.2021

## 9. ತುಂಗಭದ್ರಾ ಮಾದರಿಯ ಇನ್ನೊಂದು ಡ್ಯಾಮ್

ಹಲವು ವರ್ಷಗಳಿಂದ ನೆನೆಗುದಿಗೆ ಬಿದ್ದಿದ್ದ ತುಂಗಭದ್ರಾ ಜಲಾಶಯಕ್ಕೆ ಸಮಾನಾಂತರವಾಗಿ ಇನ್ನೊಂದು ಜಲಾಶಯ ನಿರ್ಮಿಸುವ ಕನಸು ನನಸಾಗುವತ್ತ ಸಾಗಿದೆ.

ಕೊಪ್ಪಳ ಜಿಲ್ಲೆ ನವಲಿ ಬಳಿ 32 ಟಿಎಂಸಿ ಸಾಮರ್ಥ್ಯದ ಸಮಾನಾಂತರ ಜಲಾಶಯ ನಿರ್ಮಾಣಕ್ಕೆ 12000 ಕೋಟಿ ವೆಚ್ಚದಲ್ಲಿ ವರದಿ ಸಿದ್ದಗೊಂಡಿದೆ. 132 ಟಿಎಂಸಿ ಸಾಮರ್ಥ್ಯ ಹೊಂದಿರುವ ತುಂಗಭದ್ರಾ ಜಲಾಶಯದಲ್ಲಿ 32 ಟಿಎಂಸಿಗಳಷ್ಟು ಹೂಳು ತುಂಬಿಕೊಂಡಿದ್ದು, ಕೃಷ್ಣ ಜಲ ವಿವಾದ ನ್ಯಾಯಾಧೀಕರಣ ತೀರ್ಪಿನಂತೆ 132 ಟಿಎಂಸಿ ನೀರನ್ನು ಸಂಗ್ರಹಿಸಲು ಸಾಧ್ಯವಾಗುತ್ತಿಲ್ಲ. ಹೂಳನ್ನು ತೆಗೆದು ಮತ್ತೊಂದೆಡೆ ಸ್ಥಳಾಂತರಿಸುವ ಯೋಜನೆ ಕ್ಲಿಷ್ಟವಾದ ಹಿನ್ನೆಲೆಯಲ್ಲಿ ಸಮಾನಾಂತರ ಜಲಾಶಯ ನಿರ್ಮಾಣದ ಕೂಗು ಕೇಳಿಬಂದಿತ್ತು.

ತುಂಗಾಭದ್ರಾ ಮೂಲ ಯೋಜನೆಯಲ್ಲಿ 6.20 ಲಕ್ಷ ಹೆಕ್ಟೇರ್ ಪ್ರದೇಶಕ್ಕೆ ನೀರಾವರಿ ಒದಗಿಸುವ ಯೋಜನೆ ಇದಾಗಿತ್ತು. ನೀರಿನ ಸಂಗ್ರಹ ಕೊರತೆಯಿಂದಾಗಿ ಎಡದಂಡೆ ಕಾಲುವೆ ರಾಯಚೂರು ಮತ್ತು ಕೊಪ್ಪಳ ಜಿಲ್ಲೆಗಳ ಕೊನೆ ಭಾಗದ 1.50 ಲಕ್ಷ ಹೆಕ್ಟೇರ್ ಪ್ರದೇಶಕ್ಕೆ ಹಿಂಗಾರಿನಲ್ಲಿ ತೀವ್ರ ನೀರಿನ ಕೊರತೆ ಕಾಣಿಸುತ್ತಿದೆ.

ಭತ್ತ ಬೆಳೆಯುವುದಕ್ಕೆ ನೀರಿನ ಅಗತ್ಯವಿದ್ದು, ನೂತನ ಯೋಜನೆ ಕಾರ್ಯರೂಪಕ್ಕೆ ಬಂದರೆ ಈ ಭಾಗದ ಲಕ್ಷಾಂತರ ರೈತರ ನೀರಿನ ಹಸಿವು ಭೂಸ್ವಾಧೀನ ಮತ್ತು ಸಂತ್ರಸ್ತರಿಗೆ ಪುನರ್ವಸತಿ ಕಾಯಿದೆ ಅನ್ವಯ ಪರಿಹಾರ ನೀಡಲಾಗುವುದು.

**ಮುಳುಗಡೆಯ ಹಳ್ಳಿಗಳು: ಗಂಗಾವರಿ ತಾಲ್ಲೂಕು**: ಹಿರೇಖೇಡ್, ಚಿಖ್ಖೇಡ್, ಮಲ್ಲಿಗವಾಡ್, ನಿರಲೊಟ್ಟಿ, ಹನಮನಾಳ ಸಿರ್‌ವಾರ, ಗೋಡನಾಳ, ಗುಡದೂರು, ಕಟಾಪುರ್, ಯೇತನಹಟ್ಟಿ. ಮಲ್ಲಾಪುರ, ಕರಡೋಣಿ, ಇಂಚನಾಳ್, ಬನಹಟ್ಟಿ.

**ಕುಷ್ಟಗಿ ತಾಲ್ಲೂಕು**: ಸಂಗನಾಳ, ಗಂಗನಾಳ, ಕನ್ಹಾಳ್ ಮತ್ತು ಪುರಾ

**ರಾಯಚೂರು ಜಿಲ್ಲೆ:** ಸಿಂಧನೂರಿನ ಉಮ್ಲೋಟ್ಟಿ ಮತ್ತು ಬಂಕಹಟ್ಟಿ.

**50 ಟಿಎಂಸಿ ವಿಸ್ತರಣೆ:** ಯೋಜನಾ ವರದಿಯಂತೆ 32 ಟಿಎಂಸಿಯನ್ನು 50 ಟಿಎಂಸಿಗೂ ವಿಸ್ತರಿಸಬಹುದು. 2008 ಹೈಡ್ರೋ ಸಮೀಕ್ಷೆ ಪ್ರಕಾರ 31.616 ಟಿಎಂಸಿಯಷ್ಟು ಹೂಳು ತುಂಬಿದ್ದು, 2020ರಲ್ಲಿ 32 ಟಿಎಂಸಿಗೂ ಹೆಚ್ಚು ಸಂಗ್ರಹಣೆ ಆಗಿದೆ ಎಂದು ವರದಿ ಹೇಳಿದೆ.

**ಪರ್ಯಾಯ ಮಾರ್ಗ**: ನೀರನ್ನು ಹರಿಸಲು ಜಲಾಶಯ ವ್ಯಾಪ್ತಿಯ ಹಿರೇಭಗನಾಳ, ಮತ್ತೊಂದೆಡೆ ಹೊಸಹಳ್ಳಿ ಬಳಿ ಸ್ಥಳ ಗುರುತಿಸಿದ್ದು, ಈ ಎರಡು ಕಾಲುವೆಗಳು ಕೊಪ್ಪಳ ತಾಲ್ಲೂಕಿನ ಕೆರೆಹಳ್ಳಿ ಬಳಿ ಕೂಡುವಂತೆ ಯೋಜನೆ ರೂಪಿಸಲಾಗಿದೆ. ಕಾಲುವೆಯು ಗಂಗಾವತಿಯ ಉಡಿಹಳ್ಳಿ ಬಳಿ ನವಲಿ ಜಲಾಶಯ ಸಂಪರ್ಕಿಸಲಿದೆ. ಇದರ ಒಟ್ಟಾರೆ ದೂರ 84 ಕಿ.ಮೀ.

ಆಧಾರ:ವಿಜಯ ಕರ್ನಾಟಕ, ದಿನಾಂಕ:08.09.2021

# ಭಾಗ–6

# ನ್ಯಾಯಾಲಯ ಸುದ್ದಿಗಳು

## 1. ಸಾರ್ವಜನಿಕ ಸೇವಕರ ವಿರುದ್ಧ ಲೋಕಾಯುಕ್ತ ವಿಚಾರಣೆಗೆ ಆದೇಶಿಸುವ ಅಧಿಕಾರ ಸರ್ಕಾರಕ್ಕಿಲ್ಲ.

ಸರ್ಕಾರದ ಕಂಪನಿ, ನಿಗಮ ಮತ್ತು ಶಾಸನಬದ್ಧ ಸಂಸ್ಥೆಗಳ ಉದ್ಯೋಗಿಗಳ ವಿರುದ್ಧ ಲೋಕಾಯುಕ್ತ ವಿಚಾರಣೆಗೆ ಆದೇಶಿಸಲು ರಾಜ್ಯ ಸರ್ಕಾರಕ್ಕೆ ಅಧಿಕಾರ ಇಲ್ಲ ಎಂದು ಹೈಕೋರ್ಟ್ ಮಹತ್ವದ ಆದೇಶ ಹೊರಡಿಸಿದೆ.

ದುರ್ನಡತೆ ಆರೋಪ ಸಂಬಂಧ ತಮ್ಮ ವಿರುದ್ಧ ಲೋಕಾಯುಕ್ತ ವಿಚಾರಣೆಗೆ ಆದೇಶಿಸಿದ ರಾಜ್ಯ ಸರ್ಕಾರದ ಕ್ರಮ ಪ್ರಶ್ನಿಸಿ ಕರ್ನಾಟಕ ಗ್ರಾಮೀಣ ಮೂಲಸೌಕರ್ಯ ಅಭಿವೃದ್ದಿ ಲಿಮಿಟೆಡ್‌ನ ಮೂವರು ನಿವೃತ್ತ ಅಧಿಕಾರಿಗಳು ಸಲ್ಲಿಸಿದ ತಕರಾರು ಅರ್ಜಿಗಳ ವಿಚಾರಣೆ ನಡೆಸಿದ ಹಿರಿಯ ನ್ಯಾಯಮೂರ್ತಿ ಬಿ.ವಿ. ನಾಗರತ್ನ ಮತ್ತು ನ್ಯಾಯಮೂರ್ತಿ ಹಂಚೇಟಿ ಸಂಜೀವ್ ಕುಮಾರ್ ಅವರಿದ್ದ ವಿಭಾಗೀಯ ನ್ಯಾಯಪೀಠ ಈ ಆದೇಶ ಮಾಡಿದೆ.

ಕರ್ನಾಟಕ ಲೋಕಾಯುಕ್ತ ಕಾಯ್ದೆ–1984ರ ಸೆಕ್ಷನ್ 2(6) ಪ್ರಕಾರ ಕರ್ನಾಟಕ ಸರ್ಕಾರದ ನಾಗರಿಕ ಸೇವೆಗಳ ಸದಸ್ಯರು. ನಾಗರಿಕ ಹುದ್ದೆ ಹೊಂದಿರುವ ಅಥವಾ ರಾಜ್ಯ ಸರ್ಕಾರದ ವ್ಯವಹಾರಗಳಿಗೆ ಸಂಬಂಧಿಸಿದ ಸೇವೆ ಸಲ್ಲಿಸುತ್ತಿರುವವರನ್ನು ಸರ್ಕಾರಿ ನೌಕರರು ಎನ್ನಲಾಗುತ್ತದೆ. ಕಾಯ್ದೆಯ ಸೆಕ್ಷನ್ 2 (12)(ಜೆ) ಪ್ರಕಾರ ಕರ್ನಾಟಕ ರಾಜ್ಯದಲ್ಲಿ ಸ್ಥಳೀಯ ಪ್ರಾಧಿಕಾರ, ಶಾಸನಬದ್ಧ ಸಂಸ್ಥೆ ರಾಜ್ಯ ಅಥವಾ ಕೇಂದ್ರ ಸರ್ಕಾರದ ಕಾಯ್ದೆಯಡಿ ಸ್ಥಾಪಿಸಲ್ಪಟ್ಟ ಅಥವಾ ಅವರ ಅಧೀನದ ರಾಜ್ಯ ಸರ್ಕಾರದಿಂದ ನಡೆಸಲ್ಪಡುವ, ಹಣಕಾಸು ಪಡೆಯುವ ನಿಗಮ ಕಂಪನಿ ಕಾಯ್ದೆಯ–1956ರ ಅಡಿಯಲ್ಲಿ ನೋಂದಣಿಯಾದ ಸಂಸ್ಥೆ, ಕರ್ನಾಟಕ ಸಂಘಗಳ ನೋಂದಣಿಯಾದ ಸಂಘ, ಸಹಕಾರಿ ಸಂಸ್ಥೆ ಮತ್ತು ವಿಶ್ವವಿದ್ಯಾಲಯದ ಉದ್ಯೋಗಿಗಳು ಸಾರ್ವಜನಿಕ ಸೇವಕ ಆಗುತ್ತಾರೆ.

ಕರ್ನಾಟಕ ನಾಗರಿಕ ಸೇವೆಗಳು (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ಅಧಿನಿಯಮಗಳು 1957ರ ನಿಯಮ 14–ಎ (ಸಿಸಿಎ ನಿಯಮ) ಪ್ರಕಾರ ಸರ್ಕಾರಿ ನೌಕರರ ವಿರುದ್ಧದ ದುರ್ನಡತೆ ವಿರುದ್ಧ ಲೋಕಾಯುಕ್ತ ಮತ್ತು ಉಪ ಲೋಕಾಯುಕ್ತ ವಿಚಾರಣೆಗೆ ಸರ್ಕಾರಕ್ಕೆ ಆದೇಶಿಸಲು ಅವಕಾಶವಿದೆ. ಸಿಎಎ ನಿಯಮ 14–ಎಯೊಂದಿಗೆ ನಿಯಮ 2 (ಡಿ) ಮತ್ತು ನಿಯಮ 3ಅನ್ನು ಸಂಯೋಜಿಸಿಕೊಂಡು ಓದಿದಾಗ, ಸರ್ಕಾರದ ಕಂಪನಿ, ನಿಗಮ ಮತ್ತು ಶಾಸನಬದ್ಧ ಸಂಸ್ಥೆಗಳ ಉದ್ಯೋಗಿಗಳು ಸಾರ್ವಜನಿಕ ಸೇವಕರು ಎಂದು ಪರಿಗಣಿಸಲ್ಪಡುತ್ತಾರೆ. ಸಾರ್ವಜನಿಕ ಸೇವಕರಿಗೆ ಸಿಸಿಎ ನಿಯಮಗಳನ್ನು ಅನ್ವಯಿಸಲು ಆಗುವುದಿಲ್ಲ ಎಂದು ಹೈಕೋರ್ಟ್ ಅದೇಶದಲ್ಲಿ ತಿಳಿಸಿದೆ.

ಸಾರ್ವಜನಿಕ ಸೇವಕರ ವಿರುದ್ಧ ಲೋಕಾಯುಕ್ತ ಅಥವಾ ಉಪ ಲೋಕಾಯುಕ್ತ ವಿಚಾರಣೆ ನಡೆಸಲು ಸಿಸಿಎ ಅಧಿನಿಯಮಗಳಲ್ಲಿ ನಿರ್ದಿಷ್ಟ ಕಾನೂನು ಹಾಗೂ ನಿಯಮ ಇಲ್ಲ. ಇಂತಹ ಸಂದರ್ಭದಲ್ಲಿ ಸಾರ್ವಜನಿಕ ಸೇವಕರ ವಿರುದ್ಧದ ಅರೋಪಗಳನ್ನು ಲೋಕಾಯುಕ್ತ ವಿಚಾರಣೆಗೆ ಸರ್ಕಾರ ಒಪ್ಪಿಸಲಾಗದು. ಜೊತೆಗೆ ಸಾರ್ವಜನಿಕ ಸೇವಕರ ವಿಚಾರದಲ್ಲಿ ಸರ್ಕಾರ ಶಿಸ್ತು ಪ್ರಾಧಿಕಾರವು ಆಗಿಬರುವುದಿಲ್ಲ. ಶಿಸ್ತು ಕ್ರಮ ಜರುಗಿಸಲು ಲೋಕಾಯುಕ್ತ ಮತ್ತು ಉಪ ಲೋಕಾಯುಕ್ತರಿಂದ ಪಡೆದ ವರದಿಯನ್ನು ವೃಂದ ಮತ್ತು ನೇಮಕಾತಿ ಅಧಿನಿಯಮಗಳಡಿ ಸಾರ್ವಜನಿಕ ಸೇವಕ ಉದ್ಯೋಗ ನಿರ್ವಹಿಸುತ್ತಿರುವ ನಿರ್ದಿಷ್ಟ ಸಕ್ಷಮ ಪ್ರಾಧಿಕಾರಕ್ಕೆ ರವಾನಿಸಬೇಕು ಎಂದು ಹೈಕೋರ್ಟ್ ಆದೇಶಿಸಿದೆ.

**ಸಾರ್ವಜನಿಕ ಸೇವಕರು ಯಾರು:** ರಾಜ್ಯದಲ್ಲಿ ಸ್ಥಳೀಯ ಪ್ರಾಧಿಕಾರ, ಶಾಸನಬದ್ಧ ಸಂಸ್ಥೆ, ರಾಜ್ಯ ಅಥವಾ ಕೇಂದ್ರ ಸರ್ಕಾರದ ಕಾಯ್ದೆಯಡಿ ಸ್ಥಾಪಿಸಲ್ಪಟ್ಟ ಅಥವಾ ಅದರ ಅಧೀನದ, ರಾಜ್ಯ ಸರ್ಕಾರದಿಂದ ನಡೆಸಲ್ಪಡುವ, ನಿಯಂತ್ರಿಸಲ್ಪಡುವ, ಹಣಕಾಸು ಪಡೆಯುವ ನಿಗಮ, ಕಂಪನಿ ಕಾಯ್ದೆಯ ಅಡಿಯಲ್ಲಿ ನೋಂದಣಿಯಾದ ಸಂಸ್ಥೆ, ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ ಅಡಿಯಲ್ಲಿ ನೋಂದಣಿಯಾದ ಸಂಘ, ಸಹಕಾರಿ ಸಂಸ್ಥೆ ಮತ್ತು ವಿಶ್ವವಿದ್ಯಾಲಯದ ಉದ್ಯೋಗಿಗಳು.

**ಬೇಕಿದ್ದರೆ ನಿಯಮ ಬದಲಿಸಿ : ಹೈಕೋರ್ಟ್:** ಸಿಸಿಎ ನಿಯಮ 3 ರಿಂದ ಹೊರಗುಳಿದಿರುವ ಎಲ್ಲ ಸರ್ಕಾರದ ಕಂಪನಿಗಳು ಶಾಸನಬದ್ಧ ಸಂಸ್ಥೆಗಳು ಮತ್ತು ನಿಗಮಗಳು ತನ್ನ ವೃಂದ ಮತ್ತು ನೇಮಕ ನಿಯಮಗಳಲ್ಲಿ ಸಿಸಿಎ ಅಧಿನಿಯಮ 14–ಎ ಅನ್ನು ಅಥವಾ ಅದಕ್ಕೆ ಹೋಲುವ ನಿಯಮ ಅಳವಡಿಸುವ ಕಾರ್ಯವನ್ನು ಶಾಸಕಾಂಗ ಮಾಡಬೇಕು. ಇದರಿಂದ ಲೋಕಾಯುಕ್ತ ವಿಚಾರಣೆಗೆ ಆದೇಶಿಸುವ ವಿಚಾರದಲ್ಲಿ ಉಂಟಾಗುವ ವ್ಯಾಜ್ಯಗಳನ್ನು ತಪ್ಪಿಸಬಹುದು ಎಂದು ಹೈಕೋರ್ಟ್ ಸಲಹೆ ನೀಡಿದೆ.

ಆಧಾರ:ಕನ್ನಡಪ್ರಭ, ದಿನಾಂಕ:10.08.2021.

## 2. ರಾಜಕೀಯ ಪಕ್ಷಗಳಿಗೆ ಸುಪ್ರೀಂ ದಂಡ

ಬಿಹಾರ ವಿಧಾನಸಭಾ ಚುನಾವಣೆಯ ಸಂದರ್ಭದಲ್ಲಿ ತಮ್ಮ ಪಕ್ಷದ ಚುನಾವಣಾ ಅಭ್ಯರ್ಥಿಗಳ ಅಪರಾಧ ಹಿನ್ನೆಲೆಯನ್ನು ಬಹಿರಂಗಪಡಿಸದ ಎಲ್ಲ ಪ್ರಮುಖ ರಾಜಕೀಯ ಪಕ್ಷಗಳಿಗೆ ಸುಪ್ರೀಂಕೋರ್ಟ್ ದಂಡ ವಿಧಿಸಿದೆ.

ಅಭ್ಯರ್ಥಿಗಳ ಅಪರಾಧ ಹಿನ್ನೆಲೆಯನ್ನು ಹಾಗೂ ಅವರನ್ನು ಆಯ್ಕೆ ಮಾಡಿದ್ದಕ್ಕೆ ಕಾರಣವನ್ನು ಬಹಿರಂಗಪಡಿಸದೇ, ಈ ಪಕ್ಷಗಳು ನ್ಯಾಯಾಂಗ ನಿಂದನೆ ಎಸಗಿವೆ ಎಂದು ನ್ಯಾಯಮೂರ್ತಿಗಳಾದ ಆರ್.ಎಫ್ ನರೀಮನ್ ಹಾಗೂ ಬಿ.ಆರ್. ಗವಾಯಿ ಅವರನ್ನು ಒಳಗೊಂಡ ನ್ಯಾಯಪೀಠ ಹೇಳಿದೆ.

ರಾಜಕೀಯ ಅಪರಾಧೀಕರಣವನ್ನು ತಡೆಯುವ ನಿಟ್ಟಿನಲ್ಲಿ ಅಪರಾಧಿಗಳು ರಾಜಕಾರಣಕ್ಕೆ ಪ್ರವೇಶಿಸದಂತೆ ತಡೆಯಲು ಕಾನೂನಿಗೆ ತಿದ್ದುಪಡಿ ಆಗುವ ಅಗತ್ಯವಿದೆ ಎಂಬುದನ್ನು ಒತ್ತಿ ಹೇಳಿದ ನ್ಯಾಯಪೀಠ, ರಾಜಕೀಯದಲ್ಲಿನ ಅಪರಾಧೀಕರಣ ಎಂಬ ಕ್ಯಾನ್ಸರ್ ಅನ್ನು ಕಿತ್ತು ಹಾಕಬೇಕಿದೆ ಎಂದು ಕಟು ಮಾತುಗಳಲ್ಲಿ ಹೇಳಿತ್ತು.

ಈ ಬಗೆಗಿನ ಅರ್ಜಿಯೊಂದರ ವಿಚಾರಣೆ ನಡೆಸಿದ ನ್ಯಾಯಪೀಠ ಅಭ್ಯರ್ಥಿಗಳ ಮಾಹಿತಿ ಬಹಿರಂಗಕ್ಕೆ ಸಂಬಂಧಿಸಿದಂತೆ 2020ರ ಫೆಬ್ರವರಿ 13 ರಂದು ಸುಪ್ರೀಂಕೋರ್ಟ್ ಹೊರಡಿಸಿದ ಆದೇಶವನ್ನು ಕಾಂಗ್ರೆಸ್, ಬಿಜೆಪಿ ಸೇರಿದಂತೆ ಪ್ರಮುಖ ರಾಜಕೀಯ ಪಕ್ಷಗಳು ಉಲ್ಲಂಘಿಸಿದ್ದಾಗಿ ಹೇಳಿತು. ಜೆ.ಡಿ.ಯು, ಆರ್.ಜೆ.ಡಿ, ಲೋಕಜನಶಕ್ತಿ, ಕಾಂಗ್ರೆಸ್, ಬಿಜೆಪಿ ಹಾಗೂ ಸಿಪಿಐ ಪಕ್ಷಗಳಿಗೆ ತಲಾ ರೂ.1 ಲಕ್ಷ ರೂಪಾಯಿಯನ್ನು ಹಾಗೂ ಸಿಪಿಎಂ ಮತ್ತು ಎನ್‌ಸಿಪಿ ಪಕ್ಷಗಳಿಗೆ ತಲಾ ರೂ.5ಲಕ್ಷ ದಂಡ ವಿಧಿಸಿತು.

ಅಭ್ಯರ್ಥಿಗಳ ಮಾಹಿತಿ ಕುರಿತಾಗಿ ಆದೇಶ ಹೊರಡಿಸಿದ ನಂತರದಲ್ಲಿ ನಡೆದದ್ದು ಇದೇ ಮೊದಲ ಚುನಾವಣೆಯಾಗಿದ್ದರಿಂದ, ಸುಪ್ರೀಂಕೋರ್ಟ್ ಇದನ್ನು ಗಂಭೀರವಾಗಿ ಪರಿಗಣಿಸುತ್ತಿಲ್ಲ. ಮುಂಬರುವ ಚುನಾವಣೆಗಳ ಸಂದರ್ಭದಲ್ಲಿ ಬಹಳ ಎಚ್ಚರಿಕೆಯಿಂದ ಇರಬೇಕು. ಸುಪ್ರೀಂಕೋರ್ಟ್ ನಿರ್ದೇಶನ ಹಾಗೂ ಚುನಾವಣಾ ಆಯೋಗದ ನಿಯಮಗಳನ್ನು ಚಾಚೂತಪ್ಪದೇ ಪಾಲಿಸಬೇಕು ಎಂದು ತಿಳಿಸಿತು.

ಯಾವುದೇ ರಾಜಕೀಯ ಪಕ್ಷವು ನ್ಯಾಯಾಲಯದ ನಿರ್ದೇಶನಗಳನ್ನು ಉಲ್ಲಂಘಿಸಿದ್ದಲ್ಲಿ ಅಂಥ ಪ್ರಕರಣಗಳನ್ನು ಕೂಡಲೇ ನ್ಯಾಯಾಲಯದ ಗಮನಕ್ಕೆ ತರುವಂತೆ ಚುನಾವಣಾ ಆಯೋಗಕ್ಕೂ ಎಚ್ಚರಿಸಿತು.

ಅಭ್ಯರ್ಥಿಯನ್ನು ಘೋಷಿಸಿದ 48 ಗಂಟೆಗಳ ಒಳಗಾಗಿ ರಾಜಕೀಯ ಪಕ್ಷಗಳು, ಅಪರಾಧ ಹಿನ್ನೆಲೆಯ ದಾಖಲೆಗಳು ಸೇರಿದಂತೆ ಆ ವ್ಯಕ್ತಿಯ ಮಾಹಿತಿಯನ್ನು ಪ್ರಕಟಿಸಬೇಕು.

ಈ ಮಾಹಿತಿಯನ್ನು ತಮ್ಮ ಪಕ್ಷದ ವೆಬ್‌ಸೈಟ್‌ನ ಹೋಂಪೇಜ್‌ನಲ್ಲಿಯೂ ಪ್ರಕಟಿಸಬೇಕು ಎಂದು ನ್ಯಾಯಪೀಠ ಸೂಚಿಸಿತು. ಇದರಿಂದ ಮತದಾರರಿಗೆ ತಮ್ಮ ಕ್ಷೇತ್ರದ ಅಭ್ಯರ್ಥಿಗಳ ಬಗ್ಗೆ ತಿಳಿದುಕೊಳ್ಳುವುದು ಸುಲಭವಾಗುತ್ತದೆ ಎಂದು ಅಭಿಪ್ರಾಯಪಟ್ಟಿತು.

ಇದರೊಂದಿಗೆ ಇಂಥವರ ಮಾಹಿತಿ ನೀಡುವಾಗ ಹೋಂಪೇಜ್‌ನಲ್ಲಿ ಆಯಾ ರಾಜ್ಯದ ವಿಭಾಗದಲ್ಲಿ ಅಪರಾಧ ಹಿನ್ನೆಲೆ ಇರುವ ಅಭ್ಯರ್ಥಿಗಳು ಎಂಬ ಶೀರ್ಷಿಕೆಯು ಅಗತ್ಯ ಎಂದಿದೆ.

ಎಲ್ಲ ರಾಜಕೀಯ ಪಕ್ಷಗಳ ಅಭ್ಯರ್ಥಿಗಳ ಅಪರಾಧ ಹಿನ್ನೆಲೆಯ ವಿವರವನ್ನು ಒಳಗೊಂಡ ಮೊಬೈಲ್ ಅಪ್ಲಿಕೇಶನ್ ಸಿದ್ಧಪಡಿಸುವಂತೆ ಚುನಾವಣಾ ಆಯೋಗಕ್ಕೆ ಸೂಚನೆ ನೀಡಿದ ಸುಪ್ರೀಂಕೋರ್ಟ್ ಇದರೊಂದಿಗೆ ಮತದಾರರಲ್ಲಿ ಅರಿವು ಮೂಡಿಸುವ ಅಭಿಯಾನವನ್ನೂ ನಡೆಸುವಂತೆ ತಿಳಿಸಿತು.

**ದೇಶದ ಸಹನೆ ಮೀರುತ್ತಿದೆ:** ರಾಜಕೀಯ ಕ್ಷೇತ್ರವು ದಿನದಿಂದ ದಿನಕ್ಕೆ ಕಲುಷಿತಾಗುತ್ತಿರುವುದನ್ನು ನೋಡುತ್ತಿದ್ದೇವೆ. ಇದನ್ನು ಸ್ವಚ್ಛಗೊಳಿಸುವುದು ಶಾಸಕಾಂಗದ ಅಧ್ಯತೆಯಾಗದೇ ಇರುವುದರಿಂದ ದೇಶವು ಅದನ್ನು ಸುಮ್ಮನೇ ನೋಡುತ್ತಲೇ ಇದ್ದು, ಸಹನೆ ಕಳೆದುಕೊಳ್ಳುತ್ತಿದ್ದೆ ಎಂದು ನ್ಯಾಯಪೀಠ ಅಸಮಾಧಾನ ವ್ಯಕ್ತಪಡಿಸಿತು.

ಅಪರಾಧ ಹಿನ್ನೆಲೆಯ ವ್ಯಕ್ತಿಗಳು ಕಾನೂನು ರೂಪಿಸುವ ಸ್ಥಾನದಲ್ಲಿ ಇರಲು ಅವಕಾಶ ನೀಡಬಾರದು. ಅಪರಾಧಿಗಳು ರಾಜಕೀಯಕ್ಕೆ ಬರುವುದನ್ನು ತಡೆಯುವ ನಿಟ್ಟಿನಲ್ಲಿ ಸೂಕ್ತ ತಿದ್ದುಪಡಿ ತರುವಂತೆ ನ್ಯಾಯಾಲಯವು ಪದೇಪದೇ ಮನವಿ ಮಾಡಿದರೂ ಅದನ್ನು ಕೇಳಿಸಿಕೊಳ್ಳಬೇಕಾದ ಕಿವಿ ಕಿವುಡಾಗಿದೆ. ರಾಜಕೀಯ ಪಕ್ಷಗಳು ಗಾಢ ನಿದ್ದೆಯಿಂದ ಏಳಲು ಬಯಸುತ್ತಿಲ್ಲ ಎಂದು ಚಾಟಿ ಬೀಸಿತು. ಇದನ್ನು ತಡೆಯಲು ತುರ್ತಾಗಿ ಏನಾದರೂ ಮಾಡಬೇಕೆಂದು ನ್ಯಾಯಾಲಯವು, ಕಾನೂನು ಮಾಡುವಂತೆ ಹೇಳಬಹುದೇ ಹೊರತು ಶಾಸಕಾಂಗದ ಕರ್ತವ್ಯಕ್ಕೆ ಮೀಸಲಾದ ಕ್ಷೇತ್ರವನ್ನು ಅತಿಕ್ರಮಿಸಲಾಗದು ಎಂದು ಅಭಿಪ್ರಾಯಪಟ್ಟಿತು.

**ಪ್ರಕರಣ ಹಿಂಪಡೆಯಲು ಹೈಕೋರ್ಟ್ ಅನುಮತಿ ಕಡ್ಡಾಯ:** ಹಾಲಿ, ಮಾಜಿ ಸಂಸದರು ಹಾಗೂ ಶಾಸಕರ ವಿರುದ್ಧ ದಾಖಲಾಗಿರುವ ಕ್ರಿಮಿನಲ್ ಪ್ರಕರಣಗಳು ಆಯಾ ರಾಜ್ಯಗಳ ಹೈಕೋರ್ಟ್‌ಗಳ ಅನುಮತಿ ಇಲ್ಲದೆಯೇ ಹಿಂಪಡೆಯುವಂತಿಲ್ಲ ಎಂದು ಸುಪ್ರೀಂಕೋರ್ಟ್ ಮಹತ್ವದ ಆದೇಶ ನೀಡಿದೆ. ಅಲ್ಲದೇ ಸಂಸದರು ಮತ್ತು ಶಾಸಕರ ವಿರುದ್ಧದ ಪ್ರಕರಣಗಳ ವಿಚಾರಣೆ ಮುಗಿಯುವವರೆಗೆ, ಅವರ ವಿರುದ್ಧದ ಅರ್ಜಿಗಳ ವಿಚಾರಣೆ ನಡೆಸುತ್ತಿರುವ ವಿಶೇಷ ನ್ಯಾಯಾಲಯಗಳನ್ನು ವರ್ಗಾವಣೆ ಮಾಡಬಾರದು ಎಂದು ಸುಪ್ರೀಂಕೋರ್ಟ್ ಹೇಳಿದೆ.

ಬಿಜೆಪಿ ಮುಖಂಡ ಹಾಗೂ ವಕೀಲ ಅಶ್ವಿನಿ ಉಪಾಧ್ಯಾಯ ಅವರು ಸಲ್ಲಿಸಿದ್ದ ಪಿಐಎಲ್ ವಿಚಾರಣೆ ನಡೆಸಿದ ಮುಖ್ಯ ನ್ಯಾಯಮೂರ್ತಿ ಎನ್.ವಿ.ರಮಣ ನ್ಯಾಯಮೂರ್ತಿಗಳಾದ ವಿನೀಶ್ ಶರಣ್ ಹಾಗೂ ಸೂರ್ಯಕಾಂತ್ ಅವರಿದ್ದ ನ್ಯಾಯಪೀಠ ಈ ಆದೇಶ ನೀಡಿದೆ.

**ವಿಶೇಷ ಪೀಠಕ್ಕೆ ಚಿಂತನೆ:** ರಾಜಕಾರಣಿಗಳ ವಿರುದ್ಧದ ಪ್ರಕರಣಗಳ ಮೇಲ್ವಿಚಾರಣೆಗಾಗಿ ಸುಪ್ರೀಂಕೋರ್ಟ್‌ನಲ್ಲಿ ವಿಶೇಷ ಪೀಠ ಸ್ಥಾಪಿಸುವ ಚಿಂತನೆ ನಡೆದಿದೆ ಎಂದು ನ್ಯಾಯಪೀಠ ಹೇಳಿದೆ.

ಜನಪ್ರತಿನಿಧಿಗಳ ವಿರುದ್ಧದ ಪ್ರಕರಣಗಳನ್ನು ಇತ್ಯರ್ಥ ಪಡಿಸಲಾಗಿದ್ದರೆ, ಅವುಗಳ ಕುರಿತು ನಿಗದಿತ ನಮೂನೆಯಲ್ಲಿ ಮಾಹಿತಿ ಸಲ್ಲಿಸುವಂತೆ ಎಲ್ಲ ಹೈಕೋರ್ಟ್‌ಗಳ ರಿಜಿಸ್ಟ್ರಾರ್ ಜನರಲ್ ಅವರಿಗೆ

ನಿರ್ದೇಶನ ನೀಡಲಾಗಿದೆ. ಬಾಕಿ ಇರುವ ಪ್ರಕರಣಗಳ ಸಂಖ್ಯೆ ಹಾಗೂ ಅವುಗಳ ವಿಚಾರಣೆ ಯಾವ ಹಂತಗಳಲ್ಲಿದೆ ಎಂಬ ಮಾಹಿತಿ ನೀಡುವಂತೆಯು ನ್ಯಾಯಪೀಠ ಸೂಚಿಸಿದೆ.

ಸಂಸದರು, ಶಾಸಕರ ವಿರುದ್ಧ ದಾಖಲಾಗಿರುವ ಕ್ರಿಮಿನಲ್ ಪ್ರಕರಣಗಳ ತ್ವರಿತ ವಿಚಾರಣೆಗೆ ನಿರ್ದೇಶನ ನೀಡುವಂತೆ ಕೋರಿ ಅಶ್ವಿನಿ ಉಪಾಧ್ಯಾಯ 2018ರಲ್ಲಿ ಪಿಐಎಲ್ ಸಲ್ಲಿಸಿದ್ದರು. ಶಿಕ್ಷೆಗೆ ಗುರಿಯಾದ ರಾಜಕಾರಣಿಗಳು ಚುನಾವಣೆಯಲ್ಲಿ ಸ್ಪರ್ಧಿಸದಂತೆ ಶಾಶ್ವತ ನಿಷೇಧ ಹೇರಬೇಕು ಎಂದೂ ಅವರು ಅರ್ಜಿಯಲ್ಲಿ ಕೋರಿದ್ದರು.

ಈ ಪ್ರಕರಣದಲ್ಲಿ ನ್ಯಾಯಾಲಯದ ಸಲಹೆಗಾರರಾಗಿ ನೇಮಕವಾಗಿದ್ದ ವಿಜಯ್ ಹಂಸಾರಿಯಾ ಅವರು ವರದಿ ಸಲ್ಲಿಸಿದ್ದರು. ಹಲವು ರಾಜ್ಯ ಸರ್ಕಾರಗಳು ಹಾಲಿ ಹಾಗೂ ಮಾಜಿ ಶಾಸಕರು/ಸಂಸದರ ವಿರುದ್ಧದ ಪ್ರಕರಣಗಳನ್ನು ಅನ್ಯ ಕಾರಣಗಳಿಂದ ಹಿಂತೆಗೆದುಕೊಂಡಿದೆ.

ಈ ಬಗ್ಗೆ ಕರ್ನಾಟಕ ಸರ್ಕಾರವು 2020 ಆಗಸ್ಟ್‌ನಲ್ಲಿ ಜನಪ್ರತಿನಿಧಿಗಳ ವಿರುದ್ಧದ 61 ಪ್ರಕರಣಗಳನ್ನು ಹಿಂಪಡೆದಿರುವುದನ್ನು ಹಾಗೂ ಮಹಾರಾಷ್ಟ್ರ ಹಾಗೂ ಉತ್ತರಪ್ರದೇಶದಲ್ಲಿ ಇದೇ ರೀತಿಯ ಪ್ರಕ್ರಿಯೆಗಳನ್ನು ಅವರು ಉಲ್ಲೇಖಿಸಿದ್ದಾರೆ.

ವಿಚಾರಣೆಯ ಸಂದರ್ಭದಲ್ಲಿ ಶಾಸಕರು ಹಾಗೂ ಸಂಸದರ ವಿರುದ್ಧದ ಮೊಕದ್ದಮೆಗಳ ಮಾಹಿತಿಯನ್ನು ನೀಡುವಲ್ಲಿ ಸಿಬಿಐ ವಿಫಲವಾಗಿದೆ ಎಂದು ಸುಪ್ರೀಂಕೋರ್ಟ್ ಚಾಟಿ ಬೀಸಿತು. ಈ ಬಗ್ಗೆ ಕೊನೆಯ ಅವಕಾಶ ನೀಡುವುದಾಗಿ ಹೇಳಿತು. ಪ್ರಕರಣದ ಮುಂದಿನ ವಿಚಾರಣೆಯನ್ನು ಆಗಸ್ಟ್ 25ಕ್ಕೆ ನಿಗದಿಪಡಿಸಿತು.

ಆಧಾರ:ಪ್ರಜಾವಾಣಿ, ದಿನಾಂಕ:11.08.2021.

## 3. Parties get 48 hours to publish Candidate's criminal records

The Supreme Court warned of Parliament that the nation is losing patience with the advent of criminals in politics even as it imposed fines on major political parties including the BJP and the Congress for covering up from voters the criminal past of the candidates they fielded in the Bihar Assembly poll last year.

The court had directed political parties to publish the criminal history if any of their election candidates on the homepage of their website under the caption Candidates with criminal antecedents within 48 hours of their selection.

**Nation losing patience**: The nation continues to wait and is losing patience. Cleansing the polluted stream of politics is obviously not one of the immediate pressing concerns of the legislative branch of the government a Bench consisting of Justices Rohinton F.Nariman and B.R. Gavai told the lawmakers.

Justice Nariman who authored the 71 page judgment based on a plea by advocate Brajesh Singh said the Supreme Court repeated appeals to legislators to amend the law to weed out the criminals amidst them had fallen on deaf ears.

The court said it did not take political parties much time to flout its February 2020 judgment, which directed them to prominently publish the criminal antecedents of their candidates in newspapers and on social media accounts including Twitter and Face book.

Eight month from the February judgment in the run up to the Bihar Assembly election in October- November last year, these parties had already subverted the verdict by either publishing inadequate information about their candidate's criminal antecedents or by cleverly printing them in obscure newspapers.

Courtesy: The Hindu, Dated: 11.08.2021

## 4. ಜನ ಪ್ರತಿನಿಧಿಗಳಿಗೆ ಹೈ ಶಾಕ್

ಮಾಜಿ–ಹಾಲಿ ಸಂಸದರು ಮತ್ತು ಶಾಸಕರ ವಿರುದ್ಧ ಕ್ರಿಮಿನಲ್ ಪ್ರಕರಣಗಳನ್ನು ಆಯಾ ರಾಜ್ಯಗಳ ಹೈಕೋರ್ಟ್ ಅನುಮತಿ ಇಲ್ಲದೆ ಹಿಂಪಡೆಯುವಂತಿಲ್ಲ ಎಂದು ಸುಪ್ರೀಂಕೋರ್ಟ್ ನೀಡಿರುವ ತೀರ್ಪಿಗೆ ರಾಜ್ಯ ಸರ್ಕಾರ ಬದ್ಧವಾಗಿರಬೇಕಾಗುತ್ತದೆ ಎಂದು ಹೈಕೋರ್ಟ್ ಆದೇಶಿಸಿದೆ.

ಸುಪ್ರೀಂಕೋರ್ಟ್ ತೀರ್ಪಿನ ಹಿನ್ನೆಲೆಯಲ್ಲಿ 63 ಕ್ರಿಮಿನಲ್ ಪ್ರಕರಣಗಳನ್ನು ಹಿಂಪಡೆದು 2020ರ ಆಗಸ್ಟ್ 31 ರಂದು ಸರ್ಕಾರ ಹೊರಡಿಸಿರುವ ಆದೇಶ ಮಾಜಿ–ಹಾಲಿ ಜನಪ್ರತಿನಿಧಿಗಳಿಗೆ ಅನ್ವಯವಾಗುವುದಿಲ್ಲ ಎಂದು ಇದೇ ವೇಳೆ ನ್ಯಾಯಾಲಯ ಸ್ಪಷ್ಟಪಡಿಸಿದೆ.

ರಾಜ್ಯದ ವಿವಿಧ ಕ್ರಿಮಿನಲ್ ಕೋರ್ಟ್‌ಗಳಲ್ಲಿ ವಿಚಾರಣಾ ಹಂತದಲ್ಲಿದ್ದ ಜನಪ್ರತಿನಿಧಿಗಳ ವಿರುದ್ಧ 63 ಪ್ರಕರಣಗಳನ್ನು ಹಿಂಪಡೆದು 2020 ಆಗಸ್ಟ್ 31 ರಂದು ಸರ್ಕಾರ ಹೊರಡಿಸಿರುವ ಆದೇಶ ಪ್ರಶ್ನಿಸಿ ಪಿಯುಸಿಎಲ್ ಹೈಕೋರ್ಟ್ ಪಿಐಎಲ್ ಸಲ್ಲಿಸಿದೆ. ಮತ್ತೊಂದೆಡೆ ರಾಜ್ಯದ ಜನಪ್ರತಿನಿಧಿಗಳ ಮತ್ತವರ ಸಹಚರರ ವಿರುದ್ಧ ದಾಖಲಾಗಿದ್ದ 570 ಪ್ರಕರಣ ಹಿಂಪಡೆದು 2012 ರಿಂದ ಸರ್ಕಾರ ಹೊರಡಿಸಿರುವ ವಿವಿಧ ಆದೇಶಗಳನ್ನು ಪ್ರಶ್ನಿಸಿ ವಕೀಲೆ ಸುಧಾ ಕಾಟ್ವೆ ಮತ್ತೊಂದು ಅರ್ಜಿ ಸಲ್ಲಿಸಿದ್ದಾರೆ. ಈ ಅರ್ಜಿಗಳನ್ನು ಸಿಜೆ ಎ.ಎಸ್. ಓಕಾ ನೇತೃತ್ವದ ವಿಭಾಗೀಯ ಪೀಠ ವಿಚಾರಣೆ ನಡೆಸಿತು.

ಪಿಯುಸಿಎಲ್ ಪರ ವಕೀಲ ಕಿಷನ್ ರೊಜಾರಿಯೋ ವಾದ ಮಂಡಿಸಿ, ಜನಪ್ರತಿನಿಧಿಗಳ ವಿರುದ್ಧದ ಕ್ರಿಮಿನಲ್ ಪ್ರಕರಣಗಳನ್ನು ಆಯಾ ರಾಜ್ಯಗಳ ಹೈಕೋರ್ಟ್‌ಗಳ ಅನುಮತಿ ಇಲ್ಲದೆ ಹಿಂಪಡೆಯುವಂತಿಲ್ಲ ಎಂದು ಸುಪ್ರೀಂಕೋರ್ಟ್ ಎಲ್ಲ ರಾಜ್ಯ ಸರ್ಕಾರಗಳಿಗೆ ನಿರ್ದೇಶಿಸಿದೆ. ಈ ತೀರ್ಪಿಗೆ ಕರ್ನಾಟಕ ಸರ್ಕಾರವು ಬದ್ಧವಾಗಿರಬೇಕಾಗುತ್ತದೆ ಎಂದು ತಿಳಿಸಿದರು.

ಅದನ್ನು ಪರಿಗಣಿಸಿದ ಪೀಠ ಜನಪ್ರತಿನಿಧಿಗಳ ವಿರುದ್ಧದ ಕ್ರಿಮಿನಲ್ ಪ್ರಕರಣಗಳನ್ನು ಹಿಂಪಡೆಯುವ ವಿಚಾರದಲ್ಲಿ ಸುಪ್ರೀಂಕೋರ್ಟ್ ತೀರ್ಪನ್ನು ರಾಜ್ಯ ಸರ್ಕಾರ ಪಾಲನೆ ಮಾಡಬೇಕಾಗುತ್ತದೆ. ಅದ್ದರಿಂದ 63 ಪ್ರಕರಣಗಳನ್ನು ಹಿಂಪಡೆದು 2020ರ ಆಗಸ್ಟ್ 31 ರಂದು ಸರ್ಕಾರ ಹೊರಡಿಸಿರುವ ಆದೇಶ ಹಾಲಿ–ಮಾಜಿ ಶಾಸಕರು ಮತ್ತು ಸಂಸದರಿಗೆ ಅನ್ವಯವಾಗುವುದಿಲ್ಲ ಎಂದು ಸ್ಪಷ್ಟಪಡಿಸಿ ಪಿಯುಸಿಎಲ್ ಸಲ್ಲಿಸಿದ್ದ ಅರ್ಜಿ ಇತ್ಯರ್ಥಪಡಿಸಿತು.

**ದಾಖಲೆ ಸಲ್ಲಿಸಲು ಸೂಚನೆ:**ರಾಜ್ಯ ಸರ್ಕಾರ ಹೊಂಪಡೆದಿರುವ 570 ಪ್ರಕರಣಗಳಲ್ಲಿ ಎಷ್ಟು ಪ್ರಕರಣಗಳು ಜನಪ್ರತಿನಿಧಿಗಳಿಗೆ ಸಂಬಂಧಿಸಿವೆ ಎಂದು ನ್ಯಾಯಪೀಠ ಪ್ರಶ್ನಿಸಿತು. ಅರ್ಜಿದಾರರ ಪರ ವಕೀಲ ಎನ್. ಉಮಾಪತಿ ಉತ್ತರಿಸಿ, ಈ ಬಗ್ಗೆ ಖಚಿತ ವಿವರ ಲಭ್ಯವಿಲ್ಲ ಎಂದರು. ನ್ಯಾಯಪೀಠ ಪ್ರತಿಕ್ರಿಯಿಸಿ ಸುಪ್ರಿಂಕೋರ್ಟ್ ತೀರ್ಪು ಜನಪ್ರತಿನಿಧಿಗಳ ವಿರುದ್ಧದ ಎಲ್ಲ ಪ್ರಕರಣಗಳಿಗೂ ಅನ್ವಯವಾಗಲಿದೆ. ಅದ್ದರಿಂದ ಹಾಲಿ–ಮಾಜಿ ಶಾಸಕರು ಹಾಗೂ ಸಂಸದರ ವಿರುದ್ಧ ಪ್ರಾಸಿಕ್ಯೂಷನ್– ಹಿಂಪಡೆಯುವ ಸಂಬಂಧ ಹೊರಡಿಸಿರುವ ಆದೇಶ ಮತ್ತು ಅವುಗಳಿಗೆ ಸಂಬಂಧಿಸಿದ ದಾಖಲೆಗಳನ್ನು ಕೋರ್ಟ್‌ಗೆ ಒದಗಿಸಬೇಕು ಎಂದು ಸರ್ಕಾರಕ್ಕೆ ನಿರ್ದೇಶಿಸಿ ವಿಚಾರಣೆಯನ್ನು ಸೆಪ್ಟೆಂಬರ್ 3ಕ್ಕೆ ಮುಂದೂಡಿತು.

ಆಧಾರ:ವಿಜಯವಾಣಿ, ದಿನಾಂಕ:12.08.2021.

## 5. CJI rues lack of debate in Parliament

Chief Justice of India N.V.Ramana on Sunday lamented the lack of quality debates in Parliament saying the sorry state of affairs was resulting in passing of laws with a lot of ambiguity and gaps besides leading to increased litigation.

Expressing concern at the fulling standards of debates in Parliament a can did Justice Ramana contrasted the present scenario with the initial years after independence.

Different laws used to be debated and deliberated upon then. So the burden of courts in interpreting or implementing the laws used used to be less. We had a clear picture (of) what the legislature wanted tel why they were making such legislation. Now (thereis a ) sorry state of affairs Justice Ramana said.

We see a lot of ambiguity and gaps in legislation (now). There is no clarity in laws, we don't know what purpose law is being made. This causing a lot of litigation inconvenience to the people and loss to the government he said during the flag hoisting ceremony organized by the Supreme Court Bar Association on the occasion of the 75$^{th}$ Independence Day.

The CJI's plain speaking comes at a time when Parliament was paralysed by protests for days during the monsoon session due to the Opposition's protest over the Pegasus snooping scandal. Pegasus snooping scandal. Several bills were passed by the Modi government amid the din without any debate.

He blamed the presents' state of affairs in Parliament at the lack of enough intellectuals and lawyers.

Justice Ramana invoked history and spoke of how Indias' independence struggle was led by lawyers like Mahatma Gandhi, Sardar Patel, Jawaharalal Nehru and Babu Rajendra Prasad.

If you take into consideration the first members of the Lok Sabha, Rajya Sabha and State Assemblies. They were filled with lawyers. Unfortunately over a period of time you know what has been happening in Parliament. This is what happens if intellectuals and professionals like lawyers are not there in the Houses, the CJI regretted. He called upon the lawyers to actively participate in public life. It is time for the legal community and lawyers to lead. They should not confine themselves to the profession, earning money and living comfortably. They must actively participate in public life he said.

Courtesy: Deccan Herald, Dated: 16.08.2021

## 6. ಪೆಗಾಸಸ್ ತನಿಖೆಗೆ ತಜ್ಞರ ಸಮಿತಿ

ಇಸ್ರೇಲ್ ಮೂಲದ ಪೆಗಾಸಸ್ ಬೇಹುಗಾರಿಕೆ ಸಾಫ್ಟವೇರ್ ಮೂಲಕ ಪತ್ರಕರ್ತರು ರಾಜಕಾರಣಿಗಳು, ಉದ್ಯಮಿಗಳು, ಜಡ್ಜ್‌ಗಳ ಮೊಬೈಲ್ ಫೋನ್ ಹ್ಯಾಕ್ ಮಾಡಲಾಗಿದೆ ಎಂಬ ಆರೋಪವನ್ನು ಕೇಂದ್ರ ಸರ್ಕಾರ ಅಲ್ಲಗಳೆದಿದೆ. ಆದರೂ ಈ ಕುರಿತ ತನಿಖೆಗೆ ತಜ್ಞರ ಸಮಿತಿ ರಚಿಸುವುದಾಗಿ ಪೆಗಾಸಸ್ ಹಗರಣಕ್ಕೆ ಸಂಬಂಧಿಸಿದ ಅರ್ಜಿಗಳ ವಿಚಾರಣೆ ನಡೆಸುತ್ತಿರುವ

ಸುಪ್ರೀಂಕೋರ್ಟ್‌ನ ಮುಖ್ಯ ನ್ಯಾಯಮೂರ್ತಿ ಎನ್.ವಿ. ರಮಣ ನೇತೃತ್ವದ ನ್ಯಾಯಪೀಠಕ್ಕೆ ಅಫಿಡವಿಟ್ ಸಲ್ಲಿಸಿದೆ. ಕೇವಲ ಊಹೆ ಮತ್ತು ನಿಯಮಗಳಲ್ಲಿ ಬಂದ ಆಧಾರರಹಿತ ವರದಿಯನ್ನಾಧರಿಸಿ ಸುಪ್ರೀಂಕೋರ್ಟ್‌ಗೆ ದೂರು ಸಲ್ಲಿಸಲಾಗಿದೆ ಎಂದು ತಿಳಿಸಿದೆ.

ಪಟ್ಟಭದ್ರ ಹಿತಾಸಕ್ತಿಗಳು ಹರಡಿರುವ ಈ ತಪ್ಪು ಸುದ್ದಿಯಿಂದ ಉಂಟಾಗಿರುವ ಗೊಂದಲವನ್ನು ನಿವಾರಿಸಲು ತಜ್ಞರ ಸಮಿತಿ ರಚಿಸಲಾಗುವುದು ಎಂದು ಎಲೆಕ್ಟ್ರಾನಿಕ್ಸ್ ಮತ್ತು ಮಾಹಿತಿ ತಂತ್ರಜ್ಞಾನ ಸಚಿವಾಲಯದ ಹೆಚ್ಚುವರಿ ಕಾರ್ಯದರ್ಶಿ ಸಹಿ ಹಾಕಿರುವ ಎರಡು ಪುಟಗಳ ಅಫಿಡವಿಟ್‌ನಲ್ಲಿ ತಿಳಿಸಿದೆ. ಈ ಅಫಿಡವಿಟ್‌ಗೆ ತೃಪ್ತವಾಗದ ನ್ಯಾಯಪೀಠ ಸರ್ಕಾರ ಪೆಗಾಸಸ್ ಸಾಫ್ಟ್‌ವೇರ್ ಖರೀದಿಸಿದೆಯೇ ಎಂದು ಪ್ರಶ್ನಿಸಿತ್ತು ಮತ್ತು ವಿವರವಾದ ಅಫಿಡವಿಟ್‌ನಲ್ಲಿರುವಂತೆ ಸೂಚಿಸಿತು.

ಪೆಗಾಸಸ್ ಬೇಹುಗಾರಿಕೆ ಹಗರಣದ ಕುರಿತು ಸ್ವತಂತ್ರ ಸಂಸ್ಥೆಯಿಂದ ತನಿಖೆ ನಡೆಸಬೇಕು ಎಂದು ಕೋರಿ ಕೆಲ ಹಿರಿಯ ಪತ್ರಕರ್ತರು ಸೇರಿ ಹಲವರು ಅರ್ಜಿ ಸಲ್ಲಿಸಿದ್ದಾರೆ. 2019ರಲ್ಲೇ ಈ ಹಗರಣ ನಡೆದಿದೆ ಎಂದು ಅರ್ಜಿದಾರರು ಹೇಳಿದ್ದಾರೆ. ಅಗಿನಿಂದಲೂ ಎಫ್ಐಆರ್ ದಾಖಲಾಗದಿರುವುದು ಅಶ್ಚರ್ಯ ಎಂದು ಹಿಂದಿನ ವಿಚಾರಣೆ ವೇಳೆ ಸಿಜೆಐ ರಮಣ ಹೇಳಿದ್ದರು. ಪೆಗಾಸಸ್ ಗಲಾಟೆಯ ಕಾರಣ ಈ ಸಾರಿಯ ಮುಂಗಾರು ಅಧಿವೇಶನ ಬಹುತೇಕ ವ್ಯರ್ಥವಾಯಿತು.

ಆಧಾರ:ವಿಜಯವಾಣಿ, ದಿನಾಂಕ:17.08.2021.

## 7. ರಾಷ್ಟ್ರೀಯ ಭದ್ರತೆ ವಿಷಯ ಬಹಿರಂಗಪಡಿಸಬೇಕಿಲ್ಲ

ಪೆಗಾಸಸ್ ಸ್ಪೈವೇರ್ ಗೂಢಚಾರಿಕೆಗೆ ಸಂಬಂಧಿಸಿದಂತೆ ರಾಷ್ಟ್ರೀಯ ಭದ್ರತೆಗೆ ಸಂಬಂಧಿಸಿದ ಯಾವುದೇ ಮಾಹಿತಿಯನ್ನು ಕೇಂದ್ರ ಸರ್ಕಾರ ಬಹಿರಂಗ ಪಡಿಸಬೇಕಿಲ್ಲ ಎಂದು ಸುಪ್ರೀಂಕೋರ್ಟ್ ಸ್ಪಷ್ಟಪಡಿಸಿದೆ. ಪೆಗಾಸಸ್ ಬೇಹುಗಾರಿಕೆ ಆರೋಪದ ಬಗ್ಗೆ ಸ್ವತಂತ್ರ ತನಿಖೆ ನಡೆಸಲು ಕೇಂದ್ರ ಸರ್ಕಾರಕ್ಕೆ ನಿರ್ದೇಶನ ನೀಡುವಂತೆ ಕೋರಿದ ಹಲವು ಅರ್ಜಿಗಳ ವಿಚಾರಣೆ ನಡೆಸುತ್ತಿರುವ ಮುಖ್ಯ ನ್ಯಾಯಮೂರ್ತಿ ಎನ್.ವಿ.ರಮಣ ನೇತೃತ್ವದ ಪೀಠ, ಕೇಂದ್ರ ಸರ್ಕಾರ ಈ ಬಗ್ಗೆ ಪ್ರತಿಕ್ರಿಯೆ ಸಲ್ಲಿಸುವಂತೆ ನೋಟಿಸ್ ನೀಡಿದೆ. 10 ದಿನದ ಒಳಗೆ ಪ್ರತಿಕ್ರಿಯೆ ಸಲ್ಲಿಸುವಂತೆ ಸೂಚಿಸಿದೆ.

ಇಸ್ರೇಲ್‌ನ ಎನ್ಎಸ್ಓ ಕಂಪನಿಯ ಸಾಧನವನ್ನು ಬಳಸಿ ರಾಜಕೀಯ ನಾಯಕರು, ಪತ್ರಕರ್ತರು, ನ್ಯಾಯಾಧೀಶರು ಮೊದಲಾದವರ ಮೇಲೆ ಬೇಹುಗಾರಿಕೆ ನಡೆಸಲಾಗುತ್ತಿದೆ ಎಂಬ ಆರೋಪ ದೇಶದಲ್ಲಿ ಆಲ್ಲೋಲಕಲ್ಲೋಲ ಎಬ್ಬಿಸಿದ್ದು ಈಚೆಗೆ ನಡೆದ ಸಂಸತ್ತಿನ ಮುಂಗಾರು ಅಧಿವೇಶನದಲ್ಲಿ ಭಾರಿ ಗದ್ದಲಕ್ಕೆ ಕಾರಣವಾಗಿತ್ತು.

ಅರ್ಜಿದಾರರು ಕೋರಿರುವಂತೆ ಅಫಿಡವಿಟ್‌ನಲ್ಲಿ ಬಹಿರಂಗಪಡಿಸಬೇಕಾದ ಮಾಹಿತಿಯಲ್ಲಿ ರಾಷ್ಟ್ರೀಯ ಭದ್ರತೆಗೆ ಸಂಬಂಧಿಸಿದ ಅಂಶವು ಒಳಗೊಂಡಿರುವ ಸಾಧ್ಯತೆಯಿರುತ್ತದೆ ಎಂದು ಸಾಲಿಸಿಟರ್ ಜನರಲ್ ತುಷಾರ್ ಮೆಹ್ತಾ ವಾದಿಸಿದ್ದರು. ಅದಕ್ಕೆ ಪ್ರತಿಕ್ರಿಯಿಸಿದ ಕೋರ್ಟ್ ಅಂಥ ವಿಚಾರಗಳನ್ನು ಬಹಿರಂಗ ಪಡಿಸುವ ಅಗತ್ಯವಿಲ್ಲ ಎಂದು ಹೇಳಿತು. ಸ್ವಂತ ವಿಚಾರಣೆ ಕೋರಿ ಸಂಪಾದಕರ ಒಕ್ಕೂಟ, ಅನೇಕ ಹಿರಿಯ ಪತ್ರಕರ್ತರ ಸಹಿತ ಹಲವರು ಅರ್ಜಿ ಸಲ್ಲಿಸಿದ್ದಾರೆ.

**ಲಿವಿಂಗ್ ಇನ್ ಸಂಬಂಧ ಅಕ್ರಮ:** ಪುರುಷ ಹಾಗೂ ವಿವಾಹಿತ ಮಹಿಳೆಯ ಲಿವ್–ಇನ್ ಸಂಬಂಧ ಅಕ್ರಮವಾದುದು ಎಂದು ರಾಜಸ್ಥಾನ ಹೈಕೋರ್ಟ್ ಇತ್ತೀಚೆಗೆ ಅಭಿಪ್ರಾಯ ಪಟ್ಟಿದೆ. ಈ ಪ್ರಕರಣದಲ್ಲಿ ತಮಗೆ ಪೊಲೀಸ್ ರಕ್ಷಣೆ ಒದಗಿಸಬೇಕೆಂಬ ಅರ್ಜಿದಾರರ ಮನವಿಯನ್ನು ಏಕಸದಸ್ಯ ಪೀಠ ತಳ್ಳಿ ಹಾಕಿದೆ. ಪ್ರತಿವಾದಿಗಳಿಂದ ತಮಗೆ ಜೀವ ಬೆದರಿಕೆಯಿದೆ ಎಂದು 30 ವರ್ಷದ ವಿವಾಹಿತ ಮಹಿಳೆ ಹಾಗೂ ಯುವತಿ ಅರ್ಜಿಯಲ್ಲಿ ಕೋರಿದ್ದರು.

**ಗರ್ಭ ಮುಂದುವರಿಸುವ ಹಕ್ಕು ಮಹಿಳೆಗೆ ಬಿಟ್ಟಿದ್ದು:** ಗರ್ಭವನ್ನು ಮುಂದುವರಿಸಬೇಕೇ ಬೇಡವೇ ಎಂಬುದನ್ನು ನಿರ್ಧರಿಸುವ ಮಹಿಳೆಯರ ಹಕ್ಕನ್ನು ಕಿತ್ತುಕೊಳ್ಳಲಾಗದು ಎಂದು ಕೇರಳ ಹೈಕೋರ್ಟ್ ಹೇಳಿದೆ. ಲಘುವಾಗಿ ಮಾನಸಿಕ ಅಸ್ವಸ್ಥೆಯಾಗಿರುವ ಮಹಿಳೆಯೊಬ್ಬರಿಗೆ 22 ವಾರದ ಅಸಹಜ ಗರ್ಭವನ್ನು ತೆಗೆದುಕೊಳ್ಳಲು ಅದು ಅನುಮತಿ ಕೊಟ್ಟಿದೆ. ಹುಟ್ಟಿದ ನಂತರ ಮಗು ಅಸಹಜವಾಗಿದ್ದು ಗಂಭೀರ ಅಂಗವೈಕಲ್ಯಕ್ಕೆ ಕಾರಣವಾಗುವ ಅಪಾಯವಿದೆ ಎಂದಾದಲ್ಲಿ ಈ ಗರ್ಭಪಾತ ಮಾಡಿಸಿಕೊಳ್ಳುವ ಹಕ್ಕನ್ನು ಕೋರ್ಟ್‌ಗಳು ಮಾನ್ಯ ಮಾಡಿವೆ ಎಂದು ಹೈಕೋರ್ಟ್ ನೆನಪಿಸಿದೆ. ಪ್ರಸಕ್ತ ಪ್ರಕರಣದಲ್ಲಿ ಗರ್ಭವು ಕ್ಲೈನ್ಫೆಲ್ಟರ್ ಸಿಂಡ್ರೋಮ್‌ನಿಂದ ಬಳಲುತ್ತಿದೆ ಎಂದು ವೈದ್ಯಕೀಯ ತಂಡ ದೃಢಪಡಿಸಿದೆ. ಮಗು ಬೆಳೆದ ನಂತರ ಮಾನಸಿಕ ಸಮಸ್ಯೆಯಿಂದ ಬಳಲುವ ಸಾಧ್ಯತೆಯಿರುತ್ತದೆ.

ಆಧಾರ:ವಿಜಯವಾಣಿ, ದಿನಾಂಕ:18.08.2021.

## 8. Pegasus controversy: SC issues notice to Centre

The Supreme Court issued a pre-admission notice to the Central government on petitions seeking a court monitored probe into the Pegasus snooping row.

A three judge been headed by CJY N.V.Ramana issued a notice after Solicitor General Tushar Mehta expressed inability to file a detailed affidavit revealing whether the government used the Pegasus software or not. So far the bench had been hearing the matter without issuing any notice.

Mehta argued against making this information public saying it was not in public interest as national security aspects are involved and he assured that the government is ready to make a disclosure before a committee of technical experts which it purpose to set up. This committee will submit its report to the court.

The judges told Mehta they do not want to compel him to divulge information that could potentially harm national security. We would never ask you to make any such disclosure irrespective of whether such a prayer is made or not. The question is that are individuals, civilians person of eminence who suspect and allege snooping or hacking. In case of civilians also, rules permit (interception) but only subject to the permission of the competent authority said Justice Surya Kant.

We will issue a simple notice and let the competent authority under rules take a decision to what extent information is to be disclosed and we will see what is to be done the judge said. The bench will hear the matter after 10 days.

CJI Ramana said the judges will deliberate on how to proceed. We will consider what can be done. If a committee of experts needs to be made or some other committee we will do so the court told Mehta who requested to let the government from the panel. Even though rules permit an interception that can be done only by the permission of the competent authority. What is the problem if that authority filed an affidavit before us the bench said.

Courtesy: Indian Express, Dated: 18.08.2021

## 9. Probe agencies too hit by lack of manpower: CJI

Bench was hearing plea about hundreds of criminal cases pending against MPs and MLAs, both sitting and former the Supreme Court said probe agencies such as the Central Bureau of Investigation (CBI) suffered from the dearth of manpower and infrastructure that the judiciary too faced. Both were overburdened.

"Everybody says 'CBI, CBI…' We don't want to demoralise the investigative agencies. They are overburdened… Similarly, one trial court handles 1,000 cases. How do you expect them to function, We had asked for special courts to hear exclusively cases under specific legislation… but nothing," Chief Justice of India (CJI) N.V. Ramana, heading a Special Bench of three judges, remarked orally.

**Pending cases**

The Bench, including Justices D.Y. Chandrachud and Surya Kant, was hearing a petition about the hundreds of criminal cases pending against MPs and MLAs, both sitting and former, for years together. Some of these cases, investigated by agencies such as the CBI and the Enforcement Directorate (ED), have been pending for over a decade.

A report submitted by the court's amicus curiae, senior advocate Vijay Hansaria, assisted by advocate Sneha Kalita, said 51 MPs and 71 MLAs were accused of offences under the Prevention of Money Laundering Act (PMLA), 2002.

Similarly, out of the 121 cases pending trial against MPs and MLAs before the CBI courts across the country, 58 were punishable with life imprisonment. In 45 cases, even the charges have not been framed, though the offences were alleged to have been committed several years ago.

A total of 37 CBI cases against legislators were continuing in the stage of investigation for years on end now. One of these cases, according to the CBI, was "expected" to be completed by 2030, the report said.

"In some cases, you have not filed a chargesheet in 10 or 15 years… In one case, you have attached assets worth over ₹ 200 crore, but not filed a chargesheet. Simply attaching property will not serve any purpose," Chief Justice Ramana addressed Solicitor-General Tushar Mehta, who appeared for both the CBI and the ED.

"The information given by the ED and CBI present a really, shocking, disturbing and gloomy picture," Mr. Hansaria submitted. The Chief Justice reasoned with Mr. Mehta to complete the trial in these cases quickly rather than have them hanging over the heads of the accused like a Damocles sword.

**Plea for directive**

The Solicitor-General urged the Bench to pass a judicial order directing lower courts to complete the pending trial proceedings in a "mandatory time-bound manner", possibly within

the next six months. He submitted that in some cases, the High Courts intervened and granted stay of the trial.

But the CJI did not agree, saying the High Courts had stayed trial in only seven cases and the Supreme Court in one. Mr. Mehta then said ED cases were held up because they spanned to tax havens abroad, which refused to cooperate with investigations.

The CJI stated efforts would be made to “rationalise” the number of cases before each trial court. The judiciary was slowly but surely dealing with the problem of scarcity of judges - High Courts have 455 judicial vacancies as on August 1. Besides, lower courts also have other urgent cases of bail, custody matters and so on to hear and decide.

The Bench said a mechanism would be put in place soon to monitor the progress of criminal trials involving legislators soon. This would include special courts.

In the previous hearing, the apex court questioned the Centre’s commitment towards the speedy trial and prosecution of criminal politicians. It also directed that a criminal case against an MP or MLA could be withdrawn only after getting the consent of the High Court concerned.

“We deem it appropriate to direct that no prosecution against a sitting or former MP or MLA shall be withdrawn without the leave of the High Court… Various State governments have resorted to withdrawal of numerous criminal cases pending against MP/MLA by utilising the power vested under Section 321 CrPC. The power under Section 321 CrPC is a responsibility which is to be utilised in public interest and cannot be used for extraneous and political considerations. This power is required to be utilised with utmost good faith to serve the larger public interest,” a three-judge Bench led by the CJI had directed in its last order.

Courtesy: The Hindu – Dated: 26.08.2021

## 10. What has the Supreme Court ruled on ‘creamy layer’

**The story so far:** On August 24, a Division Bench of the Supreme Court, led by Justice L. Nageswara Rao, observed that economic criterion cannot be the sole basis for identifying the ‘creamy layer’ of a backward class and that other factors like social advancement, education, employment, too, matter. The judgment came on a writ petition filed by a group from Haryana, the Pichra Warg Kalyan Mahasabha, challenging two notifications issued by the State government in 2016 and 2018, under the Haryana Backward Classes (Reservation in Services and Admission in Educational Institutions) Act, 2016.

**What were the notifications?**

The 2016 notification identified as ‘creamy layer’ backward class members whose gross annual income exceeded ₹6 lakh. It said backward class sections whose families earn less than ₹3 lakh would get priority over their counterparts who earn more than ₹3 lakh but less than ₹6 lakh. The Supreme Court struck down the notifications as a “flagrant violation” of the 2016 Act. It said Section 5 (2) of the Act required the State to consider social, economic and other factors together to identify and exclude backward class members as ‘creamy layer’

**Who belongs to the 'creamy layer'?**

The 'creamy layer' concept was introduced in the Supreme Court's Indra Sawhney judgment, delivered by a nine-judge Bench on November 16, 1992. Though it upheld the government's decision based on the Mandal Commission's report to give 27% reservation to Other Backward Classes, the court found it necessary to identify sections of backward classes who were already "highly advanced socially as well as economically and educationally".

The court believed that these wealthy and advanced members form the 'creamy layer' among backward classes. The judgment directed the State governments to identify the 'creamy layer' and exclude them from the purview of reservation.

However, certain States like Kerala did not promptly implement the judgment. This led to the Indra Sawhney-II case, reported in 2000. In this, the court went to the extent of determining the 'creamy layer' among backward classes. The judgment held that persons from backward classes who occupied posts in higher services such as IAS, IPS and All India Services had reached a higher level of social advancement and economic status, and therefore, were not entitled to be treated as backward. Such persons were to be treated as 'creamy layer' without any further inquiry. Likewise, people with sufficient income who were in a position to provide employment to others should also be taken to have reached a higher social status and treated as "outside the backward class". Other categories included persons with higher agricultural holdings or income from property. Thus, a reading of the Indra Sawhney judgments shows that social advancement, including education and employment and not just wealth, was key to identify the 'creamy layer'.

**Why is it difficult to draw the line?**

The identification of 'creamy layer' has been a thorny issue. The basic question here is how rich or advanced should a backward class section be to invite exclusion from reservation. Justice Jeevan Reddy, in the Indra Sawhney judgment, wondered "how and where to draw the line" between the deserving and the creamy layer among backward classes. "The basis of exclusion should not merely be economic, unless, of course, the economic advancement is so high that it necessarily means social advancement," he pointed out.

Justice Reddy highlighted the pitfalls of identifying the creamy layer merely on economic basis. For example, a person who earns ₹36,000 a month may be economically well-off in rural India. However, the same salary in a metropolitan city may not count for much. Here, Justice Reddy warned that "while the income of a person can be taken as a measure of his social advancement, the limit to be prescribed should not be such as to result in taking away with one hand what is given with the other. The income limit must be such as to mean and signify social advancement".

Courtesy: The Hindu ,Dated: 29.08.2021

# ಭಾಗ–7

# ಹೊರ ರಾಜ್ಯಗಳ ಸುದ್ದಿಗಳು

## 1. ಉತ್ತರಾಖಂಡದ ಸಿ.ಎಂ. ರಾಜೀನಾಮೆ

ಉತ್ತರಾಖಂಡದ ಮುಖ್ಯಮಂತ್ರಿ ತೀರಥ್ ಸಿಂಗ್ ರಾವತ್ ಅವರು ತಮ್ಮ ಸ್ಥಾನಕ್ಕೆ ರಾಜೀನಾಮೆ ಸಲ್ಲಿಸಿದ್ದಾರೆ. ಅವರು ಮುಖ್ಯಮಂತ್ರಿಯಾಗಿ ಅಧಿಕಾರ ವಹಿಸಿಕೊಂಡು ಕೇವಲ ನಾಲ್ಕು ತಿಂಗಳಾಗಿತ್ತು.

ಕೆಲ ದಿನಗಳಿಂದ ಉತ್ತರಾಖಂಡದ ನಾಯಕತ್ವ ಬದಲಾವಣೆ ಕುರಿತ ಚಟುವಟಿಕೆಗಳು ಗರಿಗೆದರಿದ್ದವು. ಮುಖ್ಯಮಂತ್ರಿ ತೀರಥ್ ಸಿಂಗ್ ಅವರು ಬಿಜೆಪಿ ಅಧ್ಯಕ್ಷ ಜೆ.ಪಿ.ನಡ್ಡಾ ಅವರನ್ನು ಭೇಟಿಯಾಗಿದ್ದರು. ಪಕ್ಷವು ರಾವತ್ ಅವರಿಗೆ ರಾಜೀನಾಮೆ ನೀಡುವಂತೆ ಸೂಚಿಸಿದ ಬೆನ್ನಲ್ಲೆ, ಅವರು ರಾಜ್ಯಪಾಲರಾದ ಬೇಬಿ ರಾಣಿ ಮೌರ್ಯ ಅವರನ್ನು ಭೇಟಿ ಮಾಡಿ ರಾಜೀನಾಮೆ ಸಲ್ಲಿಸಿದರು.

ಉತ್ತರಾಖಂಡದ ಬಿಜೆಪಿ ಶಾಸಕರು ಸಭೆ ಸೇರಲಿದ್ದು, ಹೊಸ ನಾಯಕನನ್ನು ಆಯ್ಕೆ ಮಾಡಲಿದ್ದಾರೆ. ರಾವತ್ ಅವರು ಮಾರ್ಚ್‌ನಲ್ಲಿ ಮುಖ್ಯಮಂತ್ರಿಯಾಗಿ ಅಧಿಕಾರ ಸ್ವೀಕರಿಸಿದ್ದರು. ಮುಂದಿನ ವರ್ಷವೇ ಉತ್ತರಾಖಂಡದಲ್ಲಿ ವಿಧಾನಸಭಾ ಚುನಾವಣೆ ನಡೆಯಲಿದೆ.

ಪ್ರಸ್ತುತ ಲೋಕಸಭಾ ಸದಸ್ಯರಾಗಿರುವ ರಾವತ್, ಮುಖ್ಯಮಂತ್ರಿ ಹುದ್ದೆಯಲ್ಲಿ ಮುಂದುವರಿಯಬೇಕಿದ್ದರೆ ಸೆಪ್ಟೆಂಬರ್ 10 ರೊಳಗೆ ಶಾಸಕರಾಗಿ ಆಯ್ಕೆಯಾಗಬೇಕಿತ್ತು. ಚುನಾವಣಾ ಆಯೋಗವು ರಾಜ್ಯದಲ್ಲಿ ತೆರವಾಗಿರುವ ಎರಡು (ಗಂಗೋತ್ರಿ ಮತ್ತು ಹಲ್ದವಾನಿ) ಕ್ಷೇತ್ರಗಳಿಗೆ ಕೋವಿಡ್–19ರ ಕಾರಣಕ್ಕೆ ಉಪಚುನಾವಣೆ ನಡೆಸುವ ಸಾಧ್ಯತೆಗಳು ಕಡಿಮೆಯಾಗಿರುವುದರಿಂದ ನಾಯಕತ್ವ ಬದಲಾವಣೆ ಅನಿವಾರ್ಯ ಎನ್ನುವ ಪರಿಸ್ಥಿತಿ ಸೃಷ್ಟಿಯಾಗಿತ್ತು.

ಪ್ರಸ್ತುತ ವಿಧಾನಸಭೆಯ ಅವಧಿ ಮುಂದಿನ ಮಾರ್ಚ್‌ನಲ್ಲಿ ಮುಕ್ತಾಯವಾಗಲಿದೆ. ಚುನಾವಣಾ ಆಯೋಗ ಉಪಚುನಾವಣೆ ನಡೆಸುವ ಸಾಧ್ಯತೆಗಳು ಕ್ಷೀಣ ಎಂದು ರಾಜಕೀಯ ವಿಶ್ಲೇಷಕರು ಅಭಿಪ್ರಾಯಪಟ್ಟಿದ್ದರು.

ಸಾಂಕ್ರಾಮಿಕ ಕಾಯಿಲೆ ಸಂದರ್ಭದಲ್ಲಿ ಈ ಹಿಂದೆ ಚುನಾವಣೆ ನಡೆಸಿದ ಕಾರಣಕ್ಕೆ ಆಯೋಗವನ್ನು ನ್ಯಾಯಾಲಯಗಳು ತರಾಟೆಗೆ ತೆಗೆದುಕೊಂಡಿವೆ. ಆದ್ದರಿಂದ, ಆಯೋಗವು ಚುನಾವಣೆ ನಡೆಸಲು ಅವಸರ ಮಾಡುವುದಿಲ್ಲ ಎನ್ನುವ ಅಭಿಪ್ರಾಯವೂ ವ್ಯಕ್ತವಾಗಿತ್ತು.

ಜನಪ್ರತಿನಿಧಿಗಳ ಕಾಯ್ದೆಯ ಸೆಕ್ಷನ್ 151 'ಎ' ಅನ್ವಯ ಸಂಸತ್ ಅಥವಾ ರಾಜ್ಯ ವಿಧಾನಸಭೆಗಳ ಖಾಲಿ ಉಳಿದಿರುವ ಸ್ಥಾನಗಳನ್ನು ಆರು ತಿಂಗಳ ಒಳಗೆ ಉಪಚುನಾವಣೆ ಮೂಲಕ ಭರ್ತಿ ಮಾಡಬೇಕು. ಆಯ್ಕೆಯಾಗುವ ಹೊಸ ಸದಸ್ಯರ ಅವಧಿಯು ಒಂದು ವರ್ಷ ಅಥವಾ ಅದಕ್ಕೂ ಹೆಚ್ಚು ಇರಬೇಕು ಎಂದು ತಿಳಿಸಿದೆ.

ಆಧಾರ: ಪ್ರಜಾವಾಣಿ, ದಿನಾಂಕ: 03.07.2021

## 2. ಬಂಗಾಳ ಅಧಿವೇಶನದಲ್ಲಿ ಕೋಲಾಹಲ

ಪಶ್ಚಿಮ ಬಂಗಾಳ ರಾಜ್ಯಪಾಲ ಜಗದೀಪ್ ಧನ್ಕರ್ ಭಾಷಣ ಪೂರ್ತಿಗೊಳಿಸದೆ, ಅರ್ಧಕ್ಕೆ ಹೊರ ನಡೆದ ಘಟನೆ ನಡೆದಿದೆ. ಹೊಸ ಸರ್ಕಾರ ಅಸ್ತಿತ್ವಕ್ಕೆ ಬಂದ ಬಳಿಕ ನಡೆದ ಮೊದಲ ಅಧಿವೇಶನವನ್ನು ಉದ್ದೇಶಿಸಿ ಅವರು ಭಾಷಣ ಮಾಡುತ್ತಿದ್ದರು. ಭಾಷಣ ಮುಕ್ತಾಯಕ್ಕೆ ಐದು ನಿಮಿಷಗಳು ಇರುವಂತೆಯೇ, ಪ್ರತಿಪಕ್ಷ ಬಿಜೆಪಿ ಶಾಸಕರು ಚುನಾವಣೋತ್ತರ ಹಿಂಸಾಚಾರ ಖಂಡಿಸಿ, ಫಲಕಗಳನ್ನು

ಹಿಡಿದು ಘೋಷಣೆ ಕೂಗಲಾರಂಭಿಸಿದರು. ಕೆಲವು ಬಿಜೆಪಿ ಶಾಸಕರು 'ಜೈ ಶ್ರೀರಾಂ' ಎಂಬ ಘೋಷಣೆಯನ್ನೂ ಹಾಕಿದ್ದಾರೆ. ಗಲಾಟೆ ಜೋರಾಗುತ್ತಿದ್ದಂತೆ ರಾಜ್ಯಪಾಲ ಧನ್ಕರ್ ಭಾಷಣವನ್ನು ನಿಲ್ಲಿಸಿ ತೆರಳಿದ್ದಾರೆ.

ನಂತರ ಮಾತನಾಡಿದ ಪ್ರತಿಪಕ್ಷ ನಾಯಕ ಸುವೇಂದು ಅಧಿಕಾರಿ, ಇತ್ತೀಚಿನ ಚುನಾವಣಾ ಫಲಿತಾಂಶದ ಬಳಿಕ ನಡೆದ ಹಿಂಸಾಚಾರದ ಬಗ್ಗೆ ರಾಜ್ಯಪಾಲರ ಭಾಷಣದಲ್ಲಿ ಪ್ರಸ್ತಾಪವಾಗದೇ ಇದ್ದುದರಿಂದ ಪ್ರತಿಭಟನೆ ಮಾಡಬೇಕಾಯಿತು. ರಾಜ್ಯಪಾಲರ ಬಗ್ಗೆ ಮತ್ತು ಭಾಷಣವನ್ನು ಅರ್ಧಕ್ಕೆ ನಿಲ್ಲಿಸಿ ತೆರಳಿದ್ದರ ಬಗ್ಗೆ ಗೌರವ ಇದೆ. ಸರ್ಕಾರ ಈ ಬಗ್ಗೆ ಮೌನವಾಗಿದ್ದುದರಿಂದ ಪ್ರತಿಭಟನೆ ನಡೆಸಬೇಕಾಯಿತು' ಎಂದು ಸಮರ್ಥಿಸಿಕೊಂಡಿದ್ದಾರೆ. ಭೇಟಿ ಮಾಡಿಲ್ಲ; ಪಶ್ಚಿಮ ಬಂಗಾಳ ಪ್ರತಿಪಕ್ಷ ನಾಯಕ ಸುವೇಂದು ಅಧಿಕಾರಿಯವರನ್ನು ಭೇಟಿ ಮಾಡಿಲ್ಲ. ಮುನ್ಸೂಚನೆ ನೀಡದೆ ಗೃಹ ಕಚೇರಿಗೆ ಭೇಟಿ ನೀಡಿದ್ದರು ಎಂದು ಸಾಲಿಸಿಟರ್ ಜನರಲ್ ಗುಷಾರ್ ಮೆಹ್ತಾ ಹೇಳಿದ್ದಾರೆ. ಬೇರೊಂದು ಸಭೆಯಲ್ಲಿದ್ದ ಕಾರಣ ಅವರನ್ನು ಭೇಟಿಯಾಗಿಲ್ಲ ಎಂದಿದ್ದಾರೆ.

ನಾರದಾ ಹಗರಣಕ್ಕೆ ಸಂಬಂಧಿಸಿದಂತೆ ಸುವೇಂದು ಸಾಲಿಟರ್ ಜನರಲ್ ಭೇಟಿ ನಡೆದಿದೆ. ಅವರನ್ನು ವಜಾ ಮಾಡಬೇಕು ಎಂದು ಟಿಎಂಸಿ ಒತ್ತಾಯಿಸಿ, ಪ್ರಧಾನಿ ಮೋದಿಗೆ ಪತ್ರ ಬರೆದ ಹಿನ್ನೆಲೆಯಲ್ಲಿ ಅವರು ಈ ಪ್ರತಿಕ್ರಿಯೆ ನೀಡಿದ್ದಾರೆ.

ಆಧಾರ: ಉದಯವಾಣಿ, ದಿನಾಂಕ: 03.07.2021

## 3. ಮಹಾ ಸ್ಪೀಕರ್ ನಿಂದಿಸಿದ 12 ಬಿಜೆಪಿ ಶಾಸಕರು 1 ವರ್ಷ ಸಸ್ಪೆಂಡ್

ಮಹಾರಾಷ್ಟ್ರ ವಿಧಾನ ಸಭೆ ಸ್ಪೀಕರ್ ಜೊತೆ ದುರ್ವರ್ತನೆ ತೋರಿದ 12 ಬಿಜೆಪಿ ಶಾಸಕರನ್ನು ಒಂದು ವರ್ಷದ ಅವಧಿಯವರೆಗೆ ಅಮಾನತ್ತು ಮಾಡಲಾಗಿದೆ. ರಾಜ್ಯದಲ್ಲಿ ಒಬಿಸಿ ವರ್ಗದವರಿಗೆ ವಿವಿಧ ಮೀಸಲು ನೀಡಲು ಅನ್ವಯವಾಗುವಂತೆ 2011 ರ ಜನಗಣತಿ ವರದಿ ನೀಡುವಂತೆ ಕೇಂದ್ರವನ್ನು ಒತ್ತಾಯಿಸುವ ಗೊತ್ತುವಳಿ ಮಂಡಿಸಿದ ವೇಳೆ ಕೆಲ ಬಿಜೆಪಿ ನಾಯಕರು ಸ್ಪೀಕರ್ ಮುಂದಿನ ಜಾಗದ ಮೇಲೇರಿ ವಿರೋಧಿಸಿದರು. ಈ ಹಿನ್ನೆಲೆಯಲ್ಲಿ ಭಾರೀ ಗದ್ದಲ ಉಂಟಾಗಿ 4 ಬಾರಿ ಕಲಾಪ ಮುಂದೂಡಲಾಗಿತ್ತು. ಈ ಹಿನ್ನೆಲೆಯಲ್ಲಿ ಬಳಿಕ 12 ಸದಸ್ಯರನ್ನು ಅಮಾನತ್ತು ಮಾಡಲಾಯಿತು. ಇದನ್ನು ತೀವ್ರವಾಗಿ ವಿರೋಧಿಸುವ ವಿಪಕ್ಷನ ನಾಯಕ ದೇವೇಂದ್ರ ಫಡ್ನವೀಸ್, 'ಸ್ಥಳೀಯ ಸಂಸ್ಥೆಗಳಲ್ಲಿ ಒಬಿಸಿ ವಿಚಾರಗಳ ವಿಚಾರ ಸಂಬಂಧ ಸರ್ಕಾರದ ತಪ್ಪು ನಡೆಯನ್ನು ಬಯಲು ಮಾಡಿದ್ದಕ್ಕಾಗಿ, ವಿಪಕ್ಷಗಳ ಸದಸ್ಯರ ಸಂಖ್ಯೆ ಕ್ಷೀಣಿಸಲು ಸರ್ಕಾರ ಈ ಕ್ರಮ ಕೈಗೊಂಡಿದೆ' ಎಂದು ಕಿಡಿಕಾರಿದರು.

ಆಧಾರ: ಕನ್ನಡ ಪ್ರಭ, ದಿನಾಂಕ: 06.07.2021

## 4. BJP holds parallel session outside Maha Assembly

In an unprecedented act in Maharashtra, agitated opposition BJP held a "parallel session" in the Vidhan Sabha complex which the Maha Vikas Aghadi government described as "unfortunate in democracy".

The BJP boycotted the proceedings of the legislature on the second and final day to protest against the suspension of the 12 MLAs on the grounds of "misbehaving" with Shiv Sena's Bhaskar Jadhav, who was in the Chair as a member of the Speaker's Panel.

"What has happened today is not at all good… unfortunate in democracy," Chief Minister Uddhav Thackeray told reporters as the session drew to a close.

In the morning, Leader of Opposition Devendra Fadnavis and his counterpart in Council Pravin Darekar "nominated" senior BJP MLA Kalisas Kolambkar to the Speaker and started the "proceedings" at the stairs of the Vidhan Bhavan complex. "I propose a resolution against this government here and I request the members to start a discussion on the proposal," said Fadnavis initiating the discussion.

Courtesy: Deccan Herald , Dated:07.07.2021

## 5. ವಿಧಾನ ಪರಿಷತ್ ಮರುಸ್ಥಾಪನೆ ನಿರ್ಣಯ ಅಂಗೀಕಾರ

ಪಶ್ಚಿಮ ಬಂಗಳಾದಲ್ಲಿ ವಿಧಾನ ಪರಿಷತ್ ಸ್ಥಾಪಿಸುವ ಮಹತ್ವದ ನಿರ್ಣಯವನ್ನು ವಿಧಾನಸಭೆ ಅಂಗೀಕರಿಸಿದೆ. ಭಾರತದ ಸಂವಿಧಾನದ ಅನುಚ್ಛೇದ 169ರ ಪ್ರಕಾರ, ನಿರ್ಣಯ ಅಂಗೀಕಾರವಾಗಿದೆ. ವಿಧಾನಸಭೆಯ 265 ಸದಸ್ಯರ ಪೈಕಿ 196 ಶಾಸಕರು ನಿರ್ಣಯದ ಪರವಾಗಿ ಮತ್ತು 69 ಶಾಸಕರು ವಿರುದ್ಧವಾಗಿ ಮತ ಚಲಾಯಿಸಿದರು.

ವಿಧಾನ ಪರಿಷತ್ ಸ್ಥಾಪನೆ ಆಡಳಿತಾರೂಢ ತೃಣಮೂಲ ಕಾಂಗ್ರೆಸ್ ಪಕ್ಷ (ಟಿಎಂಸಿ) ಚುನಾವಣಾ ಪ್ರಣಾಳಿಕೆಯಲ್ಲಿ ನೀಡಿದ ಭರವಸೆಯಾಗಿತ್ತು. ಮತ್ತೊಂದು ಅವಧಿಯ ಆಡಳಿತ ಶುರುಮಾಡುತ್ತಿದ್ದಂತೆ ಮುಖ್ಯಮಂತ್ರಿ ಮಮತಾ ಬ್ಯಾನರ್ಜಿ ಈ ಸಂಬಂಧದ ಪ್ರಸ್ತಾವನೆಗೆ ಸಹಿ ಹಾಕಿದ್ದರು. ವಿಧಾನಸಭೆಯಲ್ಲಿ ಇದು ಅಂಗೀಕಾರವಾಗುವ ಸಂದರ್ಭದಲ್ಲಿ ಮಮತಾ ಬ್ಯಾನರ್ಜಿ ಉಪಸ್ಥಿತರಿರಲಿಲ್ಲ.

**ಈ ಹಿಂದೆ ಇತ್ತು:** ಪಶ್ಚಿಮ ಬಂಗಾಳದಲ್ಲಿ ವಿಧಾನ ಪರಿಷತ್ ಸ್ಥಾಪನೆ ಹೊಸದಲ್ಲ. ಈ ಹಿಂದೆ 1952ರಲ್ಲಿ ವಿಧಾನ ಪರಿಷತ್ ಇಲ್ಲಿ ಅಸ್ತಿತ್ವಕ್ಕೆ ಬಂದಿತ್ತು. 1969ರ ಮಾರ್ಚ್ 21ರಂದು ವಿಧಾನಸಭೆಯಲ್ಲಿ ನಿರ್ಣಯ ಅಂಗೀಕರಿಸಿ ವಿಧಾನ ಪರಿಷತ್ ರದ್ದುಗೊಳಿಸಲಾಗಿತ್ತು.

ಆಧಾರ: ವಿಜಯವಾಣಿ, ದಿನಾಂಕ:07.07.2021

## 6. ಕೃಷಿ ಕಾನೂನು ತಿದ್ದುಪಡಿಗೆ ಚಿಂತನೆ

ಕೇಂದ್ರ ಸರ್ಕಾರದ ಮೂರು ಕೃಷಿ ಕಾನೂನುಗಳಿಗೆ ತಿದ್ದುಪಡಿ ತರುವ ಪ್ರಸ್ತಾವನೆಗೆ ರಾಜ್ಯ ಸಂಪುಟದ ಒಪ್ಪಿಗೆ ಪಡೆಯುವ ನಿರೀಕ್ಷೆಯಲ್ಲಿ ಮಹಾರಾಷ್ಟ್ರ ಸರ್ಕಾರ ಇತ್ತು. ಸಭೆಯಲ್ಲಿ ಕೇಂದ್ರ ಕೃಷಿ ಕಾನೂನು ತಿರಸ್ಕರಿಸುವ ವಿಚಾರದಲ್ಲಿ ಸಮ್ಮತಿ ವ್ಯಕ್ತವಾಗಿತ್ತು. ಅಧಿವೇಶನ ದಿಢೀರ್ ರದ್ದುಗೊಂಡಿದ್ದರಿಂದ ಈ ವಿಚಾರವೂ ಮುಂದಕ್ಕೆ ಹೋಗಿದೆ. ಇನ್ನೊಂದೆಡೆ, ಮಹಾರಾಷ್ಟ್ರಕ್ಕೆ ದಿನಕ್ಕೆ 10 ಲಕ್ಷದಿಂದ 14 ಲಕ್ಷ ಜನರಿಗೆ ನಿತ್ಯದ ಲೆಕ್ಕಾಚಾರದಲ್ಲಿ ಲಸಿಕೆ ನೀಡುವ ಪ್ರಸ್ತಾವನೆಗೆ ಸರ್ಕಾರ ಸಮ್ಮತಿ ನೀಡಿದೆ ಪ್ರತಿ ತಿಂಗಳು ಮೂರು ಕೋಟಿ ಡೋಸ್ ಲಸಿಕೆ ಪೂರೈಕೆಗೆ ಕೇಂದ್ರ ಸಮ್ಮತಿ ನೀಡಿದ ಹಿನ್ನೆಲೆಯಲ್ಲಿ ಈ ತೀರ್ಮಾನ ತೆಗೆದುಕೊಂಡಿದೆ ಪ್ರಸ್ತುತ ರಾಜ್ಯದಲ್ಲಿ 8 ಲಕ್ಷ ಜನರಿಗೆ ನಿತ್ಯವೂ ಲಸಿಕೆ ನೀಡಲಾಗುತ್ತಿದೆ.

ಆಧಾರ: ವಿಜಯವಾಣಿ, ದಿನಾಂಕ: 07.07.2021

## 7. Former Himachal CM Virbhadra Singh dead

Former Himachal Pradesh chief minister and veteran Congress leader Virbhadra Singh passed away after prolonged illness in Shimla. He was 87.

The six-time Chief Minister, who had twice recovered from COVID-19 in the past three months and remained under observation at the Indira Gandhi Medical College (IGMC), was placed on ventilator support after he suffered a cardiac arrest earlier this week. Dr. Janak Raj,

Senior Medical Superintendent, IGMC, said Mr. Singh passed away following multi-organ failure in the early hours

**Three – day mourning**

The State government declared three days mourning from July 8 to 10. He will be cremated at Rampur, his native place, on July 10.

Chief Minister Jai Ram Thakur laid a wreath on the mortal remains of the former CM.

Mr. Singh was a nine-time MLA, was elected to the State Legislative Assembly first time in October 1983. He was at present MLA from the Arki Assembly Constituency in Solan district.

Mr. Singh was first elected to the Lok Sabha in 1962 and in all, he was a five-time MP. He served as Minister of State for Industries in 1982-1983; Union Minister of Steel from 2009-2011; and Union Minister of Micro, Small and Medium Enterprises from 2011-2012. He was also the Himachal Pradesh Congress Committee president in 1977, 1979, 1980 and 2012.

Courtesy: The Hindu , Dated: 09.07.2021

## 8. ಎರಡು ಮಕ್ಕಳೇ ಸಾಕು

ಉತ್ತರ ಪ್ರದೇಶದಲ್ಲಿ ಇನ್ನು ಮುಂದೆ ಎರಡಕ್ಕಿಂತ ಹೆಚ್ಚು ಮಕ್ಕಳನ್ನು ಪಡೆದರೆ, ಸರ್ಕಾರಿ ಯೋಜನೆಗಳು, ಸಬ್ಸಿಡಿ, ಸರ್ಕಾರಿ ಉದ್ಯೋಗ ಸಿಗುವುದಿಲ್ಲ. ಸ್ಥಳೀಯ ಸಂಸ್ಥೆಗಳ ಚುನಾವಣೆಯಲ್ಲಿ ಸ್ಪರ್ಧಿಸಲು ಆಗುವುದಿಲ್ಲ

ಅಸ್ಸಾಂ ನಂತರ ಉತ್ತರ ಪ್ರದೇಶದಲ್ಲೂ ಎರಡು ಮಕ್ಕಳ ನೀತಿ ಜಾರಿಗೆ ತಯಾರಿ ನಡೆದಿದ್ದು, ಯೋಗಿ ಆದಿತ್ಯನಾಥ್ ಸರ್ಕಾರ ಕರಡು ನೀತಿ ಬಿಡುಗಡೆ ಮಾಡಿದೆ. ಜುಲೈ 19ರ ಒಳಗೆ ಸಾರ್ವಜನಿಕರು ಈ ನೀತಿ ಕುರಿತಂತೆ ಆಕ್ಷೇಪಣೆ ಸಲ್ಲಿಸಬಹುದಾಗಿದೆ.

ಇನ್ನೇನು ಒಂದು ವರ್ಷದಲ್ಲಿ ಉತ್ತರ ಪ್ರದೇಶದಲ್ಲಿ ವಿಧಾನಸಭೆ ಚುನಾವಣೆ ಎದುರಾಗಲಿದ್ದು, ಈ ಹಿನ್ನೆಲೆಯಲ್ಲಿಯೇ ಈ ನೀತಿ ರೂಪಿಸಲಾಗಿದೆ ಎಂದು ವಿಶ್ಲೇಷಿಸಲಾಗಿದೆ. ಜನಸಂಖ್ಯೆ ನಿಯಂತ್ರಣದ ಜೊತೆಗೆ, ಕಡಿಮೆ ಮಕ್ಕಳನ್ನು ಹೊಂದುವ ಪೋಷಕರಿಗೆ ನಾನಾ ರೀತಿಯ ಪ್ರೋತ್ಸಾಹ ಕೊಡುವ ಬಗ್ಗೆಯೂ ಈ ಕರಡು ನೀತಿಯಲ್ಲಿ ಪ್ರಸ್ತಾಪಿಸಲಾಗಿದೆ. ಜನಸಂಖ್ಯೆ ನಿಯಂತ್ರಣಕ್ಕಾಗಿ ಶಾಲೆಗಳಲ್ಲಿ ಹೆಲ್ತ್ ಕ್ಲಬ್ ತೆರೆಯಲು ಇದರಲ್ಲಿ ಪ್ರಸ್ತಾಪಿಸಲಾಗಿದೆ. ಈ ಮಧ್ಯೆ 2026ಕ್ಕೆ ರಾಜ್ಯದಲ್ಲಿ ಶೇ. 2.1 ಹಾಗೂ 2030ಕ್ಕೆ ಶೇ. 19 ರಷ್ಟು ಜನನ ಪ್ರಮಾಣದ ಗುರಿ ಹಾಕಿಕೊಳ್ಳಲಾಗಿದೆ.

**ಒಂದು ವರ್ಷದ ಅವಧಿ:** ಈ ನೀತಿ ರಾಜ್ಯ ಗೆಜೆಟ್‌ನಲ್ಲಿ ಪ್ರಕಟವಾದ ಒಂದು ವರ್ಷದ ಬಳಿಕ ಜಾರಿಗೆ ಬಹುವಿವಾಹ ಪದ್ಧತಿ ಬಗ್ಗೆಯೂ ಇದರಲ್ಲಿ ಪ್ರಸ್ತಾಪಿಸಲಾಗಿದೆ. ಒಬ್ಬ ವ್ಯಕ್ತಿ ಮೂವರನ್ನು ಮದುವೆಯಾಗಿದ್ದರೆ, ಇದನ್ನು ಒಂದೇ ವಿವಾಹ ಎಂದು ಪರಿಗಣಿಸಿ ಎಲ್ಲ ಮಕ್ಕಳನ್ನು ಆತನ ಲೆಕ್ಕಕ್ಕೆ ಹಾಕಲಾಗುತ್ತದೆ. ಆದರೆ, ಪತ್ನಿಯರ ಲೆಕ್ಕಾಚಾರದಲ್ಲಿ ಹೇಳುವುದಾದರೆ, ಈ ಮೂರನ್ನು ಬೇರೆ ಬೇರೆ ಎಂದೇ ಪರಿಗಣಿಸಲಾಗುತ್ತದೆ. ಮೊದಲು ಒಂದು ಮಗುವಾಗಿ, ಎರಡನೇ ಬಾರಿಗೆ ಅವಳಿ ಮಕ್ಕಳಾದರೆ ಈ ನೀತಿಯಿಂದ ವಿನಾಯಿತಿ ಸಿಗಲಿದೆ. ಮೊದಲು ಹುಟ್ಟಿದ 2 ಮಕ್ಕಳು ದಿವ್ಯಾಂಗರಾಗಿದ್ದರೆ, ಮೂರನೇ ಮಗು ಮಾಡಿಕೊಂಡರು ಯಾವುದೇ ಶಿಕ್ಷೆ ವಿಧಿಸಲಾಗುವುದಿಲ್ಲ.

ಆಧಾರ: ಉದಯವಾಣಿ, ದಿನಾಂಕ:11.07.2021

## 9. Maha Assembly Speaker's Post to remain with Congress

The post of Speaker of the Maharashtra Legislative Assembly will remain with Congress.

The post has been vacant since the resignation of Nana Patole, who has taken over as the President of Maharashtra Pradesh Congress Committee (MPCC).

Deputy Speaker Narhari Zirwal is discharging the official duties of the Speaker. Governor Bhagat Singh Koshyari has shot off letters to Chief Minister Uddhav Thackeray twice – in March and in June – over the issue of the vacant post.

Leader of Opposition Devendra Fadnavis had been raising the issue and had flagged it with Raj Bhavan. During the two-day brief monsoon session, Shiv Sena's Bhaskar Jadhav, who is part of the Speaker's panel – had an exchange with BJP members after which 12 MLAs were suspended for a year.

Thereafter, he had dropped indications about his interest in the post. Patole and state Revenue Minister Balasaheb Thorat has refused to give away the post of the Speaker to the Shiv Sena.

Courtesy: Deccan Herald Dated:12.07.2021

## 10. BJP MLA jailed over forging wife's mark sheet

The BJP's troubles over fake degrees and marksheets got a new twist in Rajasthan on Tuesday when BJP MLA Amrit Lal Meena was sent to jail for allegedly forging his wife's marksheet to make her eligible to contest the Sarpanch election in 2015.

Meena, an MLA from Salumbar in Rajasthan, has been remanded to judicial custody till July 23 after he surrendered before a lower court in Udaipur district. Meena had allegedly signed the fake documents as a guardian of his wife Shanta Devi for contesting the election in the Semari gram panchayat. A forged marksheet of Class 5 was presented, following which, a chargesheet was filed against Shanta Devi, who is currently out on bail.

MLA Meena was denied interim bail from the high court after which he moved a Special Leave Petition (SLP) in the Supreme Court, which directed him to surrender before the court in Sarada town within three weeks and stayed his arrest. The legislator surrendered before a court in Sarada but as his interim bail was rejected by the court, the MLA was sent to jail till July 23.

Shanta Devi had contested the election of Semari Sarpanch in which she had won. But the defeated candidate Saguna Devi had filed a complaint claiming Shanta's Class 5 marksheet was fake. In the police probe, the marksheet submitted by the MLA's wife was found to be fake. The investigation by CB-CID, found that Shanta Devi had not passed Class 5.

Courtesy: Indian Express , Dated: 14.07.2021

## 11. ಉಪವಾಸ ಮಾಡಿದ ರಾಜ್ಯಪಾಲ

ವರದಕ್ಷಿಣೆ ಪಿಡುಗು ಮತ್ತು ಮಹಿಳೆಯರ ಮೇಲಿನ ದೌರ್ಜನ್ಯದ ವಿರುದ್ಧ ಸಾರ್ವಜನಿಕರಿಗೆ ಅರಿವು ಮೂಡಿಸುವ ನಿಟ್ಟಿನಲ್ಲಿ ಕೇರಳದ ರಾಜ್ಯಪಾಲ ಆರಿಫ್ ಮೊಹಮ್ಮದ್ ಖಾನ್ ತಿರುವನಂತಪುರದಲ್ಲಿ ಒಂದು ದಿನದ ಉಪವಾಸ ನಡೆಸಿದರು. ಸಾಮಾಜಿಕ ಕಳಕಳಿ ಹೊಂದಿ, ಅದಕ್ಕೆ ಪ್ರೋತ್ಸಾಹ ನೀಡುವ ನಿಟ್ಟಿನಲ್ಲಿ ದಕ್ಷಿಣ ಭಾರತದ ರಾಜ್ಯವೊಂದರ ರಾಜ್ಯಪಾಲರೊಬ್ಬರು ಇದೇ ಮೊದಲ ಬಾರಿಗೆ ಉಪವಾಸ ನಡೆಸಿದ್ದಾರೆ. ಬೆಳಗ್ಗೆ 8 ಗಂಟೆಯಿಂದ ಸಂಜೆ 6 ರವರೆಗೆ ರಾಜ್ಯಪಾಲರು ಉಪವಾಸ ನಡೆಸಿದ್ದಾರೆ. ಬಳಿಕ ತಿರುವನಂತಪುರ ಗಾಂಧಿ ಭವನದಲ್ಲಿ ಪ್ರಾರ್ಥನಾ ಸಭೆಯಲ್ಲೂ ಭಾಗವಹಿಸಿದರು. ರಾಜ್ಯಪಾಲರ ಕ್ರಮಕ್ಕೆ ಬಿಜೆಪಿ ಮುಖಂಡ, ವಿದೇಶಾಂಗ ಖಾತೆ ಸಹಾಯಕ ಸಚಿವ ವಿ.ಮುರಳೀಧರನ್ ಬೆಂಬಲ ವ್ಯಕ್ತಪಡಿಸಿದರೆ. ಕೇರಳದ ಬಾಲಕಿಯರು, ಮಹಿಳೆಯರ ಸುರಕ್ಷತೆಗೋಸ್ಕರ ರಾಜ್ಯಪಾಲರು ನಡೆಸುತ್ತಿರುವ ಉಪವಾಸಕ್ಕೆ ಬೆಂಬಲವಿದೆ ಎಂದಿದ್ದಾರೆ. ಕೆಪಿಸಿಸಿ ಅಧ್ಯಕ್ಷ ಕೆ.ಸುಧಾಕರನ್ ಪ್ರತಿಕ್ರಿಯೆ ನೀಡಿ, ರಾಜ್ಯ ಸರ್ಕಾರ ಮಹಿಳೆಯರನ್ನು ರಕ್ಷಿಸಲು ವಿಫಲವಾದ್ದರಿಂದಲೇ ರಾಜ್ಯಪಾಲರು ಉಪವಾಸ ನಡೆಸಬೇಕಾಯಿತು ಎಂದಿದ್ದಾರೆ.

ಆಧಾರ: ಉದಯವಾಣಿ, ದಿನಾಂಕ:15.07.2021

## 12. TN govt plans grand celebration to make 100 years of legislature

The DMK government led by Chief Minister MK Stalin is making arrangements to celebrate the centenary year of the elected legislature in Tamil Nadu in a grand manner. The history of the elected legislature in Tamil Nadu began with a bang from the Justice Party rule during the British regime since it enacted many landmark legislations as well as social reform measures and since then, the legislative body here has undergone many changes.

The DMK takes pride in celebrating its roots, and now, the centenary of the Madras Legislative Council is yet another occasion for that since the history of this legislative body began with the rule of the Justice Party that later blossomed into the Dravidian movement.

Asked about the need to celebrate the centenary of the Madras Legislative Council now since the diamond jubilee of the State Assembly from the year of Independence was celebrated in 2012, DMK spokesperson J Constantine Ravindran told TNIE that when the Madras Legislative Council was set up in 1921, for the first time, legislative powers were given to the provincial legislative body to enact laws for "peace and good government" in the Province. So, in other words, the people's government was established in 1921, starting with the Justice Party's rule.

"What is significant is that the then Madras Province had much more powers than the present setup. Above all, the Justice Party regime rolled out many path-breaking social reforms. So, we take pride in celebrating the centenary of that important milestone" Ravindran reasoned.

Political analyst Tharasu Shyam is of the view that the centenary celebrations would not be complete without inviting the Chief Ministers of Andhra Pradesh, Karnataka, Kerala and Odisha since parts of these States were part of the Province of Madras during the British Regime. If that happens, the event could turn out to be a show of strength for Stalin.

Courtesy: Indian Express , Dated: 22.07.2021

## 13. ಕೇರಳ ವಿಧಾನಸಭೆ : ವಿರೋಧ ಪಕ್ಷಗಳ ಸಭಾತ್ಯಾಗ

ಕೇರಳ ವಿಧಾನಸಭೆಯ ಅಧಿವೇಶನದ ಮೊದಲ ದಿನವಾದ ವಿರೋಧ ಪಕ್ಷ ಕಾಂಗ್ರೆಸ್ ನೇತೃತ್ವದ ಯುಡಿಎಫ್ ಒಕ್ಕೂಟದ ಸದಸ್ಯರ ಪ್ರತಿಭಟನೆ ನಡೆಸಿ, ಸಭಾತ್ಯಾಗ ಮಾಡಿದರು.

ಅರಣ್ಯ ಸಚಿವ ಎ.ಕೆ.ಸ.ಸಸೀಂದ್ರಣ್ ಅವರು 'ಲೈಂಗಿಕ ಕಿರುಕಳ ಪ್ರಕರಣ'ವೊಂದರ ಇತ್ಯರ್ಥಕ್ಕೆ ಯತ್ನಿಸಿದ್ದರು ಎನ್ನಲಾದ ವಿಇಷಯದ ಬಗ್ಗೆ ಸದನ್ದಲ್ಲಿ ಚರ್ಚೆಯಾಗಬೇಕೆಂದು ಕಾಂಗ್ರೆಸ್ ಸದಸ್ಯರು ಒತ್ತಾಯಿಸಿದರು. ಈ ವಿಷಯ ಕುರಿತು ಕಾಂಗ್ರೆಸ್ ಶಾಸಕ ಸಿ.ಸಿ.ವಿಷ್ಣುನಾಥ್ ನಿಲುವಳಿ ಸೂಚನೆ ಮಂಡಿಸಿದರು. ಇದರ ಮೇಲೆ ಚರ್ಚೆ ನಡೆಸಲು ಸಭಾಧ್ಯಕ್ಷರು ಅವಕಾಶ ನೀಡದ ಕಾರಣ ಯುಡಿಎಫ್ ಒಕ್ಕೂಟದ ಸದಸ್ಯರು ಕಲಾಪವನ್ನು ಬಹಿಷ್ಕರಿಸಿ, ಸಭಾತ್ಯಾಗ ಮಾಡಿದರು.

ಮುಖ್ಯಮಂತ್ರಿ ಪಿಣರಾಯಿ ವಿಜಯನ್ ಇದು ಪಕ್ಷಕ್ಕೆ ಸಂಬಂಧಿಸಿದ ವಿಷಯ ಎಂದು ಭಾವಿಸಿ ಮಧ್ಯಪ್ರವೇಶಿಸಿರುವುದಾಗಿ ಸಚವರು ಈಗಾಗಲೇ ಸ್ಪಷ್ಟಪಡಿಸಿದ್ದಾರೆ. ಈ ಪ್ರಕರಣದಲ್ಲಿ ದೂರುದಾರರು ಮತ್ತು ಆರೋಪಿಗಳು ಇಬ್ಬರೂ ಎನ್‌ಸಿಪಿ ಪಕ್ಷದ ಕಾರ್ಯಕರ್ತರು. ಪಕ್ಷದ ನಾಯಕರಾಗಿ ಕಾರ್ಯಕರ್ತರ ನಡುವೆ ಉಂಟಾಗಿರುವ ವಿವಾದದ ಬಗ್ಗೆ ವಿಚಾರಿಸಿದ್ದಾರೆ ಎಂದು ವಿಜಯನ್ ಅವರು ಸಚಿವರ ನಡೆಯನ್ನು ಸಮರ್ಥಿಸಿಕೊಂಡರು.

ಈ ಪ್ರಕರಣದಲ್ಲಿ ಸಂತ್ರಸ್ತೆಯ ದೂರನ್ನು ದಾಖಲಿಸಿಕೊಂಡು ಪೊಲೀಸರು ತನಿಖೆ ನಡೆಸುತ್ತಿದ್ದಾರೆ. ಹೀಗಾಗಿ ಪುನಃ ಸದನದಲ್ಲಿ ಈ ವಿಷಯವನ್ನು ಚರ್ಚಿಸುವ ಅಗತ್ಯವಿಲ್ಲ ಎಂದು ವಿಜಯನ್ ಸದನಕ್ಕೆ ತಿಳಿಸಿದರು.

ಕಲಾಪ ಆರಂಭವಾದಾಗ ಅರಣ್ಯ ಸಚಿವರ ವಿಚಾರವನ್ನು ಪ್ರಸ್ತಾಪಿಸಿದ ವಿಧಾನಸಭೆಯ ವಿರೋಧ ಪಕ್ಷದ ನಾಯಕ ವಿ.ಡಿ.ಸತೀಶನ್, 'ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಮಾಧ್ಯಮದಲ್ಲಿ ಪ್ರಸಾರವಾದ ಧ್ವನಿಮುದ್ರಿಕೆ ತುಣುಕಿನಲ್ಲಿ ಪ್ರಕರಣದ ತನಿಖೆಯಲ್ಲಿ ಸಚಿವರು ಹಸ್ತಕ್ಷೇಪ ಮಾಡಿರುವುದು ಹಾಗೂ ಪ್ರಕರಣವನ್ನು ಇತ್ಯರ್ಥಗೊಳಿಸಲು ಸಂತ್ರಸ್ತೆಯ ತಂದೆಯನ್ನು ಕೇಳಿರುವುದು ಸ್ಪಷ್ಟವಾಗಿದೆ' ಎಂದು ಆರೋಪಿಸಿದರು.

ಆಧಾರ: ಪ್ರಜಾವಾಣಿ, ದಿನಾಂಕ:23.07.2021

## 14. Declaration against dowry must for Kerala govt employees

As part of its effort to curb dowry, the Kerala Women and Child Development department has directed government employees to submit an affidavit stating that they have not taken any dowry.

The directive was issued by invoking provisions in the Kerala Dowry Prohibition Rules. Many dowry deaths and harassments in Kerala recently in which even government employees are the accused have prompted the Women and Child Development directorate to issue a circular.

The circular says that the government official who are supposed to enforce rules themselves are getting involved in accepting or giving dowry. The circular asked all male government employees to submit a declaration within one month after getting married that they had no taken dowry.

It should be signed by the spouse and father or mother of both husband and wife the heads of departments should submit half-yearly reports to the district dowry prohibition officer.

Recently Kerala Governor Arif Mohammed Khan, who took part in day-long fasting organized by various Gandhian forums to create awareness against dowry, had suggested that universities should insist on a declaration from students while issuing educational certificates to candidate that they will not accept dowry and if it was flouted the university should cancel the education certificate.

Courtesy: The Hindu , dated:24.07.2021

## 15. Mirabai wins India's first medal in Tokyo

It was an incredible Saturday for India at the Tokyo Olympics as Mirabai Chanu won a silver in the 49 kg weightlifting category.

Hailing from Manipur, the 26-year-old lifted a total of 202 kg to emerge second behind China's Hou Zhihui, who won the gold at 210 kg.

Mirabai lifted 87kg in snatch and in the clean and jerk segment, she hoisted 115kg and helped India open its account.

Courtesy: The Hindu , dated:25.07.2021

## 16. ಮತಕ್ಕಾಗಿ ಲಂಚ : ಟಿಆರ್‌ಎಸ್ ಸಂಸದೆಗೆ 6 ತಿಂಗಳು ಜೈಲು

ತೆಲಂಗಾಣ ರಾಷ್ಟ್ರ ಸಮಿತಿ ನಾಯಕಿ ಮತ್ತು ಮೆಹಬೂಬಾಬಾದ್ ಕ್ಷೇತ್ರದ ಸಂಸದೆ ಕವಿತಾ ಮಾಲೋತ್ ಅವರಿಗೆ 2019ರ ಚುನಾವಣೆಯಲ್ಲಿ ಮತದಾರರಿಗೆ ಹಣ ಹಂಚಿಕೆ ಆರೋಪದ ಹಿನ್ನೆಲೆಯಲ್ಲಿ ಆರು ತಿಂಗಳು ಜೈಲು ಶಿಕ್ಷೆ ವಿಧಿಸಲಾಗಿದೆ. ಹಾಲಿ ಲೋಕಸಭೆಯಲ್ಲಿ ಶಿಕ್ಷೆಗೆ ಗುರಿಯಾದ ಮೊದಲ ಸಂಸದೆ ಎಂಬ ಅಪಖ್ಯಾತಿಗೂ ಅವರು ಪಾತ್ರರಾಗಿದ್ದಾರೆ.

ಚುನಾವಣಾ ಪ್ರಚಾರದ ವೇಳೆ ಅವರು ಮತದಾರರಿಗೆ ಹಣ ಹಂಚಿದ್ದಾರೆ ಎಂದು ಆರೋಪಿಸಲಾಗಿತ್ತು. ವಿಶೇಷ ಕೋರ್ಟ್ ವಿಚಾರಣೆ ನಡೆಸಿ ಸಂಸದೆ ವಿರುದ್ಧದ ಆರೋಪಗಳು ಸಾಬೀತಾಗಿವೆ ಮತ್ತು ಅವರಿಗೆ ಹತ್ತು ಸಾವಿರ ರೂ ದಂಡ, ಆರು ತಿಂಗಳ ಜೈಲು ಶಿಕ್ಷೆ ವಿಧಿಸಿ ತೀರ್ಪು ನೀಡಿದೆ. ಆದರೆ, ಅವರಿಗೆ ಅದೇ ದಿನ ಜಾಮೀನು ನೀಡಲಾಗಿದೆ. ವಿಶೇಷ ಕೋರ್ಟ್‌ನ ತೀರ್ಪು ವಿರುದ್ಧ ಅವರು ತೆಲಂಗಾಣ ಹೈಕೋರ್ಟ್‌ಗೆ ಮೇಲ್ಮನವಿ ಸಲ್ಲಿಸಲು ನಿರ್ಧರಿಸಿದ್ದಾರೆ.

ಆಧಾರ: ಉದಯವಾಣಿ, ದಿನಾಂಕ:26.07.2021

## 17. ದೆಹಲಿ ಬಿಜೆಪಿ ಶಾಸಕನ ಅಮಾನತ್ತು

ದೆಹಲಿ ವಿಧಾನ ಸಭೆಯಲ್ಲಿ ಕಲಾಪ ಹಾಳುಗೆಡವಿದ ಆರೋಪದ ಮೇಲೆ ಬಿಜೆಪಿ ಶಾಸಕ ಓಂಪ್ರಕಾಶ ಶರ್ಮಾರನ್ನು ಮುಂದಿನ ಅವಧಿಯವರೆಗೆ ಅಮಾನತ್ತುಗೊಳಿಸಿ ಸ್ಪೀಕರ್ ರಾಮನಿವಾಸ್ ಗೋಯಲ್ ಆದೇಶ ಹೊರಡಿಸಿದ್ದಾರೆ. ವಿಧಾನಸಭಾ ಅಧಿವೇಶನದ ಎರಡನೇ ದಿನ ಬಿಜೆಪಿಯ ಮೋಹನ್ ಬಿಶ್ತ್ ಪ್ರಶ್ನೋತ್ತರ ಕಲಾಪದ ವೇಳೆ ಆಮ್ ಆದ್ಮಿಯ ಸೋಮನಾಥ ಭಾರತಿ ವಿರುದ್ಧ ಆಕ್ಷೇಪಾರ್ಹ ಹೇಳಿಕೆ ನೀಡಿದ್ದು ಗದ್ದಲಕ್ಕೆ ಕಾರಣವಾಗಿತ್ತು. ಈ ಸಂದರ್ಭದಲ್ಲಿ ಶರ್ಮಾ ಅನುಚಿತವಾಗಿ ವರ್ತಿಸಿದ ಅರೋಪದ ಮೇಲೆ ಅಧಿವೇಶನದಿಂದ ಅಮಾನತ್ತುಗೊಳಿಸಲಾಗಿದೆ.

ಆಧಾರ: ಸಂಯುಕ್ತ ಕರ್ನಾಟಕ, ದಿನಾಂಕ:31.07.2021.

## 18. No Opposition parties in Nagaland Assembly now

The 60-member Nagaland Assembly now has no MLA in the Opposition.

The Naga People's Front (NPF) — the State's only Opposition party — was on Monday inducted into the State government headed by Chief Minister Neiphiu Rio to "work collectively towards achieving a peaceful and amicable solution" to the protracted Naga political issue.

The issue pertains to the peace process with several extremist groups, primarily the Isak-Muivah faction of the National Socialist Council of Nagaland, which has been hanging fire for more 24 years.

The Nagaland House has an effective strength of 59 after the death of an MLA. As the State's only Opposition party, the NPF had won 25 seats in the 2018 Assembly elections but had suspended seven MLAs for hobnobbing with the Nationalist Democratic Progressive Party (NDPP).

Courtesy: The Hindu , dated:17.08.2021

## 19. TN House passes resolution against farm laws

Tamil Nadu Assembly on Saturday "unanimously" passed a resolution against three farm laws of the Union Government, amid a walkout by AIADMK and BJP.

With this, Tamil Nadu becomes the seventh state ruled by the Opposition to pass resolutions against the laws.

Stalin said his government was according top priority to improving the lives of farmers by presenting a separate budget for agriculture. The DMK had in its 2021 Assembly election manifesto reiterated its opposition to the three farm laws of the Centre and promised to bring a resolution in the Assembly once it comes to power.

"The Assembly unanimously passes a resolution against the three farm laws as they will not bring any good to farmers or agriculture growth in the country. The Assembly resolves that the Union Government rescinds the laws," Stalin said, moving the resolution.

Stalin announced that all cases filed against farmers during their protests against the farm laws will be withdrawn. He also took a swipe at AIADMK for not supporting the resolution and punched holes in its claim that the party always stood for "farmer's interests." As Stalin moved the resolution, legislators from AIADMK and BJP staged a walkout opposing the DMK government's move. However, AIADMK's ally PMK supported the resolution.

Courtesy: Deccan Herald , dated:29.08.2021

## 20. ಅಸೆಂಬ್ಲಿಯಲ್ಲಿ ನಮಾಜ್ ಮಾಡಲು ಜಾಗ

ಜಾರ್ಖಂಡ್‌ನ ವಿಧಾನಸಭೆಯಲ್ಲಿ ನಮಾಜ್ ಮಾಡಲು ಕೊಠಡಿಯೊಂದನ್ನು ಸ್ಪೀಕರ್ ಹಂಚಿಕೆ ಮಾಡಿದ್ದಾರೆ ಎಂಬುದು ಈಗ ವಿವಾದಕ್ಕೆ ಕಾರಣವಾಗಿದೆ. ಈ ನಿರ್ಧಾರವನ್ನು ವಿರೋಧ ಪಕ್ಷ ಬಿಜೆಪಿ ಕಟುವಾಗಿ ಟೀಕಿಸಿದೆ. ವಿಧಾನಸಭೆಯಲ್ಲಿ ಕೋಣೆ ಸಂಖ್ಯೆ ಟಿಡಬ್ಲ್ಯೂ–348 ಅನ್ನು ನಮಾಜ್ ಮಾಡಲು

ನೀಡಲಾಗಿದೆ ಎಂದು ವಿಧಾನಸಭಾ ಸಚಿವಾಲಯದ ಉಪ ಕಾರ್ಯದರ್ಶಿ ಆದೇಶ ತಿಳಿಸಿದೆ. ನಮಾಜ್ ಮಾಡಲು ಮುಸ್ಲಿಮರಿಗೆ ಪ್ರತ್ಯೇಕ ರೂಂ ವ್ಯವಸ್ಥೆ ಮಾಡುವುದಾದರೆ ಹಿಂದೂಗಳಿಗೇಕೆ ನೀಡುವುದಿಲ್ಲ. ಹನುಮಾನ್ ಚಾಲೀಸ್ ಪಠಿಸಲು ನಮಗೂ ಐದು ರೂಂ ಇಲ್ಲವೇ ಒಂದು ದೊಡ್ಡ ಹಾಲ್ ಅನ್ನು ನೀಡಿ. ಇದೇ ರೀತಿ ಜೈನರು, ಬುದ್ಧರು, ಆದಿವಾಸಿಗಳಿಗೂ ಪ್ರಾರ್ಥನೆ ಮಾಡಲು ವಿಧಾನಸಭೆಯಲ್ಲಿ ಜಾಗ ಕಲ್ಪಿಸಿ ಎಂದು ಬಿಜೆಪಿ ಶಾಸಕ ವಿರಂಚಿ ನಾರಾಯಣ್ ಒತ್ತಾಯಿಸಿದ್ದಾರೆ. ವಿಧಾನಸಭಾ ಭವನದ ಆವರಣದಲ್ಲಿ ಹನುಮಂತನ ದೊಡ್ಡ ದೇಗುಲ ಕಟ್ಟಿಸಿ ಎಂದು ಬಿಜೆಪಿ ನಾಯಕ ಮತ್ತು ಮಾಜಿ ಸ್ಪೀಕರ್ ಆಗ್ರಹಿಸಿದ್ದಾರೆ. ಪ್ರಜಾಪ್ರಭುತ್ವದ ಮಂದಿರವು (ವಿಧಾನಸಭೆ) ಅದಕ್ಕಾಗಿಯೇ ಸೀಮಿತವಾಗಬೇಕು. ಅದನ್ನು ಬಿಟ್ಟು ನಮಾಜ್ ಮಾಡಲು ಅವಕಾಶ ನೀಡಿರುವ ನಿರ್ಧಾರ ಸರಿಯಲ್ಲ ಎಂದು ಬಿಜೆಪಿಯ ಹಿರಿಯ ಮುಖಂಡ ಮಾಜಿ ಸಿಎಂ ಹೇಳಿದ್ದಾರೆ.

ಆಧಾರ:–ವಿಜಯವಾಣಿ, ದಿನಾಂಕ:05.09.2021

## 21. ಗುಜರಾತ್ ಹೊಸ ಸಿಎಂ ಪ್ರಮಾಣ

ಗುಜರಾತ್‌ನ ನೂತನ ಸಿಎಂ ಆಗಿ ಅಚ್ಚರಿಯ ರೀತಿಯಲ್ಲಿ ಆಯ್ಕೆಯಾಗಿ ಪ್ರಮಾಣ ವಚನ ಸ್ವೀಕರಿಸಿದರು. ರಾಜಭವನದಲ್ಲಿ ನಡೆದ ಸರಳ ಕಾರ್ಯಕ್ರಮದಲ್ಲಿ ರಾಜ್ಯಪಾಲರು ಅಧಿಕಾರ ಮತ್ತು ಗೋಪ್ಯತೆ ಪ್ರಮಾಣ ಬೋಧಿಸಿದರು. ಭೂಪೇಂದ್ರ ಒಬ್ಬರೇ ಪ್ರಮಾಣ ವಚನ ಸ್ವೀಕರಿಸಿದ್ದು, ನಂತರದಲ್ಲಿ ಸಂಪುಟದ ಪ್ರಮಾಣ ವಚನ ನಡೆಯಲಿದೆ. ಕಾರ್ಯಕ್ರಮದಲ್ಲಿ ಅಮಿತ್ ಷಾ, ಬಿಜೆಪಿ ಆಡಳಿತವಿರುವ ರಾಜ್ಯಗಳಾದ ಮಧ್ಯಪ್ರದೇಶ, ಗೋವಾ, ಕರ್ನಾಟಕ, ಹರಿಯಾಣ ಮುಖ್ಯಮಂತ್ರಿಗಳು ಹಾಗೂ ಇತರರು ಭಾಗಿಯಾಗಿದ್ದರು.

**ಪ್ರಧಾನಿ ಅಭಿನಂದನೆ:** ನೂತನ ಸಿಎಂ ಅವರನ್ನು ಪ್ರಧಾನಿ ಅಭಿನಂದಿಸಿದ್ದು, ಪಟೇಲರನ್ನು ನಾನು ಹಲವು ಕಾಲದಿಂದ ಬಲ್ಲೆ. ಅವರ ಕಾರ್ಯಗಳನ್ನು ಹತ್ತಿರದಿಂದ ಗಮನಿಸಿದ್ದೇನೆ. ಅವರ ಆಡಳಿತದಲ್ಲಿ ಗುಜರಾತ್ ಮತ್ತಷ್ಟು ಪ್ರಗತಿ ಕಾಣುತ್ತದೆ ಎಂಬ ವಿಶ್ವಾಸ ಇದೆ ಎಂದಿದ್ದಾರೆ. ಗಾಂಧಿನಗರ ಲೋಕಸಭಾ ವ್ಯಾಪ್ತಿಯ ಘಟ್ಲೋಡಿಯಾ ಕ್ಷೇತ್ರದಿಂದ ವಿಧಾನಸಭೆಗೆ ಆಯ್ಕೆ ಆಗಿರುವ ಭೂಪೇಂದ್ರ ಪಟೇಲ್ ಮೊದಲ ಪ್ರಯತ್ನದಲ್ಲೇ 1.17 ಲಕ್ಷ ಮತಗಳ ಅಂತರದಿಂದ ಪ್ರಚಂಡ ಗೆಲುವು ಸಾಧಿಸಿ ದಾದಾ ಎಂದು ಕರೆಸಿಕೊಂಡವರು.

ಆಧಾರ:ಪ್ರಜಾವಾಣಿ, ದಿನಾಂಕ:14.09.2021

## 22. T.N.Assembly passes Bill against NEET

The Tamil Nadu Assembly passed a Bill seeking to dispense with the requirement for candidates to qualify in the National Eligibility-cum-Entrance Test (NEET) for admission to undergraduate medical courses in the State.

The Tamil Nadu Admission to Undergraduate Medical Degree Courses Bill, 2021, further sought to provide admission to these courses on the basis of the marks obtained in the qualifying examination [Class XII marks in Tamil Nadu] through normalisation methods, as done before 2017. [Two similar legislation passed in the Assembly during the not-while AIADMK regime did not receive Presidential assent].

The Bill moved by Chief Minister contended that admission to medical courses was traceable to entry 25 of List III Schedule VII of the Constitution and the State was competent to regulate the same for the underprivileged social groups.

Press Trust of India and now the News Broadcasters Association, have moved courts petitioning them to intervene and stop the code which not only restricts free speech but also far exceeds the mandate of the IT Act in empowering the executive from controlling online content.

Incidentally, while amending the Press and Registration of Books Act, 1867 to bring within its ambit digital news platforms two years ago, for good measure, the Ministry had put out the draft on its website (draft "Registration of Press and Periodicals Bill, 2019) inviting discussion (https://bit.ly/3AWRuZl). So, it is all the more surprising why the Ministry did not follow the same process while attempting to regulate OTT and digital news platforms. It could have got a fix on both.

**Rules elsewhere**

Since the best of rules and guidelines are often enriched by best practices around the world, here is a brief list of some of these. The EU Audiovisual Media Services Directive, updated three year ago, encourages self-regulation and co-regulation among players, with specific focus on child safety and violence and hate speech. In the United Kingdom, programming on video-on-demand services, including TV and online film services, is regulated by OFCC, which not only provides editorial rules but also has specific provisions for protecting those under 18 and the prohibition of content inciting hatred. The United States, perhaps the most liberal of countries, expects pay TV players to follow Federal Communications Commission (FCC) guidelines – OTT content remaind unregulated. So, from a light touch to content governing children, most countries have set up an enabling architecture for OTT platforms to grow. India, it appears, has not followed in their footsteps, instead, charting a regulatory framework which has been characterized by excessive government overreach.

**Unease over free speech**

More importantly, does the government of the day have the mandate to control and regulate digital news? And here the Government, many of whose Ministers had burnished their reputation as champions of free speech during the Emergency, has floundered. Much like the Constitution makers who had decided to retain some of the most draconian provisions of laws controlling freedom of expression, the present government too appears to have followed the same path and has expressed it uneasiness over free speech on numerous occasions. The plate of newly minted information and Broadcasting Minister Anurag Thakur is overflowing. For one, he can pose a question to himself should the Government formulate a self-regulating code for digital media? Does that even make sense?

At the heart of content, both news and entertainment, is the freedom of expression the life-giving force behind content. Finally, discussion and transparency

indicate trust in the people by an elected government. There is little evidence of that in the framing of the IT guidelines. 'Now, we even have the Government's draft on the proposed amendments to the Cinematograph Act of 1952, seeking to control the Central Board of File Certification's Power of Certification!

Writer: Anuradha Raman,
Courtesy: The Hindu , Dated: 14.07.2021

## 4. ಸಹಕಾರ ಸಚಿವಾಲಯ: ಅಭಿವೃದ್ಧಿ ಪಥಕ್ಕೆ ರಹದಾರಿ

ಭಾರತ ಒಂದು ವೈವಿಧ್ಯತೆಯ ಹಿನ್ನೆಲೆಯುಳ್ಳ ರಾಷ್ಟ್ರ. ಇಲ್ಲಿ ಎಲ್ಲರಿಗೂ ಸ್ಥಾನವಿದೆ, ಗೌರವವಿದೆ, ಆದರಗಳಿವೆ, ಪ್ರೀತಿ ಇದೆ, ಸೌಹಾರ್ದವಿದೆ, ಅಂತೆಯೇ ಪರಸ್ಪರ ಸಹಕಾರವೂ ಇದೆ. ನಮ್ಮದು ವಿವಿಧತೆಯಲ್ಲಿ ಏಕತೆಯನ್ನು ಸಾರುವ, ಅದರಲ್ಲಿ ಸಾರ್ಥಕತೆ ಕಾಣುವ, ಕಂಡುಕೊಳ್ಳುವ ದೇಶ. ಈ ಸಹಕಾರ ತತ್ವ ಎನ್ನುವುದು ಭಾರತೀಯರ ರಕ್ತದಲ್ಲಿಯೇ ಬಂದುಬಿಟ್ಟಿದೆ.

ನಮ್ಮ ದೇಶದ ಇಡೀ ವ್ಯವಸ್ಥೆಯು ಸಹಕಾರಿ ವ್ಯವಸ್ಥೆಯಡಿಯೇ ರೂಪುಗೊಂಡಿದ್ದಲ್ಲದೆ, ಅದರಡಿಯೇ ಬೆಳೆದು ಇಂದು ನೆರಳನ್ನು ನೀಡುತ್ತಾ ಬಂದಿದೆ. ಆದರೆ, ಅವುಗಳ ರೂಪ ಹಾಗೂ ಕಾರ್ಯವೈಖರಿಗಳು ಬೇರೆ ಬೇರೆ ಅಷ್ಟೇ. ಇನ್ನು ರಾಜ್ಯ – ರಾಜ್ಯಗಳಲ್ಲಿ ಸಹಕಾರ ವಲಯದ ಪರಿಧಿ, ವ್ಯಾಪ್ತಿ, ಕಾರ್ಯವೈಖರಿ, ಕಾನೂನು – ಕಟ್ಟಲೆಗಳು, ನೀತಿ ನಿಯಮಗಳು ಭಿನ್ನವಾಗಿರುತ್ತದೆ. ಆದರೆ, ಎಲ್ಲವೂ ಸಹಕಾರ ಎಂಬ ತತ್ವಕ್ಕೆ ಬದ್ಧವಾಗಿ ಕಾರ್ಯ ನಿರ್ವಹಣೆ ಮಾಡುತ್ತಿವೆ. ಇಷ್ಟಾದರೂ ಒಂದು ಸಮಗ್ರ ನೀತಿ, ಚೌಕಟ್ಟು ಎಂಬುದು ಸಿಕ್ಕಿರಲಿಲ್ಲ. ಇದರಿಂದ ಸಹಕಾರಿ ವಲಯದಲ್ಲಿನ ಅಂತರರಾಜ್ಯಗಳಲ್ಲಿ ವ್ಯವಹಾರ ನಡೆಸುತ್ತಿರುವ ಬಹು–ರಾಜ್ಯ ಸಹಕಾರ ಸಂಘಗಳ ಮೇಲೆ ನಿಗಾ ವಹಿಸುವುದು ಕಷ್ಟಸಾಧ್ಯವಾಗಿತ್ತು. ಕೇಂದ್ರವು ನೂತನವಾಗಿ ಸ್ಥಾಪಿಸಿರುವ ಸಹಕಾರ ಸಚಿವಾಲಯದಿಂದ ಈಗ ಎಲ್ಲವೂ ಸಾಧ್ಯವಾಗುತ್ತಿದೆ. ರಾಜ್ಯಗಳ ಸಹಕಾರ ವ್ಯವಸ್ಥೆಗಳ ಬಲವರ್ಧನೆಗೆ ಇದು ಸಹಕಾರಿಯಾಗಲಿದೆ ಎಂಬ ಭಾವನೆ ನಮಗೆ ಮೂಡಿದೆ.

ಭಾರತ ಪ್ರಗತಿ ಹೊಂದಬೇಕಿದ್ದರೆ, ಅಭಿವೃದ್ಧಿ ಹೊಂದಬೇಕೆಂದಿದ್ದರೆ ಅದಕ್ಕಿರುವುದು ಎರಡೇ ದಾರಿ ಎಂದು ರಾಷ್ಟ್ರಪಿತ ಮಹಾತ್ಮ ಗಾಂಧೀಜಿ ಅವರು ಅಂದೇ ಹೇಳಿದ್ದರು. ಮೊದಲನೆಯದಾಗಿ ದೇಶದ ಪ್ರತಿ ಹಳ್ಳಿಯಲ್ಲಿ ಒಂದು ಸಹಕಾರ ಸಂಘವನ್ನು ಸ್ಥಾಪಿಸುವುದು. ಎರಡನೆಯದಾಗಿ ಗ್ರಾಮಕ್ಕೊಂದು ಶಾಲೆ ನಿರ್ಮಿಸುವುದಾಗಿದ್ದು, ಇದರಿಂದ ನಾವು ಭವ್ಯ ಭಾರತದ ಪರಿಕಲ್ಪನೆಯನ್ನು ಸಾಕಾರಗೊಳಿಸಬಹುದು ಎಂಬ ಆಶಯವನ್ನು ಹೊಂದಿದ್ದರು. ಇದೀಗ ಪ್ರಧಾನ ಮಂತ್ರಿಗಳಾದ ನರೇಂದ್ರ ಮೋದಿ ಅವರ ನೇತೃತ್ವದ ಕೇಂದ್ರ ಸರ್ಕಾರವು ನೂತನ ಸಹಕಾರ ಸಚಿವಾಲಯವನ್ನು ಸ್ಥಾಪನೆ ಮಾಡುವ ಮೂಲಕ ಮಹಾತ್ಮ ಗಾಂಧೀಜಿ ಅವರ ಆಶಯವನ್ನು ಈಡೇರಿಸಿದಂತಾಗಿದೆ.

ಸಹಕಾರಿ ವ್ಯವಸ್ಥೆ ಹಾಗೂ ರೈತಾಪಿ ವರ್ಗಕ್ಕೆ ನೇರ ಹಾಗೂ ಅವಿನಾಭಾವ ಸಂಬಂಧವಿದೆ. ಈ ನಿಟ್ಟಿನಲ್ಲಿ ಇಡುವ ಪ್ರತಿಯೊಂದು ಹೆಜ್ಜೆಯೂ ಮಹತ್ವದಾಗಿದೆ. ರೈತ ನಮ್ಮ ದೇಶದ ಬೆನ್ನೆಲುಬು. ಹಾಗಾಗಿ ರೈತರಿಗೆ ಅನುಕೂಲವಾಗುವಂತಹ ಅನೇಕ ಕಾರ್ಯಕ್ರಮಗಳನ್ನು ಕೇಂದ್ರ ಸರ್ಕಾರ ರಾಜ್ಯ ಸರ್ಕಾರವು ಜಾರಿಗೆ ತಂದಿದೆ.

ಇದೀಗ ಕೇಂದ್ರದ ಈ ಕ್ರಮದಿಂದ ರೈತಾಪಿ ವರ್ಗ ಮತ್ತು ಸಹಕಾರಿಗಳಿಗೆ ಅನುಕೂಲವಾಗಲಿದ್ದು, ಅವರ ಅಭ್ಯುದಯಕ್ಕೆ ಶ್ರಮಿಸಲು ಪೂರಕವಾಗಲಿದೆ ಎಂಬ ಅಂಶವನ್ನು ಹೇಳಲಿ ಇಚ್ಛೆಪಡುತ್ತೇನೆ. ದೇಶದಲ್ಲಿ ಸುಮಾರು 8 ಲಕ್ಷಕ್ಕೂ ಹೆಚ್ಚು ವಿವಿಧ ರೀತಿಯ ಸಹಕಾರ ಸಂಘಗಳು ಅಸ್ತಿತ್ವದಲ್ಲಿದ್ದು 49

ಕೋಟಿಗೂ ಅಧಿಕ ಸಹಕಾರಿ ಸದಸ್ಯರುಗಳಿದ್ದಾರೆ. ರಾಜ್ಯದಲ್ಲಿ ಸುಮಾರು 43 ಸಾವಿರ ಕೋ-ಆಪರೇಟಿವ್ ಸಂಸ್ಥೆಗಳು ಹಾಗೂ 5 ಸಾವಿರ ಸೌಹರ್ದ ಸೊಸೈಟಿಗಳು ಕಾರ್ಯನಿರ್ವಹಣೆ ಮಾಡುತ್ತಿದ್ದು, 2.5 ಕೋಟಿಗೂ ಹೆಚ್ಚು ಮಂದಿ ಸಹಕಾರಿ ಸದಸ್ಯರಿದ್ದಾರೆ. ಈ ಎಲ್ಲರಿಗೂ ಈಗ ಒಂದು ವ್ಯವಸ್ಥೆ ರೂಪುಗೊಂಡಿದ್ದು, ಸಮುದಾಯ ಆಧಾರಿತ ಅಭಿವೃದ್ಧಿಯನ್ನು ಸಹಭಾಗಿತ್ವದ ಜೊತೆಗೆ ಕೊಂಡೊಯ್ಯಲು ಸಹಕಾರಿಯಾದಂತಾಗಿದೆ. ಇದೊಂದು ನಾಗರಿಕ ಕೇಂದ್ರಿತ ಅಹಕಾರಿ ಚಳವಳಿಗೆ ಪೂರಕವಾಗಿ ಕಾರ್ಯನಿರ್ವಹಣೆ ಮಾಡಲು ರಚಿಸಿದಂತಹ ಅದ್ಭುತ ವ್ಯವಸ್ಥೆಯಾಗಿದೆ.

**ಅಭಿವದ್ಧಿ ಪಥಕ್ಕೆ ರಹದಾರಿ :** ನೂತನ ಸಹಕಾರ ಸಚಿವಾಲಯ ಸ್ಥಾಪನೆಯಿಂದ ಅನೇಕ ಉಪಯೋಗಗಳು ಸಾಧ್ಯವಾಗಲಿದೆ. ಇದನ್ನು ನಾನು ಅಭಿವೃದ್ಧಿ ಪಥಕ್ಕೆ ರಹದಾರಿ ಎಂದೇ ವಿಶ್ಲೇಷಿಸುತ್ತೇನೆ. ಸಹಕಾರ ರಂಗಕ್ಕಷ್ಟೇ ಅಲ್ಲದೆ, ಜನಸಾಮಾನ್ಯರಿಗೂ ಇದರಿಂದ ಸಾಕಷ್ಟು ಪ್ರಯೋಜನಗಳಿವೆ. ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ಒಟ್ಟಾಗಿ ಕಾರ್ಯ ನಿರ್ವಹಣೆ ಮಾಡುವುದರಿಂದ ಸಹಕಾರ ಕ್ಷೇತ್ರಕ್ಕೆ ಮತ್ತಷ್ಟು ಬಲಬರಲಿದೆ. ಈ ವ್ಯವಸ್ಥೆಯಿಂದ ಇನ್ನು ದೇಶದಲ್ಲಿ ಸಹಕಾರಿ ವಲಯಕ್ಕೆ ಒಂದು ಚೌಕಟ್ಟು ನಿರ್ಮಾಣವಾಗಲಿದೆ. ಪ್ರತ್ಯೇಕ ಆಡಳಿತ, ಕಾನೂನು ಮತ್ತು ನೀತಿಗಳ ರಚನೆಗೆ ಅನುಕೂಲವಾಗಲಿದೆ.

ಸಹಕಾರ ಸಿದ್ಧಾಂತ ಕಾರ್ಯನಿರ್ವಹಣೆ ಮಾಡುವುದೇ ಎಲ್ಲರನ್ನೂ ಉಳ್ಳವರನ್ನಾಗಿ ಮಾಡಬೇಕು ಎಂಬ ಸದಾಶಯದೊಂದಿಗೆ. ಅಂದರೆ, ಎಲ್ಲರಿಗೂ ಸಮಾನ ಅವಕಾಶ ಸಿಗಬೇಕು, ಸಮಾಜದ ಕಟ್ಟಕಡೆಯ ವ್ಯಕ್ತಿಗೂ ಸಹಕಾರ ಸಿಗಬೇಕು ಎಂಬ ಮೂಲ ಆಶಯಕ್ಕೆ ಈಗ ಇನ್ನಷ್ಟು ಬಲ ಸಿಕ್ಕಂತಾಗಿದೆ. ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡಗಳ, ಹಿಂದುಳಿದ ವರ್ಗಗಳ ಹಾಗೂ ಮಹಳಾ ವರ್ಗಗಳಿಗೆ ಆರ್ಥಿಕ ಬಲ ತುಂಬುವ ಶಕ್ತಿ ಇರುವುದು ಸಹಕಾರ ವಲಯಕ್ಕೆ ಮಾತ್ರ. ಈ ವರ್ಗಗಳಿಗೆ ಕಡಿಮೆ ಬಡ್ಡಿ ದರದಲ್ಲಿ ಸಾಲ ನೀಡುವುದು, ಸರಕಾರದ ಸಬ್ಸಿಡಿ ಯೋಜನೆಗಳಿಂದ ನೆರವು ನೀಡುವುದು ಸೇರಿದಂತೆ ಹತ್ತು ಹಲವು ಯೋಜನೆಗಳ ಸಮರ್ಪಕ ಅನುಷ್ಠಾನ ಸಹಕಾರಿ ರಂಗದಿಂದ ಸಾಧ್ಯವಾಗುತ್ತಿದೆ. ಹೀಗಾಗಿ ಈ ವರ್ಗಗಳ ಅಭಿವೃದ್ಧಿ ಮತ್ತು ಸಬಲೀಕರಣಕ್ಕೆ ಕೇಂದ್ರದ ಈ ನಡೆಯಿಂದ ಮತ್ತಷ್ಟು ಬಲ ಬಂದಂತಾಗಿದೆ.

ಇದೆಲ್ಲದರ ಜೊತೆಗೆ ಬಹು-ರಾಜ್ಯ ಸಹಕಾರ ಸಂಘಗಳಿಗೆ ಪ್ರತ್ಯೇಕವಾದ ಆಡಳಿತ ವ್ಯವಸ್ಥೆ ಕಾನೂನು ರಚನೆಗೆ ಇದು ಸಹಕಾರಿಯಾಗಲಿದೆ. ಆದರೆ, ರಾಜ್ಯಗಳ ಅಧಿಕಾರಕ್ಕೆ ಯಾವುದೇ ತೊಂದರೆಯಾಗಲೀ, ಹಸ್ತಕ್ಷೇಪವಾಗಲೀ ಇರುವುದಿಲ್ಲ. ಆಯಾ ರಾಜ್ಯಗಳ ನಿಯಂತ್ರಣದ ಅಧಿಕಾರಗಳು ಹಾಗೆಯೇ ಇರಲಿದೆ. ಹೀಗಾಗಿ ಸಹಕಾರಿಗಳ ಹಾಗೂ ಜನಹಿತದ ದೃಷ್ಟಿಯಿಂದ ಇದೊಂದು ಉತ್ತಮ ನಡೆ ಎಂದೇ ಹೇಳಬಹುದಾಗಿದೆ.

**ಬಹು-ರಾಜ್ಯ** ಸಹಕಾರ ಸಂಘಗಳ ಮೇಲೆ ನಿಗಾ : ಸಹಕಾರ ಕ್ಷೇತ್ರ ಎಷ್ಟೇ ಬೃಹದಾಕಾರವಾಗಿ ಬೆಳೆದರೂ ಒಂದು ವ್ಯವಸ್ಥೆಯೊಳಗೆ ಇರಲೇಬೇಕಾಗುತ್ತದೆ. ಬಹು-ರಾಜ್ಯ ಸಹಕಾರ ಸಂಘಗಳು (ಎಂಎಸ್‌ಸಿಎಸ್) ಬೇರೆ ಬೇರೆ ರಾಜ್ಯಗಳ ಜೊತೆಗೆ ವ್ಯವಹಾರಗಳನ್ನು ನಡೆಸುವಾಗ ಅವುಗಳಿಗೆ ಒಂದು ಪರಿಧಿ, ನೀತಿ-ನಿರೂಪಣೆಗಳು ಎಂಬುದು ಇರಲಿಲ್ಲ. ಆಯಾ ರಾಜ್ಯಗಳಿಗೂ ಇವುಗಳ ಮೇಲೆ ಹಿಡಿತ ಸಾಧಿಸಲು ಸಾಧ್ಯವಾಗುತ್ತಿರಲಿಲ್ಲ. ಈ ಕಾರಣಕ್ಕಾಗಿಯೇ 2000-2001ರಲ್ಲಿ ಬಹು-ರಾಜ್ಯ ಸಹಕಾರ ಸಂಘಗಳ ಕಾಯ್ದೆಯನ್ನು ಜಾರಿಗೆ ತರಲಾಗಿತ್ತು. ಈಗ ಇಂಥ ಒಂದು ಸಂಸ್ಥೆಗಳ ಬಲವರ್ಧನೆ ಹಾಗೂ ರಾಜ್ಯಗಳಿಗೂ ಪೂರಕವಾಗಿ ಬೆಂಬಲವನ್ನು ಕೊಡುವ ನಿಟ್ಟಿನಲ್ಲಿ ನೂತನ ಸಚಿವಾಲಯವು ಕಾರ್ಯನಿರ್ವಹಣೆ ಮಾಡಲಿದೆ.

ಲೇಖಕರು:ಎಸ್.ಟಿ.ಸೋಮಶೇಖರ್,
ಸಹಕಾರ ಸಚಿವರು
ಆಧಾರ: ಉದಯವಾಣಿ, ದಿನಾಂಕ: 14.07.2021

## 5. ಕಾರ್ಪೊರೇಟ್ ಕ್ಷೇತ್ರವಾಗಿಸುವ ಹುನ್ನಾರ

ಕೇಂದ್ರ ಸರ್ಕಾರ ಬಹುವರ್ಷಗಳ ಬೇಡಿಕೆಗೆ ಪೂರಕವಾಗಿ ಸಹಕಾರ ಕ್ಷೇತ್ರಕ್ಕೆ ಪ್ರತ್ಯೇಕ ಸಚಿವಾಲಯ ಮಾಡಿರುವುದು ಸ್ವಾಗತಾರ್ಹವಾಗಿದೆ. ಆದರೆ ಕೇಂದ್ರ ಸರ್ಕಾರದ, ಚಿಂತನೆಗಳನ್ನು ಗಮನಿಸಿದರೆ, ಸಹಕಾರ ಕ್ಷೇತ್ರವನ್ನು ಕಾರ್ಪೊರೇಟ್ ಕ್ಷೇತ್ರವಾಗಿಸುವ ಯತ್ನಗಳು ನಡೆಯುತ್ತಿವೆಯೇ, ಸಹಕಾರ ಕ್ಷೇತ್ರವನ್ನು ರಾಜಕೀಯವಾಗಿ ಬಳಕೆಯ ವ್ಯವಸ್ಥಿತ ಯತ್ನಗಳನ್ನು ರೂಪಿಸಲಾಗುತ್ತಿದೆಯೇ ಎಂಬ ಶಂಕೆ–ಅನುಮಾನ, ಆತಂಕ ನನ್ನಂತಹ ಅನೇಕ ಸಹಕಾರಿಗಳಲ್ಲಿ ಮೂಡದೇ ಇರದು.

ಸಹಕಾರ ಕ್ಷೇತ್ರಕ್ಕೆ ಸಹಕಾರಿ ತತ್ವಗಳಿಗೆ ಅದರದ್ದೇ ಆದ ಮಹತ್ವವಿದೆ, ಪ್ರಭಾವ, ಪಾವಿತ್ರ್ಯತೆ ಇದೆ. ಸಹಕಾರ ತತ್ವ ಭಾರತೀಯರ ಬದುಕಿನ ಅವಿಭಾಜ್ಯ ಅಂಗವಾಗಿಯೇ ರೂಪಿತವಾಗಿ ಬೆಳೆದು ಬಂದಿದೆ. ಕೃಷಿ ಸೇರಿದಂತೆ ಅನೇಕ ಕ್ಷೇತ್ರಗಳಲ್ಲಿ ಭಾರತೀಯರಿಗೆ ಸಹಕಾರ ಕ್ಷೇತ್ರ ಹೊಸತಲ್ಲ. ಸಹಕಾರ ಕ್ಷೇತ್ರ ವ್ಯಾಪಕತೆ ಹೊಂದಿದ್ದು ಅದನ್ನು ಸೀಮಿತಗೊಳಿಸುವ ಇಲ್ಲವೆ, ಸಹಕಾರದ ಮೂಲ ಆಶಯಕ್ಕೆ ಧಕ್ಕೆ ತರುವ ರೀತಿಯಲ್ಲಿ ಕಾರ್ಪೊರೇಟ್ ರೂಪ ಕೊಡುವ ಯತ್ನ ಯಾರಿಂದಲೂ ಆಗಬಾರದು. ನೂತನ ಸಹಕಾರ ಖಾತೆ ನಿರ್ವಹಣೆ ಜವಾಬ್ದಾರಿಯನ್ನು ಕೇಂದ್ರ ಗೃಹ ಖಾತೆ ಸಚಿವ ಅಮಿತ್ ಶಾ ಅವರಿಗೆ ನೀಡಲಾಗಿದೆ. ಅಭಿವೃದ್ಧಿ ಇಲಾಖೆ ಹೇಗೆ ಗೃಹ ಖಾತೆಗೆ ಸಂಬಂಧ ಹೊಂದುತ್ತದೆ ಎಂಬುದು ಅನೇಕರ ಪ್ರಶ್ನೆಯಾಗಿದೆ. ಕೇಂದ್ರದ ನಿರ್ಣಯವನ್ನು ನಾನು ಪ್ರಶ್ನಿಸುತ್ತಿಲ್ಲ ನಾನು ಸೇರಿದಂತೆ ಸಹಕಾರಿ ಕ್ಷೇತ್ರದ ಆಶಯವೆಂದರೆ, ಕೇಂದ್ರ ಗೃಹ ಸಚಿವರು ಸಹಕಾರಿಯಾಗಿ ಕ್ಷೇತ್ರದ ಅಭಿವೃದ್ಧಿಗೆ ಮಹತ್ವದ ಹೆಜ್ಜೆಗಳನ್ನು ಇರಿಸಬೇಕು. ರಾಜಕೀಯೇತರ ಮನೋಭಾವದೊಂದಿಗೆ ನಿರ್ಣಯಗಳನ್ನು ಕೈಗೊಳ್ಳಬೇಕು. ಸಹಕಾರಿ ಕ್ಷೇತ್ರದ ತತ್ವ ಮೂಲ ಆಶಯಗಳಿಗೆ ಧಕ್ಕೆ ತರದ ರೀತಿಯಲ್ಲಿ ಅಭಿವೃದ್ಧಿಗೆ ಪೂರಕ, ಕ್ಷೇತ್ರದ ಮೌಲ್ಯ ಹೆಚ್ಚುವ ರೀತಿಯಲ್ಲಿ ಕಾರ್ಯನಿರ್ವಹಿಸಲಿ ಎಂಬುದಾಗಿದೆ.

ಸಹಕಾರ ಕ್ಷೇತ್ರದ ಬಲವರ್ಧನೆ ನಿಟ್ಟಿನಲ್ಲಿ ಈ ಹಿಂದೆ ಯುಪಿಎ ಸರ್ಕಾರದಲ್ಲಿ ಅಂದಿನ ಪ್ರಧಾನಿ ಡಾ.ಮನಮೋಹನ ಸಿಂಗ್ ನೇತೃತ್ವದಲ್ಲಿ ಅಂದಿನ ಸಚಿವ, ಸಹಕಾರಿ ಧುರೀಣ ಶರದ್ ಪವಾರ್ ಅವರ ವಿಶೇಷ ಯತ್ನದೊಂದಿಗೆ ಸಂವಿಧಾನ ತಿದ್ದುಪಡಿಯೊಂದಿಗೆ ಸಹಕಾರ ಸಂಘ ರಚನೆ, ಮೂಲಭೂತ ಹಕ್ಕು ಆಗಿ ಮಾಡುವ ಮೂಲಕ ಕ್ರಾಂತಿಕಾರಕ ಹೆಜ್ಜೆ ಇರಿಸಲಾಗಿತ್ತು. ಸಹಕಾರ ಕ್ಷೇತ್ರದ ಪುನಶ್ಚೇತನಕ್ಕೆ ಅನೇಕ ಕ್ರಮಗಳನ್ನು ಕೈಗೊಳ್ಳಲಾಗಿತ್ತು.

ಕಳೆದ 7–8 ವರ್ಷಗಳಿಂದ ಸಹಕಾರ ಕ್ಷೇತ್ರ, ಸಹಕಾರ ಬ್ಯಾಂಕಿಂಗ್ ವಿಷಯವಾಗಿ ಭಾರತೀಯ ರಿಸರ್ವ್ ಬ್ಯಾಂಕ್ ಹಾಗೂ ಕೇಂದ್ರ ಸರ್ಕಾರ ತೋರಿದ ಅಸಹಕಾರ, ಉದಾಸೀನತೆ ನಿಲುವುಗಳಿಂದಾಗಿ ಸಹಕಾರ ಕ್ಷೇತ್ರ ಸೊರಗುವಂತೆ ಮಾಡಿದೆ ಎಂದರೆ ತಪ್ಪಾಗಲಾರದು. ಸಹಕಾರ ಕ್ಷೇತ್ರ ಮತ್ತು ಅದರ ಅಭಿವೃದ್ಧಿಗೆ ಮಾರಕವೆನ್ನಬಹುದಾದ ವಾತಾವರಣ ಸೃಷ್ಟಿಸಲಾಗಿದೆ ಎಂಬುದನ್ನು ಸ್ಥಿತಿ ಸಾಕ್ಷಿ ಹೇಳುತ್ತಿದೆ. ಕಳೆದ ಏಳೆಂಟು ವರ್ಷಗಳಿಂದ ಕಾರ್ಪೊರೇಟ್ಸ್ ವಲಯಕ್ಕೆ ಕೇಂದ್ರ ಸರಕಾರ ರತ್ನಗಂಬಳಿ ಸ್ವಾಗತಕ್ಕೆ ನಿಂತಿದೆ. ನೀತಿ ನಿಯಮ, ಹಣಕಾಸು ಬೆಂಬಲ ಸೇರಿದಂತೆ ವಿವಿಧ ರೂಪದಲ್ಲಿ ಕಾರ್ಪೊರೇಟ್ಸ್ ವಲಯಕ್ಕೆ ಏನೆಲ್ಲ ಬೆಂಬಲ, ರಿಯಾಯಿತಿ, ಪ್ರೋತ್ಸಾಹ ದೊರೆಯುತಿದೆ. ಇನ್ನೊಂದು ಕಡೆ ಸಹಕಾರ ಕ್ಷೇತ್ರ ಎಲ್ಲಿಲ್ಲದ ಕಿರುಕುಳ ಅನುಭವಿಸುವಂತಾಗಿದ್ದು, ಮಲತಾಯಿ ಧೋರಣೆಗೆ ಸಿಲುಕಿ ಮೌನರೋಧನಕ್ಕೆ ಸಿಲುಕಿದೆ.

ಕೇಂದ್ರ ಸರ್ಕಾರ ಸಹಕಾರ ಕ್ಷೇತ್ರದ ಕುರಿತು ಮಾಡಿದ ಕಾಯ್ದೆ – ಕಾನೂನು, ಸಹಕಾರ ಮತ್ತು ಕಾರ್ಪೊರೇಟ್ಸ್ ವಲಯಗಳ ನಡುವೆ ವ್ಯತ್ಯಾಸ ಗುರುತಿಸದೆ ನಿಯಮ – ನಿರ್ದೇಶನ ನೀಡಿರುವುದು ನೋಡಿದರೆ, ಕಾರ್ಪೊರೇಟ್ಸ್ ವಲಯಕ್ಕೆ ಏನು ಬೇಕು ಎಂದು ಕೇಳುವ ಮೊದಲೇ ಕೇಂದ್ರ ಸರಕಾರವೇ ಮುಂದೆ ನಿಂತು, ಇದು ನಿಮಗಾಗಿಯೇ ಇದೆ ತೆಗೆದುಕೊಳ್ಳಿ ಬಳಸಿಕೊಳ್ಳಿ ಎಂದು ತುದಿಗಾಲ ಮೇಲೆ ನಿಂತಂತೆ ಭಾಸವಾಗುತ್ತಿದೆ.

ಆತಂಕ ಹಾಗೂ ಆಘಾತಕಾರಿ ಅಂಶವೆಂದರೆ ಸಹಕಾರ ಮೂಲ ತತ್ವ – ಗುಣಲಕ್ಷಣಗಳೇ ಕಳೆದು ಹೋಗುವಂತಾಗುವ ರೀತಿಯ ನಿಯಮಗಳ ಮೂಲಕ ಸಹಕಾರ ಕ್ಷೇತ್ರದ ಅಸ್ತಿತ್ವಕ್ಕೆ ಸವಾಲಾಗುವ ರೀತಿಯಲ್ಲಿ ಕೇಂದ್ರ ವರ್ತಿಸುತಿದೆಯೇ ಎಂದೆನಿಸದೆ ಇರದು. ಸಹಕಾರ ಕ್ಷೇತ್ರ ರಾಜ್ಯ ಪಟ್ಟಿಯಲ್ಲಿ ಬರುತ್ತದೆ. ಆದರೆ ಕೇಂದ್ರ ಸರ್ಕಾರದ ನಡೆ ಹಾಗೂ ವೇಗ, ಚಿಂತನೆಗಳನ್ನು ಗಮನಿಸಿದರೆ, ರಾಜ್ಯ ಸರ್ಕಾರಗಳ ಅಧಿಕಾರದ ಮೇಲೂ ಗದಾಪ್ರಹಾರ ನಡೆಸಿದಂತೆ ಭಾಸವಾಗುತ್ತಿದೆ. ಇದು ಒಕ್ಕೂಟ ವ್ಯವಸ್ಥೆಗೆ ಧಕ್ಕೆ ಅಲ್ಲದೆ ಮತ್ತೇನು.

ಸಹಕಾರ ಕ್ಷೇತ್ರದ ತತ್ವ – ಗುಣಲಕ್ಷಣ, ಮೂಲ ಆಶಯಗಳನ್ನು ಹಾಳು ಮಾಡದ ಯಾವುದೇ ಕ್ರಮ, ನೀತಿ – ನಿಲುವುಗಳನ್ನು ಒಪ್ಪಬಹುದು. ಆದರೆ ಸಹಕಾರ ತತ್ವ, ಆಶಯಗಳನ್ನೇ ಹಾಳು ಮಾಡುವ ನೀತಿ–ನಿಯಮ, ಕ್ರಮಗಳನ್ನು ಸಹಕಾರ ಕ್ಷೇತ್ರದ ಕಾರ್ಯಕರ್ತರು ಒಪ್ಪುವುದಕ್ಕೆ ಸಾಧ್ಯವೇ ಇಲ್ಲ. ಈ ನಡೆಯನ್ನು ಗಮನಿಸಿದರೆ, ಸಹಕಾರ ಸಂಸ್ಥೆಗಳಿಗೆ ಬಲ ತುಂಬುವ ಕೆಲಸ ಆಗುತ್ತಿಲ್ಲ. ಬದಲಾಗಿ ಕಾರ್ಪೊರೇಟ್ ವಲಯಕ್ಕೆ ಇನಷ್ಟು ಬಲ ತುಂಬುವ ಯತ್ನ ನಡೆಯುತ್ತಿದೆ ಎಂದೆನಿಸುತ್ತಿದೆ. ಕಾರ್ಪೊರೇಟ್ ವಲಯ, ಖಾಸಗಿ ಕ್ಷೇತ್ರಕ್ಕೆ ಅನುಕೂಲಕರ ಸ್ಥಿತಿ ರೂಪಿಸುವುದಕ್ಕಾಗಿ ಸಹಕಾರ ಕ್ಷೇತ್ರಕ್ಕೆ ಅನ್ಯಾಯ ಮಾಡುವ, ಅಸ್ತಿತ್ವಕ್ಕೆ ಧಕ್ಕೆ ತರುವ ಯಾವ ಕೆಲಸವನ್ನು ಕೇಂದ್ರ ಸರ್ಕಾರ ಮಾಡಬಾರದು ಎನ್ನುವುದು ಸಹಕಾರ ಕ್ಷೇತ್ರದ ಪ್ರಬಲ ಹಕ್ಕೊತ್ತಾಯವಾಗಿದೆ.

ಲೇಖಕರು:ಎಚ್.ಕೆ.ಪಾಟೀಲ್,
ಮಾಜಿ ಸಹಕಾರ ಸಚಿವರು
ಆಧಾರ:ಉದಯವಾಣಿ, ದಿನಾಂಕ:14.07.2021.

## 6. ಕೈಗೆ ಬಂದ ತುತ್ತು ಬಾಯಿಗೆ ಬರಲಿಲ್ಲವೇಕೆ, ಯಾರು ಹೊಣೆ

2011ರ ಕೆಎಎಸ್ ಹುದ್ದೆಗಳಿಗೆ ಆಯ್ಕೆಯಾದ ಅಭ್ಯರ್ಥಿಗಳ ಅಂತಿಮ ಪಟ್ಟಿಯೇ ರದ್ದು

'ಕೈಗೆ ಬಂದ ತುತ್ತು ಬಾಯಿಗೆ ಬರಲಿಲ್ಲ' ಗಾದೆಯ ಮಾತೇ ಸೊಗಸು. 'ವೇದ ಸುಳ್ಳಾಗುವುದಿಲ್ಲ' ಎಂದು ಗಾದೆಯ ಮಾತನ್ನೇ ಕುರಿತ ಗಾದೆ ಇದೆ. "ಉಪಮಾ ಕಾಲಿದಾಸಸ್ಯ ಭಾರವೇರರ್ಥಗೌರವಂ ದಂಡಿನಃ ಪದಲಾಲಿತ್ಯಂ ಮಾಘೇ ಸಂತಿ ತ್ರಯೋ ಗುಣಾಃ" ಎಂದು ಸಂಸ್ಕೃತದ ಮಹಾಕವಿಗಳನ್ನು ಕುರಿತು ಹೇಳುವಂತೆ ಕಾಳಿದಾಸನ ಉಪಮೆ, ಭಾರವಿಯ ಅರ್ಥಗೌರವ, ದಂಡಿಯ ಪದಲಾಲಿತ್ಯ ಇವು ಮೂರೂ ಕಾವ್ಯಗುಣಗಳು ಗಾದೆ ಮಾತಿನಲ್ಲಿ ಮುಪ್ಪುರಿಗೊಂಡಿವೆ. ಮಾಘಕವಿಯ ಮಹಾಕಾವ್ಯಗಳು ಸಹ ಈ ಮೂರು ಗುಣಗಳಿಂದ ಕೂಡಿವೆಯೆಂದರೂ ಇಡೀ ಕಾವ್ಯವನ್ನು ಓದಿದಾಗ ಉಂಟಾಗುವ ರಸಾನುಭೂತಿ ಒಂದೇ ಸಾಲಿನ ಗಾದೆ ಮಾತಿನಲ್ಲಿ ಉಂಟಾಗುತ್ತದೆ. ಗಾದೆಗಳಲ್ಲಿ ಚಾರುತರವಾದ ಚತುರತರವಾದ ಚತುರ್ಥ ಗುಣವೂ ಇದೆಯೆಂದರೆ ಅತಿಶಯೋಕ್ತಿಯಾಗಲಾರದು. ಅದೆಂದರೆ ಪಾಣಿನಿಯ ಸೂತ್ರಗಳಂತೆ ಕೆಲವೇ ಶಬ್ಧಗಳಲ್ಲಿ ಸೂತ್ರಬದ್ಧವಾದ, ಲಯಬದ್ಧವಾದ, ಅರ್ಥಪೂರ್ಣವಾದ ಬದುಕಿನ ಬಂಡಿಯ ಕಡೆಗೀಲು! ಗ್ರಾಮೀಣ (Colloquial) ಭಾಷೆಯ ಸೊಗಡೂ ಇದರಲ್ಲಿದೆ. ಒಟ್ಟಾರೆ ಜನಪದರ ಜೀವನಾನುಭವದ ಘನೀಭೂತ ರಸಪಾಕವೇ ಗಾದೆ. ಇದನ್ನು 'ಕುರಿತೋದದೆಯುಂ ಕಾವ್ಯಪ್ರಯೋಗ ಪರಿಣತ ಮತಿಗಳಾದ' ಜನಪದರು ತಮ್ಮ ಆಡುಮಾತಿನಲ್ಲಿ ವಿರಚಿಸಿದ 'ಭಗವದ್ಗೀತೆ' ಎಂದರೂ ತಪ್ಪಲ್ಲ.

ಪ್ರಾಚೀನ ಕವಿಗಳು ರಾಮಾಯಣ, ಮಹಾಭಾರತಗಳನ್ನು ಆಧರಿಸಿ ಕಾವ್ಯರಚನೆ ಮಾಡಿದಂತೆ ಅಜ್ಞಾತ ಜನಪದರು ರಚಿಸಿದ ಈ ಒಂದೊಂದು ಗಾದೆ ಮಾತನ್ನು ಆಧರಿಸಿ ಆಧುನಿಕ ಪ್ರತಿಭಾನ್ವಿತ ಕವಿಗಳು ಅನೇಕ ಮಹಾಕಾವ್ಯಗಳನ್ನೇ ಬರೆಯಬಹುದು. ಜನಸಾಮಾನ್ಯರ ಜೀವನಾನುಭವಗಳನ್ನು ವಿವರಿಸಿ ಲೇಖನಗಳನ್ನು ಬರೆಯಬಹುದು. ಗಾದೆ ಮಾತುಗಳು ಸಾರ್ವಕಾಲಿಕ ಸತ್ಯದಿಂದ ಕೂಡಿರುತ್ತವೆ.

ಹಿಂದಿನವರ ಜೀವನಾನುಭವದ ಘಟನಾವಳಿಗಳು ಏನೇ ಇರಲಿ. ಅವು 'History repeats itself' ಎನ್ನುವಂತೆ ಎಲ್ಲಾ ಕಾಲಗಳಲ್ಲಿಯೂ ಮತ್ತೊಂದು ರೂಪದಲ್ಲಿ ಮರುಕಳಿಸುತ್ತವೆ. ಅಂತಹ ಒಂದು ಪ್ರಕರಣವು 2019 ರಲ್ಲಿ ಪ್ರತಿ ಸೋಮವಾರ ನಡೆಸುವ ನಮ್ಮ 'ಸದ್ಧರ್ಮ ನ್ಯಾಯಪೀಠ' ದಲ್ಲಿ ದಾಖಲಾಗಿದ್ದು ಅದರ ವಿವರಗಳು ಹೀಗಿವೆ:"

ಕರ್ನಾಟಕ ಲೋಕಸೇವಾ ಆಯೋಗವು 2011 ರಲ್ಲಿ ಸರ್ಕಾರವು ನೀಡಿದ ನಿರ್ದೇಶನದಂತೆ ಕೆಎಎಸ್ ಹುದ್ದೆಗಳಿಗೆ ಸ್ಪರ್ಧಾತ್ಮಕ ಪರೀಕ್ಷೆಗಳನ್ನು ನಡೆಸಿ ಅಭ್ಯರ್ಥಿಗಳನ್ನು ಆಯ್ಕೆ ಮಾಡಿ ಅಂತಿಮ ಆಯ್ಕೆ ಪಟ್ಟಿಯನ್ನು ಸರ್ಕಾರಕ್ಕೆ ಸಲ್ಲಿಸಿದ್ದರೂ ಇದುವರೆಗೂ ನೇಮಕಾತಿ ಪ್ರಕ್ರಿಯೆ ಪೂರ್ಣಗೊಂಡಿರುವುದಿಲ್ಲ. ಸರ್ಕಾರವು ಆಯ್ಕೆ ಪಟ್ಟಿಯನ್ನೇ ರದ್ದುಗೊಳಿಸಿದೆ. ನೇಮಕಾತಿ ಆದೇಶಗಳನ್ನು ಪಡೆದ ಕೆಲವರು ಕರ್ತವ್ಯದ ಮೇಲೆ ಹಾಜರಾಗಿ ಒಂದು ವರ್ಷಕ್ಕೂ ಹೆಚ್ಚು ಕಾಲ ಕೆಲಸ ಮಾಡಿ ವೇತವನ್ನು ಪಡೆದಿದ್ದರೂ ಅವರನ್ನೂ ಸಹ ಬಿಡುಗಡೆಗೊಳಿಸಲಾಗಿದೆ. ಯಾರೋ ಕೆಲವರು ಅಭ್ಯರ್ಥಿಗಳು ಲೋಕಸೇವಾ ಆಯೋಗದ ಸದಸ್ಯರಿಗೆ ದೂರವಾಣಿಯಲ್ಲಿ ಕರೆ ಮಾಡಿದ್ದರು ಎಂಬ ಕಾರಣಕ್ಕಾಗಿ ಏನೋ ಗೋಲ್‌ಮಾಲ್ ನಡೆದಿದೆಯೆಂದು ಅನುಮಾನಿಸಿ ಇಡೀ ಆಯ್ಕೆ ಪಟ್ಟಿಯನ್ನೇ ರದ್ದುಪಡಿಸಿದರೆ ಹೇಗೆ? ಮದುವೆಯ ಮುನ್ನಾ ದಿನ ಹುಡುಗಿಗೆ ಯಾವುದೋ ಹುಡುಗನಿಂದ ಫೋನ್ ಕರೆ ಬಂದಿತ್ತು ಎಂದು ಅನುಮಾನಪಟ್ಟು ಮದುವೆಯೇ ಮುರಿದು ಬಿದ್ದಾಂತಾಗಿದೆ! ರಾಜ್ಯಾದ್ಯಂತ ಸುಮಾರು 360ಕ್ಕೂ ಹೆಚ್ಚು ಪ್ರತಿಭಾನ್ವಿತ ಯುವಕ ಯವತಿಯರ ಜೀವನವು ಮೂರಾಬಟ್ಟೆಯಾಗಿದೆ. ಮೂರನೇ ಒಂದು ಭಾಗದಲ್ಲು ಅವರ ವೃತ್ತಿ ಜೀವನವು ಮಣ್ಣುಪಾಲಾಗಿದೆ. "ನಾನೇನು ಪಾಪವ ಮಾಡಿದೆನೋ! ಬೆಳೆಯುವ ಮುನ್ನವೆ ಕೊಯ್ದರೇ? ಹೇಳಾ ಅಯ್ಯಾ!" ಎಂದು ಬಸವಣ್ಣನವರು ಪರಿತಪಿಸಿದಂತೆ ಈ ಯುವಕ-ಯುವತಿಯರು ಕಣ್ಣೀರಿಡುವಂತಾಗಿದೆ. ಅವರ ಜೀವನದ ಕನಸುಗಳೆಲ್ಲಾ ಭಗ್ನಗೊಂಡಿವೆ. ಇದ್ದ ನೌಕರಿಗೂ ರಾಜಿನಾಮೆ ಕೊಟ್ಟು ಕಂಗಾಲಾಗಿದ್ದಾರೆ. ವಾಸ್ತವ ಪ್ರಪಂಚದಲ್ಲಿದ್ದೂ 'ಇದೇನೋ ಕೆಟ್ಟ ಕನಸು' ಎಂದು ವಿಷಾದಿಸಿ ತಮ್ಮ ಹಣೆಯ ಬರಹವನ್ನು ಹಳಿಯುವಂತಗಿದೆ. ತಮ್ಮ ಮಕ್ಕಳು ಉನ್ನತ ಹುದ್ದೆಗಳಲ್ಲಿರುವುದನ್ನು ಕಣ್ತುಂಬ ನೋಡಿ ಸಂತಸಪಡಲು ತವಕರಿಸುತ್ತಿದ್ದ ಅವರ ತಂದೆ-ತಾಯಂದಿರು ಶೋಕಸಾಗರದಲ್ಲಿ ಮುಳಗಿದ್ದಾರೆ. ಕೆಲವರಂತೂ ಅದೇ ಚಿಂತೆಯಲ್ಲಿ ಮರಣ ಹೊಂದಿದ್ದಾರೆ.

ಈ ಯುವಕ-ಯುವತಿಯರ ಕೈಗೆ ಬಂದ ತುತ್ತು ಬಾಯಿಗೆ ಏಕೆ ಬರಲಿಲ್ಲ? ಇವರು ತಮ್ಮ ಸ್ವಂತ ಪ್ರತಿಭೆಯಿಂದ ಗಳಿಸಿದ್ದ ಹುದ್ದೆಗೆ ಸಂಚಕಾರ ಬರಲು ಏನು ಕಾರಣ? ಇದಕ್ಕೆ ಯಾರು ಹೊಣೆ? ಲೋಕಸೇವಾ ಆಯೋಗದ ಅಂತಿಮ ಆಯ್ಕೆ ಪಟ್ಟಿಯನ್ನು ರದ್ದುಗೊಳಿಸಲು ಯಾವುದೇ ಸರ್ಕಾರಕ್ಕೂ ಅಧಿಕಾರವಿಲ್ಲ. ಹಿಂದೆ ಅಧಿಕಾರದಲ್ಲಿದ್ದ ಸರ್ಕಾರದ ರಾಜಕೀಯ ಧುರೀಣರು ಈಗ ವಿರೋಧ ಪಕ್ಷದಲ್ಲಿದ್ದು ಇವರಿಗೆ ಅನ್ಯಾಯವಾಗಿದೆ ಎಂದು ಒಪ್ಪಿ ಕಳೆದ ವರ್ಷ ನಡೆದ ವಿಧಾನಸಭೆಯ ಬಜೆಟ್ ಅಧಿವೇಶನದಲ್ಲಿ (ಮಾರ್ಚ್ 2020) ಒಕ್ಕೊರಲಿಂದ ಇವರಿಗೆ ನೇಮಕಾತಿ ಆದೇಶವನ್ನು ನೀಡಲು ಈಗಿನ ಸರ್ಕಾರಕ್ಕೆ ಒತ್ತಾಯಿಸಿದ್ದಾರೆ. ಇಲ್ಲಿಗೆ ಒಂದು ವರ್ಷದ ಮೇಲಾಯಿತು. ಆದರೂ ನೇಮಕಾತಿ ಆದೇಶ ಆಗಿರುವುದಿಲ್ಲ.

ಈ ಹಿಂದೆ ತಪ್ಪಾಗಿದ್ದು ಎಲ್ಲಿ? ಹೇಗೆ? ಲೋಕಸೇವಾ ಆಯೋಗವು ಸಲ್ಲಿಸಿದ ಅಂತಿಮ ಆಯ್ಕೆ ಪಟ್ಟಿಯು ದೋಷಪೂರ್ಣವಾಗಿದ್ದರೆ ಅಂದಿನ ಸರ್ಕಾರವು ಸಂವಿಧಾನದ ಪರಿಚ್ಛೇದ 323(2)ರ ಪ್ರಕಾರ ಸಕಾರಣಗಳನ್ನು ಕೊಟ್ಟು ವಿಧಾನಸಭೆಯ ಮುಂದೆ ಮಂಡಿಸಬೇಕಾಗಿತ್ತು. ಕಳೆದ ಮಾರ್ಚ್ ತಿಂಗಳು ಚರ್ಚೆ ನಡೆದಂತೆ ಯಾವ ಚರ್ಚೆಯೂ ಈ ಹಿಂದಿನ ಯಾವ ವಿಧಾನಸಭೆಯಲ್ಲಿಯೂ ನಡೆದಿಲ್ಲ. ಆಗಿನ ಆಯೋಗವೂ ತಪ್ಪು ಮಾಡಿದೆ; ಆಗಿನ ಸರ್ಕಾರವೂ ತಪ್ಪು ಮಾಡಿದೆ. ಆಯೋಗವು ತನ್ನ 2014-15 ರ ವಾರ್ಷಿಕ ವರದಿಯನ್ನು ತಡವಾಗಿ ಅಂದರೆ 2017ರ ಫೆಬ್ರವರಿ 7ರಂದು ವಿಧಾನಸಭೆಯ ಮುಂದೆ ಮಂಡಿಸಿದೆ. ಅದರಲ್ಲಿ ಈ ಅಭ್ಯರ್ಥಿಗಳ ಆಯ್ಕೆಯ ವಿವಾದವು ಕರ್ನಾಟಕ ಆಡಳಿತ ನ್ಯಾಯಮಂಡಳಿಯ

(ಕೆಎಟಿ) ಮುಂದೆ ಇದೆಯೆಂದೂ ಇನ್ನೂ ತೀರ್ಮಾನ ಆಗಿಲ್ಲವೆಂದೂ ವಿಧಾನಸಭೆಗೆ ತಪ್ಪು ಮಾಹಿತಿ ನೀಡಿದೆ. ಆ ವೇಳೆಗಾಗಲೇ ನ್ಯಾಯಮಂಡಳಿಯು ವಿಚಾರಣೆಯನ್ನು ಪೂರ್ಣಗೊಳಿಸಿ 2016ರ ಅಕ್ಟೋಬರ್ 19ರಂದು ತೀರ್ಪು ನೀಡಿದೆ. ಸಂವಿಧಾನದ ಪರಿಚ್ಛೇದ 323(2)ರ ಪ್ರಕಾರ ವಿಧಾನಸಭೆಯ ಮುಂದೆ ಮಂಡನೆ ಆಗಿಲ್ಲ; ಚರ್ಚೆ ನಡೆದಿಲ್ಲ. ಆದಕಾರಣ ಆಯೋಗದ ಆಯ್ಕೆ ಪಟ್ಟಿಯ ಪ್ರಕಾರ ನೇಮಕಾತಿ ಆದೇಶವನ್ನು ಸರ್ಕಾರ ಕೊಡಬೇಕೆ ಎಂದು ನ್ಯಾಯಮಂಡಳಿಯು ಸ್ಪಷ್ಟವಾಗಿ ಆದೇಶ ನೀಡಿದೆ.

ಈ ವಿವಾದವು ಉಚ್ಚ ನ್ಯಾಯಾಲಯದ ಮೆಟ್ಟಿಲೇರಿದಾಗ ಆಗಿನ ಅಡಿಷನಲ್ ಅಡ್ವೊಕೇಟ್ ಜನರಲ್‌ರವರು ನ್ಯಾಯಾಲಯಕ್ಕೆ ತಪ್ಪು ಮಾಹಿತಿ ನೀಡಿರುತ್ತಾರೆ. ಉಚ್ಚ ನ್ಯಾಯಾಲಯದ ತೀರ್ಪಿನಲ್ಲಿ ದಾಖಲಾದ ಪ್ರಕಾರ: "To a pointed query with regard to laying of report before the Legislature in compliance with Article 323(2) of the Constitution of India, he submitted that the report was tabled during February 2017…" (paras 21 and 26(e). ಆಯೋಗದ ವರದಿಯಲ್ಲಿ ಏನಿದೆ ಎಂಬುದನ್ನು ಉಚ್ಚ ನ್ಯಾಯಾಲಯವು ಪರಿಶೀಲಿಸಲು ಹೋಗಿಲ್ಲ. ಅಡ್ವೊಕೇಟ್ ಜನರಲ್‌ರವರ ಮಾತನ್ನೇ ನಂಬಿ ತೀರ್ಪು ನೀಡಿದೆ. ಸರ್ಕಾರವು ವಿಧಾನಸಭೆಯಲ್ಲಿ ನ್ಯಾಯಮಂಡಳಿಯ ಕಡೆ ಬೆರಳು ಮಾಡಿ ತೋರಿಸಿದರೆ, ಉಚ್ಚ ನ್ಯಾಯಾಲಯದಲ್ಲಿ ವಿಧಾನಸಭೆಯ ಕಡೆ ಬೆರಳು ಮಾಡಿ ತೋರಿಸಿದೆ. ನ್ಯಾಯಶಾಸ್ತ್ರದ ಪ್ರಕಾರ 'ಸುಖ ಎಂದರೆ ದುಃಖದ ಅಭಾವ'; ದುಃಖ ಎಂದರೆ ಸುಖದ ಅಭಾವ' ಎಂದು ಹೇಳಿದರೆ ಸುಖ-ದುಃಖಗಳ ಸರಿಯಾದ ಪರಿಭಾಷೆ ಆಗುವುದಿಲ್ಲ; 'ಚಕ್ರಾಪತ್ತಿ' (circular argument) ದೋಷ ಉಂಟಾಗುತ್ತದೆ. ಈ ಚಕ್ರವ್ಯೂಹದಲ್ಲಿ 2011ರ ಯುವ ಪ್ರತಿಭಾನ್ವಿತರು ಸಿಲುಕಿಕೊಂಡು ನಲಗುತ್ತಿದ್ದಾರೆ.

ಆಯೋಗದ ಹಿಂದಿನ ಕಾರ್ಯದರ್ಶಿಗಳು ದೋಷಮುಕ್ತರೆಂದು ಉಚ್ಚ ನ್ಯಾಯಾಲಯ ತೀರ್ಪು ನೀಡಿದೆ. ಆಯೋಗದ ಉಳಿದ ಸದಸ್ಯರೂ ನಿರ್ದೋಷಿಗಳೆಂದು ಸರ್ಕಾರವು ತೀರ್ಮಾನಿಸಿದೆ. ಹೀಗಿರುವಾಗ ಈ ಯುವ ಪ್ರತಿಭೆಗಳ ಮೇಲೆ ದೋಷ ಹೊರಿಸುವುದು ಎಷ್ಟರಮಟ್ಟಿಗೆ ಸಮಂಜಸ? ನೂರು ಜನ ಅಪರಾಧಿಗಳಿಗೆ ಶಿಕ್ಷೆಯಾಗದಿದ್ದರೂ ಪರವಾಗಿಲ್ಲ; ಒಬ್ಬ ನಿರಪರಾಧಿಗೆ ಶಿಕ್ಷೆಯಾಗಬಾರದು ಎನ್ನುವುದು ನ್ಯಾಯಶಾಸ್ತ್ರ ಕೋವಿದರು ಹೇಳುತ್ತರೆ. ಕೇವಲ ಸಿಐಡಿ ವರದಿಯ ಆಧಾರದ ಮೇಲೆಯೇ ಸರ್ಕಾರವು ಶಿಸ್ತುಕ್ರಮ ಕೈಗೊಳ್ಳುವುದಾದರೆ ದೇಶದಲ್ಲಿ ನ್ಯಾಯಾಲಯಗಳಾದರೂ ಏಕೆ ಬೇಕು?

ಉಚ್ಚ ನ್ಯಾಯಾಲಯವು ದಿನಾಂಕ: 09.03.2018 ರಂದು ನೀಡಿದ ತೀರ್ಪಿನಲ್ಲಿ ಹೀಗೆ ಹೇಳುತ್ತದೆ: "Unless the order of appointment is communicated to the selected candidates, no right shall accrue to them. The reasons for not accepting the recommendations have been laid before the State Assembly. The matter should have ended there." ನ್ಯಾಯಾಲಯದ ಈ ಆಶಯವನ್ನೇ ಅನ್ವಯಿಸಿ ಹೇಳುವುದಾದರೆ ಆಯೋಗವು ಸಲ್ಲಿಸಿದ ಅಂತಿಮ ಆಯ್ಕೆ ಪಟ್ಟಿಯಲ್ಲಿರುವವರ ಪೈಕಿ 34 ಜನ ಅಭ್ಯರ್ಥಿಗಳಿಗೆ ನೇಮಕಾತಿ ಆದೇಶವನ್ನು ಅಂದಿನ ಸರ್ಕಾರ ನೀಡಿದೆ. ಸಂಬಂಧಪಟ್ಟ ಇಲಾಖೆಗಳ ತರಬೇತಿಯನ್ನೂ ಪಡೆದಿದ್ದಾರೆ. ಇವರು ಒಂದು ವರ್ಷಕ್ಕೂ ಮೇಲ್ಪಟ್ಟು ವೇತನ ಪಡೆದಿದ್ದಾರೆ. ಹೀಗಿರುವಾಗ ಉಚ್ಚ ನ್ಯಾಯಾಲಯವೇ ಹೇಳುವಂತೆ ಇವರಿಗೆ ಮತ್ತು ಇನ್ನುಳಿದವರಿಗೆ ಆಯ್ಕೆಯಾದ ಹುದ್ದೆಗಳನ್ನು ಪಡೆಯಲು ಸಂವಿಧಾನತ್ತವಾದ ಹಕ್ಕು ಇರಲೇಬೇಕಲ್ಲವೇ?

ಈ ಯುವ ಪ್ರತಿಭೆಗಳಿಗೆ ಆದ ಅನ್ಯಾಯವನ್ನು ಹಿಂದಿನ ಕಾನೂನು ಸಚಿವರಾದ ಮಾಧುಸ್ವಾಮಿಯವರು ನಮ್ಮ ದರ್ಶನಾಶೀರ್ವಾದ ಪಡೆಯಲು ಕಳೆದ ವರ್ಷ ಜನವರಿಯಲ್ಲಿ ಮಠಕ್ಕೆ

ಬಂದಾಗ ಸುರ್ದಿರ್ಘ ಚರ್ಚೆ ನಡೆಸಿ ಮನವರಿಕೆ ಮಾಡಿಕೊಡಲಾಗಿದೆ. ಈಗಿನ ಕಾನೂನು ಸಚಿವರು ಮತ್ತು ಗೃಹ ಸಚಿವರೂ ಆದ ಬಸವರಾಜ ಬೊಮ್ಮಾಯಿಯವರಿಗೂ ಸಿರಿಗೆರೆಗೆ ಬಂದಾಗ ಮನವರಿಕೆ ಮಾಡಿಕೊಡಲಾಗಿದೆ. ಮುಖ್ಯಮಂತ್ರಿಗಳೊಂದಿಗೂ ದೂರವಾಣಿಯಲ್ಲಿ ಮಾತನಾಡಿ ಗಮನ ಸೆಳೆಯಲಾಗಿದೆ. ಅವರ ನೇತೃತ್ವದಲ್ಲಿರುವ ಈಗಿನ ಸರ್ಕಾರವು ಹಿಂದೆ ಆದ ದೋಷಗಳನ್ನು ಸರಿಪಡಿಸಿ ಕೂಡಲೇ ಈ ಪ್ರತಿಭಾನ್ವಿತರಿಗೆ ನ್ಯಾಯಬದ್ಧವಾಗಿ ದೊರೆಯಬೇಕಾದ ಹುದ್ದೆಗಳಿಗೆ ನೇಮಕಾತಿ ಆದೇಶಗಳನ್ನು ನೀಡುವುದು. ಕಾನೂನಿನ ಎಡರುತೊಡರುಗಳು ಏನಾದರೂ ಇದ್ದರೆ ಅವುಗಳನ್ನು ಕೂಡಲೇ ಸರಿಪಡಿಸುವುದು. ಕಾನೂನು ಇರುವುದು ಜನರ ಒಳಿತಿಗಾಗಿ. ಇಲ್ಲದಿದ್ದರೆ 'Law is an ass' (ಕಾನೂನು ಕತ್ತೆ ಇದ್ದಂತೆ) ಅದು ಯಾವ ಕಡೆಗಾದರೂ ಒದೆಯುತ್ತದೆ ಎಂಬ ನಾಣ್ಣುಡಿಗೆ ಇಂಬುಮಾಡಿಕೊಟ್ಟಂತೆ ಆಗುತ್ತದೆ!

ಲೇಖಕರು: ಡಾ:ಶಿವಮೂರ್ತಿ ಶಿವಾಚಾರ್ಯ ಸ್ವಾಮಿಗಳು,
ಸಿರಿಗೆರೆ,
ಆಧಾರ: ವಿಜಯ ಕರ್ನಾಟಕ, ದಿನಾಂಕ: 15.07.2021

## 7. ಒಂದೇ ಕಾನೂನು

### (ಏಕರೂಪ ನಾಗರಿಕ ಸಂಹಿತೆಯತ್ತ ಭಾರತ)

ದೇಶಕ್ಕೆ ಏಕರೂಪ ನಾಗರಿಕ ಸಂಹಿತೆ ಬೇಕು ಎಂಬುದನ್ನು ದಿಲ್ಲಿ ಹೈಕೋರ್ಟ್ ಬೆಂಬಲಿಸಿದೆ. ಲೋಕಸಭೆಯಲ್ಲೂ ಈ ಕುರಿತು ವಿಧೇಯಕ ಮಂಡಿಸಲು ಬಿಜೆಪಿ ಸಂಸದರು ಸಿದ್ಧರಾಗಿದ್ದಾರೆ, ಏನೀ ಏಕರೂಪ ನಾಗರಿಕ ಸಂಹಿತೆ ಯಾಕೆ ಅಗತ್ಯ ಈ ಕುರಿತ ವಿವರ ಇಲ್ಲಿದೆ.

**ಸಂವಿಧಾನದಲ್ಲಿ ಏನಿದೆ**

ದೇಶದ ಪ್ರಜೆಗಳ ವಿವಿಧ ಧಾರ್ಮಿಕ ವೈಯಕ್ತಿಕ ಕಾನೂನುಗಳಿಂದಾಗಿ ಸಮಸ್ಯೆ ಉದ್ಭವಿಸಬಹುದು ಎಂಬುದನ್ನು ಸಂವಿಧಾನ ಕರ್ತೃಗಳು ಮೊದಲೇ ನಿರೀಕ್ಷಿಸಿದ್ದರು. ಹೀಗಾಗಿ ಅವರು ಭಾರತಕ್ಕಾಗಿ ಕಾನೂನುಗಳನ್ನು ಕ್ರೋಢೀಕರಿಸಿದಾಗ ಬ್ರಿಟಿಷರು ಪರಿಚಯಿಸಿದ ವಿಭಿನ್ನ ವೈಯಕ್ತಿಕ ಕಾನೂನುಗಳನ್ನೇ ಮುಂದುವರಿಸಿದರು; ಆದರೆ ರಾಜ್ಯ ನೀತಿ ನಿರ್ದೇಶಕ ತತ್ವಗಳ ವಿಭಾಗ (ವಿಭಾಗ 4) ದಲ್ಲಿ ಒಂದು ವಿಧಿಯನ್ನು ಸೇರಿಸಿದರು. ಈ 44ನೇ ವಿಧಿ ಹೇಳುವಂತೆ "ಭಾರತದ ಭೂಪ್ರದೇಶದಾದ್ಯಂತ ಎಲ್ಲಾ ನಾಗರಿಕರಿಗೆ ಅನ್ವಯವಾಗುವ ಏಕರೂಪದ ನಾಗರಿಕ ಸಂಹಿತೆಯನ್ನು ಸ್ಥಾಪಿಸಲು ಸರ್ಕಾರ ಯತ್ನಿಸಬೇಕು." 44ನೇ ವಿಧಿಯ ಉದ್ದೇಶವೆಂದರೆ, 'ದುರ್ಬಲ ಸಮುದಾಯಗಳ ವಿರುದ್ಧ ನಡೆಯಬಹುದಾದ ತಾರತಮ್ಯವನ್ನು ಪರಿಹರಿಸುವುದು ಮತ್ತು ದೇಶಾದ್ಯಂತ ವೈವಿಧ್ಯಮಯ ಸಾಂಸ್ಕೃತಿಕ ಗುಂಪುಗಳನ್ನು ಸಾಮರಸ್ಯಗೊಳಿಸುವುದು.' ಆದರೆ, ಈ ವಿಧಿಯು ಸಂಹಿತೆಯನ್ನು ಕಡ್ಡಾಯಗೊಳಿಸಿಲ್ಲ. ಯುಸಿಸಿಯನ್ನು ತರಲು ಕಾನೂನು ರೂಪಿಸುವುದು ಸಂಸತ್ತಿನ ವಿಚಕ್ಷಣೆ ಹಾಗೂ ಅಧಿಕಾರಕ್ಕೆ ಸಂಬಂಧಿಸಿದೆ. ಏಕೆಂದರೆ, ಸಂವಿಧಾನದ 37ನೇ ವಿಧಿಯ ಪ್ರಕಾರ, ನಾಲ್ಕನೇ ಭಾಗದಲ್ಲಿರುವ ಯಾವುದೇ ನೀತಿ ನಿಬಂಧನೆಗಳನ್ನು ಯಾವುದೇ ನ್ಯಾಯಾಲಯದ ಮೂಲಕ ಜಾರಿಗೊಳಿಸಲು ಸಾಧ್ಯವಿಲ್ಲ. ಈ ವಿಚಾರದಲ್ಲಿ ಕಾನೂನುಗಳನ್ನು ರೂಪಿಸುವುದು ಸರ್ಕಾರದ ಕರ್ತವ್ಯ ಎಂದು ಹೇಳಿದೆ.

**ದಿಲ್ಲಿ ಹೈಕೋರ್ಟ್ ಸೂಚನೆ**

ದೇಶಕ್ಕೆ ಒಂದು ಏಕರೂಪ ಸಂಹಿತೆ (ಯೂನಿಫಾರ್ಮ್ ಸಿವಿಲ್ ಕೋಡ್–ಯುಸಿಸಿ) ಅಗತ್ಯ, ಈ ವಿಷಯದಲ್ಲಿ ಅಗತ್ಯಕ್ರಮಗಳನ್ನು ತೆಗೆದುಕೊಳ್ಳುವಂತೆ ಕೇಂದ್ರ ಸರ್ಕಾರಕ್ಕೆ ದಿಲ್ಲಿ ಹೈಕೋರ್ಟ್ ಸೂಚಿಸಿದೆ.

ಆಧುನಿಕ ಭಾರತೀಯ ಸಮಾಜ ಕ್ರಮೇಣ 'ಏಕರೂಪ'ವಾಗಿ ಬದಲಾಗುತ್ತಿದೆ. ಧರ್ಮ, ಸಮುದಾಯ ಮತ್ತು ಜಾತಿಯ ಸಾಂಪ್ರದಾಯಿಕ ಅಡೆತಡೆಗಳು ಕರಗುತ್ತಿವೆ ಮತ್ತು ಬದಲಾಗುತ್ತಿರುವ ಈ ಮಾದರಿಗಳನ್ನು ಗಮನದಲ್ಲಿಟ್ಟುಕೊಂಡು, ಏಕರೂಪ ನಾಗರಿಕ ಸಂಹಿತೆಯನ್ನು ರೂಪಿಸಬಹುದು ಎಂದು ನ್ಯಾಯಾಲಯ ಸೂಚಿಸಿದೆ.

**ವಿಧೇಯಕ ಮಂಡನೆಗೆ ಸಜ್ಜು**

ಸಂಸತ್ತಿನ ಮುಂಬರಲಿರುವ ಅಧಿವೇಶನದಲ್ಲಿ ಏಕರೂಪ ನಾಗರಿಕ ಸಂಹಿತೆ ಹಾಗೂ ಜನಸಂಖ್ಯೆ ನಿಯಂತ್ರಣಕ್ಕೆ ಸಂಬಂಧಿಸಿದ ವಿಧೇಯಕಗಳನ್ನು ಬಿಜೆಪಿಯ ಸಂಸದರು ಮಂಡಿಸಲಿದ್ದಾರೆ ಎಂದು ಮೂಲಗಳು ತಿಳಿಸಿವೆ. ಜು. 19 ರಂದು ಆರಂಭವಾಗಲಿರುವ ಕಲಾಪದಲ್ಲಿ ರಾಜಸ್ಥಾನದ ರಾಜ್ಯಸಭೆ ಬಿಜೆಪಿ ಸದಸ್ಯ ಕಿರೋರಿಲಾಲ್ ಮೀನಾ ಅವರು ಇದನ್ನು ಮಂಡಿಸಲಿದ್ದಾರೆ.

**ಏನಿದು ಏಕರೂಪ ಪೌರ ಸಂಹಿತೆ**

ಏಕರೂಪದ ಪೌರ ಸಂಹಿತೆ ಇಡೀ ದೇಶಕ್ಕೆ ಒಂದು ಮೂಲಭೂತವಾದ ಕಾನೂನನ್ನು ರೂಪಿಸಬೇಕೆಂದು ಹೇಳುತ್ತದೆ. ಪ್ರಸ್ತುತ ಎಲ್ಲ ಮತೀಯ, ಧಾರ್ಮಿಕ ಸಮುದಾಯಗಳು ಮದುವೆ, ಆನುವಂಶಿಕತೆ, ದತ್ತು, ಉತ್ತರಾಧಿಕಾರ ಮುಂತಾದ ವಿಷಯಗಳಲ್ಲಿ ವೈಯಕ್ತಿಕ ಕಾನೂನುಗಳ ಪ್ರಕಾರ ನಡೆದುಕೊಳ್ಳುತ್ತವೆ. ಅಂದರೆ, ಹಿಂದೂಗಳು ತಮ್ಮದೇ ಆದ ವಿವಾಹ ಕಾನೂನುಗಳನ್ನು ಹೊಂದಿದ್ದಾರೆ ಮತ್ತು ಮುಸ್ಲಿಮರ ವಿವಾಹಕ್ಕೂ ಸಮುದಾಯದ ವೈಯಕ್ತಿಕ ನಿಯಮಾವಳಿಗಳಿವೆ. ಪಾರ್ಸಿ ಮತ್ತು ಕ್ರಿಶ್ಚಿಯನ್ನರ ವಿಷಯದಲ್ಲೂ ಹೀಗೇ, ಉದಾಹರಣೆಗೆ ಹಿಂದೂ ವಿವಾಹ ಕಾಯಿದೆ, ಹಿಂದೂ ಉತ್ತರಾಧಿಕಾರ ಕಾಯಿದೆ, ಭಾರತೀಯ ಕ್ರಿಶ್ಚಿಯನ್ ವಿವಾಹ ಕಾಯಿದೆ, ಪಾರ್ಸಿ ಮದುವೆ ಮತ್ತು ವಿಚ್ಛೇದನ ಕಾಯಿದೆ, ಹೀಗೆ. ಆದರೆ ಮುಸ್ಲಿಂ ವೈಯಕ್ತಿಕ ಕಾನೂನುಗಳನ್ನು ಇನ್ನೂ ಸಮಗ್ರವಾಗಿ ಕ್ರೋಢೀಕರಿಸಲಾಗಿಲ್ಲ. ವಿವಿಧ ಸಮುದಾಯಗಳನ್ನು ನಿಯಂತ್ರಿಸುವ ಪ್ರತ್ಯೇಕ ಕಾನೂನುಗಳು, ಆಡಳಿತಾತ್ಮಕ ಸಂಕೀರ್ಣತೆಗಳಿಗೆ ಕೊಡುಗೆ ನೀಡುತ್ತಿವೆ. ಅಂತರ್ಜಾತೀಯ ಮದುವೆ ನಡೆದಾಗಲೂ ಸಮಸ್ಯೆಗಳು ಉದ್ಭವಿಸುತ್ತಿವೆ. ಕೆಲವೊಮ್ಮೆ ವಿವಿಧ ವೈಯಕ್ತಿಕ ಕಾನೂನುಗಳಲ್ಲಿನ ಘರ್ಷಣೆಯಿಂದಲೂ ಸಮಸ್ಯೆಗಳು ಉಂಟಾಗುತ್ತಿವೆ. ಹೀಗಾಗಿ ಯುಸಿಸಿಯ ಅಗತ್ಯವಿದೆ.

**ಗೋವಾದ ಮಾದರಿ ಸಂಹಿತೆ**

ಗೋವಾ ರಾಜ್ಯದಲ್ಲಿ **'ಗೋವಾ ಸಿವಿಲ್ ಕೋಡ್'** ಎಂದು ಕರೆಯಲಾಗುವ ಒಂದು ಏಕರೂಪ ನೀತಿ ಸಂಹಿತೆಯನ್ನು ಅನುಸರಿಸಲಾಗುತ್ತಿದೆ. ಇಲ್ಲಿ ಹಿಂದೂಗಳು, ಮುಸ್ಲಿಮರು, ಕ್ರಿಶ್ಚಿಯನ್ನರು ಸೇರಿದಂತೆ ಎಲ್ಲಾ ಸಮುದಾಯಗಳು ಮದುವೆ, ವಿಚ್ಛೇದನ, ಉತ್ತರಾಧಿಕಾರದ ಪ್ರಶ್ನೆ ಇತ್ಯಾದಿಗಳಿಗೆ ಬಂದಾಗ ಒಂದೇ ಕಾನೂನನ್ನು ಪಾಲಿಸುತ್ತವೆ. ಗೋವಾ 1961 ರಲ್ಲಿ ಭಾರತೀಯ ಒಕ್ಕೂಟದ ಭಾಗವಾಯಿತು. ಆದರೆ ಹಿಂದಿನ ಪೋರ್ಚುಗೀಸ್ ವಸಾಹತುಶಾಹಿ ಆಡಳಿತ ವಿಧಿಸಿದ್ದ 1867ರ ಪೋರ್ಚುಗೀಸ್ ನಾಗರಿಕ ಸಂಹಿತೆಯನ್ನೇ ಎಲ್ಲಾ ಸಮುದಾಯಗಳಿಗೆ ಮುಂದುವರಿಸಲು ನಿರ್ಧರಿಸಿತು.

**ಯಾಕೆ ಇನ್ನೂ ಜಾರಿಗೊಳಿಸಿಲ್ಲ**

ಸ್ವಾತಂತ್ರ್ಯ ದೊರೆಯುವುದಕ್ಕೂ ಎಷ್ಟೋ ಮೊದಲೇ, 1835 ರಲ್ಲಿ ಬ್ರಿಟಿಷ್ ಸರ್ಕಾರ ಸಲ್ಲಿಸಿದ ವರದಿಯಲ್ಲಿ **"**ಅಪರಾಧ, ಶಿಕ್ಷೆ, ಪುರಾವೆಗಳು ಮತ್ತು ಒಪ್ಪಂದಗಳಿಗೆ ಸಂಬಂಧಿಸಿ ಭಾರತೀಯ ಕಾನೂನಿನಲ್ಲಿ ಏಕರೂಪತೆ ಅಗತ್ಯ. ಆದರೆ ಹಿಂದೂಗಳು ಮತ್ತು ಮುಸ್ಲಿಮರ ವೈಯಕ್ತಿಕ ಕಾನೂನುಗಳನ್ನು ಅಂತಹ ಕ್ರೋಢೀಕರಣದ ಹೊರಗೆ ಇಡಬೇಕು**"** ಎಂದು ಹೇಳಿತ್ತು. ದೇಶಕ್ಕೊಂದು ಸಮಾನ – ಏಕರೂಪ ಪೌರ ಸಂಹಿತೆಯ ಅಗತ್ಯವಿದೆ ಎಂದು ಸಂವಿಧಾನ ಹೇಳಿದ್ದರೂ, ಅದನ್ನು ಕಡ್ಡಾಯಗೊಳಿಸದಿರಲು

ಕಾರಣವೆಂದರೆ, ಅದಕ್ಕೆ ಕಾಲ ಪಕ್ವವಾಗಿಲ್ಲ ಎಂದು. ದೇಶದ ಮೊದಲ ಕಾನೂನು ಸಚಿವರಾಗಿದ್ದ ಸಂವಿಧಾನ ಕರ್ತೃ ಡಾ.ಬಿ.ಆರ್.ಅಂಬೇಡ್ಕರ್ ಅವರು ಏಕರೂಪ ಪೌರ ಸಂಹಿತೆ ರೂಪಿಸಲು ನಾವು ಇನ್ನೂ ಬಹಳ ಕಾಲ ಕಾಯಬೇಕಾಗಿದೆ ಎಂದು ಹೇಳಿದ್ದರು. ಇಂಥ ಕಾನೂನು ರೂಪಣೆಯಿಂದ ಪ್ರಕ್ಷುಬ್ಧತೆ ಉಂಟಾಗಬಹುದು ಎಂದೇ ಇದುವರೆಗೂ ಆಳುವವರು ಇದನ್ನು ರೂಪಿಸುವುದರಿಂದ ಹಿಂಜರಿಯುತ್ತ ಬಂದಿದ್ದರೆ. ಬಿಜೆಪಿಯು ತನ್ನ ಚುನಾವಣಾ ಪ್ರಣಾಳಿಕೆಯಲ್ಲಿ ತಾನು ಅಧಿಕಾರಕ್ಕೆ ಬಂದರೆ ಏಕರೂಪ ನಾಗರಿಕ ಸಂಹಿತೆಯನ್ನು ಜಾರಿಗೆ ತರುವುದಾಗಿ ಹೇಳಿತ್ತು. ಮೋದಿಯವರು ಮತ್ತು ಸಂಪುಟ ಸಚಿವರು ತಾವು ಇದಕ್ಕೆ ಬದ್ಧರಾಗಿರುವುದಾಗಿ ಹೇಳಿದ್ದಾರೆ.

**ಸುಪ್ರೀಂ ಕೋರ್ಟ್ ನಿಲುವೇನು**

ಸುಪ್ರೀಂ ಕೋರ್ಟ್ ಕೂಡ ಈ ಕುರಿತು ಮುಂದಡಿ ಇಡುವಂತೆ ಕೇಂದ್ರ ಸರ್ಕಾರಕ್ಕೆ ಸೂಚಿಸಿದೆ. 1985ರಲ್ಲಿ ಶಾಬಾನೋ ಪ್ರಕರಣವನ್ನು ಇತ್ಯರ್ಥಗೊಳಿಸುವ ಸಂದರ್ಭದಲ್ಲಿ, ಧಾರ್ಮಿಕ ಪ್ರಭೇದಗಳನ್ನು ಮೀರಿ ದೇಶಕ್ಕೆ ಒಂದು ಸಮಾನ ನೀತಿ ಸಂಹಿತೆಯ ಅಗತ್ಯವಿದೆ ಎಂದು ಅಭಿಪ್ರಾಯಪಟ್ಟಿತ್ತು. 2000ರಿಂದೀಚೆಗೆ ಹಲವು ತೀರ್ಪುಗಳನ್ನು ನೀಡುವ ಸಂದರ್ಭಗಳಲ್ಲಿ ಯುಸಿಸಿಯ ಅಗತ್ಯವನ್ನು ಮತ್ತೆ ಮತ್ತೆ ಪ್ರಸ್ತಾಪಿಸಿತ್ತು. "ಸಂವಿಧಾನದ ಸ್ಥಾಪಕರು ಇಚ್ಛೆಪಟ್ಟಂತೆ ಭಾರತದಾದ್ಯಂತ ನಾಗರಿಕರಿಗೆ ಏಕರೂಪದ ನಾಗರಿಕ ಸಂಹಿತೆಯನ್ನು ಖಚಿತಪಡಿಸಿಕೊಳ್ಳಲು ಸರ್ಕಾರಕ್ಕೆ ಏಕೆ ಸಾಧ್ಯವಾಗಿಲ್ಲ ಎಂದು ಪ್ರಶ್ನಿಸಿತ್ತು. ನ್ಯಾಯವಾದಿ ಅಶ್ವಿನಿ ಉಪಾಧ್ಯಾಯ ಅವರು ಹಲವು ಅರ್ಜಿಗಳನ್ನು ಸಲ್ಲಿಸಿ ಮತ್ತೆ ಮತ್ತೆ ಈ ಕುರಿತು ಕೋರ್ಟ್‌ನ ಗಮನವನ್ನು ಸೆಳೆಯುತ್ತಿದ್ದಾರೆ. 1986ರ ಮಿನರ್ವಾ ಮಿಲ್ಸ್ ಪ್ರಕರಣದಲ್ಲಿ 1996ರ ದಾಲ್ಮಿಯಾ ಸಿಮೆಂಟ್ ಪ್ರಕರಣಗಳಲ್ಲಿ ಕೂಡ, "ಮೂಲಭೂತ ಹಕ್ಕುಗಳು ಮತ್ತು ನೀತಿ ನಿರ್ದೇಶಕ ಹಕ್ಕುಗಳೇ ಸಂವಿಧಾನದ ಮೂಲ ತಳಹದಿ. ಅದನ್ನು ಪಾಲಿಸಬೇಕು", ಎಂದು ಅಭಿಪ್ರಾಯಪಟ್ಟಿರುವ ಕೋರ್ಟ್, ಯುಸಿಸಿ ಜಾರಿಯ ಅವಶ್ಯಕತೆಯನ್ನು ಒತ್ತಿ ಹೇಳಿದೆ.

**ಕಾನೂನು ಆಯೋಗದ ನಿಲುವೇನು**

2018ರಲ್ಲಿ ಕಾನೂನು ಆಯೋಗ ನೀಡಿದ ವರದಿಯಲ್ಲಿ ಈ ಅಭಿಪ್ರಾಯಗಳನ್ನು ಹೇಳಿತ್ತು. ಯುಸಿಸಿಯನ್ನು ಈ ಹಂತದಲ್ಲಿ ಕಾರ್ಯಗತಗೊಳಿಸಲು ಸಾಧ್ಯವಿಲ್ಲ. ಯುಸಿಸಿ ಜಾರಿ ಈಗ ಸಾಧ್ಯವಿಲ್ಲ ಮತ್ತು ಅದು ಒಂದು ಆಯ್ಕೆಯೂ ಆಗಲಾರದು. ಸಂವಿಧಾನ ಎಲ್ಲಾ ಬಗೆಯ ಧಾರ್ಮಿಕ ವೈಯಕ್ತಿಕ ಸಂಹಿತೆಗಳನ್ನೂ ಮಾನ್ಯ ಧಾರ್ಮಿಕ ವೈಯಕ್ತಿಕ ಸಂಹಿತೆಗಳನ್ನು ಮಾನ್ಯ ಮಾಡಿದೆ. ಜೊತೆಗೆ ಬುಡಕಟ್ಟು ಜನಂಗಗಳಿಗೆ ಮುಂತಾದವರುಗಳಿಗೆ ಅನೇಕ ಬಗೆಯ ವಿನಾಯಿತಿಗಳನ್ನು ನೀಡಿದೆ. ಸಿವಿಲ್ ಪ್ರೋಸಿಜರ್ ಕೋಡ್ ಮತ್ತು ಕ್ರಿಮಿನಲ್ ಪ್ರೋಸಿಜರ್ ಕೋಡ್‌ನಲ್ಲಿ ಸಹ ವಿನಾಯುತಿಗಳಿವೆ. ಸಮಸ್ಯೆಗಳಿಗೆ ಯುಸಿಸಿ ಪರಿಹಾರವಲ್ಲ. ಇದು ಸಂಕೀರ್ಣತೆಗಳನ್ನೂ ಪರಿಹರಿಸಲಾಗದು; ಬದಲಾಗಿ ಸಮಸ್ಯೆಗಳನ್ನು ಉಲ್ಬಣಿಸಬಹುದು. ಸಂವಿಧಾನದಲ್ಲಿರುವ 6ನೇ ಷೆಡ್ಯೂಲ್ ಬುಡಕಟ್ಟು ಸಮುದಾಯಗಳಿಗೆ ವಿಶೇಷ ಹಕ್ಕುಗಳನ್ನು ಮಾನ್ಯ ಮಾಡಿದೆ. ಏಕರೂಪ ಸಂಹಿತೆಯಲ್ಲಿ ಅದು ಪ್ರಶ್ನಾರ್ಹವಾಗುತ್ತದೆ. ಅವರ ಹಕ್ಕನ್ನು ಕಿತ್ತುಕೊಂಡಂತಾಗುತ್ತದೆ. ಇಂತ ಸಮಸ್ಯೆಗಳ ಪರಿಹಾರಕ್ಕೆ ತಕ್ಕ ಮಾರ್ಗವಿಲ್ಲದೇ ಏಕರೂಪ ಸಂಹಿತೆಯನ್ನು ಜಾರಿಗೊಳಿಸಲಾಗದು ಎಂದು ಹೇಳಿದೆ.

ಆಧಾರ: ವಿಜಯ ಕರ್ನಾಟಕ, ದಿನಾಂಕ: 16.07.2021

## 8. Supreme Court as a sentinel

Until we strengthen the institutions that make representative democracy work, we need the SC to be alert to all dangers to democracy

Speaking at the Indo-US Joint Summer Conference recently, Justice D Y Chandrachud reflected on "protecting fundamental rights in challenging times" and said "The right to life comes alive only when conditions are provided by the State for the full enjoyment of this right. The right to life is not merely about surviving, but it is to live with dignity." His exhortation should serve as the guiding principle for the State as well as the citizen.

Justice Chandrachud's address holds up a mirror to the polity and therefore to the society that we live in and the challenges that we need to respond to. It urges us as citizens and the Executive as policymakers, to examine ways to address inherent flaws in how we practice democracy from the perspective of the principles enshrined in the Constitution and to explore how we might strengthen it. The people themselves need to determine the ways in which democratic institutions local self-government above all should be redesigned.

We live in a world largely dominated by populist politics; a world that many believe is witnessing a retreat of liberalism in the face of rising nationalism. Populist politics is not just anti-elite politics or merely a majoritarian politics; or merely a majoritarian politics; in essence, it is about what kind of political discourse is advanced and how people respond to it.

Typically, the discourse is almost always that they the populist leaders and they alone represent the silent majority. It is quite simply a non-inclusionary path and constrains democracy. The risks to democracy are not immediately apparent, but it does have two negative consequences: the first is that it enables populists to claim that all other contenders for power do not have the interests of the people at heart. Populist politics is not a disagreement about policies or even about values, which ought to be completely normal in a democracy, indeed even necessary. But populist politicians almost always make the discourse personal and they make it entirely moral and that is the pattern that begins to permeate the body politic; and more importantly, gives a fillip to the rank and file amongst the followers.

The second and less obvious, consequence is that populists will also suggest that anybody who doesn't agree with their conception of the 'real' issues often of identity and belonging and therefore also tends not to support them politically, need to answer the question whether they truly belong to the mainstream in the first place.

This often manifests in political engagement that alludes to, through subtle messaging, that already vulnerable communities migrants, for instance don't truly belong here. Increasingly, this is manifesting in various forms reservation for 'sons of the soil', reservations on the basis of ethnicity or caste, domiciliary requirements to access rights-based entitlements, political affiliation or denomination-based policies and such other walls being raised to divide. A recent example is the 25% reservation of seats for locals in a prestigious law school. This pattern reproduces itself across states. As is expected of the Judiciary, the other two arms of the

State the Legislature and the Executive must also serve as counter- majoritarian institutions, rather than purveying populist majoritarian policies.

Long story short, populism isn't about anti-elitism. Any of us can criticise the elites, that does not mean we are right, nor is it in and of itself a risk to democracy. What does pose risks to democratic principles is the tendency to exclude others, undermining not just the rule of law but running counter to the basic principles of liberty, equality and fraternity. And it has real consequences on the ground, as elaborated succinctly by Justice Chandrachud.

One of the lessons that we should perhaps learn is to recognise the political business model of dividing the people, whenever it is deployed situations in which at least some citizens feel the choice is stark and they have to go with one side. Once the political firmament begins to resemble this, we must recognise that we need to strengthen voice and accountability, if we want our democracy to be true.

This isn't just about individual leaders, it has to do with the architecture of our democracy: the health and state of political parties, and of the media displaying, by design, an unmistakable lack of democracy and the domination of one or a few individuals that influence outcomes. Look at the most obvious example the state of the Congress party: the fact that it has morphed into a kind of personality cult, where no such thing as legitimate internal opposition or anything like critical loyalty seems possible anymore. Look closely at media houses, are they democratic?

It is not by default that divisive or exclusionary politics of populism emerges. Nationalism and populist politics are two different phenomena. You can be a nationalist without being anti-pluralist. As citizens, we need to make a distinction between conduct that truly undermines democracy and run-of-the-mill policy or political disagreement. To basically say that anything that a particular government does is, in and of itself, resulting in the retreat of liberalism or shrinking of democracy, only leads to a negative-sum game. The common citizen will likely say: they are damned if they do and damned if they don't, so I'm not really listening anymore.

Instead, we need to strengthen institutions, especially those that are indispensable to making representative democracy work political parties and the media and think about how these institutions might be redesigned, look different and uphold those immutable standards that help fulfill their role in India's democratic future. This is not easy. Until then, to paraphrase Justice Chandrachud: the Supreme Court has to act as the sentinel on the qui vive and respond to the call of constitutional conscience…to address the challenges of the 21st century, ranging from the pandemic to the rise of intolerance, features that we find across the world.

Courtesy: Deccan Herald , Dated: 17.07.2021

## 9. ತಾನೂ ಸಾಂವಿಧಾನಿಕ ಅಂಗವೆಂಬುದ ಮರೆಯಿತೇ ಕಾರ್ಯಾಂಗ

ಶಾಸನ ರೂಪಿಸುವ ಅಧಿಕಾರವನ್ನು ಶಾಸಕಾಂಗಕ್ಕೂ ಈ ಶಾಸನ–ಕಾನೂನುಗಳನ್ನು ಜಾರಿಗೊಳಿಸುವ ಅಧಿಕಾರವನ್ನು ಕಾರ್ಯಾಂಗಕ್ಕೂ ಈ ಕಾನೂನುಗಳನ್ನು ಉಲ್ಲಂಘಿದರೆ ಶಿಕ್ಷೆನೀಡುವ ಅಧಿಕಾರವನ್ನು ನ್ಯಾಯಾಂಗಕ್ಕೂ ನೀಡಿರುವ ಭಾರತೀಯ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಎಲ್ಲವು ಸರಿಯಾಗಿದ್ದರೆ ನೀಡಲು ಕೇಳಲು ಅನುಭವಿಸಲು ಬಲು ಸೊಗಸು. ರಾಜಾಡಳಿತವನ್ನು ಕೊನೆಗೊಳಿಸಿ ಪ್ರಜಾಪ್ರಭುತ್ವವನ್ನು ಒಪ್ಪಿಕೊಂಡಾಗ, ಅದಕ್ಕೆ ಸಂವಿಧಾನವೇ ಪರಮೋಚ್ಚ ಎಂದು ಡಾ:ಬಿ.ಆರ್. ಅಂಬೇಡ್ಕರ್ ಸಾರಿದರು. ಇಂಥ ಸಂವಿಧಾನ ಎನ್ನುವುದು ಅಂಬೇಡ್ಕರ್ ಅವರೇ ಹೇಳಿದಂತೆ ಅಕ್ಷರ ಹಾಗು ಉದ್ದಿಶ್ಯ (ಲೆಟರ್ ಆಂಡ್ ಸ್ಪಿರಿಟ್)ಎಂಬ ಎರಡು ಸ್ತರಗಳನ್ನು ಹೊಂದಿರುತ್ತದೆ. ಒಂದು ಸಂವಿಧಾನ ಎಷ್ಟೇ ಕೆಟ್ಟದಾಗಿದ್ದರೂ ಅದನ್ನು ಜಾರಿ ಮಾಡುವ ಜನರು ಸಚ್ಚಾರಿತ್ರ್ಯವಂತರಾಗಿದ್ದರೆ ಆಂತಹ ಸಂವಿಧಾನದಿಂದಲೂ ಉತ್ತಮ ಕಾರ್ಯಗಳು ನೆರವೇರುತ್ತವೆ. ಅಂತೆಯೇ ಸಂವಿಧಾನ ಎಷ್ಟೇ ಶ್ರೇಷ್ಠವಾಗಿದ್ದರೂ ಅದನ್ನು ಅನುಸರಿಸುವವರಲ್ಲೆ ಖೊಟ್ಟಿತನವಿದ್ದರೆ, ಉತ್ತಮ ಫಲಿತಾಂಶವನ್ನು ನಿರೀಕ್ಷಿಸುವುದು ಹೇಗೆ. ಈ ಕಾರಣದಿಂದಲೇ ದೇಶದ ಆಡಳಿತದಲ್ಲಿ ಸಂವಿಧಾನದ ಆಶಯಗಳನ್ನು ಕಾಪಾಡಲು ಶಾಸಕಾಂಗ, ಕಾರ್ಯಾಂಗ ಮತ್ತು ನ್ಯಾಯಾಂಗ ಎಂಬ ಮೂರು ಅಂಗಗಳನ್ನು ರೂಪಿಸಲಾಯಿತು.

ಈ ಅಂಗಗಳೆಲ್ಲವೂ ತಮ್ಮದೇ ಇತಿಮಿತಿಯ ಕಾರ್ಯ ವ್ಯಾಪ್ತಿಯಲ್ಲಿ ಅದುವೇ ಸುಪ್ರೀಂ ಎಂಬುದರಲ್ಲಿ ಎರಡು ಮಾತಿಲ್ಲ. ಆದರೆ ಒಂದರ ಮೇಲೆ ಮತ್ತೊಂದು ಎಂದು ಸವಾರಿ ಮಾಡಬಾರದು ಎಂಬುದು ಸಂವಿಧಾನದ್ದೇ ಆಶಯ. ಆಗಲೇ ಅದು ಚೆನ್ನ.

ಹೀಗಿದ್ದರೂ, ಸಂವಿಧಾನದ ಮೂರು ಅಂಗಗಳಲ್ಲಿ ಯಾವುದು ಹೆಚ್ಚು ಯಾವುದು ಕಡಿಮೆ ಎಂಬ ಚರ್ಚೆ ಇಂದು ನಿನ್ನೆಯದಲ್ಲ ಆದು ನಡೆಯುತ್ತಲೇ ಇದೆ. 1984ರಲ್ಲಿ ನಡೆದ ಸಂವಿಧಾನ ರಚನಾ ಸಭೆಯಲ್ಲಿ ಭಾರತೀಯ ಸಂವಿಧಾನದ ಮೂರು ಅಂಗಗಳಲ್ಲೂ ಅಮೆರಿಕದ ರೀತಿ ಸಂಪೂರ್ಣ ಸ್ವಾತಂತ್ರ್ಯವಿರಬೇಕು ಎಂಬ ಚರ್ಚೆ ನಡೆದಿತ್ತು. ಬಿಹಾರದ ಕೆ.ಟಿ. ಷಾ ಎಂಬ ಸದಸ್ಯರು ಈ ಕುರಿತು ಪ್ರಸ್ತಾವನೆಯೊಂದನ್ನು ಮಂಡಿಸುತ್ತಾರೆ. ಸಂಸದೀಯ ವ್ಯವಸ್ಥೆಯಲ್ಲಿ ಶಾಸಕಾಂಗ, ಕಾರ್ಯಾಂಗ ಹಾಗೂ ನ್ಯಾಯಾಂಗದ ನಡುವೆ ಕೆಲವು ಕಡೆಗಳಲ್ಲಿ ಸಂಬಂಧವಿರುತ್ತದೆ. ಆದರೆ, ಅಧ್ಯಕ್ಷೀಯ ವ್ಯವಸ್ಥೆಯಲ್ಲಿ ಮೂರು ವ್ಯವಸ್ಥೆಗಳು ಸಂಪೂರ್ಣ ಸ್ವತಂತ್ರವಾಗಿರುತ್ತವೆ. ಇಂಗ್ಲೆಂಡ್ ಸೇರಿ ಅನೇಕ ಕಡೆಗಳಲ್ಲಿ ಮೂರು ಶಕ್ತಿಗಳು ರಾಜನಲ್ಲಿ ಒಟ್ಟುಗೂಡಿದ್ದರಿಂದಾಗಿ ಆನೇಕ ಸಾಮಾಜಿಕ ಸಮಸ್ಯೆಗಳು ಉಂಟಾದವು. ಮೂರು ಅಂಗಗಳ ನಡುವೆ ಸಂಪೂರ್ಣ ಸ್ವಾತಂತ್ರ್ಯ ಇರುವುದು ದೇಶದ ಹಿತದಿಂದ ಒಳ್ಳೆಯದು. ಉದಾಹರಣೆಗೆ ಉನ್ನತ ನ್ಯಾಯಾಂಗ ಹಾಗೂ ಶಾಸಕಾಂಗದ ನಡುವೆ ವರ್ಗಾವಣೆಗಳು ಇದ್ದವು ಎಂದಿಟ್ಟುಕೊಂಡರೆ ಇಡೀ ಕಾನೂನು ವಿಶ್ಲೇಷಣೆ ಪ್ರಕ್ರಿಯೇ ಪಕ್ಷ ರಾಜಕಾರಣದ ಆಧಾರದಲ್ಲಿ ನಡೆದುಬಿಡಬಹುದು. ನ್ಯಾಯಾಂಗ ಹಾಗೂ ಕಾರ್ಯಾಂಗದ ನಡುವೆ ಸಂಪರ್ಕ ಇದ್ದರೆ ಅದು ನ್ಯಾಯಾಂಗದ ಪ್ರಕ್ರಿಯೆಯ ಮೇಲೆ ಹಾಗೂ ಸಂವಿಧಾನದ ಅರ್ಥೈಸುವಿಕೆಯ ಮೇಲೆ ಪ್ರಭಾವ ಬೀರಬಹುದು ಎಂಬುದು ಸೇರಿ ಅನೇಕ ವಾದಗಳನ್ನು ಮಂಡಿಸಿದರು.

ಈ ಪ್ರಸ್ತಾವನೆಗೆ ಕರ್ನಾಟಕದ ಮೈಸೂರಿನಿಂದ ಸಂವಿಧಾನ ರಚನಾ ಸಮಿತಿಗೆ ಆಯ್ಕೆಯಾಗಿದ್ದ ಕೆಂಗಲ್ ಹನುಮಂತಯ್ಯನವರು ನಯವಾದ ತಿರಸ್ಕಾರವನ್ನು ಸಲ್ಲಿಸುತ್ತಾರೆ. ನಾವು ಈಗಾಗಲೇ ಸಂಸದೀಯ ಪ್ರಜಾಪ್ರಭುತ್ವವನ್ನು ಒಪ್ಪಿಕೊಂಡಿದ್ದು ಅದಕ್ಕೆ ಅನುಗುಣವಾಗಿಯೆ ಎಲ್ಲ ವಿಚಾರಗಳು ಇರಬೇಕು. ಸಂಪೂರ್ಣ ಸ್ವತಂತ್ರವಾದ ಮೂರು ಸ್ತಂಭಗಳನ್ನು ಹೊಂದುವುದರಿಂದ ಸಂಘರ್ಷಗಳು ತಲೆದೋರುವುದು ಹೆಚ್ಚು. ಇಂತಹ ಸಂಘರ್ಷಗಳು ದೇಶಕ್ಕೆ ಮಾರಕ. ಅಮೆರಿಕದಲ್ಲಿ ಮೇಲ್ನೋಟಕ್ಕೆ ಮೂರು ಅಂಗಗಳು ಪ್ರತ್ಯೇಕವಾಗಿದ್ದರೂ ಅಲ್ಲಿ ಅತ್ಯಂತ ಸಂಘಟಿತವಾದ ಎರಡು ರಾಜಕೀಯ ಪಕ್ಷಗಳಿವೆ.

ನ್ಯಾಯಾಂಗ ಹಾಗೂ ಕಾರ್ಯಾಂಗದ ಜೊತೆಗೆ ಏಳುವ ಸಂಘರ್ಷಗಳನ್ನು ಈ ಪಕ್ಷಗಳು ತಮ್ಮ ಸಭೆಗಳಲ್ಲಿ ನಿರ್ಮೂಲನೆ ಮಾಡಿಕೊಳ್ಳುತ್ತವೆ. ದೇಶದ ಹಿತದೃಷ್ಟಿಯಿಂದ ಈ ಸಂಘರ್ಷಗಳು ಹೆಚ್ಚಾಗದಂತೆ ನೋಡಿಕೊಳ್ಳುತ್ತವೆ ಎನ್ನುತ್ತಾರೆ. ಒಟ್ಟಾರೆಯಾಗಿ ಭಾರತದಲ್ಲಿ ಸಂಸದೀಯ ವ್ಯವಸ್ಥೆಯೇ ಉನ್ನತವಾದದ್ದು ಎಂಬುದನ್ನು ಹನುಮಂತಯ್ಯನವರು ಪ್ರತಿಪಾದಿಸುತ್ತಾರೆ. ಸಂಸದೀಯ ವ್ಯವಸ್ಥೆಯಲ್ಲಿಯೇ ಲೋಪದೋಷಗಳ ಹೊರತಾಗಿಯೂ ಕೆಂಗಲ್ ಅವರ ಮಾತನ್ನು ಸಮ್ಮತಿಸುವುದಾಗಿ ಪ್ರೊ:ಶಿಬ್ಬನ್ ಲಾಲ್ ಸಕ್ಸೇನಾ ಅವರು ತಿಳಿಸುತ್ತಾರೆ.

ನಂತರ ಮಾತನಾಡುವ ಡಾ: ಬಿ.ಆರ್. ಅಂಬೇಡ್ಕರ್ ಅವರು ಅಮೆರಿಕದಲ್ಲಿ ಕಾರ್ಯಾಂಗ ಹಾಗೂ ನ್ಯಾಯಾಂಗದ ನಡುವೆ ಕಟ್ಟುನಿಟ್ಟಿನ ವಿಭಜನೆ ಇರುವುದು ನಿಜ. ಆದರೆ ಇಷ್ಟು ನಿಷ್ಠೂರ ವಿಂಗಡಣೆಯಿಂದ ಸಾಕಷ್ಟು ತೊಂದರೆಗಳೆ ಆಗುತ್ತಿವೆ ಎಂಬುದು ಇತ್ತೀಚೆಗೆ ಅಮೆರಿಕದಲ್ಲಿ ನಡೆಯುತ್ತಿರುವ ಚರ್ಚೆಗಳನ್ನು ಗಮನಿಸಿದರೆ ತಿಳಿಯುತ್ತದೆ ಎಂಬುದು ಸೇರಿದಂತೆ ಅನೇಕ ವಾದಗಳನ್ನು ಮುಂದಿಡುತ್ತಾರೆ.

ಒಟ್ಟಾರೆಯಾಗಿ, ಈ ಎಲ್ಲ ಚರ್ಚೆಯ ಸಾರವೇನೆಂದರೆ ನಮ್ಮ ಮೂರು ಅಂಗಗಳು ತಮ್ಮ ತಮ್ಮ ಕಾರ್ಯದಲ್ಲಿ ಸ್ವತಂತ್ರವಾದರೂ ಪರಸ್ಪರ ಸಾಮರಸ್ಯದಿಂದ ಕಾರ್ಯನಿರ್ವಹಿಸಬೇಕಷ್ಟೆ. ಆದರೆ ಆ ರೀತಿ ಸಾಮರಸ್ಯದಿಂದ ಎಲ್ಲವು ಸುಲಲಿತವಾಗಿ ನಡೆಯುತ್ತಿದೆಯೇ ಎಂದರೆ, ಅದು ಇನ್ನು ಸಾಧ್ಯವಾಗಿಲ್ಲ ಎಂದು ಹೇಳಲೇಬೇಕಾಗುತ್ತದೆ.

ನಮ್ಮ ವ್ಯವಸ್ಥೆಯ ಮೂರು ಅಂಗಗಳ ನಡುವಿನ ಸಂಘರ್ಷ ಹಿಂದಿನಿಂದಲೂ ಇದೆ. ಏಕೆ ಹೀಗಾಗುತ್ತದೆ ಎಂಬುದನ್ನು ತುಸು ವ್ಯವಹಾರಿಕವಾಗಿಯೇ ವಿಶ್ಲೇಷಿಸೋಣ. ಯಾವುದೇ ಪ್ರಜಾತಂತ್ರ ವ್ಯವಸ್ಥೆಯಲ್ಲಿ ಚುನಾಯಿತ ಶಾಸಕಾಂಗ ಎಲ್ಲದಕ್ಕೂ ಮೇಲಿರಬೇಕು. ಮೇಲಿರುತ್ತದೆ ಕೂಡ. ಏಕೆಂದರೆ ಎಲ್ಲ ವ್ಯವಸ್ಥೆಯಲ್ಲೂ ಜನಪ್ರತಿನಿಧಿಗಳು (ಶಾಸಕಾಂಗ) ಮಾತ್ರ. ಜನರಿಗೆ ಉತ್ತರದಾಯಿಗಳಾಗಿರುವರೇ ವಿನಹ ಅಲ್ಲಿನ ಕಾರ್ಯಾಂಗ, ನ್ಯಾಯಾಂಗವಲ್ಲ. ಶಾಸಕಾಂಗ ರೂಪಿಸಿದ ಕಾಯಿದೆ ಕಟ್ಟಲೆಗಳ ಕಾವಲುಗಾರನಾಗಿ ನ್ಯಾಯಾಂಗ ಕೆಲಸ ಮಾಡುತ್ತಿರುತ್ತದೆ. ಹಾಗಾಗಿ, ಸಂಸತ್ತು ಹರಿಯುವ ಶಾಸನಗಳಲ್ಲಿ ಸಂವಿಧಾನದ ಅಂಶಗಳಿಗೆ ರಕ್ಷಣೆ ಸಿಕ್ಕಿದೆಯೇ ಎಂಬುದನ್ನು ನ್ಯಾಯಾಂಗ ಒರೆಗಲ್ಲಿಗೆ ಹಚ್ಚುತ್ತಲೇ ಇರುತ್ತದೆ. ಇಂಥ ಹೊತ್ತಲ್ಲಿ ನಿಜವಾಗಿಯೂ ಇಕ್ಕಟ್ಟಿಗೆ ಸಿಲುಕುವುದು ಕಾರ್ಯಾಂಗವೇ ಎಕೆಂದರೆ ಜನಪ್ರತಿನಿಧಿಗಳ ಒತ್ತಡಕ್ಕೆ ಮಣಿದು ಸಂವಿಧಾನದ ಆಶಯಗಳಿಗೆ ವಿರುದ್ಧವಾದ ಅನೇಕ ಅದೇಶಗಳನ್ನು ಅಧಿಕಾರಿಗಳು ಹೊರಡಿಸುತ್ತಿರುತ್ತಾರೆ. ಇಂತಹ ವಿಚಾರ ನ್ಯಾಯಾಲಯದ ಮೆಟ್ಟಿಲೇರಿದಾಗ ಅಲ್ಲಿ ನ್ಯಾಯಾಧೀಶರ ಕೆಂಗಣ್ಣಿಗೆ ಗುರಿಯಾಗಿ, ಕಟಕಟೆಯಲ್ಲಿ ನಿಲ್ಲಬೇಕಾದ ಪರಿಸ್ಥಿತಿ ಬರುತ್ತದೆ. (ಈ ವಿಷಯದಲ್ಲಿ ಅಪವಾದಗಳು ಉಂಟು. ಚುನಾವಣಾ ಅಕ್ರಮ ಎಸಗಿದ ಕಾರಣಕ್ಕೆ ಮಹಾನ್ ಇಂದಿರಾ ಗಾಂಧಿ ಅವರನ್ನೆ ಕಟಕಟೆಯಲ್ಲಿ ನಿಲ್ಲಿಸಿ ಅಪರಾಧಿ ಎಂದು ನ್ಯಾಯಾಲಯ ಸಾರಿತ್ತು).

ಇಂಥ ಪ್ರಕರಣಗಳು ನಡೆದಾಗಲೆಲ್ಲಾ ಕಾರ್ಯಾಂಗ ಅಥವಾ ಅಧಿಕಾರಿ ವರ್ಗದ ಸ್ಥಾನಮಾನ ಏನು ಎಂಬುದು ಸ್ಪಷ್ಟವಾಗುತ್ತದೆ ಹಾಗೂ ಈ ಸಂಗತಿಗಳೇ, ಕಾರ್ಯಾಂಗ ಎಂಬುದು ಉಳಿದ ಎರಡು ಅಂಗಗಳಂತೆ ಪ್ರಬಲವಾಗಿ ತನ್ನ ಸ್ವಾತಂತ್ರ್ಯವನ್ನು ಉಳಿಸಿಕೊಂಡಿಲ್ಲ. ಜವಾಬ್ದಾರಿಯನ್ನು ನಿರ್ವಹಿಸುತ್ತಿಲ್ಲ ಎಂಬುದನ್ನು ಮನವರಿಕೆ ಮಾಡಿಕೊಡುತ್ತದೆ. ಶಾಸಕಾಂಗದ ಆದೇಶಗಳನ್ನು ಪಾಲನೆ ಮಾಡಲು ಮಾತ್ರ ಇರುವ ಇಂಪ್ಲಿಮೆಂಟಿಂಗ್ ಏಜೆನ್ಸಿಯಾಗಿಯಷ್ಟೆ ಇರಲು ಅನೇಕ ಬಾರಿ ಕಾರ್ಯಾಂಗವು ಇಚ್ಛಿಸುತ್ತದೆ. ನೀತಿ ನಿರೂಪಣೆಯಲ್ಲಿ ತನ್ನ ಪಾತ್ರ ಎಳ್ಳಷ್ಟು ಇಲ್ಲವೇನೋ ಎಂಬುದನ್ನು ಬಿಂಬಿಸಿಕೊಳ್ಳುತ್ತದೆ. ಇದು ಅದರ ಘನತೆಗೆ ತಕ್ಕದಲ್ಲ. ಯಾವುದೇ ಒಂದು ಅಂಗ ಸಾಂವಿಧಾನಿಕ ಬದ್ಧತೆಯಿಂದ ಹೊರಳಿದರೆ ಅದನ್ನು ಪ್ರಶ್ನಿಸುವ ಹಾಗೂ ಸರಿದಾರಿಗೆ ತರುವ ಕೆಲಸವನ್ನು ಕಾರ್ಯಾಂಗವು ಮಾಡಬೇಕು.

ಸಂವಿಧಾನ ರಚನಾ ಸಭೆಯಲ್ಲಿ ಚರ್ಚೆಯಾಗಿರುವಂತೆ, ಸಿದ್ಧಾಂತದಿಂದ ಹೊರಳುವ ಹೆಚ್ಚು ಅಪಾಯ ಶಾಸಕಾಂಗಕ್ಕೆ ಹೆಚ್ಚು. ಏಕೆಂದರೆ ಅದು ಪಕ್ಷಾಧಾರಿತ ವ್ಯವಸ್ಥೆಯಲ್ಲಿ ಕೆಲಸ ಮಾಡುತ್ತಿರುತ್ತದೆ.

ಶಾಸಕಾಂಗ ದಾರಿ ತಪ್ಪಿದಾಗಲೆಲ್ಲ ಹೆಚ್ಚು ಕೋಪಗೊಳ್ಳುವುದು ಹಾಗೂ ಅದನ್ನು ಸರಿದಾರಿಗೆ ತರುವ ಕೆಲಸವನ್ನು ನ್ಯಾಯಾಂಗ ಮಾಡುತ್ತಿದೆಯೇ ಹೊರತು ಕಾರ್ಯಾಂಗವಲ್ಲ. ಇದಕ್ಕೂ ತನಗೂ ಸಂಬಂಧವೇ ಇಲ್ಲ ಎಂಬಂತೆ ಕಾರ್ಯಾಂಗ ಮೂಲ ಪ್ರೇಕ್ಷಕನಂತೆ ಕುಳಿತಿದೆ.

ಕಾರ್ಯಾಂಗದ ಈ ಮೌನದಿಂದ ಏನಾಗುತ್ತಿದೆ ಎಂಬುದನ್ನು ಅರಿಯಬೇಕು ಎಂದರೆ, ಕರ್ನಾಟಕದ ಇತ್ತೀಚಿನ ಉದಾಹರಣೆಯನ್ನೇ ತೆಗೆದುಕೊಳ್ಳೋಣ "ಕೆರೆಯಂ ಕಟ್ಟಿಸು ಬಾವಿಯಂ ತೋಡಿಸು" ಎಂಬ ಜನಪದ ಇತಿಹಾಸವನ್ನು ಹೊಂದಿರುವ ನಮ್ಮ ರಾಜ್ಯದಲ್ಲಿ ಕೆರೆಗಳನ್ನೇ ರಿಯಲ್ ಎಸ್ಟೇಟ್ ದಂಧೆಕೋರರು ನುಂಗಿದ್ದಾರೆ. ಈ ರಿಯಲ್ ಎಸ್ಟೇಟ್ ದಂಧೆಯಲ್ಲಿ ಇರುವವರು ಇಲ್ಲವೇ ಇದಕ್ಕೆ ಬೆನ್ನೆಲುಬಾಗಿ ನಿಂತಿರುವವರು ಶಾಸಕಾಂಗದ ಪ್ರತಿನಿಧಿಗಳು ಎಂಬುದು ಕಾರ್ಯಾಂಗಕ್ಕೆ (ಅಧಿಕಾರಿಗಳಿಗೆ) ಗೊತ್ತಿರದ ಸಂಗತಿ ಏನಿಲ್ಲ. ಚೆನ್ನಾಗಿಯೆ ಗೊತ್ತು. ಆದರೂ ಏನು ಮಾಡುವುದಿಲ್ಲ. ಅಂತಿಮವಾಗಿ ನ್ಯಾಯಾಂಗ ಚಾಟಿ ಬೀಸುತ್ತಿರುವುದರಿಂದಷ್ಟೆ ಕಾರ್ಯಾಂಗ (ಅಧಿಕಾರಿಗಳು) ಕೆರೆಗಳ ಸಂರಕ್ಷಣೆಗೆ ಸಮಿತಿ ರಚಿಸುವ ಒತ್ತುವರಿ ತೆರವುಗೊಳಿಸುವ ಕಾರ್ಯಕ್ಕೆ ಮುಂದಾಗುತ್ತದೆ. ಅಲ್ಲಿಯೂ ಒಂದೇ ಆದೇಶವನ್ನು ಪದೇ ಪದೇ ಹೊರಡಿಸಿದರೂ ಜಾರಿಯೇ ಆಗುವುದಿಲ್ಲ. ಮುಂದಿನ ವಿಚಾರಣೆ ವೇಳೆಗೆ ಒತ್ತುವರಿ ತೆರವಾಗಿರದಿದ್ದರೆ ಅಧಿಕಾರಿ ಕಟಕಟೆಯಲ್ಲಿ ನಿಲ್ಲಬೇಕಾಗುತ್ತದೆ ಎಂದು ನ್ಯಾಯಾಧೀಶರು ಎಚ್ಚರಿಸಿದ ನಂತರವಷ್ಟೆ ಕೆಲಸ ಆಗಿರುತ್ತದೆ. ಇದು ಒಂದು ಉದಾಹರಣೆ ಅಷ್ಟೆ. ಅಕ್ರಮ ಗಣಿಗಾರಿಕೆ, ರಾಜಕಾಲುವೆ ಒತ್ತುವರಿ, ಅಕ್ರಮ ಲೇಔಟ್‌ಗಳಿಂದ ಮೊದಲುಗೊಂಡು ಪ್ಲಾಸ್ಟಿಕ್ ನಿಷೇಧದವರೆಗೆ ಎಲ್ಲದಕ್ಕೂ ನ್ಯಾಯಾಂಗವೇ ಕಿವಿ ಹಿಂಡಬೇಕು ಎಂದು ಕಾಯುವುದೇಕೆ. ಸಾಂವಿಧಾನಿಕವಲ್ಲದ ಆದೇಶಗಳನ್ನು ತಾನು ಜಾರಿಗೊಳಿಸಲಾರೆ ಎಂದು ಕಾರ್ಯಾಂಗ ಕಟ್ಟುನಿಟ್ಟಾಗಿ ಹೇಳುತ್ತಿಲ್ಲವೇಕೆ ಈ ಅಂಗದಲ್ಲಿ ಕೆಲಸ ಮಾಡಿರುವ ಮಾಡುತ್ತಿರುವ ಪ್ರಾಜ್ಞರು ಯೋಚಿಸಲಿ.

ಈ ಮೇಲಿನ ಚರ್ಚೆಗೆ ತುಸು ವಿರೋಧಾಭಾಸದಂತೆ (ಮೇಲ್ನೋಟಕ್ಕೆ) ಕಾಣುವ ಇನ್ನೊಂದು ಸಂಗತಿಯತ್ತ ಗಮನಹರಿಸೋಣ. ಹಾಗೆ ನೋಡಿದರೆ, ಇದು ನನ್ನ ಈ ಹಿಂದಿನ ವಿಸ್ತಾರ ಅಂಕಣದಲ್ಲಿ ಚರ್ಚಿಸಿದ ಆಡಳಿತಾತ್ಮಕ ಸೇವೆಗಳ ಕುರಿತ ಚುಂಗು ಎಂದುಕೊಳ್ಳಿ.

ಎಲ್ಲರಿಗೂ ಗೊತ್ತಿರುವಂತೆ, ಶಾಸನಸಭೆಗಳು ರೂಪಿಸಿದ ಕಾಯಿದೆ ಕಾನೂನುಗಳನ್ನು ಪಾಲನೆ ಮಾಡುವುದು ಮತ್ತು ಜನ ಕಲ್ಯಾಣಕ್ಕಾಗಿ ಸರ್ಕಾರಗಳು ರೂಪಿಸುವ ಯೋಜನೆಗಳನ್ನು ಜನತೆಯ ಮನೆ ಬಾಗಿಲಿಗೆ ತಲುಪಿಸಿ ಜನ ಸೇವಕರಾಗುವುದೇ ಕಾರ್ಯಾಂಗದ ಕಾಯಕ. ಈ ಮಾತು ಗ್ರಾಮ ಪಂಚಾಯಿತಿಯ ಕಾರಕೂನನಿಂದ ಹಿಡಿದು ಜಿಲ್ಲಾಧಿಕಾರಿ, ಸೆಕ್ರಟರಿ ಆದಿಯಾಗಿ ಐಎಎಸ್‌ಗಳವರೆಗೂ ಅನ್ವಯ. ಹೀಗಿದ್ದರೂ ಐಎಎಸ್‌ಗಳಿಗೆ ದರ್ಪ ಬರುವುದು ಎಲ್ಲಿಂದ, ಕೋಡು ಮೂಡುವುದು ಹೇಗೆ ಮತ್ತು ಏಕೆ ಎಂಬ ಪ್ರಶ್ನೆ ಮೂಡುತ್ತದೆ. ಈ ಐಎಎಸ್‌ಗಳಿಗೆ ಗರಿಷ್ಠ ಅಧಿಕಾರ ಇರುವುದು ಗರಿಷ್ಠದಕ್ಷತೆಯಿಂದ ಕೆಲಸ ಮಾಡುವುದಕ್ಕೆ ವಿನ: ದರ್ಪ ದೌಲತ್ತು ತೋರುವುದಕ್ಕಲ್ಲ. ಈಗಂತೂ ಕೆಲ ಮಂತ್ರಿಗಳು ಐಎಎಸ್ ಅಧಿಕಾರಿಗಳಿಗೆ ಸರ್ ಸರ್ ಎನ್ನುತ್ತ ಡೊಗ್ಗು ಸಲಾಮು ಹಾಕುವುದನ್ನು ನೋಡಿದರೆ ಅಯ್ಯೋ ಪಾಪ ಎನಿಸುತ್ತದೆ. ನಮ್ಮ ವ್ಯವಸ್ಥೆ ತಲುಪುತ್ತಿರುವ ಅಧೋಗತಿ ನೋಡಿ ಮರುಕ ಹುಟ್ಟುತ್ತದೆ. ಸರ್ಕಾರಿ ಜಾಹೀರಾತುಗಳಲ್ಲಿ ಅಮಂತ್ರಣ ಪತ್ರಿಕೆಗಳಲ್ಲಿ ಅ ಅಧಿಕಾರಿಗಳ ಫೋಟೊ ಮತ್ತು ಹೆಸರನ್ನು ಜನಪ್ರತಿನಿಧಿಗಳಿಗೆ ಸರಿಸಮನಾಗಿ ಮುದ್ರಿಸುವುದೆಂದರೆ ನಮ್ಮ ಪ್ರಜಾತಂತ್ರ ವ್ಯವಸ್ಥೆಗೆ ಮಾಡುವ ಘೋರ ಅಪಮಾನ. ಈ ವ್ಯವಸ್ಥೆ ಎಲ್ಲಿ, ಯಾವಾಗಿನಿಂದ ಆರಂಭವಾಯಿತು. ತುಸು ಯೋಚನೆ ಮಾಡುವುದು ಬೇಡವೇ.

1980 ರಿಂದ 1983ರವರೆಗೆ ನಮ್ಮ ರಾಜ್ಯದ ಮುಖ್ಯಮಂತ್ರಿಯಾಗಿದ್ದ ಆರ್. ಗುಂಡೂರಾಯರ ಆಡಳಿತ ಕಾಲದ ಒಂದು ಘಟನೆ. ಕಳೆದ ವಾರ ಇದೇ ವಿಸ್ತಾರ ಕಾಲಂ ಓದಿದ ನಂತರ ಹಿರಿಯ ನಾಯಕರೊಬ್ಬರು ನನ್ನೊಂದಿಗೆ ಹಂಚಿಕೊಂಡ ಸಂಗತಿ ಇದು. ರೈತ ಸಂಘದ ಮುಖಂಡ

ಪ್ರೊ:ಎಂ.ಡಿ.ನಂಜುಂಡಸ್ವಾಮಿ ಅವರ ಆಗ್ರಹದ ಮೇರೆಗೆ ಮುಖ್ಯಮಂತ್ರಿ ಗುಂಡೂರಾಯರು ರೈತ ನಾಯಕರ ಸಭೆಯೊಂದನ್ನು ಕರೆದಿದ್ದರು. ಮುಖ್ಯಮಂತ್ರಿಗಳು ಮತ್ತು ನಂಜುಂಡಸ್ವಾಮಿ ಅವರು ಆ ಸಭೆಗೆ ಹೋಗುವಷ್ಟರಲ್ಲಿ ಅಲ್ಲಿದ್ದ ಐಎಎಸ್ ಅಧಿಕಾರಿಗಳು ಪೀಠ ಅಲಂಕರಿಸಿದ್ದರು. ಅದನ್ನು ಕಂಡು ಗರಂ ಆದ ಎಂಡಿಎನ್ ಈ ಸರ್ಕಾರಿ ಕೂಲಿಗಳಿಗೆ ಇಲ್ಲೇನು ಕೆಲಸ ಎಂದು ಕೆಂಡಾಮಂಡಲರಾದರು. ಎಂಡಿಎನ್ ಸಿಟ್ಟನ್ನು ನೋಡಿ ರಾಯರು ವಿಧಿಯಿಲ್ಲದೆ ಅವರೆಲ್ಲರನ್ನು ಆಚೆ ಕಳುಹಿಸಿ ರೈತ ನಾಯಕರೊಂದಿಗೆ ಸಭೆ ನಡೆಸಿದರಂತೆ.

ಹಾಗೆಯೇ ಸಮಾಜವಾದಿ ಚಿಂತಕ ಶಾಂತವೇರಿ ಗೋಪಾಲಗೌಡರದ್ದು ಮತ್ತೊಂದು ಪ್ರಸಂಗ. ಗೋಪಾಲ ಗೌಡರು ಖಡಕ್ ನಡವಳಿಕೆಗೆ ಹೆಸರಾದವರು. ತಾನು ಬರುವಾಗ ತನ್ನೆದುರು ಕಾಲಮೇಲೆ ಕಾಲು ಹಾಕಿ ಕುಳಿತ ಐಎಎಸ್ ಒಬ್ಬರ ಕಾಲರಿಗೆ ತಮ್ಮ ಕೈಲಿದ್ದ ಜಲ್ಲುವನ್ನು (ದಂಡ) ಹಿಡಿದು ಎದ್ದು ನಿಲ್ಲಿಸಿದ್ದರು. ಹಾಗೆ ಮಾಡುವುದು ಗೋಪಾಲ ಗೌಡರಂತಹ ಖಡಕ್ ವ್ಯಕ್ತಿಗೆ ಮಾತ್ರ ಸಾಧ್ಯ.

ಇದು ಜನಸೇವೆಯ ವಿಷಯದಲ್ಲಿ, ಜನಪ್ರತಿನಿಧಿಗಳ ವಿಷಯದಲ್ಲಿ ನಮಗೆ ಯಾವ ಕಲ್ಪನೆ ಮತ್ತು ಭಾವನೆ ಬರಬೇಕೆಂಬುದರ ದ್ಯೋತಕವಾಗಿ ಸಾಂಕೇತಿಕವಾಗಿ ಮಾತ್ರ ಇಟ್ಟುಕೊಳ್ಳೋಣ. ಜನಪ್ರತಿನಿಧಿಗಳ ಎದುರು ಅಧಿಕಾರಿಗಳು ಹೇಗೆ ಸೌಜನ್ಯದಿಂದ ವರ್ತಿಸಬೇಕೆಂಬುದಕ್ಕೆ ಮಾತ್ರ ಸೀಮಿತವಾಗಿಟ್ಟುಕೊಳ್ಳೋಣ.

ಈ ಹಿಂದೆ ಜನಪ್ರತಿನಿಧಿಗಳಾಗುತ್ತಿದ್ದವರಲ್ಲಿ ಬಹುತೇಕರು ಹೆಚ್ಚು ಶಿಕ್ಷಣವನ್ನು ಪಡೆದಿರುತ್ತಿರಲಿಲ್ಲ. ಆದರೆ ಅಧಿಕಾರಿಗಳಿಂದ ಕೆಲಸ ತೆಗೆಯುವ ವಿಷಯದಲ್ಲಿ ಅನುಭವ ಹಾಗೂ ಆಗ್ರಹ ಎರಡು ಇರುತ್ತಿತ್ತು. ಆದರೆ ಇಂಥ ವಿಷಯದಲ್ಲಿ ಇಂದಿನ ಜನಪ್ರತಿನಿಧಿಗಳು ಆತ್ಮಾವಲೋಕನ ಮಾಡಿಕೊಳ್ಳಬೇಕಿದೆ. ಹಾಗೆಯೇ ಅಂದಿನ ಇಂದಿನ ಅಧಿಕಾರಿಗಳ ಆಲೋಚನೆ ಮತ್ತು ವರ್ತನೆಯಲ್ಲಿ ಅಜಗಜಾಂತರವಿದೆ. ಅಧಿಕಾರಿಗಳು ಎಷ್ಟೇ ದೊಡ್ಡವನಿದ್ದರೂ ಅನಾಮಿಕತ್ವದ ಶಿಷ್ಟಾಚಾರ ಬಿಡಬಾರದು. ಎಲ್ಲ ಕೆಲಸ ಮಾಡಿಯೂ ಅದರ ಶ್ರೇಯಸ್ಸನ್ನು ಶಾಸಕಾಂಗಕ್ಕೆ ಬಿಡಬೇಕೇ ಹೊರತು ಕೀರ್ತಿಯನ್ನು ತನ್ನ ಮುಡಿಗೇರಿಸಿಕೊಳ್ಳುವ ತೆವಲಿಗೆ ಬೀಳಬಾರದು.

**ಒಮ್ಮೊಮ್ಮೆ ಹೀಗೂ ಅನಿಸುವುದುಂಟು**. ನಮ್ಮ ಜನಪ್ರತಿನಿಧಿಗಳು ಕೂಡ ಪ್ರಾಮಾಣಿಕರನ್ನು ನಿರ್ಲಕ್ಷಿಸುತ್ತಿರುವುದು. ಕೆಲ ಅಧಿಕಾರಿಗಳ ಜನಬೆಂಬಲದ ಗೀಳಿಗೆ ಕಾರಣವಾಯಿತೆ. ಅನೇಕ ಅಧಿಕಾರಿಗಳು ಎಲೆಮರೆಯ ಕಾಯಾಗಿ ಉತ್ತಮ ಕೆಲಸ ಮಾಡುತ್ತಿರುತ್ತಾರೆ. ಅಂಥವರನ್ನು ಆಡಳಿತಗಾರರು ಏಕಾಏಕಿ ವರ್ಗ ಮಾಡಿ ತಾಪತ್ರಯ ಉಂಟು ಮಾಡುತ್ತಾರೆ. ನ್ಯಾಯನಿಷ್ಠುರ ಅಧಿಕಾರಿಗಳನ್ನು ಬೇಕಾಬಿಟ್ಟಿ ವರ್ಗಾವಣೆ ಮಾಡುತ್ತಾರೆ. ಅಂತಹ ಅಪಾಯದಿಂದ ಪಾರಾಗಲು ಕೆಲ ಅಧಿಕಾರಿಗಳು ಜನ ಬೆಂಬಲದ ಮೊರೆ ಹೋಗುತ್ತಾರೆ. ಈಗಂತೂ ಸಾಮಾಜಿಕ ಜಾಲತಾಣಗಳು, ಮಾಧ್ಯಮಗಳು ಅಂಥವರ ನೆರವಿಗೆ ಬರುತ್ತಿವೆ.

ಅಧಿಕಾರಿಗಳಲ್ಲಿ ಎರಡು ವಿಧ, ಮೊದಲ ಗುಂಪಿನವರು ಕಾಯಿದೆ ಹೆಸರಲ್ಲಿ ಆಡಳಿತಾತ್ಮಕ ವಿಚಾರಗಳನ್ನು ಕ್ಲಿಷ್ಟ ಮಾಡುತ್ತಿದ್ದಾರೆ. ರೂಲ್ ಬುಕ್ ಬಿಟ್ಟು ಅಚೀಚೆ ನೋಡುವುದೇ ಇಲ್ಲ. ಎರಡನೇ ಗುಂಪಿನವರು ಒಂದೋ ಕಾಯಿದೆ ಹೆಸರಲ್ಲಿ ನಿರ್ಭಾವುಕರಾಗುತ್ತಾರೆ. ಇಲ್ಲ ಎಲ್ಲ ನೀತಿ ನಿಯಮಗಳನ್ನು ಗಾಳಿಗೆ ತೂರಿ ಅನುಕೂಲ ಸಿಂಧು ನೀತಿಗೆ ಜೋತುಬೀಳುತ್ತಿದ್ದಾರೆ ಹಾಗಾದರೆ ಆಡಳಿತ ಜನಪರ ಆಗುವ ದಾರಿ ಎಂತು.

ಲೇಖಕರು:ಹರಿಪ್ರಕಾಶ್, ಕೋಣೆಮನೆ,

ಆಧಾರ : ವಿಜಯ ಕರ್ನಾಟಕ, ದಿನಾಂಕ: 17.07.2021.

## 10. Karnataka has to work hard on Jal Jeevan Mission

The Jal Jeevan Mission is the Central Government's flagship programme to provide clean drinking water tap connections to all rural households by 2024. The Centre is constantly monitoring its implementation and has directed the Karnataka government to pull up its socks and be in tune with national progress. Union Jal Shakti Minister Gajendra Singh Shekhawat, who is driving the project, told TNSE that Karnataka is a slow-progressing state and needs to work hard. On the Mekedatu project, the minister says that both Karnataka and Tamil Nadu should sit together and resolve it. Excerpts from an interview:

**What is the Centre's stand on the Mekedatu project?**

It is a historical dispute between Karnataka and Tamil Nadu. The Government of India has to be impartial and do justice to all states. We will work on that principle.

**Karnataka has made it clear that Mekedatu is a drinking water project and will not have any impact on release of Tamil Nadu's share of water?**

It (the dispute) should be a subject of hydrology and engineering, but unfortunately it has become a subject of emotions and politics. It is not a healthy development. A final decision has to be taken with the consensus of all the states. We will discuss it with all and get it done.

**Will you make that effort? Will you be calling a meeting anytime soon?**

Certainly, it's my duty. If required, we can call a meeting. Also, if the states are not agreeing due to some political reasons, we have to identify other options. Resources cannot be wasted because of resistance of one or the other state. Ultimately, any issue can be resolved through discussion. Both states should sit together and discuss it.

**The perception here is that TN is putting pressure and that is why the Centre is going slow?**

No, I don't think so. The matter is sub-judice as states have challenged it in Apex Court.

**How is Karnataka's performance as regards Jal Jeevan Mission?**

Karnataka is a slow-progressing state. We reviewed its implementation with the CM and officers and told them what exactly is the situation in the country and what is being done in Karnataka. We told them to speed up its implementation. The national average has reached almost 41%, whereas in Karnataka, it is around 34%. They need to work hard.

**The state has set a target of 25 lakh connections in this financial year. Will that bring the state on par with the national average?**

They should work hard to achieve it. It is not unachievable and it can be done, provided they work hard.

**Any specific aspects the state needs to focus on?**

Jal Jeevan Mission is not only a programme of infrastructure creation for water supply. Many districts in Karnataka lack sustainable sources. They need to prepare for it. Service

delivery is the most important part of the mission. Functionality or service delivery depends on three different components — quantity, quality and frequency. Quantity is fixed at 55 Litres Per Capita per Day. The prescribed quality has to be ensured and regularity has to be maintained. When we conducted a nationwide survey by a third party, we found that Karnataka is doing okay in quantity and regularity standards. In those aspects, it is performing good, but still, a lot needs to be done in terms of quality standards. There is contamination in ground water.

**What is being done to ensure that quality standards is maintained?**

Quality is important as you should know and it is your right to know the quality of water you are drinking. We have decided to have one accredited laboratory to check water quality in all districts across the country. We have given money to states. In the next stage, we will take them to block level.

**It is considered the most ambitious project of the Modi Government. What is the total cost of the project; are you confident of achieving the 2024 target?**

We have set 2024 as the target and the way we are going ahead, I am sure we will complete the Rs 3,60,000 crore project within that time. Of that, Rs 2,40,000 crore will be spent by the Government of India and the remaining by state governments.

**What is the status of declaring the Upper Bhadra project as a national project?**

Giving national project status is a prerogative of the Prime Minister or Cabinet. The issue has not reached the competent authority yet. There were some observations from the Central Water Commission and that was fulfilled by the state. The Investment Committee and Technical Committee has cleared it. Now, we need to go through other formalities. There is a Group of Secretaries, which assesses the project and its potential and they recommend it to the cabinet for declaring it as a national project. Currently, it is in that stage.

**(Karnataka and Maharashtra are demanding notification of the Krishna River Water Tribunal order.)** The cases are in the SC.

Courtesy: The New Indian Express – Dated: 18.07.2021

## 11. ವಿಧಾನಮಂಡಲ ಕಲಾಪಕ್ಕೆ ಬರ

ರಾಜ್ಯ ವಿಧಾನಮಂಡಲ ಕಲಾಪಗಳು ಜನದನಿಯಾಗಿರುವುದರ ಜೊತೆಗೆ ಜನಸಮಸ್ಯೆಗಳ ಪರಿಹಾರದ ವೇದಿಕೆಯಾಗಬೇಕೆಂಬುದು ಸಂವಿಧಾನ ತಜ್ಞರು ಹಾಗೂ ರಾಜಕೀಯ ಪಂಡಿತರ ನಿರೀಕ್ಷೆ. ಸಾರ್ವಜನಿಕ ವಲಯದ ಎಲ್ಲಾ ವಿದ್ಯಮಾನಗಳು ಸದನದಲ್ಲಿ ಪ್ರತಿಧ್ವನಿಸಿದಾಗ ಮಾತ್ರವೇ ಜನತಂತ್ರ ವ್ಯವಸ್ಥೆಗೊಂದು ಶೋಭೆ. ಶಾಸನಸಭೆಗಳ ಬಗ್ಗೆ ನಿರೀಕ್ಷೆಗಳೇನೋ ಬೆಟ್ಟದಷ್ಟಿವೆ. ಆದರೆ, ವಾಸ್ತವ ಸ್ಥಿತಿಯೇ ಬೇರೆ. ಪ್ರತಿ ವರ್ಷ 60 ದಿನ ಕಲಾಪ ನಡೆಯಬೇಕೆಂಬ ಕೂಗು ಗಿರಿಮುಟ್ಟದ ನರಿ ಕೂಗಿನಂತಾಗಿದೆ. ನಡೆದಷ್ಟು ದಿನವಾದರೂ ಕಲಾಪ ನೆಟ್ಟಗೆ ನಡೆದೀತೆ? ಎಂಬ ಪ್ರಶ್ನೆಗೆ ಉತ್ತರ 'ಇಲ್ಲ' ಎಂಬುದೇ. ವಿಧಾನಮಂಡಲದ ಮುಂಗಾರು ಅಧಿವೇಶನ ಬೆಳಗಾವಿಯಲ್ಲಿ ನಡೆಯಬೇಕೆಂಬ ಬೇಡಿಕೆಯ ಬೆನ್ನಲ್ಲೇ ಎಲ್ಲಾದರೂ ಸರಿಯೇ ಅಧಿವೇಶನ ನಡೆಯಲೆಂಬುದು ಸದ್ಯದ ಒಕ್ಕೊರಲ ಬೇಡಿಕೆಯಂತೂ ಹೌದು.

**ಜನತಂತ್ರ ವ್ಯವಸ್ಥೆ ರಕ್ಷಣೆಗೆ ಅಧಿವೇಶನ ಅನಿವಾರ್ಯ**

ಸಂಸದೀಯ ಮತ್ತು ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ವಿಧಾನಮಂಡಲದ ಅಧಿವೇಶನಕ್ಕೆ ಅತ್ಯಂತ ಮಹತ್ವವಿದೆ. ಸರ್ಕಾರದ ನೀತಿ, ನಿರೂಪಣೆ ಜೊತೆಗೆ ಸರ್ಕಾರದ ಉತ್ತರದಾಯಿತ್ವದ ಹೊಣೆಯೂ ಅಡಗಿದೆ. ರಾಜ್ಯದ ಜ್ವಲಂತ ಸಮಸ್ಯೆಗಳ ಬಗ್ಗೆ ಸಮಗ್ರ ಚರ್ಚೆಗೆ ಸದನವೇ ಅತ್ಯುನ್ನತ ವೇದಿಕೆ ಎಂಬುದು ಮೇಲ್ಮನೆ ಸಭಾಪತಿಯಾಗಿದ್ದ ವಿ.ಆರ್.ಸುದರ್ಶನ್ ಅವರ ಅಭಿಮತ.

ರಾಜ್ಯದ ಆಡಳಿತ ಮತ್ತು ಅಭಿವೃದ್ಧಿಗೆ ಸಂಬಂಧಪಟ್ಟಂತೆ, ರಾಜ್ಯದ ಆಗುಹೋಗುಗಳ ಬಗ್ಗೆ ಅಧಿವೇಶನದಲ್ಲಿ ಚರ್ಚಿಸುವ ಅಗತ್ಯವಿದೆ. ಅಲ್ಲಿ ಚರ್ಚೆ ಆದಾಗ ಅದರ ಪ್ರಯೋಜನ ಸರ್ಕಾರಕ್ಕೆ ಹಾಗೂ ಜನರಿಗೂ ಆಗುತ್ತದೆ. ಅಧಿಕಾರಿಗಳ ಜವಾಬ್ದಾರಿ ಬಗ್ಗೆಯೂ ಅರಿವಾಗುತ್ತದೆ. ಹಾಗಾಗಿ ನಾವೇ ರೂಪಿಸಿಕೊಂಡಿರುವ ನಿಯಮದಂತೆ ವರ್ಷಕ್ಕೆ ಕನಿಷ್ಠ 60 ದಿನಗಳ ಕಾಲ ಅಧಿವೇಶನ ನಡೆಯಬೇಕಿದೆ. ಈ ಸಂಬಂಧ ಸರ್ಕಾರ ತನ್ನ ಇಚ್ಛಾಶಕ್ತಿ ಪ್ರದರ್ಶಿಸಬೇಕಿದೆ. ಅಧಿವೇಶನ ರಾಜ್ಯದ ಜನಹಿತದ ದೃಷ್ಟಿಯಿಂದ ಅನಿವಾರ್ಯ. ಶಾಸಕರಿಗೆ ಇರುವ ಒಳ್ಳೆಯ ಅವಕಾಶ ಹಾಗೂ ವೇದಿಕೆ ಅಂದರೆ ಅದು ಅಧಿವೇಶನ. ಮಂತ್ರಿಗಳಿಗೂ ತಮ್ಮ ಇಲಾಖೆ ಜವಾಬ್ದಾರಿಗಳ ಬಗ್ಗೆ ಮಾತನಾಡುವ ಅವಕಾಶ. ಅದರಲ್ಲೂ ವಿಪಕ್ಷಗಳ ಸದಸ್ಯರು ಮಾತನಾಡಲು ಸರ್ಕಾರದ ಮತ್ತು ಜನರ ಸಮಸ್ಯೆಗಳ ಬಗ್ಗೆ ಗಮನ ಸೆಳೆಯಲು ಇರುವ ಏಕೈಕ ವೇದಿಕೆಯೂ ಹೌದು. ಹಾಗಾಗಿಯೇ ಕಾಂಗ್ರೆಸ್ ಆಡಳಿತಾವಧಿಯಲ್ಲಿ ಕನಿಷ್ಠ 60 ದಿನಗಳ ಕಾಲ ಅಧಿವೇಶನ ನಡೆಯುವಂತೆ ನಿಯಮ ರೂಪಿಸಿದ್ದೆವು. ಆದರೆ ಅದು ಪಾಲನೆ ಆಗದಿರುವುದು ದುರದೃಷ್ಟಕರ.

ಈ ನಿಟ್ಟಿನಲ್ಲಿ ವರ್ಷಕ್ಕೆ ನಾಲ್ಕು ಬಾರಿ ಅಧಿವೇಶನ ನಡೆಸಲು ತೀರ್ಮಾನಿಸಿದ್ದೆವು. ಜನವರಿಯಲ್ಲಿ ರಾಜ್ಯಪಾಲರ ಭಾಷಣ, ಮಾರ್ಚ್‌ನಲ್ಲಿ ಬಜೆಟ್ ಅಧಿವೇಶನ, ಜುಲೈನಲ್ಲಿ ಇಲಾಖಾವಾರು ಪ್ರಗತಿ ಚರ್ಚೆಗೆ ಮುಂಗಾರು ಅಧಿವೇಶನ ಹಾಗೂ ನವೆಂಬರ್ ಅಥವಾ ಡಿಸೆಂಬರ್‌ನಲ್ಲಿ ಬೆಳಗಾವಿಯಲ್ಲಿ ಸೀಮಿತ ದಿನಗಳ ಚಳಿಗಾಲದ ಅಧಿವೇಶನ. ಹೀಗೆ ಒಟ್ಟಾರೆ 60 ದಿನಗಳ ಕಾಲ ಹಂಚಿಕೆಯಾಗುವಂತಿದೆ. ನಾವೇ ನಿಯಮ ಮಾಡಿಕೊಂಡಿದ್ದೇವೆ. ಆದರೆ ಜಾರಿಯಾಗದಿರುವುದು ಸರಿಯಲ್ಲ. ಕೆಲವು ತಿದ್ದುಪಡಿಗಳನ್ನಾದರೂ ತಂದು ಜನರ ಉತ್ತರದಾಯಿತ್ವದ ದೃಷ್ಟಿಯಿಂದ ಅಧಿವೇಶನ ನಡೆಯಲೇಬೇಕಿದೆ. ಸಭಾಧ್ಯಕ್ಷರು, ಸಭಾಪತಿಗಳು ಕೂಡಾ ಅಧಿವೇಶನ ನಡೆಸಲು ಸರ್ಕಾರಕ್ಕೆ ಮೌಖಿಕವಾಗಿ ಹಾಗೂ ಪತ್ರ ಮುಖೇನ ಮನವರಿಕೆ ಮಾಡಿಕೊಡಬೇಕಾಗುತ್ತದೆ. ಇಲ್ಲವೇ ವಿಶೇಷ ಮಂಡಳಿ ಸಭೆ ಕರೆದು ಸಿಎಂ, ಕಾನೂನು ಸಂಸದೀಯ ಸಚಿವರ ಗಮನಕ್ಕೆ ತರುವ ಪ್ರಯತ್ನವನ್ನಾದರೂ ಮಾಡಬೇಕಾಗುತ್ತದೆ. ಅಧಿವೇಶನ ನಡೆಸುವ ಬಗ್ಗೆ ಹೊಸ ಶಾಸಕರ ಸಹಿತ ಯಾವೊಬ್ಬ ಶಾಸಕರಿಂದಲೂ ಸರ್ಕಾರಕ್ಕೆ ಒತ್ತಡ ಬಂದಿಲ್ಲ ಎನ್ನುವುದೂ ಉಲ್ಲೇಖಾರ್ಹ. ಯುವ ಶಾಸಕರು ಸದನದ ಬಗ್ಗೆ ಆಸಕ್ತಿ ಹೊಂದಬೇಕು. ಕ್ಷೇತ್ರದ ಸಮಸ್ಯೆಗಳನ್ನು ಕಲಾಪದಲ್ಲಿ ಪ್ರಸ್ತಾಪಿಸಿ ಅದನ್ನು ರಾಜ್ಯದ ಸಮಸ್ಯೆಯಾಗಿ ಬಿಂಬಿಸುವ ಅವಕಾಶವಿದೆ. ಒಟ್ಟಾರೆ ಸರ್ಕಾರಕ್ಕೆ ಅಧಿವೇಶನ ನಡೆಸುವ ಇಚ್ಛಾಶಕ್ತಿ ಇರಬೇಕಾಗುತ್ತದೆ. ರಾಜ್ಯದ ನೆಲಜಲ ವಿಷಯ ಸೇರಿದಂತೆ ಸಾಕಷ್ಟು ಜ್ವಲಂತ ಸಮಸ್ಯೆಗಳಿವೆ. ಇದೆಲ್ಲದರ ಬಗ್ಗೆ ಅಧಿವೇಶನದಲ್ಲಿ ಚರ್ಚಿಸಿ ಇಡೀ ರಾಜ್ಯದ ಧ್ವನಿಯಾಗಿ ನಿರ್ಣಯ ಅಂಗೀಕರಿಸಿ ನೆರೆರಾಜ್ಯ ಅಥವಾ ಕೇಂದ್ರದ ಮೇಲೆ ಒತ್ತಡ ಹೇರಲು ಅಧಿವೇಶನ ನಡೆಸುವುದು ಅತ್ಯಗತ್ಯವಾಗಿದೆ.

ಸರ್ಕಾರದ ನೀತಿ ನಿರೂಪಣೆ ಜೊತೆಗೆ ಕೈಗೊಂಡ ಕಾರ್ಯಕ್ರಮಗಳ ಅನುಷ್ಠಾನ, ಪ್ರಗತಿ ಬಗ್ಗೆಯೂ ಅಧಿವೇಶನ ಪರಾಮರ್ಶೆ ಮಾಡಬೇಕಿದೆ. ಅವಶ್ಯಕ ಕಾಯ್ದೆಗಳ ತಿದ್ದುಪಡಿ, ಮಸೂದೆ ಮಂಡನೆ, ಹಣಕಾಸು ನಿರ್ವಹಣೆ ಮತ್ತಿತರ ಬಗ್ಗೆ ಸರ್ಕಾರ ಆಸಕ್ತಿ ವಹಿಸಬೇಕು. ಸರ್ಕಾರ, ವಿರೋಧಪಕ್ಷ, ಅಧಿಕಾರಿವರ್ಗಗಳ ಒಟ್ಟಾರೆ ಕಾರ್ಯನಿರ್ವಹಣೆಯ ಸಮಗ್ರ ಸಂದೇಶ ರಾಜ್ಯದ ಜನತೆಗೆ ತಲುಪಬೇಕಿದೆ. ಇದು ಎಲ್ಲರ ಉತ್ತರದಾಯಿತ್ವದ ಪ್ರಶ್ನೆಯಾಗಿದೆ. ಹಾಗಾಗಿ ವಿಧಾನಮಂಡಲದ ಅಧಿವೇಶನ

ನಡೆಯಲೇಬೇಕು. ಕಳೆದೆರಡು ದಶಕಗಳಿಂದ 60 ದಿನಗಳ ಕಾಲ ಕಲಾಪ ನಡೆಯದಿರುವುದು ವಿಷಾದನೀಯ ಸಂಗತಿ. ಇನ್ನಾದರೂ ಸರ್ಕಾರ ನಿಯಮಗಳಿಗೆ ಸೂಕ್ತ ತಿದ್ದುಪಡಿ ತಂದು 60 ದಿನಗಳ ಅಧಿವೇಶನ ಕಡ್ಡಾಯವಾಗಿಸಬೇಕು. ಅಷ್ಟೇ ಅಲ್ಲ ಅದು ಜಾರಿಯಾಗುವಂತೆ ನೋಡಿಕೊಳ್ಳಬೇಕು, ಹಾಗಾದಲ್ಲಿ ಮಾತ್ರ ಪ್ರಜಾಪ್ರಭುತ್ವ ಹಾಗೂ ಸಂಸದೀಯ ವ್ಯವಸ್ಥೆಗೆ ಅರ್ಥಬರಲು ಸಾಧ್ಯವಿದೆ.

**ಶಾಸನಸಭೆ ನಡೆಸುವುದು ಬದ್ಧತೆ ಮಾತ್ರವಲ್ಲ ಕರ್ತವ್ಯ ಕೂಡ**

ಆಗ ನಾನು ಹೈಸ್ಕೂಲ್‌ನಲ್ಲಿ ಓದುತ್ತಿರುವ ದಿನಗಳು. ಸಂಯುಕ್ತ ಕರ್ನಾಟಕದ ಮುಖಪುಟದಲ್ಲಿ ಭಾವಚಿತ್ರವನ್ನು ಪ್ರಕಟಿಸಲಾಗಿತ್ತು. ದೇವೇಗೌಡರು ತಲೆಯ ಮೇಲೆ ಶಾಲು ಹೊದ್ದು ಹೈಕೋರ್ಟ್ ಮುಂದಿನ ಪಾರ್ಕ್‌ನಲ್ಲಿ ಕೆಲವು ದಾಖಲೆಗಳ ಸಹಿತ ಅಧ್ಯಯನ ಮಾಡುತ್ತಿದ್ದರು. ವಿಧಾನಸಭೆಯ ಸದಸ್ಯರಾಗಿದ್ದ ಅವರು ಅವತ್ತು ನಡೆಯುತ್ತಿದ್ದ ಅಧಿವೇಶನದಲ್ಲಿ ಏನು ಮಾತನಾಡಬೇಕು ಎಂಬ ಬಗೆಗೆ ಬಿಡುವಿನ ವೇಳೆಯಲ್ಲಿ ಅಧ್ಯಯನ ಮಾಡುತ್ತಿದ್ದರು. ಆ ಘಟನೆ ನನ್ನ ಮೇಲೆ ಅಗಾಧ ಪರಿಣಾಮ ಬೀರಿತು. ಮುಂದೊಂದು ದಿನ ನಾನು ಶಾಸಕನಾಗಬೇಕು ಎಂಬ ಸ್ಫೂರ್ತಿ ತುಂಬಿತು. ಈ ಘಟನೆಯನ್ನು ಇಲ್ಲಿ ಪ್ರಸ್ತಾಪಿಸಲು ಕಾರಣ ವಿಧಾನಮಂಡಲದ ಅಧಿವೇಶನಗಳು ಯಾವ ರೀತಿ ನಡೆಯಬೇಕು ಎಂಬುದಕ್ಕೆ ಇಂತಹ ಘಟನೆಗಳು ಮಾದರಿಯಾಗಬೇಕು ಎನ್ನುವುದು ವಿಧಾನ ಪರಿಷತ್ ಸದಸ್ಯ ಅರುಣ ಶಹಾಪುರ ಅವರ ಆಶಯ.

ಕರ್ನಾಟಕ ವಿಧಾನಮಂಡಲದ ಅಧಿವೇಶನ 60 ದಿನಗಳ ಕಾಲ ವಾರ್ಷಿಕ ನಡೆಯಬೇಕು ಎಂಬುದು ಕಾನೂನು. ಈ ಕಾನೂನನ್ನು ಮಾಡಿರುವುದು ಇದೇ ಶಾಸನಸಭೆ. ಯಾವುದೇ ಪಕ್ಷ ಅಧಿಕಾರದಲ್ಲಿದ್ದರು ಕೂಡ ಇದನ್ನು ಜಾರಿಗೊಳಿಸಲು ಶಾಸನಸಭೆಗೆ ಆಗುತ್ತಿಲ್ಲ.

ಪಕ್ಷ ರಾಜಕಾರಣದಲ್ಲಿ ಪರಸ್ಪರ ಆರೋಪ ಮಾಡುವುದು ಸಹಜ. ಆದರೆ ಶಾಸನಸಭೆ 60 ದಿನಗಳ ಕಾಲ ನಡೆಸುವಲ್ಲಿ ಎಲ್ಲ ಸರ್ಕಾರಗಳು ವಿಫಲವಾಗಿವೆ. ನನಗೆ ನೆನಪಿರುವಂತೆ ಸಿದ್ದರಾಮಯ್ಯನವರು ಅಧಿಕಾರಕ್ಕೆ ಬಂದ ಮೊದಲ ವರ್ಷ ಒಂದು ಸಲ ನಿರಂತರ 30 ದಿನಗಳ ಕಾಲ ಅಧಿವೇಶನ ನಡೆದಿತ್ತು. ಅದಾದ ನಂತರ ಸಿದ್ದರಾಮಯ್ಯ ಅವರನ್ನು ಸೇರಿ ಇವತ್ತಿನ ತನಕ ಯಾರಿಗೂ ಕೂಡ ಹಾಗೆ ನಡೆಸಲು ಸಾಧ್ಯವಾಗಿಲ್ಲ.

ಇಂದಿನ ಕೊರೋನಾ ಸಂದರ್ಭದಲ್ಲಿ ಅಧಿವೇಶನ ನಡೆಸುವುದು ಕಷ್ಟ ಎಂಬ ಮಾತುಗಳು ಕೇಳಿಬರುತ್ತಿವೆ. ವಿಧಾನಸಭೆಯ ಅಧ್ಯಕ್ಷರಾದ ವಿಶ್ವೇಶ್ವರ ಹೆಗಡೆ ಕಾಗೇರಿಯವರು ಹಾಗೂ ವಿಧಾನಪರಿಷತ್ತಿನ ಸಭಾಪತಿಗಳಾದ ಬಸವರಾಜ ಹೊರಟ್ಟಿ ಅವರು ಸುದೀರ್ಘ ಕಾಲದಿಂದ ಉಭಯ ಸದನಗಳಲ್ಲಿ ಕೆಲಸ ಮಾಡಿದ ಅತ್ಯಂತ ಹಿರಿಯ ಅನುಭವಿಗಳು. ಅಷ್ಟೇ ಮಾತ್ರವಲ್ಲ ಉತ್ತಮ ಸಂಸದೀಯ ಪಟುಗಳು ಕೂಡ. ಇಬ್ಬರು ಮಹನೀಯರು ವಿಧಾನಮಂಡಲದ ನೇತೃತ್ವ ವಹಿಸಿಕೊಂಡ ಬಳಿಕ ಘನತೆ ಮತ್ತು ಸಂಸದೀಯ ವ್ಯವಸ್ಥೆಯ ಬಗೆಗೆ ವಿಶ್ವಾಸ ಹೆಚ್ಚಿದೆ. ಹೀಗಾಗಿ ಇವರಿಬ್ಬರ ನೇತೃತ್ವದಲ್ಲಿ ಈಗಾಗಲೇ ಕೊರೊನಾ ನಡುವೆಯೂ ಉತ್ತಮ ರೀತಿಯಲ್ಲಿ ಅಧಿವೇಶನ ನಡೆದಿದೆ. ಇನ್ನು ಮುಂದೆಯೂ ಕೂಡ ಮಾದರಿ ರೀತಿಯಲ್ಲಿ ಇವರಿಬ್ಬರು ಅಧಿವೇಶನವನ್ನು ನಡೆಸುವುದರಲ್ಲಿ ಅನುಮಾನವೇ ಇಲ್ಲ. ಇನ್ನು ವಿಧಾನಮಂಡಲ ಉಭಯ ಸದನಗಳ ನಿಯಮಾವಳಿಗಳನ್ನು ಗಮನಿಸಿದರೆ ಸುದೀರ್ಘ ಕಾಲದ ಅಧಿವೇಶನ ನಡೆದರೆ ಮಾತ್ರ ಹೊಸ ಶಾಸನಗಳ ರಚನೆ ಹಾಗೂ ಉತ್ತಮ ಚರ್ಚೆಗಳನ್ನು ನಡೆಸಲು ಸಾಧ್ಯ. ಅನೇಕ ಸಲ ಪ್ರಶ್ನೋತ್ತರ ವೇಳೆಯಲ್ಲಿ ಉದ್ಭವಿಸುವ ಹೊಸ ವಿಷಯಗಳನ್ನು ಗಮನ ಸೆಳೆಯುವ ಸೂಚನೆಗಳ ಮುಖಾಂತರ ವಿವರವಾಗಿ ಚರ್ಚಿಸಲು ಸಾಧ್ಯವಾಗುತ್ತದೆ. ಆದರೆ ಇತ್ತೀಚಿನ ವರ್ಷಗಳಲ್ಲಿ ಅಧಿವೇಶನ ಕೇವಲ ವಾರ ಅಥವಾ ಎರಡು ವಾರಕ್ಕೆ ಸೀಮಿತಗೊಳ್ಳುತ್ತಿರುವುದರಿಂದ ಅರ್ಥಪೂರ್ಣ ಚರ್ಚೆಗಳು ನಡೆಯಲು ಸಾಧ್ಯವಾಗುತ್ತಿಲ್ಲ. ಇದರಿಂದ ಸದನದ ಮೌಲ್ಯ ಮತ್ತು ಘನತೆ ಕುಸಿಯುತ್ತಿದೆ.

ಶಾಸನ ಸಭೆಯ ಮೂಲ ಉದ್ದೇಶವೇ ಶಾಸನ ರಚನೆ. ಆದರೆ ಶಾಸನ ರಚನೆಗೆ ಅಥವಾ ಶಾಸನ ಸಂಬಂಧಿ ವಿಚಾರಗಳಿಗೆ ಹೆಚ್ಚು ಸಮಯ ಅವಕಾಶ ಸಿಗದೇ ಕೇವಲ ರಾಜಕೀಯ ಇಲ್ಲವೇ ವೈಯಕ್ತಿಕ ವಿಚಾರಗಳ ಮೇಲೆ ಚರ್ಚೆಗೆ ಹೆಚ್ಚು ಸಮಯವನ್ನು ಪಕ್ಷಾತೀತವಾಗಿ ನಾವೇ ಹಾಳು ಮಾಡುತ್ತಿದ್ದೇವೆ. ವಿರೋಧ ಪಕ್ಷ ಎಂಬುದು ಸರ್ಕಾರ ಮತ್ತು ಆಡಳಿತದಲ್ಲಿನ ನ್ಯೂನತೆಗಳನ್ನು ಎತ್ತಿ ತೋರಿಸಲಿ ಎಂಬುದು ಪ್ರಜಾಪ್ರಭುತ್ವದ ಅಂತಃಸತ್ವ. ಆದರೆ ಒಂದು ಸಲ ಅಧಿಕಾರಕ್ಕೆ ಬಂದ ಮೇಲೆ ವಿರೋಧಪಕ್ಷದ ನೈಜ ಮಹತ್ವವನ್ನು ಆಡಳಿತಪಕ್ಷ ಮರೆಯುತ್ತದೆ. ಆಡಳಿತದಿಂದ ವಿರೋಧಪಕ್ಷಕ್ಕೆ ಹೋದ ಮೇಲೆ ಅದರ ನಿಜವಾದ ನೋವು ಅರಿವಾದರೂ ಸಮಯ ಮೀರಿರುತ್ತದೆ. ಹಿಂದಿನ ದಶಕಗಳಲ್ಲಿ ಮೌಲ್ಯಯುತ ಚರ್ಚೆ ಹಾಗೂ ನಡವಳಿಕೆಗೆ ಅವಕಾಶ ಇದ್ದುದರಿಂದಲೇ ಹೆಚ್.ಡಿ.ದೇವೆಗೌಡ, ಬಿ.ಎಸ್.ಯಡಿಯೂರಪ್ಪ, ಸಿದ್ದರಾಮಯ್ಯ, ಮಲ್ಲಿಕಾರ್ಜುನ ಖರ್ಗೆಯಂತಹ ಹಿರಿಯ ನಾಯಕರು ಉದ್ಭವಿಸಲು ಸಾಧ್ಯವಾಯಿತು. ಆದರೆ, ಪ್ರಸಕ್ತ ದಿನಗಳಲ್ಲಿ ಹೊಸ ನಾಯಕನ ಉದಯವಾಗಲು, ಹೊಸ ಶಾಸಕರಲ್ಲಿ ಅಡಗಿರುವ ಪ್ರತಿಭೆ ಹೊರಬರಲು ಸೂಕ್ತ ವೇದಿಕೆಯಾದ ವಿಧಾನಮಂಡಲ ಅಧಿವೇಶನ ನಡೆಯುತ್ತಿಲ್ಲ ಎನ್ನುವುದಾದರೆ ಭವಿಷ್ಯದ ಪ್ರಜಾಪ್ರಭುತ್ವದ ಗುಣಮಟ್ಟವನ್ನು ನಿರೀಕ್ಷಿಸಲು ಹೇಗೆ ಸಾಧ್ಯ? ಆದ್ದರಿಂದ ವರ್ಷಕ್ಕೆ 60 ದಿನಗಳ ಕಾಲ ಮಾತ್ರವಲ್ಲ, ಅದಕ್ಕಿಂತ ಹೆಚ್ಚು ದಿನಗಳು ಅಧಿವೇಶನ ನಡೆಯಬೇಕು. ಉತ್ತರ ಕರ್ನಾಟಕದಲ್ಲಿ ಅಧಿವೇಶನ ನಡೆದಾಗ ಸಮಗ್ರ ಕರ್ನಾಟಕದ ದೃಷ್ಟಿಯಿಂದ ಚರ್ಚೆ ನಡೆಸಬೇಕು. ಬೆಂಗಳೂರಿನ ವಿಧಾನಸೌಧದಲ್ಲಿ ಅಧಿವೇಶನ ನಡೆದಾಗ ಉತ್ತರ ಕರ್ನಾಟಕವನ್ನು ಒಳಗೊಂಡ ಸಮಗ್ರ ಕರ್ನಾಟಕದ ಪ್ರಗತಿಯ ಚಿಂತೆ ನಡೆಯಬೇಕು. ಅದು ನಮ್ಮ ಪ್ರಜಾಪ್ರಭುತ್ವದ ನಿಜವಾದ ಆಶಯ.

**ಸದನದ ಘನತೆ ಹೆಚ್ಚಳ ಚಿಂತನೆಗೆ ಈಗ ಸಕಾಲ**

ಶಾಸನ ಸಭೆಗಳು ನಿರರ್ಥಕ ಕಲಾಪಗಳ ಸಭೆಗಳಾಗಿರುವ ಈ ಹೊತ್ತಿನಲ್ಲಿ ವರ್ಷಕ್ಕೆ ವಿಧಾನಮಂಡಲದ ಕಲಾಪಗಳನ್ನು ಅರವತ್ತು ದಿನಗಳ ಕಾಲ ನಡೆಸಬೇಕೆಂಬ ನಿರೀಕ್ಷೆಯೇ ಅರ್ಥ ಕಳೆದುಕೊಂಡಿದೆ. ನಿಯಮಾವಳಿಗಳ ಪ್ರಕಾರ 60 ದಿನಗಳ ಕಲಾಪ ನಡೆಸಬೇಕು ನಿಜ. ಆದರೆ, ಇತ್ತೀಚಿನ ವರ್ಷಗಳಲ್ಲಿ ಸರ್ಕಾರಗಳು ರಚನೆಯಾಗುತ್ತಿರುವ ಬಗೆಯೇ ಅಷ್ಟು ದಿನಗಳ ಕಲಾಪ ನಡೆಯದಿರುವುದಕ್ಕೆ ಪ್ರಮುಖ ಕಾರಣವಾಗಿದೆ.

ಈಚೆಗೆ ಶಾಸನಸಭೆಗಳಲ್ಲಿ ಉತ್ತಮವಾದ ರೀತಿಯ ಚರ್ಚೆಗಳಿಗೆ ಅವಕಾಶವೇ ಇಲ್ಲದಂತಾಗಿದೆ. ಇನ್ನು ವಿರೋಧ ಪಕ್ಷಗಳಿಗೆ ವಿಷಯಾಧಾರಿತ ಚರ್ಚೆಗೆ ಹೆಚ್ಚಿನ ಕಾಲಾವಕಾಶವೇ ಸಿಗುತ್ತಿಲ್ಲ. ಅಧಿಕೃತ ವಿರೋಧ ಪಕ್ಷಕ್ಕೆ ಸಿಗುವಷ್ಟು ಕಾಲ–ಮನ್ನಣೆ ಅನ್ಯ ವಿಪಕ್ಷಗಳಿಗೆ ಸಿಗದು. ಎಲ್ಲಕ್ಕಿಂತ ಮಿಗಿಲಾಗಿ ಗುಣಮಟ್ಟದ, ಜನಪರವಾದಂತಹ, ಅರ್ಥಪೂರ್ಣ ಚರ್ಚೆಗಳು ಶಾಸನಸಭೆಗಳಲ್ಲಿ ನಡೆದರೆ ಎಲ್ಲರೂ ಆಸಕ್ತಿಯಿಂದ ಕಿವಿಗೊಟ್ಟು ಕೇಳುತ್ತಾರೆ, ಪ್ರತಿಸ್ಪಂದಿಸಿ ತಮ್ಮ ಅಭಿಪ್ರಾಯಗಳನ್ನೂ ವ್ಯಕ್ತಪಡಿಸುತ್ತಾರೆ. ಆದರೆ, ಈಗೀಗ ಅಂತಹ ಸ್ಪಂದನಶೀಲ, ಆಸಕ್ತಿದಾಯಕ ಚರ್ಚೆಗಳೇ ನಡೆಯುತ್ತಿಲ್ಲ. ಹಾಡಿದ್ದನ್ನೇ ಹಾಡೋ ಕಿಸಬಾಯಿದಾಸ ಎಂಬಂತೆ ಮಾತಾಡುವಂತಹ ಸದಸ್ಯರು ಹೇಳಿದ್ದನ್ನೇ ತಿರುಗಿಮುರುಗಿ ಹೇಳುವುದರಿಂದ ಕಲಾಪದಲ್ಲಿ ಪಾಲ್ಗೊಳ್ಳುವ ಶಾಸಕರಿಗೆ ಕುಳಿತು ಕೇಳುವ ಆಸಕ್ತಿಯೇ ಬರುವುದಿಲ್ಲ. ಇದು ನನಗಾದ ಸ್ವಂತ ಅನುಭವ. ಮಾಜಿ ಮುಖ್ಯಮಂತ್ರಿಯಾಗಿ, ಶಾಸಕನಾಗಿ ನನಗೇ ಶಾಸನಸಭೆಗಳ ಬಗ್ಗೆ ನಿರಾಸಕ್ತಿ ಮೂಡಲೂ ಇದೇ ಕಾರಣ. ಹಾಗಾಗಿ ಸದನದ ಕಲಾಪದಲ್ಲಿ ಹೆಚ್ಚೆಚ್ಚು ಪಾಲ್ಗೊಳ್ಳಬೇಕು, ಚರ್ಚೆಯಲ್ಲಿ ತೊಡಗಬೇಕೆಂಬ ಹಂಬಲ ಸಹಜವಾಗಿಯೇ ಕಡಿಮೆಯಾಗುತ್ತಿದೆ.

ಅಷ್ಟಕ್ಕೂ ವಾರ್ಷಿಕ 60 ದಿನಗಳ ಕಾಲ ಕಲಾಪ ನಡೆಯಬೇಕೆಂಬ ನಿಯಮಾವಳಿ ದಶಕಗಳಿಂದಲೂ ಕಾಗದದ ಮೇಲಿನ ಬರಹವಾಗಿಯೇ ಉಳಿದುಬಿಟ್ಟಿದೆ. ಈಗೇನಿದ್ದರೆ ವರ್ಷಕ್ಕೆ ಇಪ್ಪತ್ತು–ಮೂವತ್ತು ದಿನಗಳ ಕಾಲ ಕಲಾಪ ನಡೆದರೆ ಅದೇ ಹೆಚ್ಚೆಂಬಂತಾಗಿದೆ. ಸಮ್ಮಿಶ್ರ ಸರ್ಕಾರಗಳ ಹಣೆಪಾಡು

ಬಿಡಿ ಪೂರ್ಣಪ್ರಮಾಣದ ಏಕಪಕ್ಷೀಯ ಸರ್ಕಾರಗಳು ಇದ್ದಾಗಲೂ ಸಹ 60 ದಿನಗಳ ಕಾಲ ಕಲಾಪ ನಡೆದಿಲ್ಲ. ಇತ್ತೀಚಿನ ಉದಾಹರಣೆಯೆಂದರೆ ಸಿದ್ದರಾಮಯ್ಯರ ಸರ್ಕಾರ. ಪೂರ್ಣ ಬಹುಮತದೊಂದಿಗೆ ಅಧಿಕಾರದ ಗದ್ದುಗೆಗೇರಿದ ಸಿದ್ದರಾಮಯ್ಯ ನೇತೃತ್ವದ ಕಾಂಗ್ರೆಸ್ ಸರ್ಕಾರ ಸಹ ನಿಯಮಾವಳಿಗಳಂತೆ 60 ದಿನಗಳ ಕಾಲ ಕಲಾಪ ನಡೆಸಲಿಲ್ಲ. ನನಗಿರುವ ಮಾಹಿತಿಯ ಪ್ರಕಾರ ಹಿಂದಿನ ಕಾಲದಲ್ಲೂ ವರ್ಷಕ್ಕೆ 60 ದಿನಗಳ ಕಲಾಪ ನಡೆದದ್ದಿಲ್ಲ. ಹಾಗಾಗಿ ಆ ನಿಯಮಾವಳಿ ಜಾರಿಯಾಗದೇ ಬರೀ ನಿಯಮಾವಳಿಯಾಗಿಯೇ ಉಳಿದಿದೆ.

ವಿಧಾನಸಭಾಧ್ಯಕ್ಷರು, ಸಭಾಪತಿಗಳು ಹಾಗೂ ಎಲ್ಲ ಪಕ್ಷಗಳ ಮುಖಂಡರು ಒಂದೆಡೆ ಕುಳಿತು ಶಾಸನಸಭೆಯ ಘನತೆ-ಗೌರವಗಳು ಕುಸಿಯುತ್ತಿರುವುದಾದರೂ ಏಕೆ? ಸದನದ ಕಲಾಪಗಳು ವರ್ಷಗಳು ಉರುಳಿದಂತೆ ತನ್ನ ಮಹತ್ವವನ್ನು ಕಳೆದುಕೊಳ್ಳುತ್ತಿರುವುದಕ್ಕೆ ಕಾರಣಗಳೇನು? ಎಂಬುದರ ಕುರಿತು ಚರ್ಚೆ ನಡೆಸಬೇಕು. ಆ ಚಿಂತನೆ ನಡೆಸಲಿದು ಸಕಾಲ. ರಾಜ್ಯ ವಿಧಾನಮಂಡಲದ ಅಧಿವೇಶನವನ್ನು ತುರ್ತಾಗಿ ಕರೆಯಬೇಕಿದೆ. ಈ ಬಗ್ಗೆ ನಾನು ಸಭಾಧ್ಯಕ್ಷರು, ರಾಜ್ಯಪಾಲರು ಮತ್ತು ಮುಖ್ಯಮಂತ್ರಿಗಳಿಗೆ ಈಗಾಗಲೇ ಪತ್ರ ಬರೆದಿದ್ದೇನೆ. ಕೊರೊನಾ ಪರಿಸ್ಥಿತಿಯಲ್ಲಿ ಸರ್ಕಾರ ತನಗೆ ಬೇಕಾದ ರೀತಿಯಲ್ಲಿ ಸಂಪನ್ಮೂಲವನ್ನು ಮನಸೋಯಿಚ್ಛೆ ಖರ್ಚು ಮಾಡಿದೆ. ನೀರಾವರಿ ಯೋಜನೆಯಲ್ಲಿ ಅಕ್ರಮಗಳು ಜರುಗಿವೆ. ಎಲ್ಲ ಇಲಾಖೆಗಳಲ್ಲೂ ಭ್ರಷ್ಟಾಚಾರ ತಾಂಡವವಾಡುತ್ತಿದೆ. ಇವೆಲ್ಲದರ ಬಗ್ಗೆ ಚರ್ಚೆಯಾಗಬೇಕಿದೆ. ಆದರೆ, ರಾಜ್ಯ ಸರ್ಕಾರ ತನ್ನ ವೈಫಲ್ಯವನ್ನು ಮುಚ್ಚಿಕೊಳ್ಳಲು ಅಧಿವೇಶನ ಕರೆಯಲು ಹಿಂದೇಟು ಹಾಕುತ್ತಿದೆ. ಇನ್ನು ಶಾಸನಸಭೆಯಲ್ಲಿ ಮಂಡನೆಯಾಗುವ ಬಜೆಟ್‌ನಲ್ಲಿ ಮಂಜೂರು ಮಾಡಿಕೊಂಡ ಅನುದಾನವನ್ನು ಸಂಪುಟ ಸಭೆಯಲ್ಲಿ ಬೇರಯಾದ ಯೋಜನೆಗಳಿಗೆ ಬಳಸಿಕೊಳ್ಳುವ ನಿರ್ಧಾರಗಳಾಗುತ್ತಿವೆ. ಹೀಗಿರುವಾಗ ಅಧಿವೇಶನ ಕರೆಯುವ ಪ್ರಮೇಯವಾದರೂ ಏನು? ಸಚಿವ ಸಂಪುಟ ಸಭೆಯಲ್ಲೇ ಬಜೆಟ್ ಮಂಡಿಸಿಕೊಳ್ಳುವುದೊಳಿತು. ಸಂವಿಧಾನವಾಗಲಿ, ಕಾನೂನಾಗಲಿ ಪಾಲಿಸಿದರೆ-ಗೌರವಿಸಿದರೆ ಮಾತ್ರ ಬೆಲೆ ಇಲ್ಲವಾದಲ್ಲಿ ಎಲ್ಲವೂ ಅರ್ಥ ಕಳೆದುಕೊಳ್ಳುತ್ತದೆ. ಉತ್ತರ ಕರ್ನಾಟಕದ ಮತ ಪಡೆದು ಬೀಗುವವರು ಆ ಭಾಗದಲ್ಲಿ ಕಲಾಪ ನಡೆಸಲು ನಿರಾಸಕ್ತರಾಗಿದ್ದಾರೆ. ಎಲ್ಲವೂ ಚೆನ್ನಾಗಿದ್ದಾಗಲೇ ಬೆಳಗಾವಿಯಲ್ಲಿ ಅಧಿವೇಶನ ನಡೆಸದ ಬಿಜೆಪಿ ಈಗ ನಡೆಸೀತೆ..? ಆದರೆ ಒಂದಂತೂ ಸತ್ಯ ರಾಜ್ಯದಲ್ಲಿ ಕೊರೊನಾ ಮೂರನೇ ಅಲೆಯು ಅಬ್ಬರಿಸುವ ಭೀತಿಯಿರುವ ಹಿನ್ನೆಲೆಯಲ್ಲಿ ಈ ಬಾರಿ ಬೆಳಗಾವಿಯಲ್ಲಿ ಅಧಿವೇಶನ ನಡೆಸುವುದು ಅಷ್ಟೇನೂ ಸೂಕ್ತವಲ್ಲ.

ಆಧಾರ: ಸಂಯುಕ್ತ ಕರ್ನಾಟಕ, ದಿನಾಂಕ: 18.07.2021

## 12. ಮೇಲ್ಮನೆ ಪ್ರಭುತ್ವಕ್ಕೆ ಮತ್ತೊಂದು ಸುತ್ತಿನ ಸಮರ

ವಿಧಾನ ಪರಿಷತ್ತಿನ 25 ಸ್ಥಾನಗಳ ಅಧಿಕಾರಾವಧಿ ಇನ್ನೂ ಐದು ತಿಂಗಳಲ್ಲಿ ಅಂತ್ಯವಾಗಲಿದೆ. ಕೊರೊನಾ 3ನೇ ಅಲೆ ಭೀತಿ ನಡುವೆಯೇ ವರ್ಷಾಂತ್ಯಕ್ಕೆ ಚುನಾವಣೆ ನಡೆಯಲೇ ಬೇಕಿದೆ. ಮೇಲ್ಮನೆಯಲ್ಲಿ ಪಕ್ಷಗಳ ಬಲಾಬಲ ನಿರ್ಣಯಿಸುವ ನಿಟ್ಟಿನಲ್ಲಿ ಇದು ಮಹತ್ವದ್ದಾಗಿದ್ದು ಮೂರೂ ಪಕ್ಷಗಳು ಈಗಾಗಲೇ ಕಾರ್ಯತಂತ್ರಕ್ಕೆ ಮುಂದಾಗಿವೆ.

ಮೇಲ್ಮನೆಯಲ್ಲಿ ಒಟ್ಟು 75 ಸದಸ್ಯರಿದ್ದು, ಬಿಜೆಪಿ 32, ಕಾಂಗ್ರೆಸ್ 29 ಮತ್ತು ಜೆಡಿಎಸ್ 12 ಸದಸ್ಯರ ಸಹಿತ ಒಬ್ಬರು ಪಕ್ಷೇತರ ಸದಸ್ಯರಿದ್ದಾರೆ. ಕಾಂಗ್ರೆಸ್ ತನ್ನ ಸ್ಥಾನಗಳನ್ನು ಉಳಿಸಿಕೊಳ್ಳುವ ಪ್ರತಿಷ್ಠೆಗೆ ಬಿದ್ದಿದ್ದರೆ ಸಹಜವಾಗಿಯೇ ಆಡಳಿತಾರೂಢ ಬಿಜೆಪಿ ಪರಿಷತ್‌ನಲ್ಲಿ ತನ್ನ ಬಲವೃದ್ಧಿಗೆ ಯೋಜಿಸುತ್ತಿದೆ. ತೆರವಾಗುವ ಸ್ಥಾನಗಳ ಪೈಕಿ ಬಿಜೆಪಿ ಅಥವಾ ಕಾಂಗ್ರೆಸ್ ಯಾವುದು ಹೆಚ್ಚು ಸ್ಥಾನ ಗೆಲ್ಲುವರೋ ಅವರೇ ಪರಿಷತ್‌ನಲ್ಲಿ ಅತಿಹೆಚ್ಚು ಸಂಖ್ಯೆಯ ಏಕಪಕ್ಷವಾಗಿ ಹೊರಹೊಮ್ಮಲಿದೆ.

ಗ್ರಾಮ ಪಂಚಾಯತಿಗಳು ಮತ್ತು ಸ್ಥಳೀಯ ಸಂಸ್ಥೆಗಳ ಸದಸ್ಯರು ಈ ಚುನಾವಣೆಯ ಮತದಾರರಾಗಿರುವುದು ವಿಶೇಷ. ಕಳೆದ ವರ್ಷಾಂತ್ಯದಲ್ಲಿ ನಡೆದ ಗ್ರಾ.ಪಂ. ಚುನಾವಣೆಯಲ್ಲಿ ಪ್ರಮುಖ ಮೂರು ಪಕ್ಷಗಳು ಪೈಪೋಟಿಗೆ ಬಿದ್ದು ಅಧಿಕ ಬೆಂಬಲಿತ ಸದಸ್ಯರನ್ನು ಗೆಲ್ಲಿಸಿಕೊಂಡಿರುವ ಹಿನ್ನೆಲೆಯಲ್ಲಿ ಮೇಲ್ಮನೆ ಚುನಾವಣೆಯಲ್ಲಿ ಮಹತ್ವದ ಪಾತ್ರಕ್ಕೆ ಕಾರಣವಾಗಲಿದೆ.

ಬಿಜೆಪಿ ಈಗಿನ 32 ಸ್ಥಾನಗಳಿಂದ ತನ್ನ ಪ್ರಮಾಣವನ್ನು ಹೆಚ್ಚಿಸಿಕೊಳ್ಳುವ ಮಹತ್ವಾಕಾಂಕ್ಷೆಯಲ್ಲಿದೆ. ಮೇಲ್ಮನೆಯಲ್ಲಿ ಅದಕ್ಕೆ ಸರಳ ಬಹುಮತಕ್ಕಾಗಿ 38 ಸ್ಥಾನಗಳ ನಿರ್ಣಾಯಕ ಸಂಖ್ಯೆಯ ಅಗತ್ಯವಿದೆ. ಆಡಳಿತ ಪಕ್ಷವು ಇದನ್ನು ನಿರ್ವಹಿಸುವಲ್ಲಿ ಯಶಸ್ವಿಯಾದರೆ ಪರಿಷತ್‌ನಲ್ಲಿ ಇದೇ ಮೊದಲ ಬಾರಿಗೆ ಬಿಜೆಪಿ ಸಂಪೂರ್ಣ ಬಹುಮತ ಪಡೆಯಲಿದೆ. ಹಾಗಾದಲ್ಲಿ ಸರ್ಕಾರ ತನ್ನ ಯಾವುದೇ ಮಸೂದೆಗಳನ್ನು ಜೆಡಿಎಸ್ ಸೇರಿದಂತೆ ಯಾರದೇ ಹಂಗಿಲ್ಲದೆ ಅಂಗೀಕಾರ ಮಾಡಿಕೊಳ್ಳಬಹುದಾಗಿದೆ.

ಮೂರು ಪಕ್ಷಗಳಲ್ಲಿ ಹಾಲಿ ಸದಸ್ಯರಲ್ಲಿ ಬಹುತೇಕರು ಮರು ಆಯ್ಕೆ ಬಯಸಿದ್ದಾರೆ. ಕಳೆದ ವಿಧಾನಸಭಾ ಚುನಾವಣೆಯಲ್ಲಿ ಸೋತ ಅನೇಕ ನಾಯಕರು ಪರಿಷತ್ ಪ್ರವೇಶಿಸಲು ಉತ್ಸುಕರಾಗಿರುವುದರಿಂದ 25 ಸ್ಥಾನಗಳಿಗೆ ಪಕ್ಷಗಳೊಳಗೆ ಲಾಬಿ ಶುರುವಾಗಿದೆ. ಆದರೆ, ಆಯಾ ಪಕ್ಷದ ವರಿಷ್ಠರು ಯಾರಿಗೆ ಮಣೆ ಹಾಕಲಿದ್ದಾರೆ ಎಂಬುದು ಕುತೂಹಲದ ಸಂಗತಿಯಾಗಿದೆ. 2023ರಲ್ಲಿ ವಿಧಾನಸಭೆ ಚುನಾವಣೆಯೂ ಎದುರಾಗಲಿದ್ದು, ಎಲ್ಲ ರಾಜಕೀಯ ಲೆಕ್ಕಾಚಾರಗಳನ್ನು ಪರಿಗಣಿಸಿಯೇ ಮೂರೂ ಪಕ್ಷಗಳು ಅನುಭವಿ ಮತ್ತು ಪ್ರಭಾವಿಗಳನ್ನು ಪರಿಗಣಿಸುವುದರಲ್ಲಿ ಸಂಶಯವಿಲ್ಲ.

**ಯಾವ್ಯಾವ ಸದಸ್ಯರ ಅವಧಿ ಅಂತ್ಯ**

**ಕಾಂಗ್ರೆಸ್** – ವಿಪಕ್ಷ ನಾಯಕ ಎಸ್.ಆರ್.ಪಾಟೀಲ್, ಎಸ್.ರವಿ, ಬಸವರಾಜ ಪಾಟೀಲ್ ಇಟಗಿ, ಕೆ.ಪ್ರತಾಪಚಂದ್ರಶೆಟ್ಟಿ, ಎಂ.ಎ.ಗೋಪಾಲಸ್ವಾಮಿ, ಶ್ರೀಕಾಂತ ಘೋಟ್ನೇಕರ, ಎಂ.ನಾರಾಯಣಸ್ವಾಮಿ, ಶ್ರೀನಿವಾಸ ಮಾನೆ, ವಿಜಯಸಿಂಗ್, ಆರ್.ಪ್ರಸನ್ನಕುಮಾರ್, ಕೆ.ಸಿ.ಕೊಂಡಯ್ಯ, ಜಿ.ರಘು ಆಚಾರ್, ಸುನಿಲ್‌ಗೌಡ ಪಾಟೀಲ್ ಹಾಗೂ ಆರ್.ಧರ್ಮಸೇನಾ

**ಬಿಜೆಪಿ** – ಸಚಿವರು ಕೋಟಾ ಶ್ರೀನಿವಾಸ ಪೂಜಾರಿ, ಮಹಾಂತೇಶ್ ಕವಟಗಿಮಠ, ಪ್ರದೀಪ್ ಶೆಟ್ಟರ್, ಸುನಿಲ್ ಸುಬ್ರಮಣಿ, ಉಪ ಸಭಾಪತಿ ಎಂ.ಕೆ.ಪ್ರಾಣೇಶ್, ಬಿ.ಜಿ.ಪಾಟೀಲ್

**ಜೆಡಿಎಸ್** – ಎಸ್.ಅಪ್ಪಾಜಿಗೌಡ, ಸಂದೇಶ್ ನಾಗರಾಜ್, ಬೆಮಲ್ ಕಾಂತರಾಜ್, ಸಿ.ಆರ್.ಮನೋಹರ್

**ಪಕ್ಷೇತರ** – ವಿವೇಕರಾವ್ ಪಾಟೀಲ್

ಆಧಾರ: ಸಂಯುಕ್ತ ಕರ್ನಾಟಕ, ದಿನಾಂಕ: 19.07.2021

## 13. ಸಂಸತ್ತಿನ ಕಲಾಪ ಭಂಗ ಅನುಚಿತ

ಇತ್ತೀಚೆಗೆ ಸಂಸತ್ತಿನ ಉಭಯ ಸದನಗಳು ಪೂರ್ಣ ಕಾಲ ನಡೆಯುತ್ತಿಲ್ಲ. ಸಭಾತ್ಯಾಗ–ಕಲಾಪ ಮುಂದೂಡಿಕೆಯಲ್ಲಿ ಕಾಲಹರಣವಾಗುತ್ತಿದೆ. ಇದರಿಂದ ಸರ್ಕಾರದ ಬೊಕ್ಕಸಕ್ಕೆ ಲಕ್ಷಾಂತರ ರೂ.ನಷ್ಟ ಸಂಭವಿಸುತ್ತಿದೆ. ಕೊರೊನಾ ಕಾಲದಲ್ಲಿ ಇಡೀ ಜನಸ್ತೋಮ ಕಷ್ಟದಲ್ಲಿ ಸಿಲುಕಿರುವಾಗ ಅವರನ್ನು ಪಾರು ಮಾಡುವುದು ಹೇಗೆ ಎಂಬುದರ ಬಗ್ಗೆ ಪಕ್ಷಾತೀತವಾಗಿ ಚರ್ಚಿಸಿ ತೀರ್ಮಾನ ಕೈಗೊಳ್ಳಬೇಕಿತ್ತು. ಆದರೆ ಕಲಾಪವೇ ನಡೆಯುತ್ತಿಲ್ಲ. ಇದಕ್ಕೆ ಒಂದು ರಾಜಕೀಯ ಪಕ್ಷ ಹೊಣೆಯಲ್ಲ. ಎಲ್ಲಾ ಸಂಸದರೂ ಇದರ ಹೊಣೆ ಹೊರಬೇಕು. ಅರ್ಥಪೂರ್ಣ ಚರ್ಚೆ ನಡೆಯುತ್ತಿಲ್ಲ ಎಂದ ಮೇಲೆ ವರ್ಷದಲ್ಲಿ ಇಷ್ಟು ಅಧಿವೇಶನ ನಡೆಯಲೇಬೇಕು ಎಂದು ನಿಯಮ ಮಾಡುವ ಅಗತ್ಯವಿಲ್ಲ. ಸಂವಿಧಾನದಲ್ಲಿ ಸಂಸತ್ತಿಗೆ ಅತ್ಯುನ್ನತ ಸ್ಥಾನ ನೀಡಲಾಗಿದೆ. ಸಂಸದರಿಗೆ ಸಂಪೂರ್ಣ ವಾಕ್ ಸ್ವಾತಂತ್ರ್ಯ ನೀಡಲಾಗಿದೆ. ಸಂಸತ್ತಿನಲ್ಲಿ ನಡೆದ ಕಲಾಪವನ್ನು ಯಾವ ನ್ಯಾಯಾಲಯದಲ್ಲಿ ಪ್ರಶ್ನಿಸುವಂತಿಲ್ಲ. ಸಂಸದರು ಕೈಗೊಂಡ

ನಿರ್ಣಯಗಳು ಸಂವಿಧಾನ ವಿರೋಧಿ ಆಗಿರಬಾರದು ಅಷ್ಟೆ. ಇಷ್ಟು ವಿಶಾಲವಾದ ಸ್ವಾತಂತ್ರ್ಯ ನೀಡಿದ್ದರೂ ಎಲ್ಲ ರಾಜಕೀಯ ಪಕ್ಷಗಳ ಸಂಸದರು ಏಕೆ ಸಮಯವನ್ನು ಸದುಪಯೋಗಪಡಿಸಿಕೊಳ್ಳುವುದಿಲ್ಲ ಎಂಬುದು ಯಕ್ಷ ಪ್ರಶ್ನೆ. ಜನಪರ ಚಳುವಳಿಗಳು ನಡೆಯುತ್ತಿದ್ದರೂ ಸಂಸದರು ಅದರ ಬಗ್ಗೆ ಗಂಭೀರ ಚಿಂತನೆ ನಡೆಸುತ್ತಿಲ್ಲ. ಪ್ರತಿಪಕ್ಷ ಕಲಾಪ ನಡೆಯದಂತೆ ಮಾಡುವುದೇ ದೊಡ್ಡದು ಎಂದು ತಿಳಿದುಕೊಂಡಿದೆ. ಹಿಂದೆ ಪ್ರತಿ ಪಕ್ಷದಲ್ಲಿದ್ದ ಈಗ ಆಡಳಿತದಲ್ಲಿರುವವರೂ ಇದೇ ಕೆಲಸ ಮಾಡಿದ್ದರು ಎಂಬುದನ್ನು ಮರೆಯುವಂತಿಲ್ಲ. ನಮ್ಮ ನ್ಯಾಯಾಲಯಗಳು ಸಂಸತ್ತಿನ ಚರ್ಚೆಗೆ ಮೊದಲಿನಿಂದಲೂ ಅತ್ಯಂತ ಮಹತ್ವ ನೀಡುತ್ತಾ ಬಂದಿದೆ. ಯಾವುದೇ ಮಹತ್ವದ ವಿಚಾರವಿರಲಿ. ಸಂಸತ್ತಿನಲ್ಲಿ ಸುದೀರ್ಘ ಚರ್ಚೆ ನಡೆಯಬೇಕು ಎಲ್ಲಾ ಸಂಸದರು ತಮ್ಮ ಅಭಿಪ್ರಾಯ ವ್ಯಕ್ತಪಡಿಸಬೇಕು. ಆಮೇಲೆ ಒಮ್ಮತದ ಅಭಿಪ್ರಾಯ ಮೂಡಬೇಕು ಎಂಬುದು ಸಂಸತ್ತಿನ ನಡವಳಿಕೆ ಹಿಂದೆ ಪ್ರತಿಪಕ್ಷದವರು ಅತ್ಯುತ್ತಮ ಸಲಹೆ ನೀಡುತ್ತಿದ್ದರು. ಈಗ ಮಹತ್ವದ ಸಲಹೆ ನೀಡುವವರೂ ಇಲ್ಲ. ಅದನ್ನು ಜಾರಿಗೆ ತರುವವರೂ ಇಲ್ಲ. ಹೀಗಿರುವಾಗ ಜನಹಿತ ಕಾಯುವುದು ಹೇಗೆ ಎಂಬ ಪ್ರಶ್ನೆ ಕಾಡುತ್ತದೆ. ಪ್ರತಿಯೊಬ್ಬ ಸಂಸದ ಪ್ರಶ್ನೆ ಕೇಳಲು ಹಕ್ಕಿದೆ, ಸಂಸದನ ಪ್ರಶ್ನೆಗೆ ಉತ್ತರ ತರಿಸಲು ಲಕ್ಷಾಂತರ ರೂ. ವೆಚ್ಚ ಮಾಡುತ್ತೇವೆ. ಇದರ ಮೂಲ ಉದ್ದೇಶ ಪ್ರತಿಯೊಬ್ಬ ನಾಗರಿಕನ ಹಕ್ಕು ರಕ್ಷಣೆಯಾಗಬೇಕು. ಆದರೆ ಈಗ ಜನಸಾಮಾನ್ಯರ ಸಮಸ್ಯೆಗಳ ಬಗ್ಗೆ ಚರ್ಚೆಯೇ ನಡೆಯುವುದಿಲ್ಲ. ಗೊಂದಲದಲ್ಲಿ ಆರಂಭ, ಗೊಂದಲದಲ್ಲಿ ಮುಕ್ತಾಯ ಎನ್ನುವಂತಾಗಿದೆ. ಸೇಡಿಗೆ ಪ್ರತಿ ಸೇಡು ಎನ್ನುವಂತೆ ಸಂಸದರ ವರ್ತನೆ ಕಂಡುಬರುತ್ತಿದೆ. ಪ್ರಜಾಪ್ರಭುತ್ವದಲ್ಲಿ ಎಲ್ಲವೂ ಬಹುಮತದಲ್ಲಿ ನಡೆಯುತ್ತದೆ ಎಂಬುದು ನಿಜವಾದರೂ ಚರ್ಚೆಗೆ ಮುಕ್ತವಾಗಿ ಆಗಬೇಕು. ಪ್ರತಿಯೊಂದು ವಿಭಿನ್ನ ಅಭಿಪ್ರಾಯ ವ್ಯಕ್ತಪಡಿಸಲು ಅವಕಾಶ ಇದ್ದೇ ಇರಬೇಕು. ಆಡಳಿತ ಪಕ್ಷಕ್ಕೆ ಹೆಚ್ಚು ಚರ್ಚೆ ಬೇಕಿಲ್ಲ. ಪ್ರತಿಪಕ್ಷಗಳಿಗೆ ಹೆಚ್ಚಿನ ಚರ್ಚೆ ಬೇಕು. ಇದನ್ನು ಸಾಧಿಸಬೇಕು ಎಂದರೆ ಪ್ರತಿಪಕ್ಷ ಹೆಚ್ಚು ತಾಳ್ಮೆಯಿಂದ ವರ್ತಿಸಬೇಕು. ಈಗ ಎಲ್ಲವೂ ತದ್ವಿರುದ್ಧ ಮಾತು ಮಾತು ಮಥಿಸಿದಾಗ ಅರ್ಥದ ನವನೀತ ಎಂಬ ಮಾಹಿತಿಗೆ ಈಗ ಅರ್ಥವಿಲ್ಲ. ವಾಗ್ಯುದ್ಧವೇ ಎಲ್ಲ ಆಶಿಸ್ತು. ಗೊಂದಲ ಸೃಷ್ಟಿಯೇ ದೊಡ್ಡಸ್ಥಿಕೆ ಲಕ್ಷಣ ಎಂಬಂತಾಗಿದೆ. ಈ ಧೋರಣೆ ಬದಲಾಗಿ ಎಲ್ಲರೂ ಚರ್ಚೆಯಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುವಂತಾಗಬೇಕು. ಎಲ್ಲ ವಿಷಯಗಳೂ ವಿಪ್ ವ್ಯಾಪ್ತಿಗೆ ಬರಬೇಕಿಲ್ಲ ಎಂಬುದನ್ನು ಜಾರಿಗೆ ತಂದಲ್ಲಿ ಸಂಸದರು ಪಕ್ಷದ ಚೌಕಟ್ಟು ಬಿಟ್ಟು ಮುಕ್ತವಾಗಿ ಚರ್ಚೆಯಲ್ಲಿ ಪಾಲ್ಗೊಳ್ಳಬಹುದು. ಶೂನ್ಯವೇಳೆ ಗಮನ ಸೆಳೆಯುವ ಸೂಚನೆಗಳು ಅರ್ಥವಂತಿಕೆ ಕಳೆದುಕೊಳ್ಳುತ್ತಿದೆ. ಎಲ್ಲ ವಿಷಯಗಳಿಗೂ ಬಾವಿಗೆ ಇಳಿಯುವುದು ಕಾಗದ ಪತ್ರಗಳು ಹರಿದು ಹಾಕುವುದು, ಸ್ಪೀಕರ್ ಅವರಿಂದ ಅಮಾನತ್ತುಗೊಳ್ಳುವುದು, ಸಂಸತ್ತಿನ ಸದಾಚಾರಕ್ಕೆ ದೂರವಾದ ಕ್ರಿಯೆಗಳು. ಇವುಗಳು ಅಪರೂಪವಾಗಿ ನಡೆದಲ್ಲಿ ಅದಕ್ಕೆ ಮಹತ್ವ ಬರುತ್ತದೆ. ಪ್ರತಿದಿನ ನಡೆದರು ಶಿಕ್ಷೆಯಾಗುವುದಿಲ್ಲ. ಇದಕ್ಕೆ ಎಲ್ಲ ರಾಜಕೀಯ ಪ್ರಕ್ಷಗಳೂ ಕಾರಣ. ಪ್ರತಿಯೊಬ್ಬ ಸಂಸದರು ತಮ್ಮ ಆತ್ಮಸಾಕ್ಷಿಗೆ ಅನುಸಾರವಾಗಿ ನಡೆದುಕೊಂಡಲ್ಲಿ ತಮ್ಮ ತಪ್ಪು ಎಲ್ಲಿದೆ ಎಂಬುದು ಅವರಿಗೇ ತಿಳಿಯುತ್ತದೆ. ಸಂಸದರಿಗೆ ಹಕ್ಕುಚ್ಯುತಿಯಾದಲ್ಲಿ ರಕ್ಷಿಸಲು ಸಮಿತಿಗೆ ಇದೆ. ಆದರೆ ಸಂಸದರು ತಮ್ಮ ಕರ್ತವ್ಯ ನಿರ್ವಹಿಸದೇ ಹೋದಲ್ಲಿ ಅದನ್ನು ಪ್ರಶ್ನಿಸುವ ವ್ಯವಸ್ಥೆ ಎಲ್ಲೂ ಇಲ್ಲ. ಹಕ್ಕು ಮತ್ತು ಕರ್ತವ್ಯ ಪ್ರಜಾಪ್ರಭುತ್ವದ ಎರಡು ಕಣ್ಣುಗಳಿದ್ದಂತೆ, ಹಕ್ಕುಮಾತ್ರ ಬೇಕು, ಕರ್ತವ್ಯ ಬೇಡ ಎಂದರೆ ಒಂದೇ ಕಣ್ಣಿನಿಂದ ಸಮಾಜವನ್ನು ಕಂಡಂತೆ ಅದು ಪೂರ್ಣ ದೃಷ್ಟಿಯಾಗುವುದಿಲ್ಲ.

ಆಧಾರ:–ಸಂಯುಕ್ತ ಕರ್ನಾಟಕ, ದಿನಾಂಕ:21.07.2021

## 14. ಸತ್ಯಾಂಶ ಅರಿಯಲು ತನಿಖೆಯೊಂದೇ ದಾರಿ

ಪೆಗಾಸಸ್ ಕದ್ದಾಲಿಕೆ ಈಗ ಎಲ್ಲ ಕಡೆ ವ್ಯಾಪಿಸಿದೆ. ಎಲ್ಲ ರಂಗಗಳಲ್ಲಿ ಪ್ರತಿಷ್ಠಿತದ ದೂರವಾಣಿಗಳನ್ನು ಕದ್ದಾಲಿಸುವ ಕೆಲಸ ಬಹುತೇಕ ದೇಶಗಳಲ್ಲಿ ನಡೆದಿದೆ. ಇದಕ್ಕೆ ರಾಜಕೀಯ ಉದ್ದೇಶ

ಇಲ್ಲದಿದ್ದರೂ ಹಲವರ ಮನದಲ್ಲಿ ಅನುಮಾನ ಮೂಡಿಸಿರುವುದಂತೂ ನಿಜ. ಅದರಿಂದ ಸ್ವತಂತ್ರ ತನಿಖೆ ನಡೆಸುವುದು ಅಗತ್ಯ. ಅಂತರರಾಷ್ಟ್ರೀಯ ಮಟ್ಟದಲ್ಲಿ ತನಿಖೆ ನಡೆಸುವುದು ಕಷ್ಟ. ಆದರೆ ನಮ್ಮ ದೇಶಕ್ಕೆ ಸಂಬಂಧಿಸಿದಂತೆ  ತನಿಖೆಯಂತು ಅಗತ್ಯ. ಈ ಬೇಹುಗಾರಿಕೆ ಮೂಲ ಉದ್ದೇಶ ಏನೇ ಇದ್ದರೂ ಅದನ್ನು ಬಹಿರಂಗಪಡಿಸುವುದು ಅಗತ್ಯ. ದೇಶಾದ್ಯಂತ ಲಕ್ಷಾಂತರ ಜನ ಮೊಬೈಲ್ ಬಳಸುವುದರಿಂದ ಇಂಥ ಬೇಹುಗಾರಿಕೆ ಜನರ ನಂಬಿಕೆಯನ್ನ ಅಲುಗಾಡಿಸುತ್ತದೆ. ಒಂದು ಕಡೆ ಜನರಿಗೆ ಡಿಜಿಟಲ್ ತಂತ್ರಜ್ಞಾನ ಬಳಸಬೇಕು------ ಮತ್ತೊಂದು ಕಡೆ ಬೇಹುಗಾರಿಕೆ ಕದ್ದಾಲಿಕೆ ನಡೆದರೆ ಜನ ವಿಶ್ವಾಸಕ್ಕೆ ಧಕ್ಕೆ ಬರುತ್ತದೆ. ಅದ್ದರಿಂದ ನಿಪಕ್ಷಪಾತ ತನಿಖೆ ಇದರ ಮೂಲವನ್ನು ಬಹಿರಂಗಪಡಿಸುವುದು ಅಗತ್ಯ. ಹಿಂದೆ ದೂರವಾಣಿ ಕದ್ದಾಲಿಕ ಪ್ರಕರಣಗಳು ಹಲವು ಬಾರಿ ನಡೆದಿತ್ತು. ಇವುಗಳೆಲ್ಲ ಸೀಮಿತ ಗುರಿ ಹೊಂದಿದ್ದವು. ಆದರೆ ಈಗ ಪೆಗಾಸಸ್ ಹಗರಣ ವ್ಯಾಪಕವಾಗಿ ಹರಡಿಕೊಂಡಿದೆ. ನಮ್ಮ ದೇಶವಲ್ಲದೇ ಬೇರೆ ದೇಶದಲ್ಲೂ ಇದರ ಪ್ರಭಾವ ಕಂಡು ಬಂದಿದೆ. ಪೆಗಾಸಸ್ ವಿಶೇಷ ಎಂದರೆ ಇದು ಒಂದು ಹೊಸ ಸಾಫ್ಟ್‌ವೇರ್. ಇಸ್ರೇಲ್ ಮೂಲ. ಮಿಲಿಟರಿ ಉದ್ದೇಶಗಳಿಗೆ ಸಿದ್ಧಪಡಿಸಿದ್ದು ಎಂದು ಹೇಳಲಾಗಿದೆ. ಅದರೂ ಇದು ಹೇಗೆ ಬೇರೆ ಕ್ಷೇತ್ರಗಳಲ್ಲಿ ಬಳಕೆ ಬಂದಿತ್ತು ಎಂಬುದು ಸ್ಪಷ್ಟಗೊಂಡಿಲ್ಲ. ಫ್ರಾನ್ಸ್ ಅಧ್ಯಕ್ಷ ತನ್ನ ಮೊಬೈಲ್ ಬದಲಿಸಿದ್ದಾರೆ. ಫೇಸ್ ಬುಕ್ ಮುಖ್ಯಸ್ಥರೇ ತಮ್ಮ ಕಂಪ್ಯೂಟರ್ ಹ್ಯಾಕ್ ಆಗಬಹುದು ಎಂದು ಆತಂಕ ವ್ಯಕ್ತಪಡಿಸಿದ್ದಾರೆ. ಇದೆಲ್ಲವನ್ನೂ ನೋಡಿದರೆ ಈ ಕದ್ದಾಲಿಕೆ ವ್ಯಾಪಕವಾಗಿದೆ ಎಂಬುದು ಸ್ಪಷ್ಟ. ಇಂಟರ್‌ನೆಟ್ ಮೂಲಕ ನಮ್ಮ ಮೊಬೈಲ್ ಅಥವಾ ಕಂಪ್ಯೂಟರ್ ಚಾಲನೆಯಲ್ಲಿ ಇಲ್ಲೆಂದರೂ ಇದರಲ್ಲಿರುವ ಮಾಹಿತಿಯನ್ನು ಕದ್ದಾಲಿಕೆ ತಂತ್ರಾಂಶ ನೇರವಾಗಿ ಪಡೆದುಕೊಳ್ಳುವ ತಂತ್ರಜ್ಞಾನ ಹೊಂದಿದೆ. ಹೀಗಾಗಿ ಇದು ಅಪಾಯಕಾರಿ ನಾವು ಬಳಸುವ ಸಂಪರ್ಕ ಸಾಧನದ ಮೇಲೆ ಅನುಮಾನ ಮೂಡಬಾರದು. ಅನೇಕ ಉದ್ಯಮಿಗಳು ಮೊಬೈಲ್ ಮತ್ತು ಕಂಪ್ಯೂಟರ್ ಅವಲಂಬಿಸಿರುತ್ತಾರೆ. ಅವರ ವ್ಯವಹಾರಗಳ ಎಲ್ಲ ವಿವರ ಕಂಪ್ಯೂಟರ್‌ನಲ್ಲಿರುತ್ತವೆ.  ಅದನ್ನೇ ಕದ್ದು ಬಿಟ್ಟರೆ ಅವರು ವ್ಯವಹಾರ ನಡೆಸುವುದು ಕಷ್ಟವಾಗುತ್ತದೆ.  ಹಿಂದೆ ಕಡತದಲ್ಲಿ ಎಲ್ಲವನ್ನೂ ದಾಖಲಿಸಿ ಇಡುತ್ತಿದ್ದರು.  ಐಟಿ ಅಧಿಕಾರಿಗಳು ದಾಳಿ ನಡೆಸಿದರೆ ಕಡತಗಳನ್ನು ವಶಪಡಿಸಿಕೊಳ್ಳುತ್ತಿದ್ದರು.  ಈಗ ಎಲ್ಲವೂ ಹಾರ್ಡ್ ಡಿಸ್ಕ್‌ನಲ್ಲಿರುತ್ತದೆ ಎಂದು ಅಧಿಕಾರಿಗಳು ಕಂಪ್ಯೂಟರ್‌ಗಳಲ್ಲಿರುವ ಮಾಹಿತಿಯನ್ನು ಪಡೆಯುತ್ತಾರೆ. ಆದರೆ ಪೆಗಾಸಸ್ ಹಗರಣ ನೋಡಿದರೆ ದಾಳಿ ನಡೆಸುವ ಅಗತ್ಯ ಕಂಡು ಬರುವುದಿಲ್ಲ.  ಕಛೇರಿಯಲ್ಲೇ ಕುಳಿತು ಎಲ್ಲ ಮಾಹಿತಿ ಪಡೆಯಬಹುದು ಎಂದಾದರೆ ತನಿಖೆಯ ಸ್ವರೂಪವೇ ಬದಲಾಗುವ ಸಾಧ್ಯತೆಗಳಿವೆ.  ಮಿಲಿಟರಿ ಕ್ಷೇತ್ರದಲ್ಲಿ ಬೇಹುಗಾರಿಕೆ ಅಗತ್ಯ ಶತ್ರುಪಾಳೆಯದ ಎಲ್ಲ ವಿವರ ಪಡೆಯಲು ಎಲ್ಲ ಯತ್ನಗಳನ್ನು ಮಾಡುವುದು ಸಹಜ.  ಆದರೆ ಅದೇ ಪ್ರಯತ್ನ ನಾಗರಿಕ ಸಮಾಜದಲ್ಲಿ ನಡೆದರೆ ಅದು ಅಪರಾಧವಾಗುತ್ತದೆ.  ಇಡೀ ನಾಗರಿಕ ಸಮಾಜ ವಿಶ್ವಾಸದ ಮೇಲೆ ನಿಂತಿರುತ್ತದೆ.  ಅದು ಹೋಗಿ ಅನುಮಾನದ ಹುತ್ತ ಬೆಳೆದಲ್ಲಿ ಜನ ಆತಂಕಕ್ಕೆ ಒಳಗಾಗುತ್ತಾರೆ.  ಈಗ ಪೆಗಾಸಸ್ ಮೇಲ್ವರ್ಗದ ಜನರ ಚಲನವಲನಕ್ಕೆ ಸೀಮಿತಗೊಂಡಿದೆ.  ಇದು ಜನಸಾಮಾನ್ಯರ ಮಟ್ಟಕ್ಕೆ ಇಳಿದರೆ ವ್ಯಾಪಾರ-ವಹಿವಾಟಿಗೆ ಧಕ್ಕೆಯಾಗಲಿದೆ.  ಆದುದರಿಂದ ಈಗಲೇ ಇದಕ್ಕೆ ಮಂಗಳ ಹಾಡುವುದು ಅಗತ್ಯ.  ಹೊಸ ಸಂಶೋಧನೆಗಳು ಸಮಾಜದ ಒಳಿತಿಗೆ ಬಳಕೆಯಾಗುವಂತೆ ಕೆಡುಕಿಗೂ ಆಸರೆ ನೀಡಬಹುದು.  ಅದನ್ನು ತಪ್ಪಿಸುವುದು ಬಹಳ ಮುಖ್ಯ.  ಅದರಲ್ಲೂ ಜನ ಸಂಖ್ಯೆ ಅಧಿಕವಾಗಿರುವ ನಮ್ಮ ದೇಶದಲ್ಲಿ ಇದು ಶೋಷಣೆಗೆ ಸಾಧನವಾಗುವ ಅಪಾಯವಿದೆ.  ಕೇಂದ್ರ ಸರ್ಕಾರ ಇದರ ಬಗ್ಗೆ ಈಗಲೇ ಕ್ರಮ ಕೈಗೊಳ್ಳುವುದು ಅಗತ್ಯ.  ಎಲ್ಲ ಸಮಸ್ಯೆಗಳನ್ನು ರಾಜಕೀಯ ದೃಷ್ಟಿಕೋನದಿಂದ ನೋಡಲು ಬರುವುದಿಲ್ಲ. ಪೆಗಾಸಸ್ ಹಗರಣ ಆರ್ಥಿಕ ರಂಗದ ಮೇಲೆ ಪರಿಣಾಮ ಬೀರುವ ಅಪಾಯವಿದೆ.  ಪೆಗಾಸಸ್ ಹಗರಣಕ್ಕೆ ನೇರವಾಗಿ ರಾಜಕೀಯ ಉದ್ದೇಶಗಳು ಈಗ ಬೆಳಕಿಗೆ ಬಂದಿಲ್ಲ.  ಅದರಿಂದ ತನಿಖೆಯ ಮೂಲಕ ಇದರ ಮೂಲ ಉದ್ದೇಶ ತಿಳಿಯಬೇಕು.  ಆಗ ಜನರಲ್ಲಿ ಮೂಡಿರುವ ಅನುಮಾನಗಳು ನಿವಾರಣೆಯಾಗುತ್ತವೆ. ಜಾಗತಿಕಮಟ್ಟದಲ್ಲಿ ಇಂಟರ್‌ನೆಟ್ ಜಾಲ ಹರಡಿಕೊಂಡಿರುವುದರಿಂದ ಸಂಪರ್ಕ

ಕ್ರಾಂತಿಗೆ ಕಾರಣವಾಗಿದೆ. ಹೀಗಾಗಿ ಕದ್ದಾಲಿಕೆಯೂ ಜಾಗತಿಕ ಮಟ್ಟದಲ್ಲಿ ಬಳಕೆಗೆ ಬರುವ ಅಪಾಯ ಇದ್ದೇ ಇರುತ್ತದೆ.

ಆಧಾರ:–ಸಂಯುಕ್ತ ಕರ್ನಾಟಕ, ದಿನಾಂಕ:25.07.2021

## 15. ಶ್ವೇತಾಶ್ವದ ಅಶ್ವಮೇಧವೋ ಹಾರುವ ಕುದುರೆಯೋ

ಹಿಂದೆ ರಾಜ ಮಹರಾಜರು ಚಕ್ರವರ್ತಿ ಪಟ್ಟಗಳಿಸಲು ಅಶ್ವಮೇಧ ಯಾಗ ಮಾಡುತ್ತಿದ್ದರು. ಈಗಿನ ಸರ್ಕಾರ ಮೊಬೈಲ್ ಕದ್ದಾಲಿಕೆಯ ಪೆಗಾಸಸ್ ಹಾರುವ ಕುದುರೆಯನ್ನು ತಂದಿದೆ. ಇದು ಅವರೇ ತಂದಿದ್ದೋ ಅಥವಾ ತಂತಾನೇ ಬಂದಿತೋ ಎಂಬುದನ್ನು ಸರ್ಕಾರ ಹೇಳಬೇಕು. ಹೊಸ ಸಚಿವರು ಎಲ್ಲವನ್ನೂ ಹೇಳಿ ಸತ್ಯವನ್ನಲ್ಲದೆ ಬೇರೆ ಏನನ್ನೂ ಹೇಳುವುದಿಲ್ಲ ಎಂದು ಪ್ರಮಾಣ ವಚನ ಸ್ವೀಕರಿಸಿಲ್ಲ. ಕೊರೋನಾ ಸೋಂಕಿಗೆ ನೂರೆಂಟು ಪ್ರಬೇಧಗಳಿವೆ. ಅದೇ ರೀತಿ ಇದರಲ್ಲಿ ಯಾವ ಪ್ರಬೇಧ ಬಳಕೆಯಾಗುತ್ತದೋ ತಿಳಿಯದು. ನೂತನ ಸಚಿವರು ತಮ್ಮ ಚೊಚ್ಚಲ ಭಾಷಣದಲ್ಲೇ ಮೊಬೈಲ್ ಕದ್ದಾಲಿಕೆ ನಡೆಯುತ್ತಿದೆ ಎಂದು ಹೇಳಿ ಎಲ್ಲರನ್ನೂ ಅಚ್ಚರಿಗೊಳಿಸಿದರು. ಪೆಗಾಸಸ್ ತಂತ್ರಾಂಶ ಬಳಕೆಯಿಂದ ದೇಶದ ಹಲವು ಗಣ್ಯರ ದೂರವಾಣಿ ಕದ್ದಾಲಿಕೆ ಆಗಿದೆ ಎಂದು ಹೇಳಿದ್ದಾರೆ. ಪೆಗಾಸಸ್ ಎಂದರೆ ಹಾರುವ ಕುದುರೆ ಅದು ಗುಡುಗು ಸಿಡಿಲು ತರುತ್ತದೆ ಎಂಬುದು ಪ್ರತೀತ. ಇಸ್ರೇಲ್ ಭದ್ರತಾ ಪಡೆ ಈ ತಂತ್ರಾಂಶವನ್ನು ಅಭಿವೃದ್ಧಿಪಡಿಸಿತು. ಇದರ ಬಗ್ಗೆ ಸಚಿವರು ಮಾತನಾಡಿ ಟೆಲಿಫೋನ್ ಕದ್ದಾಲಿಕೆ ಅನಧಿಕೃತ ಎಂಬುದೇನೂ ಇಲ್ಲ ಎಂದು ಸ್ಪಷ್ಟಪಡಿಸಿದರು. ಆದರೆ ಜನಸಾಮಾನ್ಯರಿಗೆ ಬೇಕಿರುವುದು ಪೆಗಾಸಸ್ ತಂತ್ರಾಂಶ ಭಾರತಕ್ಕೆ ಬಂದಿದ್ದು ಹೇಗೆ ಎಂಬುದನ್ನು ಸರ್ಕಾರ ಮೊದಲು ಸ್ಪಷ್ಟಪಡಿಸಬೇಕು. ಇದಕ್ಕೆ ಸಂಬಂಧಿಸಿದಂತೆ ಹಲವು ಪ್ರಶ್ನೆಗಳು ಹಾಗೆ ಉಳಿದಿವೆ.

ಭಾರತಕ್ಕೆ ಪೆಗಾಸಸ್ ತಂತ್ರಾಂಶ ನುಸುಳಿ ಬಂದಿದೆಯೇ ಇಲ್ಲವೇ? ಸರ್ಕಾರ ಅಥವಾ ಸರ್ಕಾರಿ ಸಂಸ್ಥೆಗಳು ಈ ತಂತ್ರಾಂಶವನ್ನು ಪಡೆದುಕೊಂಡಿದೆಯೇ ಇಲ್ಲವೇ? ಈ ತಂತ್ರಾಂಶ ಅಳವಡಿಕೆಗೆ ನೀಡಿದ ಹಣ ಎಷ್ಟು? ಸಚಿವರು ತಮ್ಮ ಮೊಬೈಲನ್ನು ತನಿಖೆಗೆ ಒಪ್ಪಿಸುವರೇ? ಸಚಿವರು ಈ ತಂತ್ರಾಂಶ ಎಲ್ಲ ಕಡೆ ಲಭ್ಯ. ಯಾರು ಎಲ್ಲಿ ಬೇಕಾದರೂ ಬಳಸಬಹುದು. ಸರ್ಕಾರ ಮತ್ತು ಸರ್ಕಾರಿ ಸಂಸ್ಥೆಗಳು ಇದನ್ನು ಬಳಸುತ್ತಿವೆ ಎಂದು ಹೇಳಿದ್ದಾರೆ. ಇಸ್ರೇಲ್ ಭದ್ರತಾ ಸಂಸ್ಥೆ ಇದನ್ನು ಎಲ್ಲ ಸರ್ಕಾರಗಳಿಗೆ ಮಾರಾಟ ಮಾಡಿದೆ. ಸಚಿವರು ಹೊಸಬರಾದರೂ ಈ ಪ್ರಶ್ನೆಗಳಿಗೆ ಮೊದಲು ಉತ್ತರ ನೀಡಬೇಕು. ಫ್ರಾನ್ಸ್ ಮತ್ತು ಇಸ್ರೇಲ್ ತನಿಖೆ ನಡೆಸುತ್ತಿದೆ. ಅದರ ವರದಿ ಬರುವುದಕ್ಕೆ ಮುನ್ನ ಕೇಂದ್ರ ಸರ್ಕಾರ ಎಲ್ಲವನ್ನೂ ಸ್ಪಷ್ಟಪಡಿಸಬೇಕು. ಇಲ್ಲಿ ತಂತ್ರಾಂಶದ ಸಮಸ್ಯೆ ತಲೆದೋರುವುದಿಲ್ಲ. ಇದನ್ನು ಯಾರು ಸ್ವದೇಶಕ್ಕೆ ತಂದರು. ಹೇಗೆ ತಂದರು ಎಂಬುದು ತಿಳಿಯಬೇಕು. ಸರ್ಕಾರದ ಗಮನಕ್ಕೆ ಬಾರದೆ ಇವುಗಳು ಬರುವುದಿಲ್ಲ. ಅಂತರರಾಷ್ಟ್ರೀಯ ಮಟ್ಟದಲ್ಲಿ ಇದರ ಬಳಕೆಗೂ ಸ್ವದೇಶದಲ್ಲಿ ಇದರ ಬಗ್ಗೆ ತನಿಖೆಗೆ ನಡೆದಾಗ ಮಾತ್ರ ನಿಜ ಏನು ಎಂಬುದು ತಿಳಿಯಬಹುದು. ಸತ್ಯಕ್ಕೆ ಹಲವು ಆಯಾಮಗಳಿರಬಹುದು. ಆದರೆ ಇದರ ಬಗ್ಗೆ ಸ್ಪಷ್ಟತೆ ಬೇಕೇ ಬೇಕು. ಮುಂದಿನ ದಿನಗಳಲ್ಲಿ ಈ ಹಗರಣ ವಿಶಾಲ ವ್ಯಾಪ್ತಿ ಪಡೆಯುವ ಅಪಾಯವಿದೆ. ಅದರಿಂದ ಈಗಲೇ ಇದರ ಮೂಲ ಉದ್ದೇಶ ಮತ್ತು ಇದರಿಂದ ಆಗುವ ಹಾನಿಯ ಬಗ್ಗೆ ತನಿಖೆ ನಡೆದು ಕೂಡಲೇ ಕ್ರಮ ಕೈಗೊಳ್ಳಬೇಕು. ಎಲ್ಲ ಕಡೆ ಇದೆ ಎಂದು ಉದಾಸೀನ ಮಾಡಲು ಬರುವುದಿಲ್ಲ. ಡಿಜಿಟಲ್ ರಂಗದಲ್ಲಿ ಇದು ಹಲವು ನಂಬಿಕೆಗಳ ಬುಡವನ್ನೇ ಅಲುಗಾಡಿಸಿದೆ. ಆದರೂ ಕಂಪ್ಯೂಟರ್ ಮೇಲೆ ಅವಲಂಬಿಕೆ ಸದ್ಯಕ್ಕೆ ನಿಲ್ಲುವುದಿಲ್ಲ. ದೇಶದ ರಕ್ಷಣೆಗೆ ಸಂಬಂಧಿಸಿದ ವಿಷಯಗಳ ಗೌಪ್ಯತೆ ಕಾಪಾಡುವ ಬಗ್ಗೆ ಚಿಂತನೆ ನಡೆಸುವುದು ಅಗತ್ಯ. ಹಿರಿಯ ದೇಶಗಳು ಈ ತಂತ್ರಾಂಶವನ್ನು ಚಿಕ್ಕ ದೇಶಗಳ ಮೇಲೆ ಪ್ರಯೋಗಿಸುವ ಅಪಾಯವು ಇದೆ.

ಆಧಾರ:–ಸಂಯುಕ್ತ ಕರ್ನಾಟಕ, ದಿನಾಂಕ:25.07.2021

## 16. We're not disrupting Parliament. PM, Shah are running away from questions

Parliament is witnessing protests by the Opposition over several issues, including Pegasus hacking affair, farmers' protest, price rise and fuel price hike, etc. Trinamool Congress Rajya Sabha floor leader Derek O'Brien tells DH's Shemin Joy Mamata Banerjee's ongoing visit to Delhi is important because there is a new belief that the Modi-Shah BJP can be defeated and that this is a crucial week in in Indian Politics.

**The Monsoon Session is on, but no substantial business has been done so far. What is your response to the criticism of disruption of the Session**

It's not the Opposition but the government which is disrupting Parliament. The government does not want Parliament to run. We want to hold the government accountable on many issues. I will prove to you how the Government does not want the Parliament to run. The Opposition is demanding a discussion on Pegasus. The government fielded the Information and Technology Minister to table a statement. That's not enough. One, you have used espionage warfare against your own citizens. Two, you have used military spyware against the media, against your own cabinet, against your opponents, against the judiciary and Monday morning, I learned that it also includes Army officials. You are setting up a surveillance state. This is an irrefuseable crime. As MPs, we want the Prime Minister and the Union Home Minister to come to Parliament and answer these questions. They are running away. So, they are disrupting, not us.

Rajya Sabha Chairman M Venkaiah Naidu has said that around 90 MPs had given notices to raise important issues but could not do it due to disruptions.

With due respect to the Chairman and the government, I am going to give you revealing statistics. There is a Parliamentary tool. In Lok Sabha, it is called 'adjournment motion' and in Rajya Sabha, it is 'Rule 267' for suspension of business to discuss issues that need to be discussed immediately. Is it a mere coincidence that from 2016, there has never been one discussion under this Rule? The migrant workers' plight was not an important issue to discuss? Demonetisation disaster was not an important issue to discuss under Rule 267? Now, you tell me where we use spyware is not an issue to discuss? You have to ask these questions to the BJP. You have to ask the BJP why only 11% of your bills scrutinized by the Parliamentary Committees during its government, where is the deputy speaker of the Lok Sabha, how many questions has the prime minister answered in Parliament? I will give you the number -- zero. Except for one hour on Thursday, when the Prime Minister comes and sits there in Rajya Sabha for question hour, and when he comes to make a speech, to deliver his 'Mann ki Baat' what is his participation in Parliament?

**In the Pegasus issue, we have seen the names of Opposition leaders, activists, journalists etc., surfacing. How are you going to raise it in Parliament**

What makes you think they (government) will want a discussion on Pegasus? Actually, I want to appeal to the senior members of the BJP to go and tell Modi and Shah that this 'taanashahi' (autocracy) will not work. I will give you another example. Why isn't the Opposition demanding a Joint Parliamentary probe? Because seeing the functioning of Standing Committees, it is crazy to demand a JPC probe. No truth will come out. So, there is a broad agreement among Opposition parties that the Prime Minister and the Home Minister have to answer the questions on Pegasus. Outside parliament, as Mamata Banerjee has said, as Rahul Gandhi has said, there should be a judicial probe.

**There are demands that there should be an oversight mechanism on intelligence agencies. What kind of mechanism should there be**

I am no technical expert. So, let me give you a simple thing on Pegasus. Did this government hire the software or acquire it from Pegasus? Yes or no? Who hired it? When was it hired? What is the cost? France is talking to Israel. In India, this government is saying all this has happened to disrupt the Monsoon Session!

**When you highlight this Pegasus issue, there is a feeling that you are ignoring the issues of price hike, fuel price hike which are really common man's problems. Is that a correct reading**

When a government has been there for seven years, they are answerable on many issues. You have to use whatever tactics and strategies that you command and communicate those issues. Let me give you three examples. Farmer bill, we did a dharna near Gandhi statue. Two, price rise and fuel price hike. It was raining, (yet) we came on bicycles to Parliament. The young man who couldn't arrange oxygen for his grandmother and running around, that is an issue. The Prime Minister said in February that "sab teek ho gaya" on Covid-19. So, it is not one issue. There are multiple issues. So, these are the questions people will ask Modi.

**Your party Chief and Bengal CM Mamata Banerjee is in Delhi currently. How politically significant is her visit?**

There is a new belief that these two - Modi and Shah - can be defeated. Overall, there is a new body language that the world's most bigoted, the richest party in the world can be defeated. This is a very important visit of Mamata Banerjee, this is a very important week for Indian politics. Obviously, she has said it, she is not seeking any chair, she is not seeking any post.

Courtesy: Deccan Herald, Dated: 27.07.2021

## 17. ಅಧಿವೇಶನದ ಆಚಾರಕ್ಕೆ ಬೇಕು ವಿಚಾರದ ಲೇಪ ಶಾಸಕರಿಗೊಂದು ಬಹಿರಂಗ ಮೊರೆ

ವಿಧಾನಮಂಡಲ ಅಧಿವೇಶನ ಎಂದರೆ ಜನ ಸಾಮಾನ್ಯರು ವಿಧಾನಸೌಧದಲ್ಲಿ ಕುಸ್ತಿ ನಡೆಯುತ್ತಾ ಎಂಬ ಕೆಟ್ಟ ಕುತೂಹಲದಿಂದ ಟಿವಿ ನೋಡುವ ಪರಿಸ್ಥಿತಿ ಇಂದು ಎದುರಾಗಿದೆ. ಜನಕಲ್ಯಾಣಕ್ಕೆ ಅನುಭವ ಮಂಟಪದಂತೆ ಕಾರ್ಯನಿರ್ವಹಿಸಬೇಕಾದ ಶಾಸನ ಸಭೆಯ ಘನತೆ ಕುಸಿಯುತ್ತಿರುವುದು ಸ್ಪಟಿಕದಷ್ಟೇ ಸ್ಪಷ್ಟ. ವರ್ಷಕ್ಕೆ ಮೂರೋ ಅಥವಾ ನಾಲ್ಕು ಬಾರಿ ನಡೆಯುವ ಅಧಿವೇಶನದ ಬಗೆಗೆ ಜನ ಸಾಮಾನ್ಯರು ಕುತೂಹಲ ಉಳಿಸಿಕೊಳ್ಳುವಂತೆ ನಡೆದುಕೊಳ್ಳಬೇಕಾದ ಬಹುದೊಡ್ಡ ಜವಾಬ್ದಾರಿ ಜನ ಪ್ರತಿನಿಧಿಗಳ ಮೇಲಿದೆ. ಜನರು ನಮ್ಮನ್ನು ಯಾವ ಕಾರಣಕ್ಕೆ ಆಯ್ಕೆ ಮಾಡಿದ್ದಾರೆ ಎಂಬ ಕನಿಷ್ಠ ಪ್ರಜ್ಞೆ ಇದ್ದರೆ ಶಾಸನಸಭೆಯ ಘನತೆ ತನ್ನಿಂದ ತಾನೆ ಹೆಚ್ಚುತ್ತದೆ. ವರ್ಷದ ಆರಂಭದಲ್ಲಿ ರಾಜ್ಯಪಾಲರು ಭಾಷಣ ಮಾಡುವ ಜಂಟಿ ಅಧಿವೇಶನ, ಅದಾದ ಬಳಿಕ ನಡೆಯುವ ಬಜೆಟ್ ಅಧಿವೇಶನ, ನಂತರ ಮುಂಗಾರು ಅಧಿವೇಶನ, ವರ್ಷದ ಕೊನೆಗೆ ಚಳಿಗಾಲದ ಅಧಿವೇಶನ ನಡೆಸುವ ಸಂಪ್ರದಾಯ ಇದೆಯಾದರೂ ಇತ್ತೀಚೆಗೆ ಕೊರೋನಾ ಕಾರಣದಿಂದ ಅಧಿವೇಶನದ ವಾರ್ಷಿಕ ದಿನಗಳಲ್ಲಿ ಇಳಿಕೆಯಾಗುತ್ತಿದೆ. ಹೀಗಾಗಿ ಜನ ಪ್ರತಿನಿಧಿಗಳು ಹಿಂದೆಂದಿಗಿಂತ ಹೆಚ್ಚು ಭರವಸೆ ಹುಟ್ಟಿಸುವ ರೀತಿಯಲ್ಲಿ ಸದನದಲ್ಲಿ ಸಹಭಾಗಿತ್ವ ಪ್ರದರ್ಶಿಬೇಕಾಗಿದೆ.

ಶಾಸನ ಸಭೆ ಪ್ರಜಾಪ್ರಭುತ್ವದ ದೇಗುಲ. ಒಂದು ದೇಶ ಅಥವಾ ಒಂದು ರಾಜ್ಯವು ತನ್ನ ಗುರುತರ ಕರ್ತವ್ಯಗಳನ್ನು ನಿರ್ವಹಿಸಲು ಅನುಸರಿಸಬೇಕಾದ ಮಾರ್ಗದರ್ಶಿ ಸೂತ್ರಗಳನ್ನು ರೂಪಿಸುವ ಅತ್ಯಂತ ಪವಿತ್ರವಾದ ಮನೆ ಎಂದೇ ಶಾಸನ ಸಭೆಗಳನ್ನು ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಗೌರವಿಸುತ್ತೇವೆ. ಜನರ ಆಶಯಗಳಿಗೆ ಕಿವಿಗೊಡುವ ಇಂದ್ರಿಯಗಳನ್ನು ಶಾಸನಸಭೆ ಸದಾಕಾಲ ಜೀವಂತವಾಗಿರಿಸಿಕೊಳ್ಳಬೇಕು. ಆವರನ್ನಾಳುವ ಸರ್ಕಾರಗಳು ರಾಜಕೀಯ ಪಕ್ಷಗಳಿಂದ ರಚನೆ ಆಗುವುದರಿಂದ ಪಕ್ಷಗಳು ಬದಲಾದರು ಅವುಗಳ ಗುರಿ ಮತ್ತು ಧ್ಯೇಯೋದ್ದೇಶಗಳು ಬದಲಾಗುವುದಿಲ್ಲ. ದೇಶದ ಸ್ವಾತಂತ್ರ್ಯದ ಅಮೃತ ಮಹೋತ್ಸವದ ಹೊಸ್ತಿಲಲ್ಲಿರುವ ನಾವು ನಮ್ಮ ಶಾಸನ ಸಭೆಗಳ ಬಗ್ಗೆ ಅತ್ಯಂತ ತೃಪ್ತಿಕರ ಅಭಿಪ್ರಾಯ ಹೊಂದಿದ್ದೇವೆ ಎಂದು ಎದೆತಟ್ಟಿ ಹೇಳುವುದು ಕಷ್ಟ. ಕೇವಲ ಕರ್ನಾಟಕವನ್ನು ದೃಷ್ಟಿಯಲ್ಲಿಟ್ಟುಕೊಂಡು ನೋಡಿದರೆ ಅಷ್ಟೇನು ಸಕಾರಾತ್ಮಕ ಉತ್ತರ ಸಿಗುವುದು ಕಷ್ಟವೇ. ಕೇವಲ ಗದ್ದಲ ಆರೋಪ–ಪ್ರತ್ಯಾರೋಪ, ನಿಂದನೆ, ವೈಯಕ್ತಿಕ ವಾಗ್ದಾಳಿಗಳು, ಶಾಸಕರ ಅಧಿಕೃತ ಮತ್ತು ಅನಧಿಕೃತ ಗೈರು ಹಾಜರಿ, ಸಚಿವರ ಅನಾದರ, ಪ್ರತಿಪಕ್ಷಗಳ ಬೇಜವಾಬ್ದಾರಿ ನಡವಳಿಕೆಗಳು ಹೀಗೆ ಹಲವು ಅಪಸ್ವರಗಳ ನಡುವೆ ಶಾಸನಸಭೆಗಳು ನಡೆಯುತ್ತವೆ.

ಕರ್ನಾಟಕ ವಿಧಾನ ಸಭೆ ಮತ್ತು ವಿಧಾನ ಪರಿಷತ್‌ಗೆ ಅತ್ಯಂತ ಶ್ರೀಮಂತ ಇತಿಹಾಸವಿದೆ. ದೇಶವೆ ತಿರುಗಿ ನೋಡುವಂತಹ ಸಂಸದೀಯ ಪಟುಗಳ ಹುಟ್ಟಿಗೆ ಈ ಮನೆಗಳು ಸಾಕ್ಷಿಯಾಗಿವೆ. ವಿಧಾನಮಂಡಲದ ಶ್ರೀಮತ ಇತಿಹಾಸದ ನಡುವೆಯೂ ಕಪ್ಪು ಚುಕ್ಕೆಯಂತಹ ಅನೇಕ ಘಟನೆಗಳು ನಡೆದಿವೆ. ಅದರಲ್ಲೂ ಕಳೆದ ಒಂದೂವರೆ ದಶಕಗಳಿಂದ ಕರ್ನಾಟಕ ವಿಧಾನಮಂಡಲ ಬೇಡದ ಕಾರಣಕ್ಕೆ ಹೆಚ್ಚು ಚರ್ಚೆಗೆ ಒಳಗಾಗಿದೆ. ಆದರೂ ಕೂಡ ಹೊಸ ಆಶಯ ಮತ್ತು ನೂತನ ಭರವಸೆಗಳೊಂದಿಗೆ ಶಾಸನಸಭೆಗಳಲ್ಲಿ ಜನಪರ ಚಿಂತನೆಗಳು, ಜನಸಾಮಾನ್ಯರ ಬದುಕನ್ನು ಹಸನುಗೊಳಿಸುವ ವಿಚಾರಗಳು, ನೀತಿ–ನಿಯಮಗಳ ಸಂರಚನೆ ಇಲ್ಲಿ ನಡೆಯಬೇಕೆಂದು ಜನರು ಬಯಸುತ್ತಾರೆ.

ಸರಿ ಸುಮಾರು ಆರು ತಿಂಗಳ ಬಳಿಕ ಮತ್ತೊಮ್ಮೆ ವಿಧಾನಮಂಡಲ ಅಧಿವೇಶನ ನಡೆಯುತ್ತಿದೆ. ಹೊಸದಾಗಿ ಮುಖ್ಯಮಂತ್ರಿಯಾದ ಬಸವರಾಜ ಬೊಮ್ಮಾಯಿ ನೇತೃತ್ವದ ಸರ್ಕಾರದ ಮೊದಲ ಅಧಿವೇಶನ ಇದಾಗಿದೆ. ಸುಮಾರು 10 ದಿನಗಳ ಕಾಲ ನಡೆಯುವ ಅಧಿವೇಶನದಿಂದ ಜನರು

ನಿರೀಕ್ಷಿಸುವ ರೀತಿಯ ಚರ್ಚೆಗಳು, ಶಾಸನ ರಚನೆಯ ಚಟುವಟಿಕೆಗಳು ನಡೆಯಬೇಕಾಗಿದೆ. ಅಧಿವೇಶನ ನಡೆಯುವ ಅವಧಿಯಲ್ಲಿ ಪಕ್ಷಾತೀತವಾಗಿ ಶಾಸಕರು ಚರ್ಚೆಗಳಲ್ಲಿ ಭಾಗವಹಿಸುವುದಿಲ್ಲ ಎಂಬುದು ಸಾರ್ವಜನಿಕ ದೂರು. ಯಾವುದೇ ಪಕ್ಷ ಆಡಳಿತ ನಡೆಸಿದರು ವಿಧಾನಮಂಡಲದ ಸದಸ್ಯರ ಹಾಜರಾತಿ ಕೊರತೆ ಸದಾ ಕಾಡುತ್ತದೆ. ಯಾವ ಕಾರಣಕ್ಕೆ ಶಾಸಕರು ಸದನದಲ್ಲಿ ಕಾಯ, ವಾಚಾ, ಮನಸಾ ಪಾಲ್ಗೊಳ್ಳುವುದಿಲ್ಲ ಎಂಬ ರಹಸ್ಯವನ್ನು ಈವರೆಗೂ ಭೇದಿಸಲು ಸಾಧ್ಯವಾಗಿಲ್ಲ. ಅತ್ತ ಕ್ಷೇತ್ರದಲ್ಲೂ ಹೆಚ್ಚು ಕಾಣಿಸದ, ಇತ್ತ ಸದನದಲ್ಲೂ ಹಾಜರಾತಿ ಇಲ್ಲದ ಶಾಸಕರು ಅದಾವ ಘನ ಕಾರ್ಯದ ನಿಮಿತ್ತ ಸದನಕ್ಕೆ ಚಕ್ಕರ್ ಹಾಕುತ್ತಾರೆ ಎಂಬುದು ಗೊತ್ತೇ ಆಗುವುದಿಲ್ಲ. ಅನೇಕ ಸದಸ್ಯರು ಕಾಟಾಚಾರಕ್ಕೆ ಎಂಬಂತೆ ಸದನಕ್ಕೆ ಬರುತ್ತಾರೆ. ಸದನಕ್ಕೆ ಬಂದವರು ಒಣ ಹರಟೆ, ತಿಂಡಿ, ಚಹಾ, ಕಾಫಿಗಾಗಿ ಹೆಚ್ಚು ಸಮಯ ವ್ಯಯ ಮಾಡುತ್ತಾರೆ. ಅನೇಕ ಸಂದರ್ಭದಲ್ಲಿ ಸ್ಪೀಕರ್ ನಿರಂತರ ಗಂಟೆ ಬಾರಿಸಿದರು ತಮ್ಮ ಸ್ಥಾನದಲ್ಲಿ ಕುಳಿತುಕೊಳ್ಳುವ ಔದಾರ್ಯ ಅಥವಾ ಸೌಜನ್ಯವನ್ನು ಸದಸ್ಯರು ತೋರುವುದಿಲ್ಲ. ಇದು ಆಡಳಿತ ಮತ್ತು ವಿರೋಧ ಪಕ್ಷಗಳ ಸದಸ್ಯರುಗಳೆಲ್ಲರಿಗೂ ಅಂಟಿರುವ ಪಿಡುಗು.

ಇನ್ನು ಸರ್ಕಾರವನ್ನು ನಡೆಸುವ ಮಹತ್ವದ ಜವಾಬ್ದಾರಿ ಹೊಂದಿರುವ ಸಚಿವರು ಕೂಡ ತಮ್ಮ ಇಲಾಖೆಗೆ ಸಂಬಂಧಿಸಿದ ಸಂಪೂರ್ಣ ಮಾಹಿತಿಯನ್ನು ಹೊತ್ತು ಸದನಕ್ಕೆ ಬರುವುದು ತೀರಾ ಅಪರೂಪ. ಶಾಸನ ಸಭೆಗಳಲ್ಲಿ ಶಾಸಕರು ಕೇಳುವ ಪ್ರಶ್ನೆಗಳಿಗೆ ಬಹುತೇಕ ಸಮಯ ಸಚಿವರ ಬಳಿ ಉತ್ತರ ಇರುವುದೇ ಇಲ್ಲ. ಸಂಬಂಧಪಟ್ಟ ಶಾಸಕರಿಗೆ ನಂತರ ಉತ್ತರ ದೊರಕಿಸಿಕೊಡಲಾಗುವುದು ಎಂಬ ಸಿದ್ಧ ಉತ್ತರದಲ್ಲೇ ಸಚಿವರು ತೃಪ್ತರಾಗುತ್ತಾರೆ. ಜನರ ಸಮಸ್ಯೆಗಳಿಗೆ ತಾರ್ಕಿಕ ಪರಿಹಾರ ಸಿಗುವುದು ತೀರಾ ಅಪರೂಪ. ಸಚಿವರಲ್ಲೇ ಎರಡು ರೀತಿಯ ವರ್ತನೆಗಳಿವೆ. ಕೆಲವು ಸಚಿವರು ಅತ್ಯಂತ ಬುದ್ಧಿವಂತರಾಗಿದ್ದು ಉತ್ತರ ಕೊಡುವುದನ್ನು ಹೇಗೆ ತಪ್ಪಿಸಬೇಕೆಂದು ನುರಿತವರಾಗಿರುತ್ತಾರೆ. ಎರಡನೇ ವರ್ಗದ ಸಚಿವರಿಗೆ ಅಧಿಕಾರಿಗಳಿಗೆ ಉತ್ತರ ಪಡೆಯುವ ಸಾಮರ್ಥ್ಯ ಅಥವಾ ಜ್ಞಾನವೇ ಇರುವುದಿಲ್ಲ. ಎರಡನೇ ವರ್ಗದ ಸಚಿವರಿಗಿಂತ ಒಂದನೇ ವರ್ಗದ ಸಚಿವರು ಅಪಾಯಕಾರಿ, ಸರ್ಕಾರಿ ಯಂತ್ರದ ಮೇಲೆ ಸಂಪೂರ್ಣ ಹಿಡಿತ ಸಾಧಿಸಿ ಶಾಸನಸಭೆಯ ಮೂಲ ಉದ್ದೇಶವನ್ನೇ ಬುಡಮೇಲು ಮಾಡುವಂತಹ ಕೃತ್ಯಗಳು ಸದನದಲ್ಲಿ ಆಗಾಗ ನಡೆಯುವುದನ್ನು ನೋಡಿಕೊಂಡು ಜನರು ಸುಮ್ಮನಿರುವ ಪರಿಸ್ಥಿತಿ ಇದೆ.

ಶಾಸಕರು ಮತ್ತು ಸಚಿವರ ಸ್ಥಿತಿ ಹೀಗಿದ್ದರೆ ಇನ್ನು ಸರ್ಕಾರದ ಎಲ್ಲ ಇಲಾಖೆಗಳ ಸಮಗ್ರ ಮಾಹಿತಿಯನ್ನು ಸದನಕ್ಕೆ ಒದಗಿಸುವ ಅಧಿಕಾರಿ ವರ್ಗದ ಕತೆ ಇದಕ್ಕಿಂತ ಗಂಭೀರವಾದುದು. ಶಾಸಕರು, ಸಚಿವರು ಕೆಲವು ಬಾರಿ ಮುಖ್ಯಮಂತ್ರಿಗಳಿಗಿಂತಲೂ ಅತ್ಯಂತ ಪ್ರಬಲವಾಗಿರುವ ಅಧಿಕಾರಿ ವರ್ಗ ಸದನಕ್ಕೆ ನೀಡುವ ಗೌರವ ಆನೇಕ ಸಲ ಪ್ರಶ್ನಾರ್ಹವೇ ಆಗಿರುತ್ತದೆ. ಸರ್ಕಾರವನ್ನು ಪ್ರತಿಪಕ್ಷಗಳನ್ನು ಯಾಮಾರಿಸಿ ಅದಕ್ಷತೆ ಮೆರೆಯುವ ಬಹುದೊಡ್ಡ ಗುಂಪು ಅಧಿಕಾರಿ ವರ್ಗದಲ್ಲಿ ಇರುತ್ತದೆ. ಸಾಮಾನ್ಯವಾಗಿ ಶಾಸನಸಭೆಗಳಲ್ಲಿ ಸರ್ಕಾರದ ಪರವಾಗಿ ಉತ್ತರಗಳನ್ನು ಮತ್ತು ಅಗತ್ಯ ಮಾಹಿತಿಯನ್ನು ಸಂಬಂಧಪಟ್ಟ ಸಚಿವರಿಗೆ ಒದಗಿಸುವ ಜವಾಬ್ದಾರಿ ಐಎಎಸ್ ಅಧಿಕಾರಿಗಳದ್ದೇ ಆಗಿರುತ್ತದೆ. ಐಎಎಸ್ ಇಲ್ಲವೇ ಹಿರಿಯ ಶ್ರೇಣಿಯ ಕೆಎಎಸ್ ಅಧಿಕಾರಿಗಳು ಸದನದಲ್ಲಿ ಕಡ್ಡಾಯವಾಗಿ ಹಾಜರಾಗಿದ್ದು, ಸದನವು ಅರ್ಥಪೂರ್ಣವಾಗಿ ನಡೆಯುವಂತೆ ಮಾಡುವ ಜವಾಬ್ದಾರಿ ಇವರ ಮೇಲಿರುತ್ತದೆ. ವಿಚಿತ್ರವೆಂದರೆ ಸರ್ಕಾರದ ಸ್ಪಷ್ಟ ಎಚ್ಚರಿಕೆಯ ನಡುವೆಯು ಅನೇಕ ಸಲ ಅಧಿಕಾರಿಗಳು ಗೈರು ಹಾಜರಾಗಿರುತ್ತಾರೆ. ಶಾಸಕರು, ಸಚಿವರು, ಹಿರಿಯ ಅಧಿಕಾರಿ ವರ್ಗದ ಪ್ರಾಮಾಣಿಕ ಪಾಲ್ಗೊಳ್ಳುವಿಕೆಯಿಂದ ಮಾತ್ರ ಶಾಸನ ಸಭೆಗಳು ಸುಸೂತ್ರವಾಗಿ ನಡೆಯಲು ಸಾಧ್ಯ ಹಾಗೂ ಶಾಸನ ಸಭೆಯ ಉದ್ದೇಶ ಈಡೇರಲು ಸಾಧ್ಯ. ಆಶಾದಾಯಕ ಸಂಗತಿ ಎಂದರೆ ವಿಧಾನ ಸಭೆಯ ಅಧ್ಯಕ್ಷರಾಗಿ ವಿಶ್ವೇಶ್ವರ ಹೆಗಡೆ, ಕಾಗೇರಿ ಹಾಗೂ ವಿಧಾನ ಪರಿಷತ್ ಅಧ್ಯಕ್ಷರಾಗಿ ಬಸವರಾಜ ಹೊರಟ್ಟಿ ಅವರು ನೇಮಕಗೊಂಡ ಬಳಿಕ ಉಭಯ

ಸದನಗಳಲ್ಲಿ ಕೆಲವು ಸಕಾರಾತ್ಮಕ ಚಿಂತನೆಗಳಿಗೆ ಚಾಲನೆ ಸಿಕ್ಕಿದೆ. ಸ್ಪೀಕರ್ ಕಾಗೇರಿ ಅವರಂತು ಈಗಾಗಲೇ ದುಂಡು ಮೇಜಿನ ಸಭೆಗಳನ್ನು ನಡೆಸಿ, ಕೆಲವು ಕಾನೂನಾತ್ಮಕ ಚೌಕಟ್ಟು ತರುವ ಪ್ರಯತ್ನವನ್ನು ಆರಂಭಿಸಿದ್ದಾರೆ. ಸಭಾಪತಿಯವರು ಕೂಡ ತೀರಾ ಶಿಷ್ಟಾಚಾರಕ್ಕೆ ಕಟ್ಟುಬೀಳದೆ ಸರ್ಕಾರದ ಜೊತೆಗೆ ಅನೌಪಚಾರಿಕ ಸಭೆಗಳನ್ನು ನಡೆಸಿ ಸದನ ಮತ್ತು ಸದನದ ಸದಸ್ಯರ ಹಕ್ಕುಗಳ ರಕ್ಷಣೆಗೆ ಮುಂದಾಗಿದ್ದಾರೆ. ಮುಖ್ಯಮಂತ್ರಿಯವರು ಕೂಡ ಉತ್ತಮ ಸಂಸದೀಯ ಪಟು. ಅಲ್ಲದೇ ದಕ್ಷ ಆಡಳಿತದ ಬಗೆಗೆ ಅನೇಕ ಸಲ ಗಮನ ಸೆಳೆಯುವಂತೆ ಮಾತನಾಡಿದ್ದಾರೆ ಕೂಡ. ಕನಿಷ್ಠ ಪಕ್ಷ ಆರಂಭವಾಗುವ 10 ದಿನಗಳ ಅಧಿವೇಶನ ಜನರ ಆಶಯಗಳಿಗೆ ತಕ್ಕಂತೆ ಜನರಿಗೆ ಉತ್ತರದಾಯಿತ್ವದ ರೀತಿಯಲ್ಲಿ ನಡೆಯಲಿ ಎಂಬುದು ರಾಜ್ಯದ ಜನರ ಆಶಯ.

ಲೇಖಕರು:ಶಿವಕುಮಾರ ಮೆಣಸಿನಕಾಯಿ,<br>ಹಿರಿಯ ವಿಶೇಷ ಪ್ರತಿನಿಧಿ<br>ಆಧಾರ: ಸಂಯುಕ್ತ ಕರ್ನಾಟಕ, ದಿನಾಂಕ:02.08.2021.

## 18. ಬಾಲ ನ್ಯಾಯ ಕಾಯಿದೆಗೆ ಬಹುಪರಾಕ್

2021ರ ಬಾಲ ನ್ಯಾಯ ತಿದ್ದುಪಡಿ ಕಾಯಿದೆ ವಿಧೇಯಕಕ್ಕೆ ರಾಜ್ಯ ಸಭೆಯು ಅನುಮೋದನೆ ನೀಡಿದೆ. ಕಳೆದ ಮಾರ್ಚ್‌ನಲ್ಲಿ ಈ ವಿಧೇಯಕಕ್ಕೆ ಲೋಕಸಭೆಯಲ್ಲಿ ಆಡಳಿತ ಮತ್ತು ಪ್ರತಿಪಕ್ಷಗಳಿಂದ ವ್ಯಾಪಕ ಪ್ರಶಂಸೆ ವ್ಯಕ್ತವಾಗಿತ್ತು. ಈ ಹೊಸ ಕಾಯಿದೆಯು ಮಕ್ಕಳ ದತ್ತು ಸ್ವೀಕಾರಕ್ಕೆ ವೇಗ ನೀಡುವುದು ಮತ್ತು ಬಾಲಾಪರಾಧ ತಡೆಗೆ ಸಂಬಂಧಿಸಿದಂತೆ ಪ್ರಭಾವಶಾಲಿಯಾಗಿದೆ ಕಾಯಿದೆ ಬಗ್ಗೆ ಮಾಹಿತಿ ಇಲ್ಲಿದೆ.

**ಏನಿದು ಬಾಲ ನ್ಯಾಯ ಕಾಯಿದೆ ಈಗೇಕೆ ತಿದ್ದುಪಡಿ:** 2000ರ ಬಾಲಾಪರಾಧ ಮತ್ತು ಬಾಲ ನ್ಯಾಯ (ಕಾಳಜಿ ಮತ್ತು ರಕ್ಷಣೆ) ಕಾಯಿದೆಯ ಬದಲಿಗೆ 2015ರಲ್ಲಿ ಸಂಸತ್ತು ಹೊಸ ವಿಧೇಯಕವನ್ನು ಮಂಡಿಸಿ ಅನುಮೋದನೆ ಪಡೆದುಕೊಂಡಿತ್ತು. ಅಪರಾಧವನ್ನು ನಿರ್ಣಯಿಸುವ ಸಂಬಂಧ 16 ರಿಂದ 18 ವರ್ಷದೊಳಗಿನ ಅಪ್ರಾಪ್ತರನ್ನು ವಯಸ್ಕರ ರೀತಿಯಲ್ಲಿ ವಿಚಾರಣೆ ನಡೆಸಲು 2015ರಲ್ಲಿ ಅನುಷ್ಠಾನಗೊಂಡ ಕಾಯಿದೆ ಅವಕಾಶ ಕಲ್ಪಿಸಿತ್ತು. ಅಪರಾಧದ ಸ್ವರೂಪ, ಆರೋಪಿಯನ್ನು ಅಪ್ರಾಪ್ತ ವಯಸ್ಕ ಮತ್ತು ವಯಸ್ಕರು ಎಂದು ನಿರ್ಧರಿಸುವ ಅಧಿಕಾರವನ್ನು ಬಾಲ ನ್ಯಾಯ ಮಂಡಳಿಗೆ ನೀಡಲಾಯಿತು. 2012ರ ನಿರ್ಭಯಾ ಪ್ರಕರಣದ ಹಿನ್ನೆಲೆಯಲ್ಲಿ ಈ ಹೊಸ ಅಧಿನಿಯಮವನ್ನು ಸೇರಿಸಲಾಗಿತ್ತು. ಇದೀಗ ಈ ಕಾಯಿದೆಗೆ ಮತ್ತಷ್ಟು ತಿದ್ದುಪಡಿಗಳನ್ನು ತಂದು ಹೆಚ್ಚು ಪರಿಣಾಮಕಾರಿಯಾಗಿ ಮಾಡಲಾಗಿದೆ.

ತಿದ್ದುಪಡಿಯಲ್ಲಿನ ಎರಡನೇ ಗಮನಾರ್ಹ ಸಂಗತಿಯು ಮಕ್ಕಳ ದತ್ತು ಸ್ವೀಕಾರ ಮತ್ತೂ ವಿವಾಹ ಕಾಯಿದೆ ಮತ್ತೂ ಮುಸ್ಲಿಮರಿಗೆ ಸಂಬಂಧಿಸಿದ ಮಕ್ಕಳ ಪೋಷಕರ ಕಾಯಿದೆಯ ಬದಲಿಗೆ ಹೆಚ್ಚು ಸಾರ್ವತ್ರಿಕ ಸ್ವೀಕಾರ ಸ್ವರೂಪದ ನಿಯಮಗಳನ್ನು ಒಳಗೊಂಡಿದೆ. ಹಾಗಂತ ಈ ಕಾಯಿದೆಗಳನ್ನೇನೂ ತಿದ್ದುಪಡಿ ಬದಲಿಸಿಲ್ಲ. ಆದರೆ, ಅನಾಥರು ಪರಿತ್ಯಕ್ತ ಮಕ್ಕಳು ಮತ್ತು ಶರಣಾದ ಮಕ್ಕಳ ದತ್ತು ಸ್ವೀಕಾರ ಪ್ರಕ್ರಿಯೆಯನ್ನು ಸರಳಗೊಳಿಸಿದೆ. ಜೊತೆಗೆ ಈ ಪ್ರಕ್ರಿಯೆಯನ್ನು ಹೆಚ್ಚು ಪರಿಣಾಮಕಾರಿಯಾಗಿ ನಿರ್ವಹಿಸಲು ಕೇಂದ್ರ ದತ್ತು ಸ್ವೀಕಾರ ಸಂಪನ್ಮೂಲ ಪ್ರಾಧಿಕಾರಕ್ಕೆ ಶಾಸನಬದ್ಧ ಅಧಿಕಾರವನ್ನು ಕಲ್ಪಿಸಲಾಗಿದೆ.

**ಹೊಸ** ಕಾಯಿದೆಯ ಅಗತ್ಯವೇನಿದೆ: 2015ರ ಬಾಲನ್ಯಾಯ ಕಾಯಿದೆ ಜಾರಿಯಲ್ಲಿದ್ದಾಗಲೇ ಅದಕ್ಕೆ ತಿದ್ದುಪಡಿ ತಂದು ಹೊಸ ವಿಧೇಯಕಕ್ಕೆ ಒಪ್ಪಿಗೆ ಪಡೆಯುವ ಅಗತ್ಯವೇನಿದೆ ಎಂಬ ಪ್ರಶ್ನೆ ಸಹಜ. ಆದರೆ, ಈ ಹೊಸ ವಿಧೇಯಕವು ಸಕಾರಾತ್ಮಕ ಸಂಗತಿಗಳನ್ನು ಒಳಗೊಂಡಿದೆ. ಮಹಿಳಾ ಮತ್ತು ಮಕ್ಕಳ ಕಲ್ಯಾಣ ಸಚಿವೆ ಸ್ಮೃತಿ ಇರಾನಿ ಅವರು ಈಗ ನಡೆಯುತ್ತಿರುವ ಅಧಿವೇಶನದ ವೇಳೆ ರಾಜ್ಯಸಭೆಯಲ್ಲಿ ವಿಧೇಯಕ

ಮಂಡಿಸಿ ಒಪ್ಪಿಗೆ ಪಡೆಯಲು ಯಶಸ್ವಿಯಾಗಿದ್ದಾರೆ. ಇದು ಜಿಲ್ಲಾ ಮಟ್ಟದಲ್ಲಿ ಮಕ್ಕಳ ಪ್ರಕರಣಗಳ ತ್ವರಿತ ವಿಚಾರಣೆ ಮತ್ತು ಹೆಚ್ಚಿನ ರಕ್ಷಣೆಯನ್ನು ಖಚಿತಪಡಿಸಿಕೊಳ್ಳುತ್ತದೆ ಎಂದು ಸಚಿವೆ ಹೇಳಿದ್ದರು. ಇದರ ಜೊತೆಗೆ ಹೊಸ ವಿಧೇಯಕವು ಮಕ್ಕಳ ದತ್ತು ಪ್ರಕ್ರಿಯೆಯನ್ನು ವೇಗಗೊಳಿಸಲಿದೆ.

**ಮಕ್ಕಳ** ದತ್ತು ಪ್ರಕ್ರಿಯೆಗೆ ವೇಗ: ಹೊಸ ತಿದ್ದುಪಡಿಯ ಪ್ರಕಾರ, ಜಿಲ್ಲಾಧಿಕಾರಿಗಳು ದತ್ತು ಸ್ವೀಕಾರ ಆದೇಶಗಳನ್ನು ಮಾಡಬಹುದಾಗಿದೆ. ಸದ್ಯ ದತ್ತು ಸ್ವೀಕಾರ ಪ್ರಕ್ರಿಯೆ ನ್ಯಾಯಾಲಯಗಳ ವ್ಯಾಪ್ತಿಗೆ ಸೇರಿದೆ. ಆದರೆ, ಈ ಪ್ರಕ್ರಿಯೆಯಲ್ಲಿ ಸಾಕಷ್ಟು ವಿಳಂಬವಾಗುತ್ತಿದೆ. ಒಂದೊಂದು ದತ್ತು ಸ್ವೀಕಾರ ಪ್ರಕರಣ ಸಂಬಂಧ ಆದೇಶ ನೀಡಲು ವರ್ಷಗಳೇ ಬೇಕಾಗುತ್ತಿವೆ. ಈ ಹಿನ್ನೆಲೆಯಲ್ಲಿ ಜಿಲ್ಲಾಧಿಕಾರಿಗಳಿಗೆ ಹೊಸ ಕಾಯಿದೆ ಅಧಿಕಾರ ನೀಡುವುದರಿಂದ ದತ್ತು ಸ್ವೀಕಾರ ಪ್ರಕ್ರಿಯೆಗೆ ವೇಗ ಸಿಗಲಿದೆ. ಬಹಳಷ್ಟು ಅನಾಥ ಮಕ್ಕಳು ಆಶ್ರಯ ಪಡೆಯಲು ಸಾಧ್ಯವಾಗಲಿದೆ.

**ಏನೇನು ಬದಲಾವಣೆ:**

- 2015ರ ಕಾಯಿದೆಯ ಪ್ರಕಾರ ಅಪ್ರಾಪ್ತ ವಯಸ್ಸಿನವರು ಮಾಡುವ ಅಪರಾಧಗಳನ್ನು ಘೋರ, ಗಂಭೀರ ಮತ್ತು ಸಣ್ಣಮಟ್ಟ ಅಪರಾಧಗಳೆಂದು ವಿಂಗಡಿಸಲಾಗುತ್ತದೆ. ಗಂಭೀರ ಬಾಲಾಪರಾಧಿಗಳಿಗೆ ಮೂರರಿಂದ ಏಳು ವರ್ಷಗಳ ಕಾಲ ಜೈಲು ಶಿಕ್ಷೆ ವಿಧಿಸಬಹುದು.
- ಘೋರ ಅಪರಾಧ ಮಾಡುವ ಅಪ್ರಾಪ್ತ ವಯಸ್ಕರಿಗೆ ಕನಿಷ್ಠ ಅಥವಾ ಗರಿಷ್ಠ 7 ವರ್ಷಗಳ ಕಾಲ ಶಿಕ್ಷೆ ವಿಧಿಸಬಹುದು. ಆದರೆ, 2015ರ ಕಾಯಿದೆಯಡಿ 16 ರಿಂದ 18 ವರ್ಷದೊಳಗಿನವರು ಘೋರ ಅಪರಾಧ ಮಾಡಿದ್ದರೆ ಅಂಥವರನ್ನು ವಯಸ್ಕರ ನ್ಯಾಯ ವ್ಯವಸ್ಥೆಯಡಿಯೇ ವಿಚಾರಣೆ ನಡೆಸಿ ಶಿಕ್ಷಿಸಲಾಗುತ್ತದೆ.
- ಆದರೆ, ಈ ಹೊಸ ವಿಧೇಯಕವು ಗಂಭೀರ ಅಪರಾಧಿಗೆ ಏಳು ವರ್ಷಕ್ಕಿಂತ ಮೇಲ್ಪಟ್ಟು ಗರಿಷ್ಠ ಶಿಕ್ಷೆಯ ಬಗ್ಗೆ ಯಾವುದೇ ಉಲ್ಲೇಖವಿಲ್ಲ ಅಥವಾ ಅದು 7 ವರ್ಷಕ್ಕಿಂತ ಕಡಿಮೆಯೀ ಇರಬಹುದು.
- ಘೋರ ಮತ್ತು ಗಂಭೀರ ಅಪರಾಧಗಳೆರಡನ್ನು ಮೊದಲ ಬಾರಿಗೆ ಸ್ಪಷ್ಟಪಡಿಸಲಾಗಿದ್ದು, ಈ ವಿಷಯದಲ್ಲಿ ಅಸ್ಪಷ್ಟತೆಯನ್ನು ತೆಗೆದು ಹಾಕಲಾಗಿದೆ. ಸಾಧ್ಯವಾದಷ್ಟು ಮಕ್ಕಳನ್ನು ರಕ್ಷಿಸಿ ಮತ್ತು ವಯಸ್ಕ ನ್ಯಾಯ ವ್ಯವಸ್ಥೆಯಿಂದ ಹೊರಗಿಡುವ ಪ್ರಯತ್ನ ಮಾಡಲಾಗಿದೆ.
- 7 ವರ್ಷಗಳ ಶಿಕ್ಷೆಯನ್ನು ಖಚಿತಪಡಿಸುವ ಘೋರ ಅಪರಾಧವು ಬಹುತೇಕ ಲೈಂಗಿಕ ದೌರ್ಜನ್ಯ ಮತ್ತು ಕ್ರೂರ ಲೈಂಗಿಕ ಅಪರಾಧಗಳಿಗೆ ಸಂಬಂಧಿಸಿದ್ದಾಗಿದೆ.
- ಸದ್ಯ ಕನಿಷ್ಠ ಶಿಕ್ಷೆ ಮತ್ತು ಗರಿಷ್ಠೇಳು ವರ್ಷಗಳ ಶಿಕ್ಷೆಯ ಉಲ್ಲೇಖವಿಲ್ಲದೆ, 16–18 ವರ್ಷ ವಯಸ್ಸಿನೊಳಗಿನ ಅಪ್ರಾಪ್ತರನ್ನು ಮಾದಕ ವಸ್ತುಗಳಂತಹ ಕಾನೂನುಬಾಹಿರ ಪ್ರಕರಣ ಮಾರಾಟದಂತಹ ಅಪರಾಧಕ್ಕಾಗಿ ವಯಸ್ಕರ ರೀತಿಯಲ್ಲಿ ವಿಚಾರಣೆಗೆ ಒಳಪಡಬಹುದು.

- ಏಳು ವರ್ಷಕ್ಕಿಂತ ಹೆಚ್ಚು ಶಿಕ್ಷೆ ಒಳಗೊಂಡ ಗಂಭೀರ ಪ್ರಕರಣಗಳನ್ನು ಮಕ್ಕಳ ನ್ಯಾಯಾಲಯದಿಂದ ವಿಚಾರಣೆ ಮಾಡಲಾಗುತ್ತದೆ. ಏಳು ವರ್ಷಕ್ಕಿಂತ ಕಡಿಮೆ ಶಿಕ್ಷೆಯ ಸ್ವರೂಪದ ಪ್ರಕರಣಗಳ ವಿಚಾರಣೆಯನ್ನು ಜುಡಿಷಿಯಲ್ ಮ್ಯಾಜಿಸ್ಟ್ರೇಟ್ ವಿಚಾರಣೆ ಮಾಡುತ್ತಾರೆ.

**ಮಕ್ಕಳ** ಕಲ್ಯಾಣ ಸಮಿತಿ: ಮಕ್ಕಳ ಕಲ್ಯಾಣ ಸಮಿತಿಗಳನ್ನು ಬಲಪಡಿಸುವ ಕಾರ್ಯವನ್ನು ಹೊಸ ಕಾಯಿದೆ ಮಾಡಲಿದೆ. ಮಕ್ಕಳ ಕಲ್ಯಾಣ ಸಮಿತಿಗಳಿಗೆ ನೇಮಕಗೊಳ್ಳುವ ಸದಸ್ಯರ ಶೈಕ್ಷಣಿಕ ಅರ್ಹತೆ ಸೇರಿದಂತೆ ಅವರ ಹಿನ್ನೆಲೆಯ ಬಗ್ಗೆ ಜಿಲ್ಲಾಧಿಕಾರಿಗಳು ಪರೀಕ್ಷಿಸಬಹುದು. ಮೊದಲು ಈ ಅಧಿಕಾರ ಇರಲಿಲ್ಲ. ಸಮಿತಿಗಳಿಗೆ ಸದಸ್ಯರನ್ನು ನೇಮಕ ಮಾಡುವ ಮುಂಚೆಯೇ ಅವರ ವಿರುದ್ಧ ಮಕ್ಕಳ ದೌರ್ಜನ್ಯ ಆರೋಪಗಳಿವೆಯೇ ಮಕ್ಕಳ ಲೈಂಗಿಕ ಶೋಷಣೆ ಪ್ರಕರಣಗಳು ದಾಖಲಾಗಿವೆಯೇ ಎಂಬುದನ್ನು ಪರೀಕ್ಷಿಸಿಕೊಳ್ಳಬಹುದಾಗಿದೆ. ಅದೇ ವೇಳೆ ಈ ಸಮಿತಿಗಳು ಹೊಸ ಕಾಯಿದೆಯ ಅನ್ವಯ ಜಿಲ್ಲಾ ಮಟ್ಟದಲ್ಲಿ ನಿಯಮಿತವಾಗಿ ಜಿಲ್ಲಾಧಿಕಾರಿಗೆ ವರದಿಯನ್ನು ಒಪ್ಪಿಸಬೇಕಾಗುತ್ತದೆ.

**ಜಿಲ್ಲಾಧಿಕಾರಿಗೆ** ಹೆಚ್ಚು ಪವರ್: ಹೊಸ ತಿದ್ದುಪಡಿ ಕಾಯಿದೆಯ ಜಿಲ್ಲಾ ದಂಡಾಧಿಕಾರಿಯೂ ಆಗಿರುವ ಜಿಲ್ಲಾಧಿಕಾರಿಗೆ ಹೆಚ್ಚಿನ ಅಧಿಕಾರವನ್ನು ಪ್ರಾಪ್ತಿ ಮಾಡಿದೆ. ಕಾಯಿದೆಯ ಸಮರ್ಪಕ ಜಾರಿ ಮತ್ತು ಸಂಕಷ್ಟ ಪರಿಸ್ಥಿತಿಯಿಂದ ಮಕ್ಕಳನ್ನು ಸುರಕ್ಷಿತಗೊಳಿಸುವ ಸಂಬಂಧ ಹೆಚ್ಚು ಅದ್ಯತೆ ನೀಡಲಾಗಿದೆ. ಅಂದರೆ, ಜಿಲ್ಲಾಧಿಕಾರಿ ಮತ್ತು ಹೆಚ್ಚುವರಿ ಜಿಲ್ಲಾಧಿಕಾರಿಗಳೂ ಬಲ ನ್ಯಾಯ ಕಾಯಿದೆಯಡಿ ಕಾರ್ಯನಿರ್ವಹಿಸುವ ಅನೇಕ ಸಂಸ್ಥೆಗಳ ಮೇಲ್ವಿಚಾರಣೆ ಮಾಡಬೇಕಾಗುತ್ತದೆ. ಇದರಲ್ಲಿ ಮಕ್ಕಳ ಕಲ್ಯಾಣ ಸಮಿತಿ (ಸಿಡಬ್ಲ್ಯುಸಿ)ಗಳು ಬಾಲ ನ್ಯಾಯ ಮಂಡಳಿ (ಜೆಜೆಬಿ)ಗಳು ಜಿಲ್ಲಾಮಕ್ಕಳ ರಕ್ಷಣೆ ಘಟಕ (ಡಿಸಿಪಿಯು) ಮತ್ತು ವಿಶೇಷ ಬಾಲ ಸುರಕ್ಷಾ ಘಟಕ (ಎಸ್‌ಜೆಪಿಯು) ಸೇರಿವೆ.

2018–19ರಲ್ಲಿ ಎನ್‌ಸಿಪಿಸಿಆರ್ ಏಳು ಸಾವಿರಕ್ಕೂ ಅಧಿಕ ಚೈಲ್ಡ್ ಕೇರ್ ಸಂಸ್ಥೆಗಳನ್ನು ಸಮೀಕ್ಷೆ ಮಾಡಿ ವರದಿಯನ್ನು ಸಲ್ಲಿಸಿತ್ತು. ಈ ಸಮೀಕ್ಷೆ ವೇಳೆ, ಶೇ.1.5 ರಷ್ಟು ಸಂಸ್ಥೆಗಳು ಕಾಯಿದೆಯ ನಿಯಮ ಮತ್ತು ನಿಬಂಧನೆಗಳ ಅನುಗುಣವಾಗಿರಲಿಲ್ಲ. ಈ ಪೈಕಿ ಶೇ.29 ಸಂಸ್ಥೆಗಳ ನಿರ್ವಹಣೆಯಲ್ಲಿ ನ್ಯೂನತೆಗಳನ್ನು ಇರುವುದನ್ನು ಗೊತ್ತಾಗಿತ್ತು. ದೇಶದ ಯಾವುದೇ ಚೈಲ್ಡ್ ಕೇರ್ ಸಂಸ್ಥೆಗಳು ಕಾಯಿದೆಯನ್ನು ಶೇ.100 ರಷ್ಟು ಪಾಲನೆ ಮಾಡಿಲ್ಲ. ಹೀಗೆ ಸಾಕಷ್ಟು ನ್ಯೂನತೆಗಳಿರುವುದನ್ನು ಈ ಸಮೀಕ್ಷೆಯಲ್ಲಿ ಪತ್ತೆ ಹಚ್ಚಲಾಯಿತು. ಈ ಸಮೀಕ್ಷೆಯಲ್ಲಿ ವ್ಯಕ್ತವಾದ ಎಲ್ಲ ಸಂಗತಿಗಳ ಅನುಸಾರವಾಗಿ ಬಾಲ ನ್ಯಾಯ ಕಾಯಿದೆಯನ್ನು ತಿದ್ದುಪಡಿಗೊಳಪಡಿಸಲಾಗಿದೆ.

ಈ ಕಾಯಿದೆಯಲ್ಲಿ ಜಿಲ್ಲಾಧಿಕಾರಿಗೆ ಹೆಚ್ಚು ಅಧಿಕಾರ ನೀಡಲಾಗಿದೆ. ಚೈಲ್ಡ್ ಕೇರ್ ಸಂಸ್ಥೆಗಳ ಆರಂಭದ ವಿಷಯದಲ್ಲೂ ಇದೀಗ ಅವರಿಗೆ ಹೆಚ್ಚೀನ ಅಧಿಕಾರ ನೀಡಲಾಗಿದೆ. ಇನ್ನು ಮುಂದೆ ಜಿಲ್ಲಾಧಿಕಾರಿ ಅನುಮತಿ ಇಲ್ಲದೇ ಚೈಲ್ಡ್ ಕೇರ್ ಸಂಸ್ಥೆಗಳನ್ನು ಆರಂಬಿಸುವಂತಿಲ್ಲ. ಹಾಗೆಯೇ, ಎಲ್ಲ ಮಾನದಂಡಗಳೊಂದಿಗೆ ಆರಂಭವಾಗುವ ಚೈಲ್ಡ್ ಕೇರ್ ಸಂಸ್ಥೆಗಳು ಕಾಯಿದೆಯ ಎಲ್ಲ ನಿಯಮಗಳು ಮತ್ತು ಪ್ರಕ್ರಿಯೆಗಳನ್ನು ಪಾಲನೆ ಮಾಡುತ್ತಿವೆಯೇ ಇಲ್ಲವೇ ಎಂಬುದನ್ನು ಜಿಲ್ಲಾಧಿಕಾರಿಯೇ ಮೇಲ್ವಿಚಾರಣೆ ನಡೆಸಲಿದ್ದಾರೆ. ಉದಾಹರಣೆಗೆ ವಿದೇಶಿ ದೇಣಿಗೆ ಸೇರಿದಂತೆ ನಿಧಿ ನಿರ್ವಹಣೆಯೂ ಇದರಲ್ಲಿ ಸೇರಿದೆ. ಈ ಸಮೀಕ್ಷೆ ಬಳಿಕ ಕೇಂದ್ರ ಮಹಿಳೆ ಮತ್ತು ಮಕ್ಕಳ ಕಲ್ಯಾಣ ಇಲಾಖೆಯು 50ಒ ಕಾನೂನು ಬಾಹಿರ ಚೈಲ್ಡ್ ಕೇರ್ ಸಂಸ್ಥೆಗಳನ್ನು ನಿಷೇಧಿಸಿದೆ.

**ಹದಿನೈದು ದಿನಕ್ಕೊಮ್ಮೆ ಸಭೆ**: 2021ರ ಬಾಲ ನ್ಯಾಯಾ ತಿದ್ದುಪಡಿ ಕಾಯಿದೆ ಜಿಲ್ಲಾಧಿಕಾರಿಗಳ ಮೇಲೆ ಹೊರಿಸಲಿದೆ. ಆದರೆ, ಈಗಾಗಲೇ ಸಾಕಷ್ಟು ಜವಾಬ್ದಾರಿಯೂ ಇನ್ನೂ ಹೆಚ್ಚಿನ ಒತ್ತಡವನ್ನು ಸೃಷ್ಟಿಸಬಹುದು ಎನ್ನಲಾಗುತ್ತಿದೆ. ಹಾಗಾಗಿ ಬಾಲ ನ್ಯಾಯ ಕಾಯಿದೆ ಅನುಷ್ಠಾನಕ್ಕೆ ಸಿಗಬೇಕಾದ ಆದ್ಯತೆ ಸಿಗದೇ ಹೋಗಬಹುದು.

ಈ ಕಾಯಿದೆಯ ಸೂಕ್ತ ಜಾರಿಗಾಗಿ ಜಿಲ್ಲಾಧಿಕಾರಿಯು ನಿಯಮಿತವಾಗಿ ಪಾಕ್ಷಿಕ ಸಿಡಬ್ಲ್ಯೂಸಿ, ಬಾಲ ನ್ಯಾಯಮಂಡಳಿ ಸಿಸಿಐ ಜಿಲ್ಲಾ ಮಕ್ಕಳ ರಕ್ಷಣಾ ಸಮಿತಿಗಳು ಮತ್ತು ವಿಶೇಷ ಬಾಲ ಪೊಲೀಸ್ ಘಟಕಗಳ ಜೊತೆ ಸಭೆ ನಡೆಸಬೇಕಾಗುತ್ತದೆ. ಹಾಗಾಗಿ ಅವರಿಗಿರುವ ಕಾರ್ಯದ ಒತ್ತಡದ ಮಧ್ಯೆ ಈ ಕಾಯಿದೆ ಸಮರ್ಪಕ ಜಾರಿ ಸಾಧ್ಯವೇ ಎಂಬ ಚರ್ಚೆಗಳು ಶುರುವಾಗಿವೆ.

ಆಧಾರ: ವಿಜಯ ಕರ್ನಾಟಕ, ದಿನಾಂಕ:02.08.2021.

## 19. ಶೇ10 ರಷ್ಟು ಮೀಸಲು ಏಕೆ, ಹೇಗೆ ಜಾರಿಯಾಗಬೇಕು

ಸಂವಿಧಾನದ 124ನೇ ತಿದ್ದುಪಡಿಯು ಭಾರತದಲ್ಲಿ ಬಹುಕಾಲದಿಂದ ಇದ್ದ ಆರ್ಥಿಕವಾಗಿ ಹಿಂದುಳಿದ ವರ್ಗಗಳಿಗೆ ಶೇ.10ರಷ್ಟು ಮೀಸಲಾತಿಯ ಬೇಡಿಕೆಗೆ ಸ್ಪಂದಿಸಿರುವುದು ಸ್ವಾಗತಾರ್ಹ. ಆದರೆ, ಇದು ಟೀಕೆಗಳಿಂದ ಹೊರತಾದುದಲ್ಲ. ಮೀಸಲಾತಿಯಂದಾಕ್ಷಣ "taboo' ಎಂಬ ರೀತಿಯಲ್ಲಿ ಅದೊಂದು ಸರ್ಕಾರದಿಂದ ಕೊಡುವ ಫ್ರೀಬಿ ಎಂಬಂತೆ ನೋಡುವ ದೃಷ್ಟಿಕೋನ ಇಂದಿಗೂ ಬದಲಾಗಿಲ್ಲ.

ಚಾರಿತ್ರಿಕವಾಗಿ ಕೆಲವು ಕೆಳಸ್ತರ (ಸಬ್ ಆಲ್ಟರ್ನ್) ಸಮಾಜಗಳಿಗೆ ಆದ ಅನ್ಯಾಯವನ್ನು ಸರಿಪಡಿಸಲು ಮೀಸಲಾತಿ ಒಂದು ಧನಾತ್ಮಕ ಸಮಾಜೋ-ಆರ್ಥಿಕವಾಗಿ ಹಿಂದುಳಿದ ವರ್ಗಗಳಿಗೂ ಪಸರಿಸಬೇಕೆಂಬ ದೃಷ್ಟಿಕೋನವೇ ಈ ಶೇ.10 ರ ಮೀಸಲಾತಿಯಾಗಿದೆ. ಇದು ಜಾತಿ ಆಧಾರಿತವಾಗಿರದೆ ಸಮಾಜದ ಎಲ್ಲ ಸ್ತರದ ಜನರು ಆದರಲ್ಲೂ ಮುಖ್ಯವಾಗಿ ಬಡತನದಿಂದ ಅವಕಾಶ ವಂಚಿತರಾಗಿವವರಿಗೆ ನೀಡುವ ಮೀಸಲಾತಿ, ಬಿಜೆಪಿ ಸರ್ಕಾರದ ಈ ನೀತಿಯು ಹಿಂದೂ ಸಮಾಜದ ಎಲ್ಲಸ್ತರಗಳಿಗೂ ಸಮಾನ ಅವಕಾಶಗಳ ಹಂಚಿಕೆಗೆ ದಾರಿ ಮಾಡಿಕೊಡುತ್ತದೆ ಎಂಬುದು ಇದರ ಮತ್ತೊಂದು ದೃಷ್ಟಿಕೋನ. ಪ್ರಮುಖವಾಗಿ ಇಲ್ಲಿ ಮೇಲ್‌ಸ್ತರದ ಬ್ರಾಹ್ಮಣರು ಸೇರಿದಂತೆ ಬಡತನ ರೇಖೆಗಿಂತ ಕೆಳಗಿರುವ ಎಲ್ಲರಿಗೂ ಚಿಂತನೆಯೂ ಈ ಬಗ್ಗೆ ಜಾರಿ ಆಧಾರಿತ ಟೀಕೆಗಳನ್ನು ಮಾಡಲು ಅವಕಾಶ ಮಾಡಿಕೊಟ್ಟಿದೆ.

**ಸರ್ಕಾರಿ ಹುದ್ದೆಗಳಿಗೆ ಮಾತ್ರ ಅನ್ವಯ:** ಮೂಲತ: ಈ ತಿದ್ದುಪಡಿಯು 15 ಹಾಗೂ 16ನೇ ವಿಧಿಗಳನ್ನು (15(6)-16(6)ನ್ನು ಸೇರಿಸಿ) ಸಡಿಲಗೊಳಿಸಿ ಸಾಮಾನ್ಯ ಹಾಗೂ ಮೀಸಲಾತಿ ಇಲ್ಲದ ಜನರಿಗೆ ಮೀಸಲಾತಿಯ ಲಾಭ ಒದಗಿಸುವ ಚಿಂತನೆಯಾಗಿದೆ. ಇದು ನೇಮಕಾತಿ ಅಥವಾ ಸರ್ಕಾರಿ/ ಸರ್ಕಾರೇತರ ಹುದ್ದೆಗಳಿಗೆ ಸಂಬಂಧಿಸಿದ್ದು, ಶೇ.10ನ್ನು ಮೀರದಂತಿರಬೇಕೆಂದು ಇದರಲ್ಲಿ ಉಲ್ಲೇಖಿಸಲಾಗಿದೆ. ಆದರೆ ಈ ಮೀಸಲಾತಿ ಅಲ್ಪಸಂಖ್ಯಾತ ಸಂಸ್ಥೆಗಳಿಗೆ ಅನ್ವಯವಾಗುವುದಿಲ್ಲ. ಆ ಕಾರಣದಿಂದ ಈ ಮೀಸಲಾತಿಯ ಲಾಭ ಸರ್ಕಾರ/ಖಾಸಗಿ ಮತ್ತು ಸರ್ಕಾರದಿಂದ ರಚಿತವಾಗುವ ಹುದ್ದೆಗಳಿಗೆ ಮಾತ್ರ ಆನ್ವಯವಾಗುತ್ತದೆ.

ರಾಜ್ಯದ ಅಡಿಯಲ್ಲಿ ತುಂಬುವ ಖಾಲಿ ಹುದ್ದೆಗಳಿಗೆ ಮಾತ್ರ ಇದು (ಅನುದಾನಿತ/ ಅನುದಾನರಹಿತ/ ಖಾಸಗಿ) ಸೇರಿದಂತಿದ್ದು, ಇದಕ್ಕೆ ಅನ್ವಯವಾಗುವವರು ವಾರ್ಷಿಕ 8 ಲಕ್ಷಕ್ಕಿಂತ ಕಡಿಮೆ ಆಳತೆಯ ಮನೆ ಉಳ್ಳವರಾಗಿರಬೇಕು. 100 ಚದರಡಿಗಿಂತ ಕಡಿಮೆ ಅಳತೆಯ ಮನೆ ಉಳ್ಳವರಾಗಿರಬೇಕು. 100 ಅಥವಾ 200 ಯಾರ್ಡ್‌ಗಳಲ್ಲಿ ಹೊಂದಿರಬಾರದೆಂಬ ಹಲವಾರು ಮಿತಿಗಳನ್ನು ಹಾಕಿದ್ದಾರೆ. ಈ ರೀತಿಯ ಮಿತಿಗಳು ಯಾವುದೇ ಮೀಸಲಾತಿ ಹೊಂದದ ಸಾಮಾನ್ಯರಿಗೆ ಹಾಗೂ ಮೀಸಲಾತಿ ಇಲ್ಲದ ಜಾತಿಗಳಿಗೆ ಅನ್ವಯವಾಗುತ್ತದೆ.

ಆದಾಯ ತೆರಿಗೆಯ ಒಂದು ಅಂಕಿಅಂಶದ ಪ್ರಕಾರ ಸುಮಾರು ಶೇ.17 ರಷ್ಟು ಜನರು ರೂ.5 ರಿಂದ 10 ಲಕ್ಷಗಳ ಆದಾಯ ಹೊಂದಿದವರಾಗಿದ್ದು, ಇದು ಈ ಜನರಿಗೆ ಉಪಯುಕ್ತವೆಂದಿದ್ದಾರೆ. ಈ ಮೂಲಕ ಮೀಸಲಾತಿ ಕೇವಲ ಒಂದೆರಡು ಜಾತಿಗೆ ಅಂಟಿದ ಜಾಡು ಎಂಬ ಮಾತು ತಿಳಿಯಾಗುತ್ತದೆ.

ಕೆಲವು ಟೀಕಾಕಾರರು ರೂ.8 ಲಕ್ಷ ಮೀತಿ ತೀರಾ ಹೆಚ್ಚಾಯಿತು ಅದನ್ನು ರೂ. 5 ಲಕ್ಷಕ್ಕೆ ಇಳಿಸಬೇಕೆಂದು ಅಭಿಪ್ರಾಯ ಪಟ್ಟಿದ್ದಾರೆ.

**ಶೇ.95 ಜನರಿಗೆ ಅನುಕೂಲ:** ಎನ್.ಎಸ್.ಎಸ್.ಓ– ರಾಷ್ಟ್ರೀಯ ಮಾದರಿ ಸಮೀಕ್ಷಾ ಸಂಸ್ಥೆಯ ದತ್ತಾಂಶಗಳನ್ನು ಅವಲೋಕಿಸಿದರೆ ಈ ಮೀಸಲಾತಿ ಭಾರತದ ವಿವಿಧ ಜಾತಿ, ಪಂಗಡಗಳನ್ನು ಸೇರಿದಂತೆ ಶೇ.95ರಷ್ಟು ಜನರಿಗೆ ಅನುಕೂಲವಾಗುವುದು ಕಾಣಿಸುತ್ತದೆ. ಈ ರೀತಿಯ ವಿಭಿನ್ನ ಅಭಿಪ್ರಾಗಳು ಈ ಮೀಸಲಾತಿ ಕೂಡ ಅವಕಾಶ ವಂಚಿತರು ಮತ್ತು ಆರ್ಥಿಕವಾಗಿ ಹಿಂದುಳಿದವರ ನಡುವೆ ವ್ಯತ್ಯಾಸಗಳನ್ನು ಸೃಷ್ಟಿಸುತ್ತದೆ ಎಂಬ ಭಾವನೆ ಮೂಡಿಸಬಹುದು.

ಇಂದಿರಾ ಸಹಾನಿಯವರ ತೀರ್ಪಿನಲ್ಲಿ ಸುಪ್ರಿಂಕೋರ್ಟ್ ಹೇಳಿರುವುದನ್ನು ಗಮನಿಸಿದರೆ, ಹಿಂದುಳಿದ ವರ್ಗಗಳನ್ನು ಗುರುತಿಸಲು ಕೇವಲ ಆರ್ಥಿಕ ಅಳತೆಗೋಲೊಂದೇ ಸಾಲದು ಎಂಬ ಈ ಕಾರಣಕ್ಕಾಗಿ ಈ ಮೀಸಲಾತಿ ಬಹುಶ: ದೇಶದ ಉನ್ನತ ನ್ಯಾಯಾಲಯದಲ್ಲಿ ಮತ್ತೆ ಪರೀಕ್ಷೆ ಎದುರಿಸಬೇಕಾಗಬಹುದು. ಈ ನಿಟ್ಟಿನಲ್ಲಿ ನಿಜವಾಗಿಯೂ ಬಡತನವನ್ನು ಅನುಭವಿಸುತ್ತಿರುವ ಮತ್ತು ಅವಕಾಶಗಳಿಂದ ವಂಚಿತರಾಗಿರುವ ಯಾರಿಗಾದರೂ ಸಹಾಯವಾಗಬೇಕಾಗಿದ್ದ ಈ ಮೀಸಲಾತಿ ಅನುಷ್ಠಾನಗೊಳ್ಳುವ ಸಂದರ್ಭದಲ್ಲಿ ಅಗ್ನಿ ಪರೀಕ್ಷೆ ಎದುರಿಸಬೇಕಾಗುತ್ತದೆ.

ಈ ಮೇಲೆ ಹೇಳಿದ ಕಾರಣಗಳಿಗಾಗಿ ಹಾಗೂ ಈ ಎಲ್ಲ ಬೇಡಿಕೆಯ ನಡುವೆ ಭಾರತದ ಉನ್ನತ ನ್ಯಾಯಾಲಯ ತಿಳಿಸಿರುವ ಶೇ.50ರಷ್ಟು ಮೀಸಲಾತಿಯ ಮೇಲ್ಪಟ್ಟವನ್ನು ದಾಟಬಾರದೆಂಬ ತೀರ್ಪಿಗೆ ವಿರೋಧವಾಗಿ ಈ ಆರ್ಥಿಕ ಹಿಂದುಳಿದಿರುವಿಕೆಯನ್ನು ಅಳತೆ ಮಾಡುವುದಕ್ಕಾಗಿ ಕೆಲವು ಅಳತೆಗೋಲನ್ನು ರಚಿಸುವುದು ಅವಶ್ಯಕ. ಈಗಾಗಲೇ ಅಸ್ತಿತ್ವದಲ್ಲಿರುವ ಮೀಸಲಾತಿಯನ್ನೆ ಸರಿಯಾಗಿ ನಿರ್ವಹಿಸಲಾದ ರಾಜ್ಯಗಳು ಈ ಮೀಸಲಾತಿಯನ್ನು ಹೇಗೆ ನಿರ್ವಹಿಸಬಹುದು ಎಂಬೆಲ್ಲಾ ಪ್ರಶ್ನೆಗಳು ನಮ್ಮನ್ನು ಕಾಡುತ್ತವೆ.

**ದೇಶದಲ್ಲಿ ಮೀಸಲಾತಿಯ ಭವಿಷ್ಯ:** 19ನೇ ಶತಮಾನದ ಕೊನೆಯಿಂದ ಭಾರತದ ರಾಜ್ಯಗಳು ತಾವೇ ಅತಿ ದೊಡ್ಡ ಉದ್ಯೋಗದಾತರಾಗಿದ್ದನ್ನು ಮರೆತು, ಜಾಗತೀಕರಣದ ಹಿನ್ನೆಲೆಯಲ್ಲಿ ಕುಗ್ಗುತ್ತಿರುವ ರಾಜ್ಯಗಳಾಗಿ ರಾಜ್ಯದಲ್ಲಿ ನೇಮಕಾತಿ ಪ್ರಕ್ರಿಯೆಗಳೇ ನಡೆಯದಂತಾದ ಈ ಸಂದರ್ಭದಲ್ಲಿ ಮೀಸಲಾತಿಯ ಭವಿಷ್ಯವೇನೆಂಬುದನ್ನು ಸಹಜವಾಗಿ ಪ್ರಶ್ನಿನಿಸುವ ಹಕ್ಕು ಎಲ್ಲ ನಾಗರಿಕರದ್ದಾಗಿದೆ.

ಒಂದೆಡೆ ತಾಂತ್ರಿಕತೆಯ ಬೆಳವಣಿಗೆಯನ್ನು ಗಮನಿಸಿ ಮತ್ತೊಂದೆಡೆ ಸಾಂಕ್ರಾಮಿಕ ಹಾಗೂ ಇನ್ನಿತರ ಪರಿಣಾಮಗಳನ್ನು ನೋಡಿದರೆ ರಾಜ್ಯದ ಆರ್ಥಿಕ ಸ್ಥಿತಿಗತಿಗಳೆ ಸರಿ ಇಲ್ಲದ ಸಂದರ್ಭದಲ್ಲಿ ಸರ್ಕಾರದಲ್ಲಿನ ನೌಕರಿಗಳೆ ಖಾಸಗೀಕರಣಗೊಳ್ಳುತ್ತಿರುವ ಈ ಸಂದರ್ಭದಲ್ಲಿ ಈ ಮೀಸಲಾತಿಯ ಭವಿಷ್ಯವೇನು ಎಂಬ ಚಿಂತನೆ ಮೂಡುತ್ತದೆ.

ಒಂದೆಡೆ ಭಾರತ ಅಂತರರಾಷ್ಟ್ರೀಯ ಮಟ್ಟದಲ್ಲಿ ಮುಂದುವರಿದ–ಅಭಿವೃದ್ಧಿ ಹೊಂದಿದ ದೇಶವೆಂದು ಪ್ರತಿಪಾದಿಸುತ್ತಾ ಇನ್ನೊಂದೆಡೆ ಮೀಸಲಾತಿಯ ನ್ಯಾಯಯುತ ಚಾರಿತ್ರಿಕ ಹಿನ್ನೆಲೆಯೊಂದಿಗೆ ಸಮಾಜೋ –ಆರ್ಥಿಕ ಮೀಸಲಾತಿಗಳನ್ನು ಹುರಿದುಂಬಿಸುತ್ತಿರುವುದು ನಾವು ನಮ್ಮ ದೇಶದ ಪ್ರಜೆಗಳಿಗೆ ಸಮಾನವಾದ ಆಟದ ಮೈದಾನವನ್ನು ಕೊಡುವ ಬದಲು ಅಂಕು–ಡೊಂಕಾದ ವ್ಯವಸ್ಥೆಯನ್ನು ಸ್ಥಾಪಿಸಿ ಸಮಾಜದ ಸರ್ವತೋಮುಖ ಏಳಿಗೆಗೆ ತೊಡಕನ್ನು ಉಂಟು ಮಾಡುತ್ತಿದೆಯೇನೋ ಎಂಬ ಪ್ರಶ್ನೆಗಳು ಮೂಡುತ್ತದೆ.

ಭಾರತದಂತಹ ಸಮಾಜದಲ್ಲಿ ಅಸಮಾನತೆ ಚಾರಿತ್ರಿಕವಾಗಿ ಪ್ರಾಸಂಗಿಕವಾಗಿ ಬಂಡವಾಳಶಾಹಿ, ಪುರೋಹಿತಶಾಹಿ ಹಾಗೂ ರಾಜ್ಯ ಶಾಹಿಗಳಿಂದಲೇ ಸೃಷ್ಟಿಯಾಗಿದೆ. ಈ ಸಮಾನತೆಗಳನ್ನು ಹೋಗಲಾಡಿಸಲು ಮೂಲಭೂತವಾದ ಸರ್ವಸಮ್ಮತಿ ದೊರಕುವ ಪುನರ್ ಹಂಚಿಕೆ ಆರ್ಥಿಕ ನೀತಿಯ ಅವಶ್ಯಕತೆ ಇದೆ. ಇಲ್ಲಿ ಜಾನ್ ರಾಲ್ಸ್‌ರವರು ಹೇಳುವ ನ್ಯಾಯಿಕ ಸಿದ್ಧಾಂತದಲ್ಲಿ ಚರ್ಚಿಸುವಂತೆ

ಪ್ರತಿಯೊಬ್ಬ ವ್ಯಕ್ತಿಗೂ ಸಮಾನ ಮೂಲಭೂತ ಸ್ವಾತಂತ್ರ್ಯ ಇರಬೇಕು ಹಾಗೂ ಸಮಾಜ್ಯೋೖಕ ಆಸಮಾನತೆಗಳನ್ನು ಪ್ರತಿಯೊಬ್ಬರ ಅನುಕೂಲತೆಗೆ ಹಾಗೂ ಅವರು ಹೊಂದಿರುವ ಆಕಾರದ ಪರಿಮಿತಿಗಳಿಗೆ ಒಳಪಟ್ಟಂತೆ ಹೊಂದಿರಬೇಕು. ಇಲ್ಲಿ ಸಮಾಜದ ಎಲ್ಲಾ ಸರಕುಗಳ ಒಡೆತನ ಎಲ್ಲರಿಗೂ ಸಮಾನವಾಗಿ ದೊರಕುವಂತಿರಬೇಕು.

ಅದರಲ್ಲೂ ಅತಿ ಅನಾನುಕೂಲತೆ ಇದ್ದವರಿಗೆ ಹೆಚ್ಚು ಅನುಕೂಲತೆ ಹಾಗೂ ಅನುಕೂಲತೆ ಹೆಚ್ಚಿದ್ದವರಿಗೆ ಅಲ್ಪ ಅನಾನುಕೂಲತೆ ಆಗುವಂತೆ ಸಮಾಜದ ಎಲ್ಲ ಮಗ್ಗಲುಗಳಿಗೆ ನ್ಯಾಯ ದೊರೆಯುವಂತಿರಬೇಕು. ಹೀಗಾದಾಗ ಮಾತ್ರ ಮೀಸಲಾತಿ ಎಂಬುದು ಸ್ಪರ್ಧಾತ್ಮಕತೆಗೆ ಒಳಪಡದೆ ತರ್ಕಬದ್ಧವಾಗಿ ಅಸ್ತಿತ್ವಕ್ಕೆ ಬರುತ್ತದೆ. ಆಗ ವರ್ಗ–ವರ್ಗಗಳ ನಡುವೆ ಈರ್ಷ್ಯೆಗಳಿಲ್ಲದ ಮೀಸಲಾತಿಯನ್ನೇ ಧನಾತ್ಮಕವಾಗಿ ನೋಡುವ ಚಿಂತನೆ ಬೆಳೆಯುತ್ತದೆ. ಆ ಸಂದರ್ಭದಲ್ಲಿ ಈ ಶೇ.10ರಷ್ಟಾಗಲೀ ಅಥವಾ ಶೇ.60 ರಷ್ಟಾಗಲೀ ಯಾವುದೇ ರೀತಿಯ ಮೀಸಲಾತಿಯು ನಿಜವಾಗಿಯೂ ಅವಶ್ಯಕತೆ ಇರುವವರ ಪಾಲಾಗುತ್ತದೆ. ಇಲ್ಲದಿದ್ದರೆ ಒಳ ಮೀಸಲಾತಿಯ ಕೂಗಿನಂತೆ ಶೇ.10ರಷ್ಟರ ಮೀಸಲಾತಿಯೂ ಕೂಡ ಪ್ರಭಾವಶಾಲಿ ರಾಜಕೀಯವಾಗಿ ಸಕ್ರಿಯವಾಗಿರುವವರ ಹಾಗೂ ಸಮಾಜದಲ್ಲಿ ಗಣ್ಯರಿರುವವರ ಪಾಲಾಗುತ್ತದೆ ಎಂಬುವುದರಲ್ಲಿ ಸಂಶಯವಿಲ್ಲ.

**ಶೇ.10 ಮೀಸಲಿಗೆ ಪ್ರಚಾರ ನೀಡಿ:** ಈ ರೀತಿಯ ಮೀಸಲಾತಿಯು ಎಲ್ಲ ಸಂದರ್ಭದಲ್ಲಿಯೂ ಪೂರ್ವಾಗ್ರಹಗಳಿಲ್ಲದೇ ತರ್ಕಬದ್ಧವಾಗಿ ವಸ್ತುನಿಷ್ಠವಾಗಿದ್ದಲ್ಲ. ಆಂತಹ ಮೀಸಲಾತಿಯ ಉಪಯೋಗವು ಸಮಾಜದ ಏಳಿಗೆಗೆ ಪೂರಕವಾಗಿ ಕಾರ್ಯನಿರ್ವಹಿಸುತ್ತದೆ. ಇಲ್ಲದಿದ್ದಲ್ಲಿ, ಈ ಮೀಸಲಾತಿಯು ಆಸೂಯೆಗೆ ಎಡೆಮಾಡಿಕೊಡುತ್ತಾ, ಸಮಾಜದ ವರ್ಗಗಳ ನಡುವೆ ಭಿನ್ನತೆಗಳನ್ನು ರೂಪಿಸಿ ಒಡಕನ್ನು ಉಂಟು ಮಾಡುತ್ತದೆ. ನಾಗರಿಕ ಸಮಾಜಗಳು ಇಂತಹ ನೀತಿಗಳನ್ನು ಧನಾತ್ಮಕ ದೃಷ್ಟಿಕೋನದಿಂದ ಅಧ್ಯಯನ ಮಾಡಿ ಪ್ರಚುರಪಡಿಸುವ ಮುಖಾಂತರ ಸಮಾಜದ ವಿಭಿನ್ನ ಸ್ತರಗಳು ಮತ್ತು ವರ್ಗಗಳ ನಡುವೆ ಸಾಮರಸ್ಯ ಸೃಷ್ಟಿಸುವುದು ಈ ಸಂದರ್ಭದಲ್ಲಿ ಅವಶ್ಯಕ. ಈ ರೀತಿಯ ದಿಟ್ಟ ಹೆಜ್ಜೆ ಬಿಜೆಪಿ ಸರ್ಕಾರದ ನೀತಿಗಳಲ್ಲಿ ಒಂದಾಗಿದ್ದು, ಇದನ್ನು ಮೆಚ್ಚಿಕೊಳ್ಳುವುದಕ್ಕೆ ಹಿಂದೇಟು ಹಾಕುವುದೇಕೆ?

ಲೇಖಕರು: ಡಾ:ಹರೀಶ್ ರಾಮಸ್ವಾಮಿ,
ರಾಯಚೂರು ವಿಶ್ವವಿದ್ಯಾಲಯ,

ಡಾ: ಕಮಲಾಕ್ಷಿ ಜಿ. ತಡಸದ್
ರಾಣಿ ಚನ್ನಮ್ಮ ವಿಶ್ವವಿದ್ಯಾಲಯ.
ಆಧಾರ: ಕನ್ನಡಪ್ರಭ, ದಿನಾಂಕ:03.08.2021.

## 20. ಪ್ರಥಮ ಪ್ರಧಾನಿ ಆಯ್ಕೆಯ ವಾಸ್ತವ

ಸರ್ದಾರ ವಲ್ಲಭಬಾಯಿ ಪಟೇಲರು ಭಾರತದ ಪ್ರಥಮ ಪ್ರಧಾನಿಯಾಗಬೇಕಿತ್ತು. ಆದರೆ, ಜವಾಹರಲಾಲ ನೆಹರೂ ಅದನ್ನು ತಪ್ಪಿಸಿ ತಾವೇ ಪ್ರಧಾನಿಯಾದರು ಎನ್ನುವ ಚರ್ಚೆ ಸ್ವಾತಂತ್ರ್ಯ ದಿನದ ಅಮೃತ ಮಹೋತ್ಸವ ಸಿದ್ಧತೆ ನಡೆಯುತ್ತಿರುವ ಸಂದರ್ಭದಲ್ಲಿ ಮತ್ತೆ ಮುನ್ನೆಲೆಗೆ ಬಂದಿದೆ.

2014ರಲ್ಲಿ ನಡೆದ ಲೋಕಸಭೆ ಚುನಾವಣೆ ಸಂದರ್ಭದಲ್ಲಿ ಪ್ರಧಾನಿ ಅಭ್ಯರ್ಥಿಯಾಗಿ ಸ್ಪರ್ಧಿಸಿದ್ದ ನರೇಂದ್ರ ಮೋದಿ ಅವರು ತಮ್ಮ ಹಲವು ಚುನಾವಣಾ ಭಾಷಣಗಳಲ್ಲಿ ಈ ವಿಷಯ ಪ್ರಸ್ತಾಪಿಸಿದ್ದರು. ನೆಹರೂ ಕುಟುಂಬವನ್ನು ನೇರವಾಗಿ ಟೀಕಿಸುವುದು ಅವರ ಮಾತಿನ ಉದ್ದೇಶವಾಗಿರಬಹುದು. ಆಗಿನ ಅವರ ಭಾಷಣದ ವಿಡಿಯೋ ಈಗಲೂ ಹರಿದಾಡುತ್ತಿದೆ. ಆದರೆ, ಯಾವ ಹಿನ್ನೆಲೆಯಲ್ಲಿ ನೆಹರೂ

ಸ್ವತಂತ್ರ ಭಾರತದ ಪ್ರಥಮ ಪ್ರಧಾನಿಯಾದರು, ವಲ್ಲಭಭಾಯಿ ಪಟೇಲರು ಉಪ ಪ್ರಧಾನಿ ಸ್ಥಾನಕ್ಕೆ ತೃಪ್ತಿಪಟ್ಟುಕೊಳ್ಳಬೇಕಾಯಿತು ಎಂಬ ವಾಸ್ತವ ಗಮನಿಸುವುದು ಬಹಳ ಮುಖ್ಯ.

1945ರಲ್ಲಿ ಕಾಂಗ್ರೆಸ್ ಪಕ್ಷಕ್ಕೆ ಹೊಸ ಅಧ್ಯಕ್ಷರ ಆಯ್ಕೆ ಮಾಡಬೇಕಾದ ಸಂದರ್ಭ ಒದಗಿ ಬಂದಿತು. ಆಗ ಅಧ್ಯಕ್ಷ ಸ್ಥಾನಕ್ಕೆ ಜೆ.ಬಿ. ಕೃಪಲಾನಿಯವರು ಅಭ್ಯರ್ಥಿಯಾಗ ಬಯಸಿದ್ದರು. ಆದರೆ, 12 ಪ್ರಾಂತೀಯ ಕಾಂಗ್ರೆಸ್ ಸಮಿತಿಗಳು ಪಟೇಲರ ಹೆಸರು ಶಿಫಾರಸ್ಸು ಮಾಡಿದವು. ಗಾಂಧೀಜಿ ಇವರಿಬ್ಬರನ್ನು ಬಿಟ್ಟು ನೆಹರೂ ಅವರನ್ನು ಅಧ್ಯಕ್ಷ ಸ್ಥಾನಕ್ಕೆ ಸಲಹೆ ಮಾಡಿದರು. ಇದನ್ನು ಪಟೇಲರು ಸೇರಿದಂತೆ ಕಾರ್ಯಕಾರಿಯ ಎಲ್ಲರೂ ಒಪ್ಪಿದರು. ಇದಕ್ಕೆ ಹಲವು ಕಾರಣಗಳಿದ್ದವು. ಗಾಂಧೀಜಿ ಈ ಕೆಳಗಿನ ಕಾರಣಗಳನ್ನು ನೀಡಿದ್ದರು.

- ನಿಕಟ ಭವಿಷ್ಯದಲ್ಲಿ ಭಾರತವು ಜಾಗತಿಕ ರಾಜಕಾರಣಗಳನ್ನು ನೀಡಿದ್ದರು.
- ನೆಹರೂ ಅಂತರರಾಷ್ಟ್ರೀಯ ರಾಜಕಾರಣದ ತಿಳುವಳಿಕೆ ಹಾಗೂ ಸಂಪರ್ಕ ಹೊಂದಿರುವುದು.
- ಹಿಂದೂ–ಮುಸ್ಲಿಂ ಸಂಬಂಧ ನಾಜೂಕಾದ ಈ ಸಂದರ್ಭ ಸೂಕ್ಷ್ಮವಾಗಿ ನಿಭಾಯಿಸುವುದು.
- ದೇಶವ್ಯಾಪಿಯಲ್ಲಿ ನೆಹರೂ ಹೆಚ್ಚು ಪರಿಚಿತರಾಗಿರುವುದು.

ಇವು ಗಾಂಧೀಜಿ ಸೇರಿದಂತೆ ಆಗಿನ ನಾಯಕರ ಒಟ್ಟಾರೆ ಅಭಿಪ್ರಾಯವಾಗಿತ್ತು. ಪಟೇಲರ ಆರೋಗ್ಯ ಸಮಸ್ಯೆಗಳು ಕೂಡ ನೆಹರೂ ಅವರನ್ನೇ ಆಯ್ಕೆ ಮಾಡುವುದಕ್ಕೆ ಕಾರಣಗಳಾದವು.

1947ರ ಆಗಸ್ಟ್ 15ರಂದು ಪ್ರಧಾನಿ ಪಟ್ಟಕ್ಕೇರುವ ಸಂದರ್ಭದಲ್ಲಿ ನೆಹರೂ ಅವರಿಗೆ ಕೇವಲ 58 ವರ್ಷ ವಯಸ್ಸಾಗಿತ್ತು. ವಲ್ಲಭಭಾಯಿ ಅವರಿಗೆ ಆಗ 72 ವರ್ಷ ವಯಸ್ಸು. ವೃದ್ಧಾಪ್ಯ ಅವರನ್ನು ಅವರಿಸಿತ್ತು. ಬಿಪಿ, ಶುಗರ್ ತೊಂದರೆ ಅವರು ಅನುಭವಿಸುತ್ತಿದ್ದರು. ಕಿವಿ ಕೇಳುತ್ತಿರಲಿಲ್ಲ. ಪಟೇಲರು ತಮ್ಮ ಪುತ್ರಿ ಮಣಿಬೇನ್ ಅರೈಕೆಯಲ್ಲಿದ್ದರು. ನೆಹರೂ ಪತ್ನಿ ಕಮಲಾ ನೆಹರೂ ಕೂಡ ಆಸ್ತಂಗತರಾಗಿದ್ದರಿಂದ ನೆಹರೂ ಕೂಡ ಮಗಳು ಇಂದಿರಾ ನೆರವಿನಲ್ಲಿದ್ದರು. ಇಂದಿರಾ ವಿವಾಹಿತರಾಗಿದ್ದರು. ಆದರೆ ಮಣಿಬೇನ್ ಅವಿವಾಹಿತರಾಗಿಯೇ ಉಳಿದು ರಾಷ್ಟ್ರಕ್ಕೆ ಅರ್ಪಿತ ಜೀವನ ನಡೆಸಿದರು.

ಗಾಂಧೀಜಿ ಅವರನ್ನೊಳಗೊಂಡ ಆಗಿನ ಗಣ್ಯರೆಲ್ಲ ಜವಾಹರಲಾಲ ನೆಹರೂ ಅವರನ್ನು ಪ್ರಧಾನಿಯಾಗಿ ಹಾಗೂ ವಲ್ಲಭಭಾಯಿ ಅವರನ್ನು ಉಪ ಪ್ರಧಾನಿಯಾಗಿ ಆಯ್ಕೆ ಮಾಡಿದರು. ವಲ್ಲಭಭಾಯಿ ಅವರ ಅನಾರೋಗ್ಯ ಸಮಸ್ಯೆಗಳು ತೀವ್ರವಾಗಿದ್ದವು. ಅವರು 1947 ರಿಂದ 1950ರ ಅವಧಿಯಲ್ಲಿ 1 ವರ್ಷ 6 ತಿಂಗಳು ಆಸ್ಪತ್ರೆಯಲ್ಲಿ ಕಳೆದಿದ್ದಾರೆ. ಪಟೇಲರು ಇಂಥ ಅನಾರೋಗ್ಯದ ನಡುವೆಯೂ ಉಪ ಪ್ರಧಾನಿ ಹಾಗೂ ಗೃಹ ಸಚಿವ ಸ್ಥಾನ ನಿಭಾಯಿಸಿದರು. ಹೈದರಾಬಾದ್ ವಿಮೋಚನೆ ಹಾಗೂ ಸಂಸ್ಥಾನಗಳ ವಿಲೀನಿಕರಣ ಅವರ ಚಾರಿತ್ರಿಕ ಸಾಧನೆಗಳಾಗಿವೆ. ಪಟೇಲರು 1950ರ ಡಿಸೆಂಬರ್ 20ರಂದು ನಿಧನರಾದರು. ಸ್ವಾತಂತ್ರ್ಯ ನಂತರ ಪಟೇಲರು ಬದುಕಿದ್ದು ಕೇವಲ ಎರಡೂವರೆ ವರ್ಷ ಮಾತ್ರ.

ಹಲವಾರು ಸಮಸ್ಯೆಗಳನ್ನು ತನ್ನ ಒಡಲಲ್ಲಿ ಉದಯಿಸಿದ ಸ್ವತಂತ್ರ ಭಾರತದ ಮೊದಲ ಪ್ರಧಾನಿಯಾಗಿ ನೆಹರೂ ತೋರಿದ ರಾಜತಾಂತ್ರಿಕ ಜಾಣ್ಮೆ, ದೂರದೃಷ್ಟಿ ಆಡಳಿತ ಕುಶಲತೆ ದೇಶವು ಆತ್ಮಗೌರವದೊಂದಿಗೆ ಎದ್ದು ನಿಲ್ಲುವಂತೆ ಮಾಡಿದ್ದು ಅವರ ಘನ ವ್ಯಕ್ತಿತ್ವಕ್ಕೆ ಸಾಕ್ಷಿಯಾಗಿವೆ. ಶ್ರೀಮಂತ ಮನೆತನದಿಂದ ಬಂದ ನೆಹರೂ ದೇಶಕ್ಕಾಗಿ ಮಾಡಿದ ತ್ಯಾಗ ತುಂಬ ದೊಡ್ಡದು. ನೆಹರೂ ಸ್ವಾತಂತ್ರ್ಯ

ಚಳುವಳಿಯಲ್ಲಿ ಭಾಗವಹಿಸಿ 9 ಬಾರಿ ಜೈಲಿಗೆ ಹೋಗಿದ್ದಾರೆ. ನೆಹರೂ ಮತ್ತು ಪಟೇಲ ಇಬ್ಬರೂ ಭಾರತದ ಪ್ರಾತ:ಸ್ಮರಣೀಯ ನಾಯಕರು. ನೆಹರೂ ಆ ಕಾಲಘಟ್ಟದ ಸೂಕ್ತ ನೇತಾರರಾಗಿ ಆಯ್ಕೆಯಾದರು. ಅವರ ಆಯ್ಕೆಯನ್ನು ಭಾರತದ ಜನತೆ ಕೂಡ ಒಪ್ಪಿತ್ತು. 1952, 1957 ಮತ್ತು 1962ರಲ್ಲಿ ನಡೆದ ಭಾರತದ ಸಾರ್ವತ್ರಿಕ ಮಹಾ ಚುನಾವಣೆಗಳಲ್ಲಿ ನೆಹರೂ ನೇತೃತ್ವದ ಕಾಂಗ್ರೆಸ್ ಭಾರಿ ಜಯ ಸಾಧಿಸಿದ್ದು ಇದಕ್ಕೆ ಸಾಕ್ಷಿಯಾಗಿದೆ.

ಉಪ ಪ್ರಧಾನಿ ಪಟೇಲರು ಒಮ್ಮೆ ನಂದಿಬೆಟ್ಟದಲ್ಲಿ ವಿಶ್ರಾಂತಿ ಪಡೆಯುತ್ತಿದ್ದರು. ಅವರ ಆರೈಕೆಗೆ ನಿಂತಿದ್ದ ಅವರ ಮಗಳು ಮಣಿಬೇನ್ ಹರಿದ ಸೀರೆ ಉಟ್ಟುಕೊಂಡಿದ್ದರು. ಇದನ್ನು ಗಮನಿಸಿದ ಕರ್ನಾಟಕದ ಹಿರಿಯರೊಬ್ಬರು ದೇಶದ ಉಪ ಪ್ರಧಾನಿಯ ಪುತ್ರಿ ಹರಿದ ಸೀರೆ ಉಟ್ಟುಕೊಂಡ ಬಗ್ಗೆ ಕಳವಳ ವ್ಯಕ್ತಪಡಿಸಿದರು. ಆಗ ಪಟೇಲರು ನೀಡಿದ ವಿವರ ಅವರ ಶ್ರದ್ಧೆ ಮತ್ತು ತ್ಯಾಗಮಯ ಜೀವನಕ್ಕೆ ಹಿಡಿದ ಕನ್ನಡಿಯಾಗಿದೆ. ಮಗಳು ನೂತ ನೂಲಿನಿಂದ ತಯಾರಾದ ಬಟ್ಟೆಯನ್ನು ಮಾತ್ರ ಧರಿಸುತ್ತಿದ್ದರು. ಇದು ತಂದೆ ಮಗಳು ಪಾಲಿಸಿದ ಕಟ್ಟುನಿಟ್ಟಾದ ಜೀವನ ಕ್ರಮವಾಗಿತ್ತು.

ಮಹಾನ್ ನಾಯಕ ಗತಿಸಿದ ದೀರ್ಘಕಾಲದ ನಂತರವು ಆವರ ಅಭಿಮಾನಿಗಳು ಹಾಗೂ ವಿರೋಧಿಗಳಿಂದ ತರ್ಕ, ಚರ್ಚೆ, ಟೀಕೆಗಳು ನಡೆಯುತ್ತಲೇ ಇರುತ್ತವೆ. ತೀವ್ರ ಬಡತನ, ಅನಕ್ಷರತೆ, ಮೂಢನಂಬಿಕೆಗಳು ತುಂಬಿಕೊಂಡಿದ್ದ ಭಾರತವನ್ನು ಹಾವಾಡಿಗರ ದೇಶವೆಂದು ವಿದೇಶಿಯರು ಲೇವಡಿ ಮಾಡುತ್ತಿದ್ದರು. ಇಂತಹ ದೇಶವನ್ನು ಸಮರ್ಥ ರಾಷ್ಟ್ರವಾಗಿ ಕಟ್ಟುವಲ್ಲಿ ನೆಹರೂ ವಹಿಸಿದ ಪಾತ್ರ ಆನನ್ಯವಾದುದು. ಕೃಷಿ, ಕೈಗಾರಿಕೆ, ಸಾರಿಗೆ ಸಂಪರ್ಕ, ಶಿಕ್ಷಣ, ಆರೋಗ್ಯ, ಸಾಂಸ್ಕೃತಿಕ ವಲಯದ ಭವ್ಯ ಅಭಿವೃದ್ದಿಗೆ ನೆಹರೂ ಮುನ್ನಡಿ ಬರೆದಿದ್ದು ವಾಸ್ತವ ಸಂಗತಿ. ವಲ್ಲಭಭಾಯಿ ಪಟೇಲರು ಇನ್ನು ಹೆಚ್ಚಿನದನ್ನು ಸಾಧಿಸುತ್ತಿದ್ದರು ಎನ್ನುವುದು ಒಂದು ಆಶಯ ಮತ್ತು ತರ್ಕ ಮಾತ್ರ. ವಾಸ್ತವ ಸಂಗತಿಗಳು ನಮ್ಮ ಕಣ್ಣೆದುರಿಗೆ ಇವೆ. ರಾಜಕೀಯ ಕಾರಣದಿಂದ ಇತಿಹಾಸಕ್ಕೆ ಅಪಚಾರವಾಗಬಾರದು.

ಲೇಖಕರು: ಮಲ್ಲಿಕಾಜುನ ಹೆಗ್ಗಳಗಿ
ಆಧಾರ: ವಿಜಯ ಕರ್ನಾಟಕ, ದಿನಾಂಕ:04.08.2021.

## 21. ಪೆಗಾಸಸ್ ಕೋಲಾಹಲ

ಪೆಗಾಸಸ್ ಗೂಢಚರ್ಯೆ ಆರೋಪ ಸಂಸತ್ತಿನ ಬಹುಮೂಲ್ಯ ಸಮಯವನ್ನು ತಿಂದುಹಾಕಿದೆ. ಸರ್ಕಾರದ ಹೇಳಿಕೆಯಲ್ಲಿ ಯಾವುದೇ ಸತ್ವ ವಿಲ್ಲದಿರುವುದು ನಿಜವಲ್ಲವೆ ವಿರೋಧ ಪಕ್ಷಗಳ ಆಕ್ರೋಶ ಸಹಜವೇ ಆಗಿದ್ದರೂ ಕಲಾಪ ಭಂಗದಿಂದ ಉಂಟಾಗುವ ನಷ್ಟವನ್ನು ತುಂಬಿಕೊಡುವವರು ಯಾರು.

ಇಸ್ರೇಲ್ ದೇಶದ ಕಂಪನಿಯೊಂದು ಸಿದ್ಧಪಡಿಸಿದ ತಂತ್ರಾಂಶವನ್ನು ಬಳಸಿಕೊಂಡು ಭಾರತದ ಅನೇಕ ಗಣ್ಯ ವ್ಯಕ್ತಿಗಳು, ರಾಜಕಾರಣಿಗಳು, ಕಾರ್ಯಕರ್ತರು, ಪತ್ರಕರ್ತರು ಹಾಗೂ ಇತರರ ದೂರವಾಣಿಗಳನ್ನು ಕದ್ದಾಲಿಸುವುದರ ಮೂಲಕ ಅವರ ಮೇಲೆ ಕಣ್ಗಾವಲು ಮತ್ತು ಗೂಢಚರ್ಯೆಯನ್ನು ನಡೆಸಲಾಗಿದೆ ಎಂಬ ಗುರುತರ ಅಪಾದನೆ ದೇಶದಲ್ಲಿ ಇದೀಗ ಕೋಲಾಹಲವನ್ನುಂಟುಮಾಡಿದೆ. ಸಂಸತ್ತಿನ ಮುಂಗಾರು ಅಧಿವೇಶನದ ಮುನ್ನಾ ದಿನವೇ ಈ ಪ್ರಕರಣ ಬಯಲಾಗಿರುವುದರಿಂದ ವಿವಾದಕ್ಕೆ ಮತ್ತಷ್ಟು ಕಳೆಕಟ್ಟಿದೆ. ಭಾರತದ ಪ್ರಜೆಗಳ ವೈಯಕ್ತಿಕ ಸ್ವಾತಂತ್ರ್ಯದ ಮೇಲೆ ನೇರ ಆಕ್ರಮಣ ಇದಾಗಿದೆ ಎಂಬ ರಾಜಕೀಯ ಆರೋಪ ಬೃಹದಾಕಾರ ತಾಳಿದ್ದು ಸಂಶಯದ ತೂಗುಗತ್ತಿ ಭಾರತೀಯ ಜನತಾ ಪಕ್ಷ ನೇತೃತ್ವದ ರಾಷ್ಟ್ರೀಯ ಪ್ರಜಾಸತಾತ್ಮಕ ಮೈತ್ರಿಕೂಟ (ಎನ್‌ಡಿಎ) ದ ನರೇಂದ್ರ ಮೋದಿ ಅವರ ಸರ್ಕಾರದ ತಲೆಯ ಮೇಲೆ ನೇತಾಡುವ ಪ್ರಸಂಗ ಇದಾಗಿದೆ. ಸಂಸತ್ ಅಧಿವೇಶನದ ಪ್ರಾರಂಭ ದಿನಕ್ಕೆ ಹೊಂದಾಣಿಕೆ ಆಗುವಂತೆ ಅಂತರರಾಷ್ಟ್ರೀಯ ಮಾಧ್ಯಮಗಳು ಈ ಅಸಾಮಾನ್ಯ ವಿವಾದವನ್ನು ಬಯಲು ಮಾಡಿರುವುದರಿಂದ ಸಹಜವಾಗಿಯೇ ಇದು ವ್ಯಾಪಕ ಪ್ರಚಾರ ಪಡೆಯಲು ಸಾಧ್ಯವಾಗಿದೆ. ಅಧಿವೇಶನದ

ಪ್ರಾರಂಭದ ಅನೇಕ ದಿನಗಳು ವಿವಾದಕ್ಕೆ ಬಲಿಯಾಗಿದ್ದು, ದೇಶ ಎದುರಿಸುತ್ತಿರುವ ಪ್ರಮುಖ ಸಮಸ್ಯೆಗಳ ಮೇಲೆ ಯಾವುದೇ ಅರ್ಥಪೂರ್ಣ ಚರ್ಚೆ ನಡೆಯದೆ ಮಹತ್ವದ ಸಂಸದೀಯ ಕಲಾಪಗಳು ಕೂಡ ಸ್ಥಗಿತಗೊಂಡಿವೆ. ಅನೇಕ ಮಸೂದೆಗಳು, ತಿದ್ದುಪಡಿ ಮಸೂದೆಗಳು ಮಂಡನೆಯಾಗಿ ಚರ್ಚೆಯಿಲ್ಲದೆ ಅಂಗೀಕಾರವಾಗುವಂಥ ಪ್ರಜಾಸಾತ್ಮಕ ವಿರೋಧಿ ಬೆಳವಣಿಗೆ ಉಂಟಾಗಿದೆ. ಸಂಬಂಧಪಟ್ಟ ಸಚಿವರು ಸ್ವಪ್ರೇರಣೆಯಿಂದ ಸಂಸತ್ತಿನಲ್ಲಿ ಪೆಗಾಸಸ್ ಪ್ರಕರಣದ ಬಗ್ಗೆ ಹೇಳಿಕೆ ನೀಡಿದ್ದರೂ ಹೇಳಿಕೆಯಲ್ಲಿ ಯಾವುದೇ ಸತ್ವವಿಲ್ಲದಿರುವುದು ಮೇಲ್ನೋಟಕ್ಕೆ ಗೋಚರವಾಗುವುದರಿಂದ ವಿರೋಧ ಪಕ್ಷಗಳು ಕದ್ದಾಲಿಕೆ ಕಾರಣರಾದವರ ತಲೆದಂಡಕ್ಕೆ ಆಗ್ರಹಿಸುತ್ತ ಸಂಸದೀಯ ಕಲಾಪಗಳನ್ನು ಸ್ಥಗಿತಗೊಳಿಸಿವೆ.

ಇಸ್ರೇಲ್ ಎನ್‌ಎಸ್‌ಓ ಸಮೂಹ ಕಂಪನಿಯು ತಯಾರಿಸಿದೆ ನಿಗೂಢ ಮತ್ತು ಸಂದೇಹಾಸ್ಪದ ಪೆಗಾಸಸ್ ಎಂಬ ತಂತ್ರಾಂಶ (ಇದನ್ನು ಕೆಲವು ವಲಯಗಳಲ್ಲಿ ಕುತಂತ್ರಾಂಶ ಎಂದೂ ಕರೆಯಲಾಗುತ್ತದೆ) ಸಾರ್ವಜನಿಕರ ದೂರವಾಣಿಗಳಲ್ಲಿ ನುಸುಳುವಂತೆ ಮಾಡಿ ಅವರ ಎಲ್ಲಾ ಸಂಭಾಷಣೆ ಮತ್ತು ಚಲನವಲನಗಳ ಮೇಲೆ ನಿಗಾ ಇಡುವುದೇ ಇದರ ಉದ್ದೇಶ. ಮಾಹಿತಿ ತಂತ್ರಜ್ಞಾನ ತನ್ನ ಔನ್ನತ್ಯದ ಪರಾಕಾಷ್ಠೆಯನ್ನು ಈ ತಂತ್ರಾಂಶದ ಮೂಲಕ ತಲುಪಿರಬಹುದಾದರೂ ಅದರ ದುರ್ಬಳಕೆಯಿಂದ ವ್ಯಕ್ತಿಗತ ಸ್ವಾತಂತ್ರ ಹರಣವಾಗುತ್ತಿದ್ದು, ಅದು ಪ್ರಜಾಪ್ರಭುತ್ವ ವ್ಯವಸ್ಥೆಯ ಮೂಲ ಆಶಯಗಳನ್ನೇ ದುರ್ಬಲಗೊಳಿಸಬಲ್ಲದು. ಅಧಿಕಾರದಲ್ಲಿರುವ ಪಕ್ಷ ಮತ್ತು ಪಕ್ಷದ ಸರ್ಕಾರ ತನ್ನ ರಾಜಕೀಯ ಉದ್ದೇಶ ಸಾಧನೆಗಾಗಿ ತೀರಾ ಅನೈತಿಕ ಮತ್ತು ಅಕ್ರಮ ಎನ್ನಬಹುದಾದ ಈ ಕುತಂತ್ರಾಂಶವನ್ನು ತನ್ನ ರಾಜಕೀಯ ವಿರೋಧಿಗಳು ಮಾತ್ರ ಟೀಕಾಕಾರರ ಮೇಲೆ ಅನಿರ್ಬಂಧಿತವಾಗಿ ಮತ್ತು ನಿಗೂಢವಾಗಿ ಬಳಸುವ ವಿಪುಲ ಸಾಧ್ಯತೆಗಳಿರುವುದರಿಂದಲೇ ಪ್ರಸಕ್ತ ಹಗರಣದ ಬಗ್ಗೆ ವ್ಯಾಪಕ ಕಳವಳ, ಟೀಕೆ, ಖಂಡನೆ ವ್ಯಕ್ತವಾಗಿದೆ.

ಇಸ್ರೇಲಿ ಕಂಪನಿಯು ಈ ಕಣ್ಗಾವಲು ತಂತ್ರಾಂಶವನ್ನು ಕೇವಲ ಸರ್ಕಾರಗಳಿಗಷ್ಟೇ ಮಾರಾಟ ಮಾಡುವುದಾಗಿ ಹೇಳಿಕೊಂಡಿರುವುದರಿಂದ ಭಾರತ ಸರ್ಕಾರದ ಮೇಲೆ ಸಂಶಯ ಇನ್ನಷ್ಟು ಗಾಢಗೊಳ್ಳುವಂತೆ ಮಾಡಿದೆ. ಇದನ್ನು ಖರೀದಿಸುವ ಸರ್ಕಾರಗಳು ತಂತ್ರಾಂಶವನ್ನು ಕೂಲಂಕಷವಾಗಿ ಪರಿಗಣಿಸಿದೆ. ಮೇಲೆ, ಇಸ್ರೇಲಿ ಸರ್ಕಾರದ ಅನುಮೋದನೆಯ ಅನಂತರ ಎನ್‌ಎಸ್‌ಓ ಕಂಪನಿ ತನ್ನ ಗ್ರಾಹಕ ಕಂಪನಿಗಳಿಗೆ ಮಾರಾಟ ಮಾಡುತ್ತದೆ. ಈ ತಂತ್ರಜ್ಞಾನದ ಮೂಲ ಉದ್ದೇಶ ರಾಷ್ಟ್ರವಿರೋಧಿ, ಸಮಾಜ ವಿರೋಧಿ ಶಕ್ತಿಗಳ, ಭಯೋತ್ಪಾದಕರ ಹಾಗೂ ರಾಷ್ಟ್ರೀಯ ಏಕತೆ ಮತ್ತು ಸಮಗ್ರತೆಗೆ ಧಕ್ಕೆ ಉಂಟು ಮಾಡುವ ದುಷ್ಕರ್ಮಿಗಳ ದೂರವಾಣಿ ಸಂಭಾಷಣೆ ಮತ್ತು ಅವರ ಚಲನವಲನಗಳ ಮೇಲೆ ನಿಗಾ ಇಡುವುದಾಗಿದೆ. ಸಾರ್ವಜನಿಕ ಶಾಂತಿ ಸ್ಥಾಪನೆ ಮತ್ತು ಸುವ್ಯವಸ್ಥೆಗೆ ಭಂಗ ಬಾರದ ರೀತಿಯಲ್ಲಿ ಈ ಕಣ್ಗಾವಲು ಸೌಕರ್ಯಗಳನ್ನು ಪ್ರಯೋಗಿಸಲಾಗುತ್ತದೆ.

ಆದರೆ, ಸುಮಾರು ಒಂದು ಸಾವಿರ ಭಾರತೀಯ ವ್ಯಕ್ತಿಗಳ ದೂರವಾಣಿಗಳು ಪೆಗಾಸಸ್ ಆಕ್ರಮಣದ ಗುರಿಯಾಗಿವೆ ಎಂಬ ಅಂಶ ಬೆಳಕಿಗೆ ಬಂದಿದ್ದು, ಅವುಗಳಲ್ಲಿ 300 ದೂರವಾಣಿಗಳನ್ನು ಪ್ರಮಾಣೀಕರೀಸಲಾಗಿದೆ. ಇವುಗಳಲ್ಲಿ ಕೆಲವು ದೂರವಾಣಿಗಳನ್ನಾದರೂ ಖಚಿತವಾಗಿ ಕಣ್ಗಾವಲಿಗೆ ಗುರಿ ಮಾಡಿದ ವರದಿಗಳಿವೆ. ಮೇಲ್ನೋಟಕ್ಕೆ ಬಯಲಾಗಿರುವ ಸಂಗತಿಗಳ ಆಧಾರದ ಮೇಲೆ ಹೇಳುವುದಾದರೆ, ಸಾಕ್ಷ್ಯಗಳು ಬಲಯುತವಾಗಿವೆ. ಹೀಗೆ ಗೂಢಚರ್ಯೆಗೆ ಒಳಗಾದ ದೂರವಾಣಿಗಳಲ್ಲಿ ಕಾಂಗ್ರೆಸ್ ನಾಯಕ ರಾಹುಲ್ ಗಾಂಧಿ, ಓರ್ವ ಸರ್ವೋಚ್ಚ ನ್ಯಾಯಾಲಯದ ನ್ಯಾಯಾಧೀಶ ಮತ್ತು ಚುನಾವಣಾ ಆಯೋಗದ ನಿವೃತ್ತ ಚುನವಾಣಾ ಆಯುಕ್ತರು ಇದ್ದಾರೆಂದು ವರದಿಗಳು ತಿಳಿಸುತ್ತವೆ. ಇವರಲ್ಲದೆ ರಾಷ್ಟ್ರದ ಏಕತೆ ಮತ್ತು ಭದ್ರತೆಗೆ ಧಕ್ಕೆ ಉಂಟುಮಾಡಬಹುದಾದ ಯಾವ ವ್ಯಕ್ತಿಗಳೂ, ಶಕ್ತಿಗಳೂ ಅಷ್ಟಾಗಿ ಕಂಡುಬಂದಿಲ್ಲ. ಕೂತೂಹಲದ ಸಂಗತಿಯೆಂದರೆ, ಈ ರೀತಿ ಪೆಗಾಸಸ್ ಗೂಢಚರ್ಯೆಗೆ ಒಳಗಾದವರಲ್ಲಿ ಕೇಂದ್ರ ಸರ್ಕಾರದ ಇಂದಿನ ಮಾಹಿತಿ ತಂತ್ರಜ್ಞಾನ ಮತ್ತು ಸಂಪರ್ಕ ಖಾತೆಯ ಸಚಿವ ಅಶ್ವಿನಿ ವೈಷ್ಣವ್ ಅವರ ಹೆಸರೂ ಇದೆ! ಇನ್ನೂ ಕುತೂಹಲದ ಮತ್ತು ಅಚ್ಚರಿಯ ಸಂಗತಿ ಎಂದರೆ, ಸಂಬಂಧಿಸಿದ

ಮಂತ್ರಿಯಾಗಿ ವೈಷ್ಣವ್ ಅವರೇ ಸಂಸತ್ತಿನಲ್ಲಿ ಹೇಳಿಕೆ ನೀಡಿದ್ದು ಪೆಗಾಸಸ್ ಗೂಢಚರ್ಯೆಯನ್ನು ನಿರಾಕರಿಸಿದ್ದಾರೆ!

**ಸಚಿವರ ಹೇಳಿಕೆಯಲ್ಲಿ ಸ್ಪಷ್ಟತೆಯ ಕೊರತೆ**

ಸಚಿವರು ನೀಡಿರುವ ಹೇಳಿಕೆಯನ್ನು ನಂಬದಿರುವವರೇ ಅಧಿಕ. ಅದು ಅರೆಮನಸ್ಸಿನ ಹೇಳಿಕೆಯಂತೆ ಕಂಡುಬರುತ್ತಿದ್ದು, ಸ್ಪಷ್ಟತೆಯ ಕೊರತೆ ಎದ್ದುಕಾಣುತ್ತದೆ. ಯಾವುದೇ ರೀತಿಯ ಅನಧಿಕೃತ ಗೂಢಚರ್ಯೆ ಯಾರ ಮೇಲೂ ನಡೆಸಲಿಕ್ಕೆ ಭಾರತದ ಕಾನೂನುಗಳಡಿಯಲ್ಲಿ ಸಾಧ್ಯವಿಲ್ಲವೆಂದು ಅವರು ಹೇಳಿದ್ದಾರೆ. ಅವರ ಹೇಳಿಕೆ ವಸ್ತುಸ್ಥಿತಿಯನ್ನು ಬಿಚ್ಚಿಡುವುದಕ್ಕಿಂತಲೂ ಹೆಚ್ಚಾಗಿ ಮುಚ್ಚಿಡುವುದಕ್ಕೆ ಹೆಣಗಾಡುತ್ತಿರುವಂತೆ ಭಾಸವಾಗುತ್ತದೆ.

ಸದರಿ ಪ್ರಕರಣದಲ್ಲಿ ವಿರೋಧ ಪಕ್ಷಗಳ ಆಕ್ರೋಶ ಸಹಜವು, ನ್ಯಾಯೋಚಿತವು ಆಗಿದೆ ಎಂದು ಹೇಳಲು ಹಿಂಜರಿಕೆ ಬೇಡ. ಆದರೆ, ಪ್ರತಿಪಕ್ಷಗಳು ಜವಾಬ್ದಾರಿಯಿಂದ ನಡೆದುಕೊಳ್ಳುವುದು ಉಚಿತವೆನಿಸುತ್ತದೆ. ಸಂಸತ್ತಿನ ಎಲ್ಲಾ ಕಲಾಪಗಳನ್ನು ಬದಿಗೊತ್ತಿ ಪೆಗಾಸಸ್ ಕುರಿತಾಗಿಯೇ ಚರ್ಚೆ ನಡೆಯಬೇಕೆಂದು ಒತ್ತಾಯಿಸಿರುವ ವಿರೋಧ ಪಕ್ಷಗಳು ಸಂಸದೀಯ ಚರ್ಚೆಯ ತಾಂತ್ರಿಕ ಪ್ರಕ್ರಿಯೆಗೆ ಹೆಚ್ಚು ಒತ್ತು ಕೊಟ್ಟಂತೆ ಕಂಡುಬರುತ್ತದೆ. ಈ ವಿಷಯದ ಮೇಲೆಯೇ ಸಂಸತ್ತಿನಲ್ಲಿ ದಾಂಧಲೆ ಉಂಟುಮಾಡುವುದು, ಸಂಸತ್ ಕಾರ್ಯನಿರ್ವಹಿಸದಂತೆ ಮಾಡುವುದು ಶೋಭೆ ತರುವುದಿಲ್ಲ. ಇದರಿಂದ ಆಡಳಿತ ಪಕ್ಷಕ್ಕೆ ಇನ್ನೂ ಅನುಕೂಲವೇ ಆದೀತು. ಮಹತ್ವದ ಮಸೂದೆಗಳ ಮೇಲೆ ಚರ್ಚೆ ಇಲ್ಲದೆಯೇ ಅಂಗೀಕಾರ ಮಾಡಿಕೊಳ್ಳುವುದಕ್ಕೆ ಸರ್ಕಾರಕ್ಕೆ ದಾರಿ ಮಾಡಿಕೊಟ್ಟಂತಾಗುತ್ತದೆ. ಸರ್ಕಾರ ಮತ್ತು ಪ್ರತಿಪಕ್ಷಗಳೆರಡೂ ಒಣ ಪ್ರತಿಷ್ಠೆಗೆ ನೇತುಬೀಳದೆ ಯಾವುದೇ ಸ್ವರೂಪದಲ್ಲಾದರೂ ವಿಸ್ತೃತ ಮತ್ತು ಮುಕ್ತ ಚರ್ಚೆ ನಡೆಸುವುದು ಯೋಗ್ಯವೆನಿಸುತ್ತದೆ. ಚರ್ಚೆಯ ಸ್ವರೂಪ ಏನೇ ಇದ್ದರೂ ಚರ್ಚೆ ನಡೆಯದೇ ಇರುವುದಕ್ಕಿಂತ ಉತ್ತಮವಲ್ಲವೇನು?

ಪೆಗಾಸಸ್ ಕಣ್ಗಾವಲು ಪ್ರಕರಣ ಸರ್ಕಾರದಿಂದ ಹಲವಾರು ಸ್ಪಷ್ಟ ಉತ್ತರಗಳನ್ನು ಬಯಸುತ್ತದೆ. ಪೆಗಾಸಸ್ ಕಣ್ಗಾವಲು ನಡೆದಿದೆಯೋ ಇಲ್ಲವೊ? ನಡೆದಿದ್ದರೆ ಅದು ಅಧಿಕೃತವೋ, ಅನಧಿಕೃತವೋ? ಸರ್ಕಾರ ಪೆಗಾಸಸ್ ತಂತ್ರಾಂಶವನ್ನು ಇಸ್ರೇಲ್ ಕಂಪನಿಯಿಂದ ಕೊಂಡುಕೊಂಡಿದೆಯೆ? ಇಲ್ಲವಾದರೆ ಸರ್ಕಾರದ ಯಾವುದಾದರೂ ಅಧೀನ ಸಂಸ್ಥೆ, ಅದರಲ್ಲೂ ಮುಖ್ಯವಾಗಿ ತನಿಖಾ ಮತ್ತು ಗೂಢಚರ ಸಂಸ್ಥೆಗಳು ಖರೀದಿ ಮಾಡಿವೆಯೆ? ಈ ತಂತ್ರಾಂಶ ಖರೀದಿಗೆ ದುಡ್ಡು ಪಾವತಿ ಮಾಡಿದವರು ಯಾರು? ಎನ್‌ಎಸ್‌ಓ ಕಂಪನಿ 50 ದೂರವಾಣಿಗಳ ಕಣ್ಗಾವಲಿಗಾಗಿ ವರ್ಷಕ್ಕೆ 60 ಕೋಟಿ ರೂಪಾಯಿ ಲೈಸೆನ್ಸ್ ಶುಲ್ಕವನ್ನು ಪಡೆಯುತ್ತದೆ. 300 ದೂರವಾಣಿಗಳಿಗೆ 300 ಕೋಟಿ ರೂ. ಲೈಸೆನ್ಸ್ ಶುಲ್ಕ ಪಾವತಿಸಬೇಕಾಗುತ್ತದೆ.

ಪೆಗಾಸಸ್ ಪ್ರಕರಣದಲ್ಲಿ ಸರ್ಕಾರ ಭಾಗಿಯಾಗಿಲ್ಲ ಎಂದು ಇಟ್ಟುಕೊಳ್ಳೋಣ. ಆದರೆ ಕುತಂತ್ರಾಂಶ ಬಳಕೆಯಲ್ಲಿ ರಾಷ್ಟ್ರೀಯ ಭದ್ರತೆ, ರಾಜಕೀಯ ಅರಾಜಕತೆ ಪ್ರಶ್ನೆ ಇರುವುದರಿಂದ ಅದನ್ನು ಬಳಕೆ ಮಾಡಿದವರು ಯಾರು ಎಂಬ ಕಾಳಜಿಯು ಕೂಡ ಸರ್ಕಾರಕ್ಕೆ ಇರಬೇಕಲ್ಲವೆ? ಕಳೆದ ವರ್ಷ ಸಂಸತ್ತಿನಲ್ಲಿ ಕೇಳಲಾದ ಪೆಗಾಸಸ್ ತಂತ್ರಾಂಶ ಖರೀದಿಗೆ ಸಂಬಂಧಿಸಿದ ಪ್ರಶ್ನೆಗೆ ಅಂದಿನ ಸಂಬಂಧಪಟ್ಟ ಸಚಿವರು 'ನನ್ನ ತಿಳುವಳಿಕೆಗೆ ಸಂಬಂಧಿಸಿದಂತೆ ಯಾವುದೇ ರೀತಿಯ ಅನಧಿಕೃತ ಕಣ್ಗಾವಲು ನಡೆದಿಲ್ಲ' ಎಂದು ಉತ್ತರಿಸಿದ್ದರು. ಹಾಗಾದರೆ, ಅವರ ತಿಳುವಳಿಕೆ ಇಲ್ಲದೆ ಏನಾದರೂ ನಡೆದಿದೆಯೆ?

ಕೆಲವರು ಈಗಾಗಲೇ ಈ ವಿವಾದದಲ್ಲಿ ನ್ಯಾಯಾಲಯದ ಬಾಗಿಲು ತಟ್ಟಿದ್ದಾರೆ. ಆದರೆ, ಜನತಾ ನ್ಯಾಯಾಲಯದ ಉನ್ನತ ಸ್ಥಾನವಾಗಿರುವ ಸಂಸತ್ ತನ್ನ ಜವಾಬ್ದಾರಿಯಿಂದ ಹಿಂಜರಿಯಬಾರದು.

ವಿಸ್ತೃತ ಚರ್ಚೆಯ ಜೊತೆಗೆ, ಸೂಕ್ತ ತನಿಖೆ ಮತ್ತು ಹೊಣೆಗಾರಿಕೆ ನಿಗದಿಪಡಿಸಿರುವ ತೀರಾ ಅಪೇಕ್ಷಣೀಯ.

ಆಧಾರ: ತರಂಗ, ದಿನಾಂಕ: 12.08.2021

## 22. ಸದನದ ಘನತೆ ಕಾಪಾಡಿ

ಸಂಸತ್ತಿನ ಮುಂಗಾರು ಅಧಿವೇಶನ ರಾಜಕೀಯ ಪ್ರತಿಷ್ಠೆಯ ತಾಕಲಾಟಕ್ಕೆ ಸಿಲುಕಿ ವ್ಯರ್ಥವಾಗಿದೆ. ನಿಜಕ್ಕೂ ಇದು ದುರದೃಷ್ಟಕರ ಬೆಳವಣಿಗೆ. ರಾಜಕೀಯ ವ್ಯವಸ್ಥೆ ಬಗ್ಗೆ ಜನಪ್ರತಿನಿಧಿಗಳ ಬಗ್ಗೆ ಜನರಲ್ಲಿ ಅಸಮಾಧಾನ, ಅಸಂತೋಷ ಹೆಚ್ಚುತ್ತಿರುವ ಇಂದಿನ ದಿನಗಳಲ್ಲಿ ಇಂಥ ಘಟನೆಗಳು ನಡೆದಾಗ ಅದು ಪ್ರಜಾತಂತ್ರದ ಸ್ವಾಸ್ಥ್ಯಕ್ಕೆ ಮಾರಕವಾಗುವುದಲ್ಲದೆ, ಜನರ ನಂಬಿಕೆಗೂ ಪೆಟ್ಟು. ನಮ್ಮ ರಾಜಕೀಯ ಪಕ್ಷಗಳಿಗೆ ಚರ್ಚೆ ಸಂವಾದದ ಮೂಲಕ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳುವುದೇ ಬೇಕಿಲ್ಲವೇನೋ ಎಂಬಂಥ ಸ್ಥಿತಿ ಸೃಷ್ಟಿಯಾಗಿದೆ. ವಾಗ್ವಾದ, ಗದ್ದಲ, ಕಲಹದಿಂದ ಸಂಸದರು ಯಾವ ಸಂದೇಶ ನೀಡಲು ಹೊರಟಿದ್ದಾರೆ? ಹಿಂದೆಲ್ಲ ಅತ್ಯಂತ ಕ್ಲಿಷ್ಟ ಅಷ್ಟೇ ಗಂಭೀರ ವಿಷಯಗಳ ಬಗ್ಗೆ ಸದನದಲ್ಲಿ ಅರ್ಥಪೂರ್ಣ ಚರ್ಚೆ ನಡೆದ ನಿದರ್ಶನಗಳನ್ನು ರಾಜಕೀಯ ಪಕ್ಷಗಳು ಮರೆತು ಬಿಟ್ಟಿವೇ?

ಈ ಬಾರಿ ಜುಲೈ 19 ರಿಂದ ಮುಂಗಾರು ಅಧಿವೇಶನ ಆರಂಭವಾದರೂ, ಲೋಕಸಭೆ ಮತ್ತು ರಾಜ್ಯಸಭೆಯಲ್ಲಿ ಯಾವುದೇ ಸಾರ್ಥಕ ಚರ್ಚೆ ನಡೆಯದೇ ಈಗ ಮುಂಗಾರು ಅಧಿವೇಶನದ ಕಲಾಪವೇ ಅನಿರ್ದಿಷ್ಟಾವಧಿಗೆ ಮುಂದೂಡಲ್ಪಟ್ಟಿದೆ. ಲೋಕಸಭೆ ಕೇವಲ 21 ಗಂಟೆಗಳ ಕಾಲ ಕಾರ್ಯನಿರ್ವಹಿಸಿದೆ. ರಾಜ್ಯಸಭೆ ಕಲಾಪ ವೇಳೆ ನಡೆದ ಘಟನೆಯಂತೂ ಸಂಸದೀಯ ವ್ಯವಸ್ಥೆಗೆ ಎಸಗಿದ ಅವಮಾನ. ನೂತನ ಕೃಷಿ ಕಾಯ್ದೆ ಕುರಿತಂತೆ ಚರ್ಚೆ ಆರಂಭವಾಗುತ್ತಿದ್ದಂತೆಯೇ ವಿರೋಧ ಪಕ್ಷಗಳ ಕೆಲ ಸದಸ್ಯರು ತೀವ್ರ ಗದ್ದಲ ಮಾಡಿ ಸಭಾಪತಿ ಪೀಠದ ಮುಂಭಾಗದಲ್ಲಿರುವ ಮೇಜನ್ನು ಹತ್ತಿ ಕಪ್ಪುಬಟ್ಟೆ ಪ್ರದರ್ಶಿಸಿದ್ದರು. ಅಲ್ಲದೆ ದಾಖಲೆಗಳನ್ನು ಎಸೆಯುವ ಮೂಲಕ ಉದ್ಧಟತನ ತೋರಿದರು. ಈ ಬಗ್ಗೆ ತೀವ್ರ ಬೇಸರ ವ್ಯಕ್ತಪಡಿಸಿರುವ ರಾಜ್ಯಸಭೆ ಸಭಾಪತಿ ಭಾವುಕರಾಗಿ ಮಾತನಾಡಿದ್ದಾರೆ. ಪ್ರಜಾಪ್ರಭುತ್ವದ ದೇಗುಲದಲ್ಲಿ (ಸಂಸತ್ತು) ನಡೆದ ಈ ಗದ್ದಲದಿಂದಾಗಿ ನಿದ್ದೆಯಿಲ್ಲದ ರಾತ್ರಿ ಕಳೆದೆ. ಈ ಘಟನೆಯಿಂದ ಬಹಳ ಬೇಸರವಾಗಿದೆ. ದೇವಸ್ಥಾನದಲ್ಲಿ ಗರ್ಭಗುಡಿ ತನಕ ಮಾತ್ರ ಭಕ್ತರು ಪ್ರವೇಶಿಸಬಹುದು. ಅದರಂತೆ ಸದನಕ್ಕೂ ಒಂದು ಪಾವಿತ್ರ್ಯತೆ ಘನತೆ ಇದೆ. ಈ ಗದ್ದಲದಿಂದ ಸದನದ ಪಾವಿತ್ರ್ಯತೆ ನಾಶವಾಗಿದೆ ಎಂದಿದ್ದಾರೆ. ಅವರ ಈ ಮಾತುಗಳು ಜನಪ್ರತಿನಿಧಿಗಳಿಗೆ, ರಾಜಕೀಯ ಪಕ್ಷಗಳಿಗೆ ಆತ್ಮಾವಲೋಕನದ ಕನ್ನಡಿಯಾಗಬೇಕು. ಅಧಿವೇಶನ ಸುಗಮವಾಗಿ ನಡೆಯದ್ದರ ಬಗ್ಗೆ ಲೋಕಸಭಾ ಅಧ್ಯಕ್ಷರೂ ಕೂಡ ಬೇಸರ ಹೊರಹಾಕಿದ್ದಾರೆ.

ಮಸೂದೆ ಅಥವಾ ಪ್ರಮುಖ ವಿಷಯಗಳಿಗೆ ಸಂಬಂಧಿಸಿದಂತೆ ಭಿನ್ನಾಭಿಪ್ರಾಯ ಸಹಜ. ಭಿನ್ನಾಭಿಪ್ರಾಯಗಳು ಚರ್ಚೆಗೆ ವಿಚಾರ ಮಂಥನಕ್ಕೆ ನಾಂದಿಯಾಗಿ, ಹೊಸ ಹೊಳಹು ಕಂಡುಕೊಂಡು ಸಮಸ್ಯೆಗಳಿಗೆ ತಾರ್ಕಿಕ ಅಂತ್ಯ ಕಂಡುಕೊಳ್ಳಬೇಕೇ ಹೊರತು ಕೂಗಾಟ, ಚೀರಾಟ, ಗದ್ದಲ–ಇವೆಲ್ಲ ವಿರೋಧವನ್ನು ವ್ಯಕ್ತ ಮಾಡುವ ವಿಧಾನಗಳಲ್ಲ. ಅಷ್ಟಕ್ಕೂ ಚರ್ಚೆ ಮೂಲಕ ಬಗೆಹರಿಯದ ಸಮಸ್ಯೆಗಳೆ ಇಲ್ಲ. ಅಂಥ ಸಂವಾದದ ದಾರಿಯನ್ನು ರಾಜಕೀಯ ಪಕ್ಷಗಳು ಪ್ರಶಸ್ತಗೊಳಿಸಬೇಕೇ ಹೊರತು ಮುಚ್ಚಿಹಾಕಬಾರದು. ರಾಜಕೀಯ ಪ್ರತಿಷ್ಠೆಯ ಜಿದ್ದಾಜಿದ್ದಿಗೆ ಕಲಾಪ........ ಸದನದ ಘನತೆಯಾಗಲಿ ಹಾಳಾಗಬಾರದು. ಜನಪ್ರತಿನಿಧಿಗಳ ವರ್ತನೆಯನ್ನು ಇಡೀ ದೇಶ ಗಮನಿಸುತ್ತದೆ ಎಂಬುದನ್ನು ಮರೆಯಬಾರದು.

ಆಧಾರ:ವಿಜಯವಾಣಿ, ದಿನಾಂಕ:18.08.2021

## 23. Probe agencies too hit by lack of manpower: CJI

Bench was hearing plea about hundreds of criminal cases pending against MPs and MLAs, both sitting and former the Supreme Court said probe agencies such as the Central Bureau of Investigation (CBI) suffered from the dearth of manpower and infrastructure that the judiciary too faced. Both were overburdened.

"Everybody says 'CBI, CBI…' We don't want to demoralise the investigative agencies. They are overburdened… Similarly, one trial court handles 1,000 cases. How do you expect them to function? We had asked for special courts to hear exclusively cases under specific legislation… but nothing," Chief Justice of India (CJI) N.V. Ramana, heading a Special Bench of three judges, remarked orally.

**Pending cases** : The Bench, including Justices D.Y. Chandrachud and Surya Kant, was hearing a petition about the hundreds of criminal cases pending against MPs and MLAs, both sitting and former, for years together. Some of these cases, investigated by agencies such as the CBI and the Enforcement Directorate (ED), have been pending for over a decade.

A report submitted by the court's amicus curiae, senior advocate Vijay Hansaria, assisted by advocate Sneha Kalita, said 51 MPs and 71 MLAs were accused of offences under the Prevention of Money Laundering Act (PMLA), 2002.

Similarly, out of the 121 cases pending trial against MPs and MLAs before the CBI courts across the country, 58 were punishable with life imprisonment. In 45 cases, even the charges have not been framed, though the offences were alleged to have been committed several years ago.

A total of 37 CBI cases against legislators were continuing in the stage of investigation for years on end now. One of these cases, according to the CBI, was "expected" to be completed by 2030, the report said.

"In some cases, you have not filed a chargesheet in 10 or 15 years… In one case, you have attached assets worth over ₹ 200 crore, but not filed a chargesheet. Simply attaching property will not serve any purpose," Chief Justice Ramana addressed Solicitor-General Tushar Mehta, who appeared for both the CBI and the ED.

"The information given by the ED and CBI present a really, shocking, disturbing and gloomy picture," Mr. Hansaria submitted. The Chief Justice reasoned with Mr. Mehta to complete the trial in these cases quickly rather than have them hanging over the heads of the accused like a Damocles sword.

**Plea for directive**

The Solicitor-General urged the Bench to pass a judicial order directing lower courts to complete the pending trial proceedings in a "mandatory time-bound manner", possibly within the next six months. He submitted that in some cases, the High Courts intervened and granted stay of the trial.

But the CJI did not agree, saying the High Courts had stayed trial in only seven cases and the Supreme Court in one. Mr. Mehta then said ED cases were held up because they spanned to tax havens abroad, which refused to cooperate with investigations.

The CJI stated efforts would be made to “rationalise” the number of cases before each trial court. The judiciary was slowly but surely dealing with the problem of scarcity of judges - High Courts have 455 judicial vacancies as on August 1. Besides, lower courts also have other urgent cases of bail, custody matters and so on to hear and decide.

The Bench said a mechanism would be put in place soon to monitor the progress of criminal trials involving legislators soon. This would include special courts.

In the previous hearing, the apex court questioned the Centre’s commitment towards the speedy trial and prosecution of criminal politicians. It also directed that a criminal case against an MP or MLA could be withdrawn only after getting the consent of the High Court concerned.

“We deem it appropriate to direct that no prosecution against a sitting or former MP or MLA shall be withdrawn without the leave of the High Court… Various State governments have resorted to withdrawal of numerous criminal cases pending against MP/MLA by utilising the power vested under Section 321 CrPC. The power under Section 321 CrPC is a responsibility which is to be utilised in public interest and cannot be used for extraneous and political considerations. This power is required to be utilised with utmost good faith to serve the larger public interest,” a three-judge Bench led by the CJI had directed in its last order.

Courtesy: The Hindu , Dated: 26.08.2021

## 24. What has the Supreme Court ruled on ‘creamy layer’?

**The story so far:** On August 24, a Division Bench of the Supreme Court, led by Justice L. Nageswara Rao, observed that economic criterion cannot be the sole basis for identifying the ‘creamy layer’ of a backward class, and that other factors like social advancement, education, employment, too, matter. The judgment came on a writ petition filed by a group from Haryana, the Pichra Warg Kalyan Mahasabha, challenging two notifications issued by the State government in 2016 and 2018, under the Haryana Backward Classes (Reservation in Services and Admission in Educational Institutions) Act, 2016.

**What were the notifications?**

The 2016 notification identified as ‘creamy layer’ backward class members whose gross annual income exceeded ₹6 lakh. It said backward class sections whose families earn less than ₹3 lakh would get priority over their counterparts who earn more than ₹3 lakh but less than ₹6 lakh. The Supreme Court struck down the notifications as a “flagrant violation” of the 2016 Act. It said Section 5 (2) of the Act required the State to consider social, economic and other factors together to identify and exclude backward class members as ‘creamy layer’

**Who belongs to the 'creamy layer'?**

The 'creamy layer' concept was introduced in the Supreme Court's Indra Sawhney judgment, delivered by a nine-judge Bench on November 16, 1992. Though it upheld the government's decision based on the Mandal Commission's report to give 27% reservation to Other Backward Classes, the court found it necessary to identify sections of backward classes who were already "highly advanced socially as well as economically and educationally".

The court believed that these wealthy and advanced members form the 'creamy layer' among backward classes. The judgment directed the State governments to identify the 'creamy layer' and exclude them from the purview of reservation.

However, certain States like Kerala did not promptly implement the judgment. This led to the Indra Sawhney-II case, reported in 2000. In this, the court went to the extent of determining the 'creamy layer' among backward classes. The judgment held that persons from backward classes who occupied posts in higher services such as IAS, IPS and All India Services had reached a higher level of social advancement and economic status, and therefore, were not entitled to be treated as backward. Such persons were to be treated as 'creamy layer' without any further inquiry. Likewise, people with sufficient income who were in a position to provide employment to others should also be taken to have reached a higher social status and treated as "outside the backward class". Other categories included persons with higher agricultural holdings or income from property. Thus, a reading of the Indra Sawhney judgments shows that social advancement, including education and employment and not just wealth, was key to identify the 'creamy layer'.

**Why is it difficult to draw the line?**

The identification of 'creamy layer' has been a thorny issue. The basic question here is how rich or advanced should a backward class section be to invite exclusion from reservation. Justice Jeevan Reddy, in the Indra Sawhney judgment, wondered "how and where to draw the line" between the deserving and the creamy layer among backward classes. "The basis of exclusion should not merely be economic, unless, of course, the economic advancement is so high that it necessarily means social advancement," he pointed out.

Justice Reddy highlighted the pitfalls of identifying the creamy layer merely on economic basis. For example, a person who earns ₹36,000 a month may be economically well-off in rural India. However, the same salary in a metropolitan city may not count for much. Here, Justice Reddy warned that "while the income of a person can be taken as a measure of his social advancement, the limit to be prescribed should not be such as to result in taking away with one hand what is given with the other. The income limit must be such as to mean and signify social advancement".

Courtesy: The Hindu – Dated: 29.08.2021

## 25. The men who shaped independent India's parliamentary secretariat

Behind the Scenes of India's Early Legislatures, Two Secretaries Laid the foundation for Parliamentary Administration and Proceedings.

The visible part of a vibrant legislature is member's of Parliament (MPs) passionately debating critical national issues that shape the country. But a secretariat independent of the government, working tirelessly in the background supporting legislative functioning, is the backbone of Parliament. Two officers of Parliament, Maheshwar Nath Kaul and Sham Lal Shakdher devoted themselves to creating an efficient parliamentary administration for the national legislature of independent India.

Before Independence, Vithalbhai Patel, the first president of the Central Assembly, ensured the legislature's secretariat was responsible to its presiding officer, not the government. It was called the Legislative Assembly Department and it was this department Kaul joined in 1937. Rising through the ranks, Kaul became secretary to the constituent assembly.

It was here that he helped in moulding provisions relating to Parliament in the constitution. Then, he was at the helm of administration in the provisional Parliament and finally took charge of the Lok Sabha secretariat. Shakdher's journey to the Lok Sabha administration started in the newly created Department of Parliamentary Affairs. He was its first secretary in 1949. After that, he followed his mentor Kaul to Parliament as an officer on special duty and finally became his deputy in the Lok Sabha secretariat. He later succeeded Kaul as the Lok Sabha secretary.

Our constitution empowers the two houses of Parliament to make their own rules of procedure and have separate secretarial staff. Kaul and Shakdher put together a foundation of sound procedures and a responsive secretariat to implement them. For example, in 1952, in the first Lok Sabha of independent India, the rules provided that the House would start functioning at 10.45am. The timing was subject to the Speaker's instruction. It also provided that MPs give their questions 10 days in advance to enable ministers to answer them. Implementing these two simple rules, among many others, required a coordinated organisational effort by the Lok Sabha secretariat.

First, then-Speaker G.V. Mavalankar directed that the House would start functioning at 8.15am. It meant a group of secretariat personnel would have to arrive hours before to open, clean and ready the precincts of Parliament for the day. Another group would have to prepare the day's schedule, answers to questions and parliamentary papers. They would also make copies of each document for every MP.

Watch and ward staff would assist MPs and direct the public to galleries to watch the House proceedings. When the proceedings would start, a record of every word said in the legislative chamber would be kept and then published. Parallelly, secretariat personnel would check that the questions submitted by MPs for the following days comply with the rules of procedure. They would then send them to the respective ministries for their responses and collate their answers. Then the process would start all over again for the next day.

Occasionally, there were hiccups. On June 5, 1952, Lok Sabha MPs were in for a surprise when they reached Parliament. They saw the flag of Great Britain flying on the building instead of the Indian tricolour. Agitated MPs demanded answers from the government. A few days later, Prime Minister Jawaharlal Nehru would clarify in the House that it had occurred due to the improper understanding of instructions.Kaul and Shakdher ensured procedural and operational aspects of parliamentary functioning worked seamlessly. With the support of colleagues, they designed rules not only for the conduct of business in the legislative chamber but also in its committees. They also supported state assemblies and Parliaments of other countries on constitutional and procedural matters of legislatures.

During his tenure, Kaul started Parliament's academic journal. In its inaugural issue, he laid down the need for a journal as a tool for disseminating parliamentary information and as a vehicle for sharing insights on the institution's functioning. Writing in the same issue, Shakdher described an ideal parliamentary official as objective, nonpartisan, patient and committed to the country's service.

On retiring, the Lok Sabha speaker appointed both Kaul and Shakdher as honorary officers of the House. The president nominated Kaul to Rajya Sabha as an MP and Shakdher became the chief election commissioner. Their enduring legacy is the seminal book, 'Practice and Procedure in Parliament'. Popularly referred to as Kaul and Shakdher, it is the first port of call for everyone interested in the functioning of our legislatures. The book, updated by the Parliament secretariat, occupies a prominent place in every legislative chamber in the country.

Writer : Chakshu Roy,Head of Outreach,
PRS Legislative Research
Courtesy: Times of India ,Dated: 30.08.2021

## 26. Break the deadlock: Increase women's representation

With the country celebrating our women athletes' performance at the Tokyo Olympics, it is the right time to talk about women legislators too. Despite seeming consensus across all major political parties on increasing representation of women in legislatures, the issue has remained hanging for decades. This is because it has been reduced to reservation in a certain form. To make headway, we need to think about it differently.

**Why do our legislatures need gender balancing**

Our gender ration is slowly inching towards 1:1 but there are less than 15% women legislators in most state assemblies and Parliament. We need to proactive in addressing this shortfall because participation of more women in policy-making is necessary to address various issues holistically.

Increased access to education, atleast in the urban centers and consequent economic independence, is seeing increasing participation of women in various sectors. However, politics remains a slow-growth area. The exceptions are often lateral entries - either being members of already powerful political families or having received recognition in another field (often films

or television). Growth from within the ranks in political parties is almost always through active participation in very rough agitational politics – this poses a clear barrier to women.

**Why are male legislators fearful and unsupportive**

Very few male legislators support reservation for women, primarily because of the way we implement reservation in elections. So if decide 30% seats will be reserved for women, then specified 30% of seats will be identified and only women will be allowed to contest from those seats. This is completely unacceptable to sitting MPs and MLAs who may have taken decades to 'build their reputation' in their constituency – and if their constituency suddenly became 'reserved' it would bar them from contesting.

As no one knows on whom the 'axe' may fall, even the tabling of such a bill gets blocked, though on paper every major political party supports women's reservation. Our Lok Sabha and assembly constituencies are so large that most candidates can never expect to meet their electorates even once. Candidates build their following over decades or even generations and that is also the reason that political dynasties are the norm in India.

Except in some 'wave elections', their own 'following' plays a more critical role than the party affiliation. This is also the reason parties try to attract leaders from other political parties before elections – they bring in their followers to add to the partly loyalists.

**What is the formula that men too would accept?**

A novel approach to increase representation of women that would address most of the concerns raised here could be as follows.

- Introduce increase in women's representation in stages – say 20% in 2024 elections, 25% in 2029 and so on to reach 50% after six elections.
- Instead of constituency-wise reservation, get every recognized political party to field the required percentage of women candidates.
- Further require all parties to field the mandated percentage of women candidates in those constituencies where either they won or were runner-ups in the previous elections. This would prevent parties from defeating the objective by fielding women only in those constituencies where they have no strength. This clause can also be replaced by one with those constituencies where the political party secured at least 25% of votes polled in the last elections.

**How is this superior to reserving constituencies**

First, as no specific constituencies are 'reserved' for women, no sitting MP or MLA would feel threatened about being denied the opportunity to contest in the next elections. The fact that in every party, some of the candidates are perceived to be 'non-performing' and replaced is nothing new. The proposed increase is gradual and unlikely to cause any major commotion.

Unlike sports where men and women compete separately, there is no need for such division in elections as women are quite capable of defeating men and vice versa. Making it a structured increase over a significant period of time also gives adequate opportunity to political parties to identify and nurture suitable women candidates. And these potential candidates can be located anywhere – not just in some specific reserved constituencies.

Thus it is possible to break this current deadlock on increasing women's representation in legislatures by thinking afresh. In fact, if this approach his found successful in providing specific constituencies, it may even be used to replace the existing reservation mechanism for other categories.

Writer : M.Balakrishnan, Professor, IIT Delhi
Courtesy: Times of India, Dated: 31.08.2021

## 27. ವಿಧಾನಮಂಡಲದ ಕಲಾಪ ವ್ಯರ್ಥಗೊಳಿಸೋದು ಬೇಡ

ರಾಜ್ಯ ವಿಧಾನಮಂಡಲ ಅಧಿವೇಶನ ಬಹುತೇಕ ಆರು ತಿಂಗಳ ನಂತರ ಆರಂಭವಾಗಲಿದೆ. ಹಿಂದಿನ ಅಧಿವೇಶನ ನಡೆದಿದ್ದು ಮಾರ್ಚ್ ಕೊನೆಯಲ್ಲಿ. ಈ ನಡುವಿನ ಅವಧಿಯಲ್ಲಿ ರಾಜ್ಯದಲ್ಲಿ ಮಹತ್ವದ ರಾಜಕೀಯ ಬದಲಾವಣೆಯಾಗಿದೆ. ಮುಖ್ಯಮಂತ್ರಿ ಹಾಗೂ ಸಚಿವ ಸಂಪುಟ ಬದಲಾಗಿದೆ. ಹೊಸ ಸರ್ಕಾರ ಬಂದು ಕೇವಲ 46 ದಿನಗಳು ಕಳೆದಿವೆ. ಜೊತೆಗೆ ರಾಜ್ಯದಲ್ಲಿ ಕೊರೋನಾ ತೀವ್ರವಾಗಿತ್ತು. ಈಗ ನಿಯಂತ್ರಣಕ್ಕೆ ಬಂದಿದೆ. ಆರು ತಿಂಗಳ ಅವಧಿಯಲ್ಲಿ ಲಸಿಕಾಕರಣ ವೇಗೋತ್ಕರ್ಷ ಪಡೆದಿದೆ. ಈ ಮಧ್ಯ ರಾಜ್ಯದಲ್ಲಿ ಪ್ರವಾಹ ಬಂದುಹೋಗಿದೆ. ಹೀಗೆ ಬದಲಾದ ಪರಿಸ್ಥಿತಿಯಲ್ಲಿ ಮಹತ್ವದ ವಿಧಾನಮಂಡಲ ಕಲಾಪ ನಡೆಯುತ್ತಿದೆ.

ನನಗೆ ಇತ್ತೀಚೆಗೆ ಮುಕ್ತಾಯಗೊಂಡ ಸಂಸತ್ ಅಧಿವೇಶನ ನೆನಪಾಗುತ್ತಿದೆ. ಅಲ್ಲಿ ಸಂಸದರು ನಡೆದುಕೊಂಡ ರೀತಿಯಿಂದಾಗಿ ಇಡೀ ಅಧಿವೇಶನ ವ್ಯರ್ಥವಾಗಿತ್ತು. ನಮ್ಮ ರಾಜ್ಯದಲ್ಲಿ ವಿರೋಧ ಪಕ್ಷಗಳು ಪ್ರತಿ ಸಲವು ನಡೆದುಕೊಳ್ಳುವಂತೆಯೇ ಈ ಬಾರಿಯೂ ನಡೆದುಕೊಳ್ಳುತ್ತವೆಯೋ ಅಥವಾ ಜನರ ವಿಷಯವನ್ನು ಪ್ರಸ್ತಾಪಿಸಿ ಸರ್ಕಾರದ ನಿಲುವುಗಳು ತಪ್ಪಿದ್ದರೆ ಸರಿಪಡಿಸಿ ಜನರಿಗೆ ಪರಿಹಾರ ಸಿಗುವಂತೆ ಮಾಡುತ್ತವೆಯೋ ಎಂಬುದು ಬಹಳ ಮುಖ್ಯ. ಸದನದಿಂದ ಯಾವತ್ತು ಜನರಿಗೆ ಪ್ರಯೋಜನವಾಗಬೇಕು. ರಾಜಕೀಯ ಪಕ್ಷಕ್ಕೋ, ರಾಜಕಾರಣಗಳಿಗೋ ಅಥವಾ ಮಂತ್ರಿಗಳಿಗೋ ಅದರಿಂದ ಪ್ರಯೋಜನವಾಗಬೇಕಿಲ್ಲ. ಹೀಗಾಗಿ ಈ ಬಾರಿಯ ವಿಧಾನಮಂಡಲ ಅಧಿವೇಶನ ಸುಸೂತ್ರವಾಗಿ ಹಾಗೂ ಫಲಪ್ರದವಾಗಿ ನಡೆಯಲು ಸರ್ಕಾರ ಹಾಗೂ ಪ್ರತಿಪಕ್ಷಗಳಿಬ್ಬರು ಪರಸ್ಪರ ಸಹಕಾರದಿಂದ ಕಾರ್ಯನಿರ್ವಹಿಸಬೇಕು. ಜನಪರವಾದ ಮಸೂದೆಗಳು ಚರ್ಚೆಗೆ ನಿಗದಿಯಾಗಿದ್ದಾಗ ರಾಜಕೀಯವನ್ನು ಮರೆತು ಪ್ರತಿಪಕ್ಷಗಳು ಸಹಕಾರ ನೀಡಬೇಕು. ಉದಾಹರಣೆಗೆ ಸಂಸತ್ತಿನಲ್ಲಿ ಕೋಲಾಹಲ ನಡೆಯುತ್ತಿದ್ದರು ಮೀಸಲು ಮಸೂದೆಯ ವಿಚಾರ ಬಂದಾಗ ತಕ್ಕಮಟ್ಟಿಗೆ ಚರ್ಚೆ ನಡೆಯಿತು. ರಾಜ್ಯದಲ್ಲೂ ಅಂತಹ ಮಹತ್ವದ ಮಸೂದೆಗಳು ಬಂದಾಗ ಉತ್ತಮ ಚರ್ಚೆ ನಡೆಯಬೇಕು. ಮಸೂದೆಗಳು ಚರ್ಚೆಯಾಗದೇ ಅಂಗೀಕಾರಗೊಳ್ಳುವ ಅನೇಕ ಉದಾಹರಣೆಗಳು ಕರ್ನಾಟಕದ ವಿಧಾನಮಂಡಲದಲ್ಲಿವೆ. ಅದು ಬದಲಾವಣೆಯಾಗಬೇಕು. ಮಸೂದೆಗಳು ಮುಂದೆ ಕಾನೂನಾಗಿ ಜನರ ಬದುಕಿನ ಮೇಲೆ ಪರಿಣಾಮ ಬೀರುತ್ತವೆ. ಅವುಗಳನ್ನು ಚರ್ಚೆಯೇ ಇಲ್ಲದೆ ಪಾಸು ಮಾಡಿದರೆ ಜನರಿಗೆ ಅಪಚಾರ ಎಸಗಿದಂತಾಗುತ್ತದೆ. ಯಾವುದಾದರೂ ಒಂದು ವಿಷಯವನ್ನು ಎಷ್ಟು ಸುದೀರ್ಘವಾಗಿ ಚರ್ಚಿಸಬೇಕು ಮತ್ತು ಎಲ್ಲಿಗೆ ನಿಲ್ಲಿಸಬೇಕು ಎಂಬ ಕಲ್ಪನೆ ಜನಪ್ರತಿನಿಧಿಗಳಿಗೆ ಇರಬೇಕು. ಸರ್ಕಾರ ಕೂಡ

ಅವರನ್ನು ವಿಶ್ವಾಸಕ್ಕೆ ತೆಗೆದುಕೊಂಡು, ಪ್ರಾಮಾಣಿಕವಾಗಿ ಅಂಕಿಅಂಶಗಳನ್ನು ನೀಡಿ, ಪ್ರತಿಪಕ್ಷಗಳ ಸಲಹೆಗಳನ್ನು ಸ್ವೀಕರಿಸಿ ಮುಂದುವರೆಯಲು ಸಿದ್ಧವಿದೆ.

ರಾಜ್ಯದಲ್ಲಿ ಹೊಸ ರೀತಿಯಲ್ಲಿ ಸದನ ನಡೆಸುವ ಸಂಪ್ರದಾಯವನ್ನು ಆರಂಭಿಸುವುದಕ್ಕೆ ಸರ್ಕಾರ ಸಿದ್ಧವಿದೆ. ಜನಪರ ನಿಲುವುಗಳಿಗೆ ಮಹತ್ವ ನೀಡುವುದಾಗಿ ನಾನು ಪದೇ ಪದೇ ಹೇಳಿದ್ದೇನೆ. ವಿಧಾನಸಭೆಯಲ್ಲಿ ಸಮಯ ಪಾಲನೆ ಬಹಳ ಮುಖ್ಯ. ಯಾವುದೋ ಒಂದು ವಿಷಯಕ್ಕೆ ಜೋತುಬಿದ್ದು ಎರಡು–ಮೂರು ದಿನ ವ್ಯರ್ಥಗೊಳಿಸುವುದು ಸರಿಯಲ್ಲ. ಸದನದ ನಿಯಮಾವಳಿಯ ಪುಸ್ತಕದಲ್ಲಿ ಯಾವುದಕ್ಕೆ ಎಷ್ಟು ಅವಕಾಶವಿದೆಯೇ ಅಷ್ಟೇ. ಅವಧಿಯಲ್ಲಿ ಪ್ರತಿಯೊಂದು ಚರ್ಚೆಯನ್ನು ಪೂರ್ಣಗೊಳಿಸಬೇಕು. ಶಾಸನ ಸಭೆಯ ಕಲಾಪ ಯಶಸ್ವಿಯಾಗುವುದು ಯಾವತ್ತು ಸರ್ಕಾರದ ಕೈಲಷ್ಟೇ ಇರುವುದಿಲ್ಲ. ಇದು ಪ್ರತಿಪಕ್ಷ ಮತ್ತು ಆಡಳಿತ ಪಕ್ಷಗಳಿಬ್ಬರ ಜವಾಬ್ದಾರಿ. ಆ ಜವಾಬ್ದಾರಿಯನ್ನು ಒಗ್ಗಟ್ಟಿನಿಂದ ನಿಭಾಯಿಸೋಣ.

ಅತಿಥಿ ಸಂಪಾದಕರಾಗಿ :ಬಸವರಾಜ ಬೊಮ್ಮಾಯಿ,
ಮುಖ್ಯಮಂತ್ರಿಯವರು,
ಕರ್ನಾಟಕ ಸರ್ಕಾರ.
ಅಧಾರ: ಕನ್ನಡ ಪ್ರಭ, ದಿನಾಂಕ:12.09.2021.

## 28. ಬಳಕೆಯಾಗದ 'ಶಾಸಕರ ನಿಧಿ' ಉದಾಸೀನ, ನಿರ್ಲಕ್ಷ್ಯ ಸಲ್ಲದು

ಪ್ರದೇಶಾಭಿವೃದ್ಧಿ ಯೋಜನೆಯಡಿ ಶಾಸಕರಿಗೆ ರಾಜ್ಯ ಸರ್ಕಾರ ಪ್ರತಿ ವರ್ಷ ನೀಡುವ ತಲಾ ರೂ.2 ಕೋಟಿ ಅನುದಾನ ಪೂರ್ಣ ಪ್ರಮಾಣದಲ್ಲಿ ಬಳಕೆ ಆಗದಿರುವುದಕ್ಕೆ ಮುಖ್ಯಮಂತ್ರಿಯವರು ತೀವ್ರ ಅತೃಪ್ತಿ ವ್ಯಕ್ತಪಡಿಸಿರುವುದು ಗಮನಾರ್ಹ. ಶಾಸಕರ ನಿಧಿ ಎಂದೇ ಕರೆಯಲಾಗುವ ಈ ಅನುದಾನವನ್ನು ಪೂರ್ಣ ಬಳಕೆ ಮಾಡಿ ಎಂದು ಮುಖ್ಯಮಂತ್ರಿಯವರು ಎಲ್ಲ ಶಾಸಕರಿಗೂ ಪತ್ರ ಬರೆದು ಒತ್ತಾಯಿಸಿದ್ದಾರೆ. ಬಿಡುಗಡೆ ಆಗಿರುವ ಅನುದಾನ ಸಕಾಲದಲ್ಲಿ ಬಳಕೆ ಆಗದಿದ್ದರೆ ರಾಜ್ಯದ ಪ್ರಗತಿ ಕುಂಠಿತಗೊಳ್ಳಲಿದೆ ಎಂದು ಅವರು ಕಾಳಜಿ ವ್ಯಕ್ತಪಡಿಸಿರುವುದು ಸರಿಯಾಗಿಯೇ ಇದೆ. ಖುದ್ದು ಮುಖ್ಯಮಂತ್ರಿಯವರೇ ಪತ್ರ ಬರೆದಿರುವುದನ್ನು ಗಮನಿಸಿಯಾದರೂ ಶಾಸಕರು ತಮ್ಮ ಕ್ಷೇತ್ರದ ಅಭಿವೃದ್ಧಿಯತ್ತ ಗಮನ ಹರಿಸಬೇಕಾಗಿದೆ. 2021–22ನೇ ಸಾಲಿಗೆ ಎರಡು ಸಮಾನ ಕಂತುಗಳಲ್ಲಿ ಶಾಸಕರಿಗೆ ತಲಾ ಒಂದು ಕೋಟಿ ರೂಪಾಯಿ ಅನುದಾನ ಬಿಡುಗಡೆಯಾಗಿದೆ. ಈ ವರ್ಷದ ಜುಲೈ ಅಂತ್ಯದ ವೇಳೆಗೆ ಸರಾಸರಿ ಶೇಕಡ 17.12 ರಷ್ಟು ಅನುದಾನ ಮಾತ್ರ ಬಳಕೆಯಾಗಿದೆ ಎನ್ನುವುದು ಶಾಸಕರು ಪಕ್ಷಭೇದವಿಲ್ಲದೆ ನಾಚಿಕೆ ಪಟ್ಟುಕೊಳ್ಳುವ ಸಂಗತಿಯೇ ಸರಿ. ಕೋವಿಡ್ ಸಂಕಷ್ಟದಿಂದ ಇಡೀ ರಾಜ್ಯ ಅರ್ಥಿಕ ಹಿನ್ನಡೆ ಕಂಡಿರುವ ಈ ಸಂದಿಗ್ಧ ಸಮಯದಲ್ಲಿ ಗ್ರಾಮಾಂತರ ಪ್ರದೇಶಗಳಲ್ಲಿ ಈ ನಿಧಿಯಿಂದಾಗಿ ಆರ್ಥಿಕ ಚಟುವಟಿಕೆಗಳು ಹೆಚ್ಚಾದರೆ ಜನರಿಗೆ ಒಳಿತಾಗಬಹುದು. ಶಾಸಕರು ಸೋಂಬೇರಿತನವನ್ನು ಬಿಟ್ಟು ಲಭ್ಯವಿರುವ ಸಂಪನ್ಮೂಲ ಬಳಸಿ ಅಭಿವೃದ್ಧಿ ಕೆಲಸಗಳ ವೇಗ ಹೆಚ್ಚಿಸುವ ಅಗತ್ಯ ಈಗ ಹಿಂದೆಂದಿಗಿಂತ ಹೆಚ್ಚಿದೆ. ಅನುದಾನವು ಚಿತ್ರದುರ್ಗ, ಕಲಬುರ್ಗಿ, ವಿಜಯಪುರ ಬಳ್ಳಾರಿ, ಕೊಪ್ಪಳ ಈ ಐದು ಜಿಲ್ಲೆಗಳಲ್ಲಿ ಅತಿಕಡಿಮೆ ಬಳಕೆಯಾಗಿದೆ. ಉತ್ತರ ಕರ್ನಾಟಕ ಹಿಂದುಳಿದಿರಲು ಸರ್ಕಾರದ ಮಲತಾಯಿ ಧೋರಣೆಯೇ ಕಾರಣ ಎಂದು ಪದೇ ಪದೇ ಬೊಬ್ಬೆ ಹೊಡೆಯುವ ಕೆಲವು ಜನನಾಯಕರು ಈ ವಿಷಯದ ಕಡೆಗೆ ಗಮನಹರಿಸಬೇಕು. ಜನಪ್ರತಿನಿಧಿಗಳ ಅದಕ್ಷತೆಯು ಹಿಂದುಳಿದಿರುವಿಕೆಗೆ ಒಂದು ಪ್ರಮುಖ ಕಾರಣ ಎನ್ನುವುದನ್ನು ಜನ ಗಮನಿಸಬೇಕು. ಚಿತ್ರದುರ್ಗ ಜಿಲ್ಲೆಯಲ್ಲಿ ಶಾಸಕರ ನಿಧಿ ಶೇ.2,25 ರಷ್ಟು ಮಾತ್ರ ಬಳಕೆಯಾಗಿದೆ ಎನ್ನುವುದು ಆ ಜಿಲ್ಲೆಯ ಶಾಸಕರಿಗೆ ಮುಜುಗರ ಉಂಟು ಮಾಡುವುದಿಲ್ಲವೇ ಕಲಬುರ್ಗಿ (ಶೇ.7.15) ವಿಜಯಪುರ (ಶೇ.8.98), ಬಳ್ಳಾರಿ (ಶೇ.10.25) ಮತ್ತು ಕೊಪ್ಪಳ (ಶೇ.11.63) ಜಿಲ್ಲೆಗಳಲ್ಲಿ ಬಳಕೆಯಾದ ಶಾಸಕರ ನಿಧಿಯ ಪ್ರಮಾಣವು ಈ

ಜಿಲ್ಲೆಗಳು ಏಕೆ ಇನ್ನೂ ಹಿಂದುಳಿದಿದೆ ಎನ್ನುವುದಕ್ಕೆ ದಿಕ್ಸೂಚಿಯಂತಿದೆ. ಅದರಲ್ಲೂ ಚಿತ್ರದುರ್ಗ, ಹೊಸದುರ್ಗ, ಹೊಳಲ್ಕೆರೆ ಮತ್ತು ಚಳ್ಳಕೆರೆ ವಿಧಾನಸಭಾ ಕ್ಷೇತ್ರಗಳಲ್ಲಿ ಜುಲೈ ಅಂತ್ಯದವರೆಗೆ ಪ್ರಗತಿ ಶೂನ್ಯ ಎಂದು ಮುಖ್ಯಮಂತ್ರಿಯವರೆ ಉಲ್ಲೇಖಿಸಿದ್ದಾರೆ. ಇದು ನಾಚಿಕೆಗೇಡು ಸಂಗತಿ. ಇವರಲ್ಲಿ ಒಬ್ಬ ಶಾಸಕರು ತಮಗೆ ಸಚಿವ ಸಂಪುಟದಲ್ಲಿ ಸ್ಥಾನ ಸಿಕ್ಕಿಲ್ಲ ಎಂದು ಸಾರ್ವಜನಿಕವಾಗಿ ಸಿಟ್ಟು ಪ್ರಕಟಿಸಿದ್ದು ಉಂಟು. ಈ ಕ್ಷೇತ್ರಗಳ ಜನ ಪಕ್ಷಭೇದ ಮರೆತು ಈ ಶಾಸಕರ ಬೆನ್ನು ಹತ್ತಿ ಕ್ಷೇತ್ರದ ಅಭಿವೃದ್ಧಿ ಕೆಲಸ ಮಾಡಿಕೊಡಲು ಒತ್ತಡ ಹೇರಬೇಕಿದೆ.

ಶಾಸಕರ ನಿಧಿಯ ಅನುದಾನ ನೇರವಾಗಿ ಶಾಸಕರ ಖಾತೆಗೆ ಹೋಗದೆ, ಜಿಲ್ಲಾಧಿಕಾರಿಗಳ ಪಿ.ಡಿ. (ವೈಯಕ್ತಿಕ ಠೇವಣಿ) ಖಾತೆಗೆ ಹೋಗುತ್ತದೆ. ಹಣ ಪೋಲಾಗದಂತೆ ಮತ್ತು ಸೂಕ್ತ ಬಾಬ್ತುಗಳಿಗೆ ಖರ್ಚಾಗುವಂತೆ ನೋಡಿಕೊಳ್ಳಲು ಸರ್ಕಾರ ಅನುಸರಿಸುತ್ತಿರುವ ವಿಧಾನ ಇದು. ಸಮುದಾಯ ಭವನ, ದೇವಾಲಯ ನಿರ್ಮಾಣ, ಗ್ರಾಮೀಣ ರಸ್ತೆ, ಚರಂಡಿ, ತುರ್ತು ಕುಡಿಯುವ ನೀರು, ಕ್ರೀಡೆ, ಸಾಂಸ್ಕೃತಿಕ ಕಾರ್ಯಕ್ರಮ, ಶಾಲೆ, ಕಾಲೇಜು, ಅಂಗನವಾಡಿ ಕಟ್ಟಡ, ಬೀದಿ ದೀಪ, ಗ್ರಂಥಾಲಯ, ಬಸ್ ತಂಗುದಾಣ, ಪ್ರವಾಸಿ ಸ್ಥಳಗಳಲ್ಲಿ ಮೂಲ ಸೌಕರ್ಯ ಹೀಗೆ ವಿವಿಧ ಜನೋಪಯೋಗಿ ಕೆಲಸಗಳಿಗೆ ಈ ನಿಧಿಯನ್ನು ಬಳಸಬಹುದು. ಕ್ಷೇತ್ರಾಭಿವೃದ್ಧಿ ಯೋಜನೆಯ ಅಡಿ ಶಾಸಕರು ಶಿಫಾರಸ್ಸು ಮಾಡುವ ಯೋಜನೆಗಳಿಗೆ ಜಿಲ್ಲಾಧಿಕಾರಿ ಖಾತೆಯಿಂದ ಹಣ ಬಿಡುಗಡೆ ಆಗುತ್ತದೆ. ಕೋವಿಡ್ ಹಿನ್ನೆಲೆಯಲ್ಲಿ ಅನುದಾನ ಬಿಡುಗಡೆ ಮಾಡುವಲ್ಲಿ ಸರ್ಕಾರ ವಿಳಂಬ ಮಾಡಿದೆ ಎನ್ನುವುದು ನಿಜ. ಆದರೆ, ಈ ವರ್ಷ ನಿಧಿಯ ಪೂರೈಕೆ ಸಮರ್ಪಕವಾಗಿ ನಡೆದಿರುವುದು ಸುಳ್ಳಲ್ಲ. ಮುಖ್ಯಮಂತ್ರಿಯವರು ಪತ್ರದಲ್ಲಿ ಉಲ್ಲೇಖಿಸಿದಂತೆ ಜಿಲ್ಲಾಧಿಕಾರಿಗಳ ಖಾತೆಗಳಲ್ಲಿ ಒಟ್ಟು ರೂ.938.15 ಕೋಟಿ ಅನುದಾನ ಲಭ್ಯವಿದೆ. ಶಾಸಕರು ಸರ್ಕಾರದ ಮೇಲೆ ಗೂಬೆ ಕೂರಿಸುವ ಮೊಂಡುತನವನ್ನು ಬಿಟ್ಟು, ಇಷ್ಟು ಹಣದ ಬಳಕೆಗೆ ಸಮರ್ಪಕ ಯೋಜನೆಗಳನ್ನು ರೂಪಿಸಿ ಶೀಘ್ರ ಅನುಷ್ಠಾನಗೊಳಿಸುವುದು ಜರೂರಾಗಿ ಆಗಬೇಕಾದ ಕೆಲಸ. ಕೋವಿಡ್ ಸಂಕಷ್ಟದ ಕಾರಣ ಕೇಂದ್ರ ಸರ್ಕಾರವು ಸಂಸದರ ಸ್ಥಳೀಯ ಪ್ರದೇಶಾಭಿವೃದ್ಧಿ ನಿಧಿಯನ್ನು ತಾತ್ಕಾಲಿಕವಾಗಿ ಸ್ಥಗಿತಗೊಳಿಸಿರುವುದು ನಮ್ಮ ಕಣ್ಣೆದುರೇ ಇದೆ. ರಾಜ್ಯದಲ್ಲೂ ಹಾಗಾಗದಂತೆ ನೋಡಿಕೊಳ್ಳಬೇಕಾದ ಹೊಣೆ ಶಾಸಕರದ್ದೇ ಆಗಿದೆ. ಗ್ರಾಮೀಣ ಪ್ರದೇಶದ ಕೊರತೆಗಳನ್ನು ಗಮನಿಸಿ ಸೂಕ್ತ ಕಾಮಗಾರಿಗಳನ್ನು ಮತ್ತು ಕಾರ್ಯಕ್ರಮಗಳನ್ನು ಕೈಗೆತ್ತಿಕೊಂಡು ಅಯಾ ಪ್ರದೇಶದ ಅರ್ಥಿಕತೆಯ ಚೇತರಿಕೆಗೆ ವೇಗ ಒದಗಿಸುವ ಕೆಲಸ ಶೀಘ್ರ ನಡೆಯಲಿದೆ.

ಆಧಾರ: ಪ್ರಜಾವಾಣಿ, ದಿನಾಂಕ:14.09.2021.

## 29. ಸುಪ್ರೀಂ ಆದೇಶ ಸರ್ಕಾರಕ್ಕೆ ಬಿಸಿ ತುಪ್ಪ

**ಗುಜರಾತಲ್ಲಿಯೇ ಹುಟ್ಟಿ ದಿಲ್ಲಿಗೆ ಹೋಗಿ, ಕರ್ನಾಟಕ ತಲುಪಿದ ವಿವಾದ :** ವಿಶ್ವವಿಖ್ಯಾತ ದಸರಾ ಸಮೀಪಿಸುತ್ತಿರುವ ನಡುವೆಯೇ ಅನಧಿಕೃತ ಧಾರ್ಮಿಕ ಕಟ್ಟಡ ತೆರವು ಸಂಬಂಧ ಮೈಸೂರು ವಿವಾದದ ಕೇಂದ್ರ ಬಿಂದುವಾಗಿದೆ. ಆಡಳಿತ ಪಕ್ಷ, ವಿರೋಧ ಪಕ್ಷಗಳೆಂಬ ಭೇದವಿಲ್ಲದೆ ರಾಜಕಾರಣಿಗಳು, ಸಾರ್ವಜನಿಕರು ಮತ್ತು ಧಾರ್ಮಿಕ ಸಂಘಟನೆಗಳಿಂದ ಹಿಂದೂ ಧಾರ್ಮಿಕ ಕಟ್ಟಡಗಳ ತೆರವಿಗೆ ಭಾರೀ ವಿರೋಧ ವ್ಯಕ್ತವಾಗುತ್ತಿದೆ. ಈ ಹಿನ್ನೆಲೆಯಲ್ಲಿ ಏಕಾಏಕಿ ಅನಧಿಕೃತ ದೇಗುಲ ತೆರವು ಪ್ರಸ್ತಾಪ ಮುನ್ನೆಲೆಗೆ ಬರಲು ಕಾರಣ ಏನು, ಈ ಬಗ್ಗೆ ಸುಪ್ರೀಂಕೋರ್ಟ್ ಆದೇಶ ಏನು ಎಂಬ ವಿವರ ಇಲ್ಲಿದೆ.

**ಸುಪ್ರೀಂಕೋರ್ಟ್ ಏನು ಹೇಳಿತ್ತು:** ಸರ್ಕಾರಿ ಜಾಗಗಳಲ್ಲಿ ಅನಧಿಕೃತವಾಗಿ ನಿರ್ಮಿಸಿರುವ ಧಾರ್ಮಿಕ ಕೇಂದ್ರಗಳನ್ನು ತೆರವುಗೊಳಿಸಬೇಕು ಎಂದು ಸುಪ್ರೀಂಕೋರ್ಟ್ ಎಲ್ಲಾ ರಾಜ್ಯ ಸರ್ಕಾರಗಳಿಗೆ 2009ರ ಸೆಪ್ಟೆಂಬರ್ 29ರಂದು ಆದೇಶ ನೀಡಿತ್ತು. ದೇವರು ಮತ್ತು ಧರ್ಮದ ಹೆಸರಲ್ಲಿ ಸರ್ಕಾರಿ ರಸ್ತೆ, ಪಾರ್ಕ್, ಮೈದಾನದಲ್ಲಿ ದೇವಸ್ಥಾನ, ಮಸೀದಿ, ಚರ್ಚ್. ಗುರುದ್ವಾರ ಮುಂತಾದ ಯಾವುದೇ ಧಾರ್ಮಿಕ ಕೇಂದ್ರಗಳನ್ನು ಕಟ್ಟಬಾರದು. 2009ಕ್ಕೂ ಮುಂಚೆ ನಿರ್ಮಾಣವಾದ ಅನಧಿಕೃತ ಕಟ್ಟಡಗಳ ಬಗ್ಗೆ

ಜಿಲ್ಲಾಡಳಿತವೇ ಪರಿಶೀಲಿಸಲಿ. 2009ಕ್ಕಿಂತ ಹಳೆಯ ಕಟ್ಟಡವಾಗಿದ್ದಲ್ಲಿ, 3 ರೀತಿಯಲ್ಲಿ ಕ್ರಮ ಕೈಗೊಳ್ಳಬೇಕು. ಕಟ್ಟಡ ನೆಲಸಮ ಮಾಡಬೇಕಾ, ಸ್ಥಳಾಂತರಿಸಬೇಕಾ ಅಥವಾ ಉಳಿಸಿಕೊಳ್ಳಬೇಕಾ ಪರಿಶೀಲಿಸಿ ತೀರ್ಮಾನ ಕೈಗೊಳ್ಳಬೇಕು ಎಂದು ತಿಳಿಸಿತ್ತು. ಜೊತೆಗೆ ಸರ್ಕಾರದ ಮುಖ್ಯ ಕಾರ್ಯದರ್ಶಿಗಳನ್ನು ಅನಧಿಕೃತ ಧಾರ್ಮಿಕ ಕಟ್ಟಡ ವಿಚಾರದಲ್ಲಿ ಉತ್ತರದಾಯಿತ್ವನ್ನಾಗಿಸಿತ್ತು. ಈ ಕುರಿತು ರಾಜ್ಯಗಳಿಗೂ ನಿರ್ದೇಶನ ನೀಡಿತ್ತು. ಈ ಆದೇಶ ಪಾಲನೆ ಸಂಬಂಧ ಸ್ವಯಂಪ್ರೇರಿತವಾಗಿ ಮೇಲುಸ್ತುವಾರಿ ವಹಿಸುವಂತೆ ಹೈಕೋರ್ಟ್‌ಗಳಿಗೆ 2018ರಲ್ಲಿ ನಿರ್ದೇಶನ ನೀಡಿದೆ.

**ಅನಧಿಕೃತ ಅಂದರೆ ಏನು :** ಸ್ಥಳೀಯ ಆಡಳಿತ ಸಂಸ್ಥೆಗಳಿಂದ ಮಂಜೂರಾತಿ ಇಲ್ಲದೆ ಸಾರ್ವಜನಿಕ ಸ್ಥಳಗಳಲ್ಲಿ ನಿರ್ಮಾಣವಾದ ಕಟ್ಟಡಗಳು ಅನಧಿಕೃತ ಎಂದು ಸುಪ್ರೀಂಕೋರ್ಟ್ ವ್ಯಾಖ್ಯಾನಿಸಿತ್ತು. ಸರ್ಕಾರಿ ರಸ್ತೆ, ಪಾರ್ಕ್, ಮೈದಾನ ಸೇರಿದಂತೆ ಯಾವುದೇ ಸಾರ್ವಜನಿಕ ಸ್ಥಳದಲ್ಲಿ ನಿರ್ಮಾಣವಾದ ಅಕ್ರಮ ಧಾರ್ಮಿಕ ಕೇಂದ್ರಗಳು ಇದರ ವ್ಯಾಪ್ತಿಗೆ ಬರುತ್ತವೆ.

**ಗುಜರಾತ್‌ನಲ್ಲಿ ಹುಟ್ಟಿದ ವಿವಾದ ಇದು :** ಮಾಧ್ಯಮವೊಂದರ ವರದಿ ಉಲ್ಲೇಖಿಸಿ 2008ರಲ್ಲಿ ಗುಜರಾತಿ ಅಹಮದಾಬಾದ್ ಹೈಕೋರ್ಟ್ ಅನಧಿಕೃತ ಕಟ್ಟಡ ತೆರವು ಬಗ್ಗೆ ಸ್ವಯಂಪ್ರೇರಿತ ದೂರು ದಾಖಲಿಸಿಕೊಂಡಿತ್ತು. ನಂತರ ಆ ಪ್ರಕರಣ ಸುಪ್ರೀಂಕೋರ್ಟ್‌ಗೆ ಹೋಗಿತ್ತು. ಸುಪ್ರೀಂಕೋರ್ಟ್ 2009ರಲ್ಲಿ ದೇಶಾದ್ಯಂತ ಧರ್ಮದ ಹೆಸರಿನಲ್ಲಿ ಅನಧಿಕೃತ ಧಾರ್ಮಿಕ ಕೇಂದ್ರಗಳನ್ನು ತೆರವುಗೊಳಿಸಬೇಕು ಎಂದು ಆದೇಶ ನೀಡಿತ್ತು.

**ಏಕಾಏಕಿ ಸಮಸ್ಯೆ ಸೃಷ್ಟಿಯಾಗಿದ್ದು ಹೇಗೆ :** 2009ರ ಸೆಪ್ಟೆಂಬರ್ 29ರ ನಂತರ ನಿರ್ಮಾಣವಾದ ಅನಧಿಕೃತ ಕಟ್ಟಡಗಳನ್ನು ಜಿಲ್ಲಾಡಳಿಗಳು ಪಟ್ಟಿ ಮಾಡಿ, ಆ ಧಾರ್ಮಿಕ ಕಟ್ಟಡಗಳ ತೆರವಿಗೆ ಕ್ರಮ ಕೈಗೊಳ್ಳಬೇಕು ಎಂದು ಸುಪ್ರೀಂಕೋರ್ಟ್ ಸೂಚಿಸಿದೆ. ಆದರೆ ಸರ್ವೋಚ್ಚ ನ್ಯಾಯಾಲಯ ಆದೇಶ ನೀಡಿ ಬರೋಬ್ಬರಿ 12 ವರ್ಷಗಳಾದರೂ ಕರ್ನಾಟಕ ಸರ್ಕಾರ ಅಥವಾ ಜಿಲ್ಲಾಡಳಿತಗಳು ಅನಧಿಕೃತ ಧಾರ್ಮಿಕ ಕೇಂದ್ರಗಳನ್ನು ಪಟ್ಟಿ ಮಾಡಿಲ್ಲ. 12 ವರ್ಷಗಳ ಕಾಲ ಸುಮ್ಮನೆ ಇದ್ದ ಕರ್ನಾಟಕ ಸರ್ಕಾರ ಹೈಕೋರ್ಟ್‌ಗೆ ವರದಿ ಸಲ್ಲಿಸಲು ಆರಂಭಿಸಿದ್ದು 2019ರಲ್ಲಿ ಅದೂ ಸ್ವತಃ ಹೈಕೋರ್ಟ್ ಸಾರ್ವಜನಿಕ ಹಿತಾಸಕ್ತಿ ಅರ್ಜಿಯ ವಿಚಾರಣೆ ಆರಂಭಿಸಿದ ನಂತರ, ಹೀಗಾಗಿ ತೆರವುಗೊಳಿಸಬೇಕಾದ ಧಾರ್ಮಿಕ ಕೇಂದ್ರಗಳ ಪಟ್ಟಿ ಸಿದ್ದಪಡಿಸುವಲ್ಲಿ ಗೊಂದಲ ಉಂಟಾಗಿದೆ. ಇಲ್ಲಿ ತರಾತುರಿಯಲ್ಲಿ ವಿವೇಚನಾರಹಿತ ನಿರ್ಧಾರ ಕೈಗೊಳ್ಳಲಾಗಿದೆ ಎಂಬ ಟೀಕೆಗಳಿವೆ. ಹೀಗಾಗಿ ಇದು ವಿವಾದಕ್ಕೆ ಕಾರಣವಾಗಿದೆ ಎಂದು ಹೇಳಲಾಗುತ್ತಿದೆ.

**ಆದೇಶ ಜಾರಿಯಲ್ಲಿ ಸರ್ಕಾರ ಎಡವಿದೆಯೇ :** 2009ರ ಸೆಪ್ಟೆಂಬರ್ 29ಕ್ಕೂ ಮುಂಚೆ ಮತ್ತು ನಂತರ ನಿರ್ಮಾಣವಾದ ಧಾರ್ಮಿಕ ಕಟ್ಟಡಗಳನ್ನು ಜಿಲ್ಲಾಡಳಿತಗಳು ಗುರುತಿಸಬೇಕಿತ್ತು. ಪ್ರತಿ ಧಾರ್ಮಿಕ ಸ್ಥಳಗಳ ಕುರಿತು ಸಮರ್ಪಕ ಸಮೀಕ್ಷೆ ನಡೆಸಿ ವರದಿ ತಯಾರಿಸಬೇಕಿತ್ತು. ಆ ಧಾರ್ಮಿಕ ಕಟ್ಟಡಗಳ ಇತಿಹಾಸ ಜನರ ನಂಬಿಕೆ ಇತ್ಯಾದಿ ಅಂಶಗಳನ್ನು ವಿಮರ್ಶಿಸಿ ಉಳಿಸಿಕೊಳ್ಳಲು ಸರ್ಕಾರ ಆದೇಶಿಸಬಹುದಿತ್ತು. ಸಾರ್ವಜನಿಕ ಸಂಚಾರಕ್ಕೆ ತಡೆಯೊಡ್ಡುವಂತೆ ರಸ್ತೆಗೆ ಅಡ್ಡಲಾಗಿ ಧಾರ್ಮಿಕ ಕಟ್ಟಡಗಳನ್ನು ನಿರ್ಮಿಸಿದ್ದರೆ ಅಂಥವುಗಳನ್ನು ಸ್ಥಳಾಂತರಿಸುವ ಬಗ್ಗೆ ಯೋಚಿಸಬಹುದಿತ್ತು. ತೀರಾ ಅಗತ್ಯವಿದ್ದರೆ ನೆಲಸಮ ಮಾಡುವ ಬಗ್ಗೆಯೂ ಆದೇಶಿಸಬಹುದಿತ್ತು. ಸ್ಥಳೀಯರಿಂದ ಜನಾಭಿಪ್ರಾಯ ಪಡೆದು ನಿರ್ಧಾರ ಕೈಗೊಳ್ಳಬಹುದಿತ್ತು.

**ಕರ್ನಾಟಕದಲ್ಲಿ 6000 ಅಕ್ರಮ ಧಾರ್ಮಿಕ ಕೇಂದ್ರ :** ಸರ್ಕಾರದ ಉನ್ನತ ಮೂಲಗಳ ಪ್ರಕಾರ ಕರ್ನಾಟಕದಲ್ಲಿ 6,395 ಅಕ್ರಮ ಧಾರ್ಮಿಕ ಕೇಂದ್ರಗಳಿವೆ ಎಂದು ಗುರುತಿಸಲಾಗಿದೆ. 12 ವರ್ಷಗಳಲ್ಲಿ ಈ ಪೈಕಿ 2,887 ಅನಧಿಕೃತ ಕಟ್ಟಡಗಳನ್ನು ತೆರವುಗೊಳಿಸಲಾಗಿದೆ. 2009ರ ಸುಪ್ರೀಂಕೋರ್ಟ್ ಆದೇಶದ ನಂತರ ಸಾರ್ವಜನಿಕ ಸ್ಥಳಗಳಲ್ಲಿ ಸುಮಾರು 1,242 ಧಾರ್ಮಿಕ ಕಟ್ಟಡಗಳು ತಲೆ ಎತ್ತಿವೆ.

**ಎಲ್ಲೆಲ್ಲಿ ಎಷ್ಟು ಅನಧಿಕೃತ ಧಾರ್ಮಿಕ ಕೇಂದ್ರಗಳಿವೆ:**

- ದಕ್ಷಿಣ ಕನ್ನಡ – 1,579
- ಶಿವಮೊಗ್ಗದಲ್ಲಿ – 740.
- ಬೆಳಗಾವಿ –612.
- ಬೆಂಗಳೂರು – 456
- ಮೈಸೂರು – 315
- ಹುಬ್ಬಳ್ಳಿ – ಧಾರವಾಡ –324
- ಕೋಲಾರ – 352
- ಕೊಪ್ಪಳ – 306

**ಮುಂದೇನಾಗಬಹುದು :**ಸದ್ಯ ಕರ್ನಾಟಕ ಸರ್ಕಾರ ರಾಜ್ಯದ ಅಕ್ರಮ ಧಾರ್ಮಿಕ ಕೇಂದ್ರಗಳ ನೆಲಸಮ ಪ್ರಕ್ರಿಯೆಗೆ ತಡೆ ನೀಡಿದೆ. ಧಾರ್ಮಿಕ ಕೇಂದ್ರಗಳ ತೆರವಿಗೆ ಎಲ್ಲಾ ರಾಜಕೀಯ ಪಕ್ಷಗಳಿಂದ ವಿರೋಧವಿರುವುದರಿಂದ ಸರ್ಕಾರ ಎಚ್ಚರಿಕೆಯ ಹೆಜ್ಜೆ ಇಡಬೇಕಾಗುತ್ತದೆ. ಈ ಕುರಿತು ಮತ್ತೆ ಹೈಕೋರ್ಟ್‌ನಲ್ಲೇ ಅರ್ಜಿ ಸಲ್ಲಿಸಬಹುದು. ನಂತರ ಹೈಕೋರ್ಟ್‌ನ ಆದೇಶದಂತೆ ಕ್ರಮ ಕೈಗೊಳ್ಳಬಹುದು.

ಆಧಾರ:ಕನ್ನಡ ಪ್ರಭ, ದಿನಾಂಕ:16.09.2021

## 30. ಸದನದ ಕಲಾಪ ಮತ್ತು ಹಳೆಯ ವರಸೆ

ಅಗತ್ಯ ವಸ್ತುಗಳ ಬೆಲೆ ಏರಿಕೆ ಕುರಿತು ರಾಜ್ಯ ಸರ್ಕಾರದ ಗಮನ ಸೆಳೆಯುವ ಉದ್ದೇಶ ಹೊತ್ತು ಕಾಂಗ್ರೆಸ್ ಪಕ್ಷದ ನಾಯಕರು ಇತ್ತೀಚೆಗೆ ವಿಧಾನಸೌಧ ತಲುಪಲು ಚಕ್ಕಡಿ ಏರಿದರು. ಸೈಕಲ್ ತುಳಿದರು, ಬೆಲೆ ಏರಿಕೆ ಸಂಕಟವನ್ನು ಸರ್ಕಾರಕ್ಕೆ ತಲುಪಿಸುವುದರ ಜೊತೆಗೆ ತಮ್ಮ ಜನಪರ ಕಾಳಜಿಯನ್ನು ಮತದಾರರಿಗೆ ಮುಟ್ಟಿಸುವ ಆಶಯ ಅವರ ಕಾರ್ಯಕ್ರಮದಲ್ಲಿ ಅಡಕವಾಗಿದ್ದು ರಹಸ್ಯವೇನಲ್ಲ.

ಮುಂದಿನ ಮುಖ್ಯಮಂತ್ರಿ ಹುದ್ದೆಗೆ ಸ್ಪರ್ದೆಗಿಳಿದಿರುವ ವಿರೋಧ ಪಕ್ಷದ ನಾಯಕ ಸಿದ್ದರಾಮಯ್ಯ ಮತ್ತು ಕರ್ನಾಟಕ ಪ್ರದೇಶ ಕಾಂಗ್ರೆಸ್ ಸಮಿತಿಯ ಅಧ್ಯಕ್ಷರು ಈ ಪ್ರಯತ್ನಗಳು ಒಂದು ರೀತಿಯಲ್ಲಿ ಸಾಂಪ್ರದಾಯಿಕ ರಾಜಕೀಯ ಪಕ್ಷಗಳಿಗೆ ಮರೆತುಹೋಗಿದ್ದ ಪ್ರತಿಭಟನೆಯ ರಿಹರ್ಸಲ್‌ನಂತೆ ಕಾಣಿಸಿದವು. ಹಾಗಾಗಿ ಜನಸಾಮಾನ್ಯರನ್ನು ತೀವ್ರ ಸಂಕಟಕ್ಕೀಡು ಮಾಡಿರುವ ಬೆಲೆ ಏರಿಕೆಯಂತಹ ಗಹನ ವಿಷಯ ಕೂಡ ಮಹತ್ವ ಕಳೆದುಕೊಂಡು ಪ್ರಹಸನದ ರೂಪ ಪಡೆಯುವಂತಾಯಿತು. ಈ ನಾಯಕರ ಪ್ರತಿಭಟನೆಯ ದೃಶ್ಯಗಳು ಜನರಲ್ಲಿ ನಗೆ ಉಕ್ಕಿಸಿದರೆ ಆಡಳಿತ ಪಕ್ಷದವರಿಗೆ ಮನಸೋ ಇಚ್ಛೆ ಗೇಲಿ ಮಾಡಲು ಅವಕಾಶ ಕಲ್ಪಿಸಿದವು.

ಬಹುಪಾಲು ದಿನಬಳಕೆ ವಸ್ತುಗಳ ಬೆಲೆ ಏರಿಕೆಯಿಂದಾಗಿ ಎದುರಿಸಿ ಬಿಡುತ್ತಿರುವ ಜನಸಾಮಾನ್ಯರ ಬದುಕಿನ ಬವಣೆಯನ್ನು ಆಡಳಿತಪಕ್ಷ, ವಿರೋಧಪಕ್ಷ ಎಂಬ ಭೇದವಿಲ್ಲದೇ ಜನಪ್ರತಿನಿಧಿಗಳು ಸದನದಲ್ಲಿ ಸಮರ್ಥವಾಗಿ ಬಿಂಬಿಸಬೇಕಿತ್ತು. ಅದಾಗದೆ ಸದನದಲ್ಲಿ ವ್ಯರ್ಥ, ಮನರಂಜನಾ ಸ್ವರೂಪದ ಮಾತುಗಾರಿಕೆಯ ಪೈಪೋಟಿಯೇ ನಡೆಯಿತು. ಉತ್ತರ ನೀಡಿದ ಮುಖ್ಯಮಂತ್ರಿ

ಕೂಡ ತಮ್ಮ ಮಾತುಗಳಿಗೆ ಚಮತ್ಕಾರಿಕ ಪದಪುಂಜಗಳ ತೋರಣ ಪೋಣಿಸಿದರೇ ಹೊರತು ಅವರ ಮಾತುಗಳಲ್ಲಿ ಸಮಸ್ಯೆಯ ಗಾಂಭೀರ್ಯ, ಕಾಳಜಿ ಕುರುಹು ಕಾಣಿಸಲೇ ಇಲ್ಲ.

ಕೊನೆಗೂ ಬೆಲೆಯೇರಿಕೆ ಸಮಸ್ಯೆಯ ಇರುವಿಕೆಯನ್ನಾದರೂ ಸರ್ಕಾರ ಒಪ್ಪಿತೇ, ಅದರ ನಿಯಂತ್ರಣಕ್ಕೆ ಕೈಗೊಳ್ಳುವ ಕ್ರಮಗಳನ್ನು ಪ್ರಕಟಿಸಿತೇ, ಈ ದಿಸೆಯಲ್ಲಿ ವಿರೋಧಪಕ್ಷದ ಸದಸ್ಯರು ರಚನಾತ್ಮಕ ಸಲಹೆಗಳನ್ನೇನಾದರೂ ನೀಡಿದರೇ ಎಂಬ ಪ್ರಶ್ನೆಗಳು ಹಾಗೇ ಉಳಿದವು.

ಇತ್ತೀಚೆಗೆ ವಿರೋಧ ಪಕ್ಷಗಳ ಪ್ರತಿಯೊಂದು ಆರೋಪ, ಆಕ್ಷೇಪಕ್ಕೆ ಆಡಳಿತದಲ್ಲಿರುವವರು ನೀವೇನು ಕಮ್ಮಿ, ನಿಮ್ಮ ಆಡಳಿತದಲ್ಲಿ ಹಾಗಿತ್ತು.... ಎಂದು ಮರುದೂಷಣೆ ಮಾಡುವುದು ಪರಿಪಾಠವಾಗಿದೆ. ಸಮಸ್ಯೆಯ ಹೊಣೆಯನ್ನು ಪರಸ್ಪರರ ಹೆಗಲಿಗೆ ಹೊತ್ತುಹಾಕಿ ಪರಿಹಾರ ಕುಡುಕುವ ಪ್ರಯತ್ನದಿಂದ ನುಣುಚಿಕೊಳ್ಳುವ ಜಾಣತನವಿದು. ಪ್ರಶ್ನಿಸುವವರ ನೈತಿಕತೆಯನ್ನೇ ಅನುಮಾನಿಸಿ ಸುಮ್ಮನಾಗಿಸುವುದು ಪ್ರಚಲಿತ ತಂತ್ರಗಾರಿಕೆ. ಅದಕ್ಕೆ ತಕ್ಕಂತೆಯೇ ಯಾರ ಆಡಳಿತಾವಧಿಯಲ್ಲಿ ಎಷ್ಟೆಷ್ಟು ಬೆಲೆ ಏರಿಕೆ ಆಗಿತ್ತು ಎಂಬ ಅಂಶ ಸದನದ ಚರ್ಚೆಯ ಮುಖ್ಯ ವೇದಿಕೆಗೆ ಬಂದಿತೇ ಹೊರತು ಸಮಸ್ಯೆಯ ಮೂಲದ ಪರಿಶೀಲನೆ ಪರಿಹಾರದ ಉಪಾಯಗಳು ಯಾವ ಸದಸ್ಯರ ಮಿದುಳಿಗೂ ಹೊಳೆಯಲಿಲ್ಲ. ಯಾರ ನಾಲಗೆಗೂ ಸಿಲುಕಲಿಲ್ಲ.

ಈ ಹಿಂದೆ ಅಟಲ್ ಬಿಹಾರಿ ವಾಜಪೇಯಿ ಅವರು ಬೆಲೆ ಏರಿಕೆ ಮೂಲಕ ಆಗಿನ ಸರ್ಕಾರ ಲೂಟಿ ಹೊಡೆದಿದೆ ಎಂದು ಆರೋಪಿಸಿದ್ದನ್ನು ಪ್ರಸ್ತಾಪಿಸಿದ ಸಿದ್ದರಾಮಯ್ಯ ಅವರು ಲೂಟಿ ಪದವನ್ನು ಸದನ ಚ್ಯೂಯಿಂಗ್ ಗಮ್‌ನಂತೆ ಜಗಿಯಲು ಅನುವು ಮಾಡಿಕೊಟ್ಟರು. ನಿಮ್ಮ ಪಕ್ಷದ ಆಡಳಿತದಲ್ಲೂ ಅಗತ್ಯ ವಸ್ತುಗಳ ಬೆಲೆ ಏರಿಕೆ ಆಗಿತ್ತು. ನೀವೂ ಲೂಟಿ ಮಾಡಿದ್ದಿರಾ ಎಂಬುದು ಮುಖ್ಯಮಂತ್ರಿಯವರ ಮರುಪ್ರಶ್ನೆ. ಅದಕ್ಕೆ ವಿರೋಧ ಪಕ್ಷಗಳ ತಗಾದೆ. ಹೀಗೆ ಮಾತಿನ ಎಳೆ ಹಿಡಿದುಕೊಂಡು ಎಳೆದಾಡುವುದರಿಂದ ಅಗತ್ಯ ವಸ್ತುಗಳ ಬೆಲೆ ಇಳಿಯುವುದಿಲ್ಲ. ಸದನದ ಸಮಯ ಮತ್ತು ಕರದಾತರ ಹಣ ಖರ್ಚಾಗುತ್ತದೆ. ಜನಪ್ರತಿನಿಧಿಗಳ ಗೌರವ ಇಳಿಕೆಯಾಗುತ್ತದೆ ಎಂಬ ಅರಿವು ಯಾರಿಗೂ ಇಲ್ಲ.

ವಾಕ್ಚಾತುರ್ಯದ ಸದನವನ್ನು ಮಾತಿನ ಮನೆ ಎಂದು ಗುರುತಿಸುವುದು ನಿಜ. ಹಾಗೆಂದು ಪ್ರಜಾಪ್ರಭುತ್ವ ವ್ಯವಸ್ಥೆಯ ತಳಪಾಯವಾದ ಶಾಸನಸಭೆಯಲ್ಲಿ ಆಡುವ ಮಾತುಗಳ ಹಿಂದಿರಬೇಕಾದ ಅರ್ಥವಂತಿಕೆ, ಕಳಕಳಿ ಕಳೆದುಕೊಂಡು ಕೇವಲ ಬಾಯಿಮಾತುಗಳ ಭರಾಟೆಗೆ ಗಲಾಟೆಗೆ, ವಾಕ್ಚಾತುರ್ಯದ ಪ್ರದರ್ಶನಕ್ಕೆ ವೇದಿಕೆಯಾದರೆ ಹೇಗೆ. ಸದನದ ಮಾತುಗಾರಿಕೆಯ ನೇತಾರ ಎನ್ನಿಸಿಕೊಳ್ಳುವ ವಿಧಾನಸಭೆಯ ಮಾಜಿ ಅಧ್ಯಕ್ಷರು ಹೇಳುವಂತೆ ವಿಧಾನಸಭೆಯಲ್ಲಿ ಆಡಳಿತಪಕ್ಷ ವಿರೋಧಪಕ್ಷಗಳ ಬದಲಾಗಿ ಮಾಜಿ ಆಡಳಿತ ಪಕ್ಷ, ವಿರೋಧಪಕ್ಷ ಹಾಗೂ ಭಾವಿ ಆಡಳಿತಪಕ್ಷ, ಮಾಜಿ ವಿರೋಧಪಕ್ಷಗಳು ಕಾರ್ಯನಿರ್ವಹಿಸುತ್ತಿವೆ. ಸದನದಲ್ಲಿ ಕಲಾಪ ನಡೆಯುವ ಸಂದರ್ಭದಲ್ಲಿ ವಿರೋಧಿ ಪಾಳಯದಲ್ಲಿರುವವರು ಒಂದು ಹಿಡಿಯಷ್ಟು ಹಾಲಿ ಆಡಳಿತಪಕ್ಷದವರಾಗಿ, ಆಡಳಿತ ಚುಕ್ಕಾಣಿ ಹಿಡಿದವರು ಮುಷ್ಟಿಯಷ್ಟು ಹಾಲಿ ವಿರೋಧಪಕ್ಷದವರಾಗಿ ಯೋಚಿಸಲು ಸಾಧ್ಯವಾದರೆ ಅದರ ಪರಿಣಾಮವೇ ಬೇರೆಯಾದೀತು.

ಸದನ ಹೆಚ್ಚುಕಮ್ಮಿ, ಅವರೇ ಸದಸ್ಯರು, ಅವೇ ಸಮಸ್ಯೆಗಳು, ಅವೇ ಮಾತುಗಳು, ಅವೇ ಬಾಯಿಗಳು. ಆದರೆ ಬದಿಗಳು ಮಾತ್ರ ಬೇರೆ ಬೇರೆ. ಅಲ್ಲಿದ್ದಾಗ ಆ ಮಾತು, ಇಲ್ಲಿದ್ದಾಗ ಈ ಮಾತು, ಅಷ್ಟೇ ವ್ಯತ್ಯಾಸ. ಯಾವುದೋ ಪದಬಳಕೆ, ಹೀಯಾಳಿಕೆ ನೆಪದಿಂದ ವಿರೋಧಪಕ್ಷ ಸಭಾತ್ಯಾಗ ಮಾಡುವುದು. ಆ ಸಮಯದಲ್ಲಿಯೇ ಸರ್ಕಾರ ಚರ್ಚೆಯಿಲ್ಲದೆ ತನ್ನಿಷ್ಟದ ಮಸೂದೆಗಳನ್ನು ಮಂಡಿಸಿ ಒಪ್ಪಿಗೆ ಪಡೆಯುವುದು ಏನನ್ನು ತೋರಿಸುತ್ತದೆ. ಇದೊಂಥರಾ ಅಲಿಖಿತ ಒಡಂಬಡಿಕೆ ಎಂದೆನ್ನಿಸುವುದಿಲ್ಲವೇ. ಸದನದಲ್ಲಿ ಮನರಂಜನೆಯ ಮಾತುಗಾರಿಕೆಯೇ ಮುಖ್ಯವಾಗಿ, ಅದೇ ಸದಸ್ಯರ ಅರ್ಹತೆಗೆ ಅಳತೆಗೋಲಾಗಿ ಪರಿಣಮಿಸಿದರೆ ಪ್ರಜಾಪ್ರಭುತ್ವ ಪರಂಪರೆಯಲ್ಲಿ ಬಳಕೆಯಲ್ಲಿರುವ

ಸಂಸದೀಯ ಪಟು ಪದದ ಅರ್ಥ ತಿರುಚಬೇಕಾದೀತು. ಸದನವು ಬರೀ ಆರೋಪ ಪ್ರತ್ಯಾರೋಪಗಳ ಪಡಸಾಲೆಯಾದರೆ, ದೋಷಣೆಗಳ ಸಮರ್ಥನೆಗಳ ಕದನಕಣವಾದರೆ ಸದನ ಕಲಿಗಳ ಸಂತತಿ ಬೆಳೆಯಬಹುದಷ್ಟೇ; ಜನರ ಸಮಸ್ಯೆಗಳಿಗೆ ಪರಿಹಾರ ಸಿಗಲಾರದು.

ರಾಜ್ಯ ಸರ್ಕಾರದ ನಾಯಕತ್ವ ಬದಲಾಗಿ ಬಸವರಾಜ ಬೊಮ್ಮಾಯಿ ಅವರು ಸಹಜವಾಗಿಯೇ ಹೊಸ ಭರವಸೆ ಹುಟ್ಟಿಕೊಂಡಿತ್ತು. ಅವರು ಆಡಳಿತದ ಹಳೆಯ ಶೈಲಿಯ ನಡೆನುಡಿ ದಾಟಿ ಸಾಗುವರೆಂದು ಭಾವಿಸಲಾಗಿತ್ತು. ಆದರೆ ಸದನದಲ್ಲಿ ಅವರ ಮಾತಿನ ಧಾಟಿ. ವರಸೆ ಹೆಚ್ಚೇನೂ ಆಶಾದಾಯಕವಾಗಿ ಕಾಣಿಸುತ್ತಿಲ್ಲ. ಅಗತ್ಯ ವಸ್ತುಗಳ ಬೆಲೆಯೇರಿಕೆ ಕುರಿತು ನಿಯಮ 69ರ ಅಡಿ ವಿಧಾನಸಭೆಯಲ್ಲಿ ನಡೆದ ಚರ್ಚೆಗೆ ಮೊದಲ ಬಾರಿಗೆ ಸರ್ಕಾರದ ಮುಖ್ಯಸ್ಥರಾಗಿ ಉತ್ತರಿಸುವಾಗ ಬೊಮ್ಮಾಯಿಯವರು ಕಾಂಗ್ರೆಸ್ ನೇತೃತ್ವದ ಸರ್ಕಾರದ ಅವಧಿಯ ಬೆಲೆಯೇರಿಕೆಯ ಅಂಕಿಅಂಶ ಬಿಚ್ಚಿಟ್ಟಿದ್ದಾರೆ. ತಮ್ಮ ಆಡಳಿತದ ಅವಧಿಯಲ್ಲಿ ಮಾತ್ರ ಬೆಲೆ ಏರಿಕೆಯಾಗಿಲ್ಲ ಎಂಬುದು ಈ ಮಾಜಿ ವಿರೋಧ ಪಕ್ಷದ ಸದಸ್ಯರ ಮಾತಿನ ತಿರುಳು.

ಸ್ವತಃ ರೈತಪರ ಹೋರಾಟ ಮಾಡಿದ್ದ ಬೊಮ್ಮಾಯಿಯವರು ನವದೆಹಲಿ ಬಳಿಯ ರೈತರ ಹೋರಾಟವನ್ನು ಪ್ರಾಯೋಜಿತ ಎಂದು ಅವಹೇಳನ ಮಾಡಿದ್ದು ಯಾರನ್ನೋ ಮೆಚ್ಚಿಸುವ ಯತ್ನವೆಂಬುದು ಸ್ಪಷ್ಟ ಸುಪ್ರೀಂಕೋರ್ಟ್ ತೀರ್ಪಿನ ಆಶಯಕ್ಕೆ ವಿರುದ್ಧವಾಗಿ ಧಾರ್ಮಿಕ ಕಟ್ಟಡಗಳ ಸಂರಕ್ಷಣಾ ಮಸೂದೆಗೆ ಮಾಜಿ ಆಡಳಿತಪಕ್ಷ ದನಿಗೂಡಿಸಿದೆ. ಮತಾಂತರ ನಿಷೇಧ ಕಾಯ್ದೆ ರೂಪಿಸಲು ಕೂಡಾ ಸರ್ಕಾರ ಚಿಂತನೆ ನಡೆಸಿದೆಯಂತೆ.

ರಾಯಿಸ್ಟ್ ಎಸ್.ಆರ್.ಬೊಮ್ಮಾಯಿ ಅವರ ಮಗನಾಗಿ ಜನತಾಪರಿವಾರದ ಸಮಾಜವಾದಿ ಹಿನ್ನೆಲೆಯ ರಾಜಕಾರಣಿಯಾಗಿ ಗುರುತಿಸಿಕೊಂಡ ಬಸವರಾಜ ಬೊಮ್ಮಾಯಿ ಅವರು ತಮ್ಮ ಸೈದ್ಧಾಂತಿಕ ಸ್ಥಿತ್ಯಂತರ ನಿಭಾಯಿಸುವ ಸವಾಲು ಮತ್ತು ಸಂದಿಗ್ಧ ಎದುರಿಸುತ್ತಿವಂತೆ ಕಾಣಿಸುತ್ತದೆ. ಹಾಗಾಗಿ ಯಾವ ವೇದಿಕೆಯಲ್ಲಿಯೂ ಪಕ್ಷದ ಬಲಪಂಥೀಯ ಧೋರಣೆಗಳನ್ನು ಗಟ್ಟಿದನಿಯಲ್ಲಿ ಪ್ರತಿಪಾದಿಸುವ ಅವಕಾಶ ಕಳೆದುಕೊಳ್ಳುತ್ತಿಲ್ಲ. ಅವರ ಇಂತಹ ವರ್ತನೆಗಳು ಹೊಸದಾಗಿ ಮತಾಂತರಗೊಂಡವರ ಅತಿರೇಕದ ಧರ್ಮನಿಷ್ಠೆಯಂತೆ ಕಂಡರೆ ಅಚ್ಚರಿಯಿಲ್ಲ.

ಲೇಖಕರು: ಚಂದ್ರಕಾಂತ್ ವಡ್ಡು,

ಆಧಾರ:–ಪ್ರಜಾವಾಣಿ, ದಿನಾಂಕ:23.09.2021

## 31. ಬೇರೆ ರಾಜ್ಯಗಳಲ್ಲಿ ಹೇಗಿದೆ ಮತಾಂತರ ನಿಷೇಧ ಕಾನೂನು

ಕರ್ನಾಟಕದಲ್ಲೀಗ ಮತಾಂತರ ನಿಷೇಧ ಕಾನೂನಿನದ್ದೇ ಸದ್ದು. ಹೊಸದುರ್ಗ ಶಾಸಕ ಗೂಳಿಹಟ್ಟಿ ಶೇಖರ್ ಅವರು ತಮ್ಮ ಕುಟುಂಬದಲ್ಲಿನ ಮತಾಂತರ ವಿಚಾರ ಬಯಲಿಗಿಟ್ಟ ಮೇಲೆ ಇದರ ಗಾಂಭೀರ್ಯತೆ ಅರ್ಥವಾಗಿದೆ. ಹೀಗಾಗಿ, ಮತಾಂತರ ನಿಷೇಧ ಮಾಡುವ ಕಾನೂನು ಜಾರಿ ಮಾಡುವ ಸಂಬಂಧ ರಾಜ್ಯ ಸರ್ಕಾರ ಚಿಂತನೆ ನಡೆಸಿದೆ. ಉತ್ತರ ಪ್ರದೇಶ ಮಾದರಿಯಲ್ಲಿ ಕಾನೂನು ತರುವುದಾಗಿ ಹೇಳಿದೆ. ಹಾಗಾದರೆ, ಸದ್ಯ ದೇಶದಲ್ಲಿ ಯಾವ ಯಾವ ರಾಜ್ಯಗಳಲ್ಲಿ ಮತಾಂತರ ನಿಷೇಧ ಕಾನೂನು ಜಾರಿಯಲ್ಲಿದೆ? ಶಿಕ್ಷೆ ಎಷ್ಟು ಎಂಬುದರ ಮೇಲೊಂದು ವಿವರ ಇಲ್ಲಿದೆ.

**ರಾಜ್ಯದಲ್ಲೇನು ವಿವಾದ?**

ಹೊಸದುರ್ಗ ಶಾಸಕ ಗೂಳಿಹಟ್ಟಿ ಶೇಖರ್ ಅವರು, ವಿಧಾನಮಂಡಲ ಅಧಿವೇಶನದಲ್ಲಿ ಕ್ರೈಸ್ತ ಮಿಷನರಿಗಳ ಬಲವಂತದ ಮತಾಂತರದ ಬಗ್ಗೆ ವಿಚಾರವೆತ್ತಿದರು. ತಮ್ಮ ತಾಯಿಯನ್ನೇ ಕ್ರೈಸ್ತ ಮತಾಂತರ ಮಾಡಲಾಗಿದೆ. ಅಲ್ಲದೇ, ಚಿತ್ರದುರ್ಗ ಜಿಲ್ಲೆಯಲ್ಲಿ ಕ್ರಿಶ್ಚಿಯನ್ ಮಿಷನರಿಗಳು ಮತ್ತು

ಸಂಘಟನೆಗಳು ಮುಗ್ಧ ಜನರನ್ನು ಬಲವಂತವಾಗಿ ಮತಾಂತರ ಮಾಡುತ್ತಿವೆ. ಉಡುಪಿಯಲ್ಲೂ ಇಂಥ ಘಟನೆ ಕಂಡುಬಂದಿವೆ. ಹೀಗಾಗಿ ಸರ್ಕಾರ ಕಠಿಣ ಕ್ರಮ ತೆಗೆದುಕೊಳ್ಳಬೇಕು ಎಂದು ಆಗ್ರಹಿಸಿದರು. ಇದಕ್ಕೆ ಉತ್ತರಿಸಿದ ಗೃಹ ಸಚಿವ ಅರಗ ಜ್ಞಾನೇಂದ್ರ, ರಾಜ್ಯದಲ್ಲಿ ಬಲವಂತಹ ಮತಾಂತರಕ್ಕೆ ಅವಕಾಶವಿಲ್ಲ. ಆಮಿಷವೊಡ್ಡಿ ಮತಾಂತರ ಮಾಡುವುದು ಕಾನೂನಿನ ಪ್ರಕಾರ ಅಪರಾಧ. ಹೀಗಾಗಿ ಮತಾಂತರ ನಿಷೇಧಕ್ಕಾಗಿ ಉತ್ತರ ಪ್ರದೇಶ ಮಾದರಿಯಲ್ಲಿ ಕಾನೂನು ಜಾರಿಗೆ ತರುವುದಾಗಿ ಹೇಳಿದರು.

**ಏನಿದು ಉತ್ತರ ಪ್ರದೇಶ ಮಾದರಿ?**

ವ್ಯಕ್ತಿಯೊಬ್ಬನನ್ನು ಮತಾಂತರಿಸಲು ತಪ್ಪು ವ್ಯಾಖ್ಯಾನ, ಬಲಪ್ರಯೋಗ, ಅನಗತ್ಯ ಪ್ರಭಾವ, ಆಕರ್ಷಣೆ, ಮದುವೆ ಅಥವಾ ಯಾವುದೇ ಮೋಸದ ವಿಧಾನಗಳನ್ನು ಬಳಸುವಂತಿಲ್ಲ. ಒಂದು ವೇಳೆ ಈ ವಿಧಾನಗಳನ್ನು ಬಳಸಿ ಮತಾಂತರ ಮಾಡಿದರೆ, ಅಂಥವರಿಗೆ ಕನಿಷ್ಠ ಒಂದು ವರ್ಷ ಜೈಲು ಅಥವಾ ಐದು ವರ್ಷದವರೆಗೆ ಜೈಲು ಶಿಕ್ಷೆ, ಅಪ್ರಾಪ್ತರು, ಮಹಿಳೆ ಆಥವಾ ಎಸ್‌ಸಿ–ಎಸ್‌ಟಿಗೆ ಸೇರಿದವರನ್ನು ಬಲವಂತವಾಗಿ ಮತಾಂತರ ಮಾಡಿದರೆ, ಅಂಥವರಿಗೆ ಕನಿಷ್ಠ 2 ವರ್ಷ, ಗರಿಷ್ಠ 10 ವರ್ಷಗಳವರೆಗೆ ಜೈಲು ಶಿಕ್ಷೆ, ಸಾಮೂಹಿಕವಾಗಿ ಮತಾಂತರ ಮಾಡಿದರೆ, ಕನಿಷ್ಠ 3 ವರ್ಷ, ಗರಿಷ್ಠ 10 ವರ್ಷಗಳವರೆಗೆ ಜೈಲು ಶಿಕ್ಷೆ ವಿಧಿಸಲಾಗುತ್ತದೆ. ಹಾಗೆಯೇ, 15 ಸಾವಿರದಿಂದ ಗರಿಷ್ಠ 50 ಸಾವಿರದವರೆಗೆ ದಂಡ ಮತ್ತು ಬಲವಂತವಾಗಿ ಮತಾಂತರವಾದವರಿಗೆ ಪರಿಹಾರ ರೂಪದಲ್ಲಿ 5 ಲಕ್ಷ ರೂ. ನೀಡಬೇಕಾಗುತ್ತದೆ. ವಿಶೇಷವಾಗಿ ಮದುವೆ ಉದ್ದೇಶಕ್ಕಾಗಿ ಮತಾಂತರ ಮಾಡುವುದನ್ನು ಸಂಪೂರ್ಣವಾಗಿ ನಿಷೇಧಿಸಲಾಗಿದೆ.

**ಮತಾಂತರ ನಿಷೇಧ ಜಾರಿಯಲ್ಲಿರುವ ರಾಜ್ಯಗಳು:**

**ಹಿಮಾಚಲ ಪ್ರದೇಶ** : 2019ರಲ್ಲಿ ಮತಾಂತರ ನಿಷೇಧ ಕಾನೂನು ಜಾರಿಗೆ ಬಂದಿದ್ದು, ಮೋಸ, ಒತ್ತಾಯ, ಆಮಿಷದ ಮೂಲಕ ಮತಾಂತರ ಮಾಡುವಂತಿಲ್ಲ. ಹಾಗೆಯೇ ಮದುವೆಯ ಉದ್ದೇಶಕ್ಕಾಗಿ ಮತಾಂತರ ಮಾಡುವುದೂ ತಪ್ಪು. ವ್ಯಕ್ತಿಯೊಬ್ಬ ಸ್ವಇಚ್ಛೆಯಿಂದ ಅಥವಾ ಧಾರ್ಮಿಕ ನಾಯಕನ ಮುಂದೆ ಮತಾಂತರವಾಗುವುದಾದರೆ, ಒಂದು ತಿಂಗಳು ಮೊದಲು ಮಾಹಿತಿ ನೀಡಬೇಕು. ಇಲ್ಲಿ ಒಂದರಿಂದ ಏಳು ವರ್ಷಗಳವರೆಗೆ ಜೈಲು ಶಿಕ್ಷೆ ಇದೆ. ಆದರೆ, ದಂಡದ ಪ್ರಸ್ತಾಪಿಸಿಲ್ಲ.

**ಗುಜಾರಾತ್** : 2003ರಲ್ಲಿ ಈ ಕಾನೂನು ಜಾರಿಗೆ ಬಂದಿದ್ದು, ಬಲವಂತವಾಗಿ, ಮೋಸ ಮತ್ತು ಆಮಿಷದ ಮೂಲಕ ಮತಾಂತರ ಮಾಡುವಂತಿಲ್ಲ. ಸ್ವಇಚ್ಛೆಯಿಂದ ಮತಾಂತರವಾದರೆ, 10 ದಿನಗಳ ಬಳಿಕ, ಧಾರ್ಮಿಕ ನಾಯಕನ ಕಡೆಯಿಂದ ಮತಾಂತರ ಪ್ರಕ್ರಿಯೆ ನಡೆದರೆ ಮೊದಲೇ ಮಾಹಿತಿ ನೀಡಬೇಕು. ಇಲ್ಲಿ ಬಲವಂತದ ಮತಾಂತರಕ್ಕೆ 3 ರಿಂದ 4 ವರ್ಷ ಜೈಲು, 50 ಸಾವಿರದಿಂದ 1 ಲಕ್ಷ ರೂ.ಗಳ ವರೆಗೆ ಜೈಲು ಶಿಕ್ಷೆ ವಿಧಿಸಲಾಗುತ್ತದೆ.

**ಮಧ್ಯಪ್ರದೇಶ** : ಇಲ್ಲೂ ಬಲವಂತದ ಮತಾಂತರ ನಿಷೇಧ ಕಾಯ್ದೆ 1968 ರಲ್ಲಿಯೇ ಜಾರಿಗೆ ಬಂದಿದೆ. ಸ್ವಇಚ್ಛೆಯಿಂದ ಮತಾಂತರವಾದ ಮೇಲೆ ಏಳು ದಿನಗಳ ಒಳಗೆ ಮಾಹಿತಿ ನೀಡಬೇಕು. ಬಲವಂತವಾಗಿ ಮತಾಂತರ ಮಾಡಿದರೆ, ಒಂದರಿಂದ ಎರಡು ವರ್ಷ ಜೈಲು ಹಾಗೂ ಐದರಿಂದ 10 ಸಾವಿರದವರೆಗೆ ದಂಡ ವಿಧಿಸಲಾಗುತ್ತದೆ. ಹಾಗೆಯೇ, ಮತಾಂತರ ಪ್ರಕ್ರಿಯೆಯಲ್ಲಿ ಲೋಪಗಳಾದರೆ ಇಲ್ಲೂ ಜೈಲು ಮತ್ತು ದಂಡ ವಿಧಿಸಲಾಗುತ್ತದೆ.

**ಉತ್ತರಾಖಂಡ** : 2018ರಲ್ಲಿ ಮತಾಂತರ ನಿಷೇಧ ಕಾಯ್ದೆ ಜಾರಿಗೆ ಬಂದಿದ್ದು, ಮೋಸ, ಬಲವಂತ, ಆಮಿಷ ಹಾಗೂ ವಿವಾಹದ ಉದ್ದೇಶಕ್ಕಾಗಿ ಮತಾಂತರ ಮಾಡುವಂತಿಲ್ಲ. ಮತಾಂತರವಾಗುವ ಒಂದು ತಿಂಗಳು ಮುನ್ನ ಸಂಬಂಧಪಟ್ಟವರಿಗೆ ಮಾಹಿತಿ ನೀಡಬೇಕು. ಒಂದರಿಂದ ಏಳು ವರ್ಷ ಜೈಲು ಶಿಕ್ಷೆ ಬಗ್ಗೆ ಪ್ರಸ್ತಾಪಿಸಲಾಗಿದೆ. ಆದರೆ, ದಂಡದ ಬಗ್ಗೆ ಯಾವುದೇ ಉಲ್ಲೇಖವಿಲ್ಲ.

**ಜಾರ್ಖಂಡ್ :** 2017ರಲ್ಲಿ ಮತಾಂತರ ನಿಷೇಧ ಕಾಯ್ದೆ ಜಾರಿಗೆ ಬಂದಿದ್ದು ಇಲ್ಲೂ ಬಲವಂತವಾಗಿ ಮತಾಂತರ ಮಾಡುವಂತಿಲ್ಲ. ಮತಾಂತರಕ್ಕೆ ಏಳು ದಿನಗಳಿಗೆ ಮುನ್ನ ವ್ಯಕ್ತಿಯೊಬ್ಬ ಸಂಬಂಧಪಟ್ಟ ಅಧಿಕಾರಿಗೆ ಮಾಹಿತಿ ನೀಡಬೇಕು. ಹಾಗೆಯೇ ಧಾರ್ಮಿಕ ನಾಯಕ ಮತಾಂತರ ಮಾಡುವುದಾದರೆ 15 ದಿನ ಮುನ್ನ ಮಾಹಿತಿ ಕೊಡಬೇಕು. ಇಲ್ಲೂ 3 ರಿಂದ 7 ವರ್ಷ ಜೈಲು, 50 ಸಾವಿರದಿಂದ 1 ಲಕ್ಷ ರೂ.ಗಳವರೆಗೆ ದಂಡ ವಿಧಿಸಲಾಗುತ್ತದೆ.

**ಛತ್ತೀಸ್‌ಗಡ :** 2006 ರಿಂದ ಮತಾಂತರ ನಿಷೇಧ ಜಾರಿಯಲ್ಲಿದ್ದು, ಸ್ವಇಚ್ಛೆಯಿಂದ ಮತಾಂತರವಾದರೆ ಒಂದು ತಿಂಗಳ ಒಳಗೆ ಮಾಹಿತಿ ನೀಡಬೇಕು. ಧಾರ್ಮಿಕ ನಾಯಕ ಮತಾಂತರ ಮಾಡುವುದಾದರೆ, ಒಂದು ತಿಂಗಳ ಮೊದಲೇ ಮಾಹಿತಿ ನೀಡಬೇಕು. ಇಲ್ಲಿ ಬಲವಂತವಾಗಿ ಮತಾಂತರ ಮಾಡಿದರೆ 3 ರಿಂದ 4 ವರ್ಷಗಳವರೆಗೆ ಜೈಲು, 20 ಸಾವಿರ ರೂ.ಗಳ ವರೆಗೆ ದಂಡ ವಿಧಿಸಲಾಗುತ್ತದೆ.

**ಅರುಣಾಚಲ ಪ್ರದೇಶ :** 1978ರಲ್ಲಿ ಮತಾಂತರ ನಿಷೇಧ ಕಾಯ್ದೆ ಜಾರಿಗೆ ಬಂದಿದೆ. ಮೋಸದ ಮೂಲಕ, ಬಲವಂತವಾಗಿ, ಆಮಿಷವೊಡ್ಡಿ ಮತಾಂತರ ಮಾಡಿದರೆ, ಎರಡು ವರ್ಷಗಳವರೆಗೆ ಜೈಲು ಮತ್ತು ರೂ. 10 ಸಾವಿರಗಳ ದಂಡ ವಿಧಿಸಲಾಗುತ್ತದೆ. ಸ್ವಇಚ್ಛೆಯಿಂದ ಮತಾಂತರವಾದ ಮೇಲೆ ಮಾಹಿತಿ ನೀಡಬಹುದು.

**ಒಡಿಶಾ :** 1967ರಲ್ಲೇ ಮತಾಂತರ ನಿಷೇಧ ಕಾನೂನು ಜಾರಿಗೆ ಬಂದಿದೆ. ಇಲ್ಲೂ ಕೂಡ ಬಲವಂತದ ಮತಾಂತರ ನಿಷೇಧಿಸಲಾಗಿದ್ದು, ಒಂದು ವೇಳೆ ಸ್ವಇಚ್ಛೆಯಿಂದ ಮತಾಂತರಗೊಳ್ಳುವುದಾದರೆ, ಮತಾಂತರ ಮಾಡುವವರು 15 ದಿನ ಮೊದಲೇ ಜಿಲ್ಲಾಧಿಕಾರಿಗೆ ಅಥವಾ ಸಂಬಂಧಪಟ್ಟ ಅಧಿಕಾರಿಗೆ ನೋಟಿಸ್ ನೀಡಬೇಕು. ಒಂದು ವೇಳೆ ಬಲವಂತವಾಗಿ ಮತಾಂತರ ಮಾಡಿದರೆ, ಒಂದರಿಂದ ಎರಡು ವರ್ಷಗಳವರೆಗೆ ಜೈಲು, ಐದರಿಂದ 10 ಸಾವಿರ ರೂ.ಗಳವರೆಗೆ ದಂಡ ವಿಧಿಸಲಾಗುತ್ತದೆ.

ಆಧಾರ: ಉದಯವಾಣಿ, ದಿನಾಂಕ: 23.09.2021

ನಿರ್ದೇಶಕರು, ಸರ್ಕಾರಿ ಮುದ್ರಣಾಲಯ, ವಿಕಾಸಸೌಧ ಘಟಕ, ಬೆಂಗಳೂರು, ಕಾ.ಸೂ. 525 – 500 ಪ್ರತಿಗಳು